॥ ಶ್ರೀಮನ್ಮೂಲರಾಮೋ ವಿಜಯತೇ ॥ ಭಾಗ-2 ॥ ಶ್ರೀ ಗುರುರಾಜೋ ವಿಜಯತೇ ॥

ಸತ್ತರ್ಕದೀಪಾವಳಿ ತತ್ವಪ್ರಕಾಶಿಕಾ ತತ್ವಪ್ರದೀಪ



# ಭಾವದೀಪ



## ಸಂಸ್ಕೃತಮೂಲ ಹಾಗೂ ಕನ್ನಡ ಅನುವಾದ
## ವಿಶೇಷ - ವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ

ಅಧ್ಯಕ್ಷರು

**ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದರು**

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ

ಗೌರವ ಸಂಪಾದಕರು

**ವಿ॥ ರಾಜಾ ಎಸ್. ಗಿರಿಆಚಾರ್ಯರು**

ಮಂತ್ರಾಲಯ

ಅನುವಾದ ಮತ್ತು ಸಂಪಾದನೆ

**ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ**

ಬೆಂಗಳೂರು

ಪ್ರಕಾಶನ

**ಶ್ರೀ ಗುರುಸಾರ್ವಭೌಮ ಸಂಶೋಧನ ಮಂದಿರ**

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ

ಶ್ರೀ ರಾಘವೇಂದ್ರಸ್ವಾಮಿಗಳ ಮಠ,

ಮಂತ್ರಾಲಯ - 518 345 (ಆಂಧ್ರ ಪ್ರದೇಶ)

|| ಶ್ರೀಮನ್ಮೂಲರಾಮೋ ವಿಜಯತೇ || || ಶ್ರೀ ಗುರುರಾಜೋ ವಿಜಯತೇ ||

## ಭಾಗ - ೨

ಶ್ರೀಪದ್ಮನಾಭತೀರ್ಥಮುನಿ-ವಿರಚಿತ **ಸತ್ತರ್ಕದೀಪಾವಳಿ**

ಶ್ರೀತ್ರಿವಿಕ್ರಮಪಂಡಿತಾಚಾರ್ಯ-ವಿರಚಿತ **ತತ್ವಪ್ರದೀಪ**

ಶ್ರೀಜಯತೀರ್ಥಮುನಿ-ವಿರಚಿತ

## ತತ್ವಪ್ರಕಾಶಿಕಾ

# ಭಾವದೀಪ

ಶ್ರೀವೇದವ್ಯಾಸರ ಬ್ರಹ್ಮಸೂತ್ರ, ಶ್ರೀಮಧ್ವಾಚಾರ್ಯರ ಭಾಷ್ಯ,
ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ ಟೀಕೆಗಳೊಂದಿಗೆ
ಶ್ರೀಮಂತ್ರಾಲಯಪ್ರಭುಗಳ ಭಾವದೀಪ
**ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ**

**ವಿಶೇಷ ವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ**

* * * * * *

ಪ್ರಕಾಶನ :
ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 ಆಂಧ್ರಪ್ರದೇಶ.

II

'ಭಾವದೀಪ' : ಜಯನಾಮಸಂವತ್ಸರದ ಕಾರ್ತಿಕ ಮಾಸ (ನವೆಂಬರ್ ೨೦೧೪)

| | | |
|---|---|---|
| ಪ್ರಕಾಶನ | : | ಶ್ರೀಗುರುಸಾರ್ವಭೌಮ ಸಂಶೋಧನ ಮಂದಿರ,<br>ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,<br>ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345<br>ಆಂಧ್ರಪ್ರದೇಶ. |
| ಸಂಪಾದನೆ ಮತ್ತು ಅನುವಾದ | : | ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ, ಬೆಂಗಳೂರು. |
| ಪ್ರಥಮಮುದ್ರಣ | : | 2014 |
| ಪುಟಗಳು | : | 750 |
| ಬೆಲೆ | : | 600 ರೂ |
| ಪ್ರತಿಗಳು | : | 1000 |






ಅಕ್ಷರಜೋಡಣೆ :
ಶ್ರೀಮತಿ ಎಸ್. ನಾಗಲತಾ
ಶ್ರೀ ಬೆಮ್ಮತ್ತಿ ಶ್ರೀನಿವಾಸ

ಮುದ್ರಣ :
ಪವನ್‌ಪ್ರಿಂಟರ್ಸ್, ಚಾಮರಾಜಪೇಟೆ, ಬೆಂಗಳೂರು.

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಬ್ರಹ್ಮಸೂತ್ರ ಭಾಷ್ಯ

ಸತ್ತರ್ಕದೀಪಾವಳಿ ತತ್ವಪ್ರಕಾಶಿಕಾ ತತ್ವಪ್ರದೀಪ

# ಭಾವದೀಪ

* * * *

ಅಧ್ಯಕ್ಷರು :

## ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು :
ವಿ॥ ರಾಜಾ ಎಸ್. ಗಿರಿಆಚಾರ್ಯ
ಮಂತ್ರಾಲಯ

ಸಂಪಾದನೆ ಮತ್ತು ಅನುವಾದ :
ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು.

'Bhavadipa' : November 2014 Jayanama Samvatsara, Karteeka Masa

| | | |
|---|---|---|
| Publication | : | Srigurusarvabhouma Samshodhana Mandira, Jagadguru Srimanmadwacharya Moolamahasamsthana, Sri Raghavendraswamigala Mutt, Mantralaya - 518345 (A.P.) |
| Edited &Translated by | : | Vidwan Bemmatti Venkateshacharya, Bangalore. |
| First Edition | : | 2014 |
| Pages | : | 750 |
| Price | : | Rs. 600 |
| Copies | : | 1000 |





Type set :

Smt. S. Nagalatha

Sri Bemmatti Srinivasa

Printed at :

Pavan Printers, Chamarajpet, Bangalore.

# ಗ್ರಂಥಗಳು ಹಾಗೂ ಗ್ರಂಥಕಾರರು

ಭಗವಾನ್ ಶ್ರೀವೇದವ್ಯಾಸದೇವರಿಂದ ವಿರಚಿತವಾದ
**ಬ್ರಹ್ಮಮೀಮಾಂಸಾಶಾಸ್ತ್ರ**

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ
**ಬ್ರಹ್ಮಸೂತ್ರಭಾಷ್ಯ**

ಶ್ರೀ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ
ಶ್ರೀಪದ್ಮನಾಭತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
**ಸತ್ತರ್ಕದೀಪಾವಳಿ**

ಶ್ರೀಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ
ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ
**ತತ್ವಪ್ರದೀಪ**

ಶ್ರೀ ಅಕ್ಷೋಭ್ಯತೀರ್ಥಶ್ರೀಪಾದರ ಶಿಷ್ಯರಾದ
ಶ್ರೀಜಯತೀರ್ಥಮುನಿಗಳಿಂದ ವಿರಚಿತವಾದ
**ತತ್ವಪ್ರಕಾಶಿಕಾ**

ಶ್ರೀಸುಧೀಂದ್ರತೀರ್ಥಶ್ರೀಪಾದರ ಶಿಷ್ಯರಾದ
ಶ್ರೀ ರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ವಿರಚಿತವಾದ
**ಭಾವದೀಪ**

# ಓದುಗರ ಗಮನಕ್ಕೆ

'ಭಾವದೀಪ' ಯೋಜನೆಯ ಮೊದಲನೆಯ ಸಂಪುಟವು ದಿನಾಂಕ : 8-9-2014 ರಂದು ಬಿಡುಗಡೆಯಾಯಿತು. ಆ ಸಂದರ್ಭದಲ್ಲಿ ಶ್ರೀರಾಘವೇಂದ್ರಸ್ವಾಮಿಗಳ ಪ್ರೇರಣೆಯಂತೆ ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥ ಶ್ರೀಪಾದಂಗಳವರು ತತ್ವಪ್ರಕಾಶಿಕೆಯ ಜೊತೆ ಮತ್ತೆರಡು ಟೀಕೆಗಳ ಅನುವಾದವೂ ಕೂಡ ಅವಶ್ಯವಾಗಿ ನಡೆಯಲೇಬೇಕು. ಮೂರು ಟೀಕೆಗಳ ಜೊತೆ ಭಾವದೀಪ ಗ್ರಂಥವನ್ನು ಅಧ್ಯಯನ ಮಾಡಿದಾಗ ಮಾತ್ರ ಬ್ರಹ್ಮಸೂತ್ರಭಾಷ್ಯದ ಪರಿಪೂರ್ಣವಾದ ಅಧ್ಯಯನವಾಗಲು ಸಾಧ್ಯ. ಆದ್ದರಿಂದ ಮುಂದಿನ ಸಂಪುಟಗಳಲ್ಲಿ ಮೂರು ಟೀಕೆಗಳ ಅನುವಾದವು ಮುದ್ರಣವಾಗಬೇಕೆಂದು ಅಪ್ಪಣೆ ಮಾಡಿದರು. ಅವರ ಅಪ್ಪಣೆಯ ಮೇರೆಗೆ ಈ ಸಂಪುಟದಲ್ಲಿ ಜಿಜ್ಞಾಸಾಧಿಕರಣದಿಂದಲೇ ತತ್ವಪ್ರದೀಪ ಹಾಗೂ ಸತ್ತರ್ಕದೀಪಾವಳಿ ಟೀಕೆಗಳ ಅನುವಾದ ಮಾಡಲಾಗಿದೆ. ಈಕ್ಷತ್ಯಧಿಕರಣದಿಂದ ಒಟ್ಟಿಗೆ ಮೂರು ಟೀಕೆಗಳನ್ನೂ ನೀಡಿ, ಭಾವದೀಪ ಗ್ರಂಥವನ್ನು ಮುದ್ರಿಸಲಾಗಿದೆ. ಮೊದಲನೆಯ ಸಂಪುಟದಲ್ಲಿ ತತ್ವಪ್ರಕಾಶಿಕೆ ಹಾಗೂ ಭಾವದೀಪ ಗ್ರಂಥಗಳ ಜಿಜ್ಞಾಸಾಧಿಕರಣದಿಂದ ಅನುವಾದವು ಸಮನ್ವಯಾಧಿಕರಣದ ತನಕ ನಡೆದಿದೆ. ಈ ನಾಕು ಅಧಿಕರಣಗಳಿಗೆ ಸಂಬಂಧಪಟ್ಟ ತತ್ವಪ್ರದೀಪ ಹಾಗೂ ಸತ್ತರ್ಕದೀಪಾವಳಿ ಟೀಕೆಗಳ ಅನುವಾದವನ್ನು ಈ ಸಂಪುಟದಲ್ಲಿ ನೀಡಲಾಗಿದೆ. ಈ ಸಂಪುಟದಲ್ಲಿ ಯಾವ ಅಧಿಕರಣಗಳಲ್ಲಿ ಯಾವ ಗ್ರಂಥಗಳ ಅನುವಾದ ನೀಡಲಾಗಿದೆ ಎಂಬುದನ್ನು ಮುಂದಿನ ಪುಟದಲ್ಲಿ ಉಲ್ಲೇಖಿಸಿದಂತೆ ಸ್ಪಷ್ಟವಾಗಿ ತಿಳಿಯಬೇಕು.

## ಜಿಜ್ಞಾಸಾಧಿಕರಣ

ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ

## ಜನ್ಮಾಧಿಕರಣ

ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ

## ಶಾಸ್ತ್ರಯೋನಿತ್ವಾಧಿಕರಣ

ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ

## ಸಮನ್ವಯಾಧಿಕರಣ

ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ

## ಈಕ್ಷತ್ಯಧಿಕರಣ

ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ

## ಆನಂದಮಯಾಧಿಕರಣ

(೮ ಸೂತ್ರಗಳಲ್ಲಿ ಒಂದು ಸೂತ್ರದ ಅನುವಾದ ಮಾತ್ರ ಇಲ್ಲಿ.)
ಮುಂದಿನ ಏಳು ಸೂತ್ರಗಳು ಮುಂದಿನ ಸಂಪುಟದಲ್ಲಿ

ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ, ಭಾವದೀಪ

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರಾವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಮೋಕ್ಷಶಾಸ್ತ್ರವೆನಿಸಿದ ಬ್ರಹ್ಮಸೂತ್ರಭಾಷ್ಯವು ಮೂರು ಟೀಕೆಗಳ ಜೊತೆ ಅನುವಾದವಾಗುತ್ತಿದೆ. ಲಕ್ಷ್ಮೀದೇವಿ, ಭೂದೇವಿ, ದುರ್ಗಾದೇವಿಯರ ಜೊತೆ ಶ್ರೀಮನ್ನಾರಾಯಣನು ವೈಭವೋಪೇತವಾಗಿ ಕುಳಿತಂತೆ ಈಗ ಸತ್ತರ್ಕದೀಪಾವಳಿ, ತತ್ವಪ್ರಕಾಶಿಕಾ, ತತ್ವಪ್ರದೀಪಗಳೆಂಬ ಮೂರು ಟೀಕೆಗಳ ಜೊತೆ ಬ್ರಹ್ಮಸೂತ್ರಭಾಷ್ಯವು ವೈಭವೋಪೇತವಾಗಿ ಕಂಗೊಳಿಸುತ್ತಿದೆ. ಮಹಾಲಕ್ಷ್ಮೀದೇವಿಯ ಮೂರು ರೂಪಗಳ ಜೊತೆ ಕುಳಿತಿರುವ ಶ್ರೀಮನ್ನಾರಾಯಣನನ್ನು ಮುಖ್ಯಪ್ರಾಣದೇವರು ಭಕ್ತ್ಯತಿಶಯದಿಂದ ಮುಕ್ತಕಂಠದಲ್ಲಿ ವರ್ಣಿಸುತ್ತಾರೆ. ಅದರಂತೆ ಮೂರು ಟೀಕೆಗಳಿಂದ ಕಂಗೊಳಿಸುತ್ತಿರುವ ಬ್ರಹ್ಮಸೂತ್ರಭಾಷ್ಯವನ್ನು ಶ್ರೀರಾಘವೇಂದ್ರಸ್ವಾಮಿಗಳ ಭಾವದೀಪ ಗ್ರಂಥವು ಮುಕ್ತಕಂಠದಲ್ಲಿ ವರ್ಣಿಸುತ್ತಿದೆ.

ಶ್ರೀರಾಘವೇಂದ್ರಗುರುಸಾರ್ವಭೌಮರು ತತ್ವಪ್ರಕಾಶಿಕೆಗೆ ವ್ಯಾಖ್ಯಾನ ಮಾಡುವಾಗ ಅನೇಕಕಡೆ ತತ್ವಪ್ರದೀಪವನ್ನು ಉಲ್ಲೇಖಿಸುತ್ತಾರೆ. ಭಾಷ್ಯದೀಪಿಕಾಕಾರರಾದ ಶ್ರೀಜಗನ್ನಾಥಯತಿಗಳು ಭಾಷ್ಯದ ಪ್ರತಿಯೊಂದು ಪದಗಳಿಗೂ ವ್ಯಾಖ್ಯಾನ ಮಾಡುವಾಗ ತತ್ವಪ್ರದೀಪವನ್ನು ಉಲ್ಲೇಖಿಸುವುದು ಎಲ್ಲರಿಗೂ ತಿಳಿದ ವಿಚಾರ. ಇದರಂತೆ ಶ್ರೀರಾಘವೇಂದ್ರಸ್ವಾಮಿಗಳೂ ಕೂಡ ಅನೇಕ ಕಡೆ ತತ್ವಪ್ರದೀಪವನ್ನು ಉಲ್ಲೇಖಿಸಿ ತತ್ವಪ್ರಕಾಶಿಕೆಗೆ ವ್ಯಾಖ್ಯಾನ ಮಾಡುತ್ತಾರೆ. ಇದರಿಂದ ರಾಯರಿಗೆ ತತ್ವಪ್ರದೀಪದ ಮೇಲೆ ಅತ್ಯಂತ ಒಲವು ಎಂಬುದು ಸ್ಪಷ್ಟವಾಗುತ್ತದೆ. ಇದನ್ನು ಪ್ರಚುರಪಡಿಸುವುದಕ್ಕಾಗಿಯೇ ನಮ್ಮ ಈ ಯೋಜನೆಯು ಹೊರಟಿದೆ. ಈ ವಿಷಯದಲ್ಲಿ ಕೆಲವು ಉದಾಹರಣೆಗಳನ್ನು ನೋಡೋಣ -

'ಭಗವಾನ್ ವ್ಯಾಸತ್ವೇನ ಅವತತಾರ' ಎಂಬ ಭಾಷ್ಯಕ್ಕೆ ವ್ಯಾಖ್ಯಾನ ಮಾಡುವ ಸಂದರ್ಭದಲ್ಲಿ ಶ್ರೀರಾಘವೇಂದ್ರಸ್ವಾಮಿಗಳು ಹೀಗೆ ಹೇಳುತ್ತಾರೆ - ''ಗುಣಗುಣ್ಯಾದ್ಯಭೇದಾಭಿಪ್ರಾಯಾತ್' ಇತ್ಯಾದಿ ತತ್ವಪ್ರದೀಪೋಕ್ತದಿಶಾ ವಾ' ಎಂದು. ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸು ಈ ಆರು ಗುಣಗಳು ಭಗವತ್ ಶಬ್ದದಿಂದ ಪ್ರತಿಪಾದ್ಯವಾಗಿವೆ. ಗುಣಗಳು, ಗುಣಿಯಾದ ಪರಮಾತ್ಮನಿಂದ ಅಭಿನ್ನವಾಗಿರುವ ಕಾರಣ ನಾರಾಯಣನನ್ನು 'ಭಗವಾನ್' ಎಂದು ಕರೆಯಲಾಗಿದೆ. ಹೀಗೆ ತತ್ವಪ್ರದೀಪದಲ್ಲಿ ಹೇಳಿದ ಕ್ರಮದಲ್ಲಿಯೂ 'ಭಗವಾನ್' ಎಂಬ ಪದದ ಅರ್ಥವನ್ನು ತಿಳಿಯಬೇಕು ಎಂಬುದಾಗಿ ತತ್ವಪ್ರದೀಪವನ್ನು ಉಲ್ಲೇಖಿಸುತ್ತಾರೆ.

'ದ್ವಾಪರೇ ಸರ್ವತ್ರ ಜ್ಞಾನ ಆಕೂಲೀಭೂತೇ' ಎಂಬಲ್ಲಿರುವ ದ್ವಾಪರ ಪದಕ್ಕೆ ವ್ಯಾಖ್ಯಾನ ಮಾಡುವಾಗ ಶ್ರೀರಾಘವೇಂದ್ರಸ್ವಾಮಿಗಳು ತತ್ವಪ್ರದೀಪವನ್ನು ಉಲ್ಲೇಖಿಸುತ್ತಾರೆ - 'ದ್ವಾಪರೇ ಸರ್ವತ್ರ ಜ್ಞಾನ ಆಕೂಲಿಭೂತೇ' ಎಂಬ ಭಾಷ್ಯದಲ್ಲಿ 'ದ್ವಾಪರೇ' ಎಂಬ ಪದಪ್ರಯೋಗದ ಸ್ವಾರಸ್ಯವನ್ನು ಶ್ರೀತ್ರಿವಿಕ್ರಮಪಂಡಿತಾಚಾರ್ಯರು ತತ್ವಪ್ರದೀಪದಲ್ಲಿ ಬಲುಸುಂದರವಾಗಿ ವ್ಯಾಖ್ಯಾನ ಮಾಡಿದ್ದಾರೆ. ಅದು ಹೀಗೆ - 'ದ್ವಾವೇವ ಧರ್ಮಪಾದೌ ಯಸ್ಮಿನ್ ಯುಗೇ ಪ್ರಾಪ್ತೇ ತತಃ ಕ್ರಮಾದಪಚಯೋಽಂತೇ ಏಕೋಽವಶಿಷ್ಯತೇ' ಇತಿ ತತ್ವಪ್ರದೀಪೋಕ್ತವ್ಯುತ್ಪತ್ತ್ಯಾ ಪಾದದ್ವಯಹ್ರಾಸಸೂಚನಾದಿತಿ ಭಾವಃ ।' ''ಕೃತ, ತ್ರೇತಾಯುಗಗಳ ಅನಂತರ ಯಾವ ಯುಗದಲ್ಲಿ ಎರಡೇ ಧರ್ಮಪಾದಗಳು ಉಳಿದು ಅನಂತರ ಕ್ರಮವಾಗಿ ಇನ್ನೊಂದು ಪಾದವೂ ಕಳಚಿಕೊಂಡು ಕೊನೆಯಲ್ಲಿ ಒಂದೇ ಪಾದ ಉಳಿಯುತ್ತದೋ ಆ ಯುಗವೇ ದ್ವಾಪರಯುಗ'' ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ಭಾಷ್ಯಕಾರರು 'ದ್ವಾಪರ' ಎಂಬ ಶಬ್ದದಿಂದಲೇ ಧರ್ಮದ ಎರಡು ಪಾದಗಳು ಕಳಚಿಹೋಗಿವೆ ಎಂದು ಸೂಚನೆ ಮಾಡಿದ್ದಾರೆ. ಆದ್ದರಿಂದ ದ್ವಾಪರದ ಕೊನೆಯಲ್ಲಿ ಜ್ಞಾನಹ್ರಾಸವನ್ನು ತತ್ವಜ್ಞಾನದ ಬಗ್ಗೆ ಇರುವ ಸಂಶಯವನ್ನು ಈ ಪದವು ಸ್ಪಷ್ಟಪಡಿಸುತ್ತದೆ.

ತತ್ವಪ್ರದೀಪಕಾರರ ಅಭಿಪ್ರಾಯವನ್ನು ಟೀಕಾರಾಯರು ಎಂದೂ ಕೂಡ ವಿರೋಧಿಸುವುದಿಲ್ಲ. ಪ್ರತಿಯೊಂದು ಕಡೆಯೂ ತತ್ವಪ್ರದೀಪಕಾರರ ಅಭಿಪ್ರಾಯವನ್ನು ಅನುಮೋದಿಸುತ್ತಾರೆಂಬುದನ್ನೂ ಕೂಡ ರಾಯರು ತಮ್ಮ ವ್ಯಾಖ್ಯಾನದಲ್ಲಿ ಸ್ಪಷ್ಟಪಡಿಸಿದ್ದಾರೆ - ''ಅತ ಏವ ಪ್ರಮೇಯದೀಪಿಕಾಯಾಮ್ 'ವ್ಯಾಸೋಽವತತಾರ' ತತಶ್ಚೇಷ್ಟಾನಿಷ್ಟಪ್ರಾಪ್ತಿಪರಿಹಾರೇ'ತಿ ಭಾಷ್ಯಗತಸ್ಯ 'ತತಶ್ಚ' ಇತ್ಯಸ್ಯ 'ಅವತಾರಾನಂತರಮೇವ' ಇತ್ಯರ್ಥ ಉಕ್ತಃ ।'' ''ತತ್ವಪ್ರದೀಪದ ಈ ವ್ಯಾಖ್ಯಾನವು ಟೀಕಾರಾಯರಿಗೆ ಸಮ್ಮತವಾಗಿರುವುದರಿಂದಲೇ ಗೀತಾಭಾಷ್ಯದ ಪ್ರಮೇಯದೀಪಿಕಾ ಗ್ರಂಥದಲ್ಲಿ 'ವ್ಯಾಸೋಽವತತಾರ' ತತಶ್ಚೇಷ್ಟಾನಿಷ್ಟಪ್ರಾಪ್ತಿಪರಿಹಾರ'' 'ವೇದವ್ಯಾಸದೇವರು ಅವತಾರ ಮಾಡಿದರು. ಅನಂತರ ಇಷ್ಟಾನಿಷ್ಟಪ್ರಾಪ್ತಿ ಪರಿಹಾರವನ್ನು ಬಯಸುವವರ' ಎಂಬ ಭಾಷ್ಯದಲ್ಲಿರುವ 'ತತಶ್ಚ' ಎಂಬ ಪದಕ್ಕೆ ಅವತಾರವಾದ ಕೂಡಲೇ ಎಂಬರ್ಥವನ್ನು ಬರೆದಿರುತ್ತಾರೆ''.

'ತತ್ವಪ್ರದೀಪ' ಗ್ರಂಥವನ್ನು ಹಿಂದೆ ಅಖಿಲಭಾರತ ಮಾಧ್ವ ಮಹಾಮಂಡಳದಿಂದ 1959ನೇ ವರ್ಷದಲ್ಲಿ ಮುದ್ರಿಸಲಾಗಿದೆ. ಆದರೆ ಅವರು 'ತತ್ವದೀಪಿಕಾ' ಎಂಬುದಾಗಿ ಉಲ್ಲೇಖಿಸಿದ್ದಾರೆ. ಸುಮಾರು ಹದಿನೈದು ವರ್ಷಗಳ ಹಿಂದೆ ದ್ವೈತವೇದಾಂತ ಸಂಶೋಧನಾ ಸಂಸ್ಥೆಯಿಂದ ಮುದ್ರಿತವಾದ ಪುಸ್ತಕದಲ್ಲಿ 'ತತ್ವಪ್ರದೀಪಿಕಾ' ಎಂಬುದಾಗಿ ಉಲ್ಲೇಖಿಸಿದ್ದಾರೆ.

ಬಿ.ಎನ್.ಕೆ. ಶರ್ಮ ಅವರು ತಮ್ಮ ಪ್ರಕಟಣೆಯಲ್ಲಿ 'ತತ್ವಪ್ರದೀಪ' ಎಂದು ಹೇಳುತ್ತಾರೆ. ಆದರೆ ಅನೇಕ ಹಸ್ತಪ್ರತಿಗಳಲ್ಲಿ 'ತತ್ವದೀಪಿಕಾ' ಎಂಬ ಸ್ತ್ರೀಲಿಂಗಶಬ್ದದ ಪ್ರಯೋಗವಿರುತ್ತದೆ ಎಂದು ಕೆಲವು ಸಂಶೋಧಕರು ಅಭಿಪ್ರಾಯ ಪಡುತ್ತಾರೆ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರು ತಮ್ಮ ಗ್ರಂಥದ ಕೊನೆಯಲ್ಲಿ ತಮ್ಮ ಗ್ರಂಥ 'ಸತ್ತತ್ವದೀಪ' ಎಂದು ತಿಳಿಸಿದ್ದಾರೆ. 'ತತ್ವದೀಪಿಕಾ' ಎಂದು ತಿಳಿಸಿಲ್ಲ -

ಸಂಪ್ರೀತಯೇ ಭಗವತಃ ಪರಮಸ್ಯ ಭಕ್ತ್ಯಾ ।
ಸತ್ತತ್ವದೀಪಮಿಮಮತ್ರ ಸಮರ್ಪಯಾಮಿ ॥ ಎಂದು.

ನಾವು ಮುದ್ರಣ ಮಾಡುತ್ತಿರುವ ಈ ಪುಸ್ತಕದಲ್ಲಿ 'ತತ್ವಪ್ರದೀಪ' ಎಂಬ ಪುಲ್ಲಿಂಗಪ್ರಯೋಗದ ಶಬ್ದವನ್ನು ಉಲ್ಲೇಖಿಸಿದ್ದೇವೆ. ಇದಕ್ಕೆ ಕಾರಣ ಹೀಗಿದೆ - ಶ್ರೀರಾಘವೇಂದ್ರಸ್ವಾಮಿಗಳು ಎಲ್ಲೆಡೆಯೂ 'ತತ್ವಪ್ರದೀಪ' ಎಂಬುದಾಗಿಯೇ ತಮ್ಮ ಭಾವದೀಪ ಗ್ರಂಥದಲ್ಲಿ ಉಲ್ಲೇಖಿಸುತ್ತಾರೆ. ತತ್ವದೀಪಿಕಾ ಎಂಬುದಾಗಿ ಅಥವಾ ತತ್ವಪ್ರದೀಪಿಕಾ ಎಂಬುದಾಗಿ ಉಲ್ಲೇಖಿಸುವುದಿಲ್ಲ. ಮಧ್ವವಿಜಯದಲ್ಲಿ ಶ್ರೀನಾರಾಯಣ-ಪಂಡಿತಾಚಾರ್ಯರೂ ಕೂಡ 'ತತ್ವಪ್ರದೀಪಾಕೃತಿಗೋಗಣೇನ' ಎನ್ನುತ್ತಾರೆ. ಈ ಮಾತು 'ತತ್ವಪ್ರದೀಪ' ಎಂಬ ಹೆಸರಿಗೆ ಪುಷ್ಟಿ ನೀಡುತ್ತದೆ.

ಶ್ರೀತ್ರಿವಿಕ್ರಮಪಂಡಿತರ ತತ್ವಪ್ರದೀಪ ಗ್ರಂಥವು ಬಲು ಆಪ್ಯಾಯಮಾನವಾಗಿದೆ. ಓದುವ ಸಂದರ್ಭದಲ್ಲಿ ಕೆಲವೊಮ್ಮೆ ಇದು ಶಾಸ್ತ್ರವೋ ಅಥವಾ ಕಾವ್ಯವೋ ಎಂದು ಸಂದೇಹ ಮೂಡುವುದರಿಂದ ಇದನ್ನು ನಾವು ಶಾಸ್ತ್ರಕಾವ್ಯವೆಂದೇ ಕರೆಯಬಹುದು. ಇದರಂತೆ ಕೆಲವೊಮ್ಮೆ ಇದು ಭಾಷ್ಯದ ಟಿಪ್ಪಣಿಯೋ ? ಅಥವಾ ವಾಯುದೇವರನ್ನು ಪ್ರಶಂಸಿಸುವ ವೇದಮಂತ್ರದ ವ್ಯಾಖ್ಯಾನವೋ? ಎಂಬ ಸಂದೇಹ ಮೂಡುವುದರಿಂದ ಇದನ್ನು ವಾಯುದೇವರ ಮಹತ್ವಪ್ರತಿಪಾದಕವಾದ ಭಾಷ್ಯದ ಟೀಕೆ ಎಂದು ಕರೆಯಬಹುದು. ಶ್ರೀತ್ರಿವಿಕ್ರಮಪಂಡಿತರು ಅನೇಕ ಕಡೆ ತತ್ವವಾದಕ್ಕೆ ವಿರುದ್ಧವಾದ ಮತಗಳನ್ನು ಲೀಲಾಜಾಲವಾಗಿ ಧೂಳಿಪಟ ಮಾಡುತ್ತಾರೆ. ಶ್ರೀಮದಾಚಾರ್ಯರ ಸಿದ್ಧಾಂತವನ್ನು ಸ್ಥಾಪನೆ ಮಾಡಿ, ಜಯಭೇರಿ ಬಾರಿಸುತ್ತಾರೆ.

ಶ್ರೀಪದ್ಮನಾಭತೀರ್ಥರು ರಚಿಸಿದ ಸತ್ತರ್ಕದೀಪಾವಳಿ' ಎಂಬ ಟೀಕೆಯೂ ಕೂಡ ಬಲು ಮಾನ್ಯವಾಗಿದೆ. ರಾಘವೇಂದ್ರವಿಜಯದಲ್ಲಿ ಶ್ರೀಪದ್ಮನಾಭತೀರ್ಥರನ್ನು ಸನ್ನ್ಯಾಯರತ್ನಾವಳಿಕಾರರೆನ್ನುವಂತೆ ಸತ್ತರ್ಕದೀಪಾವಳಿ-ಕಾರರೆಂದೂ ಕೂಡ ಪ್ರಶಂಸೆ ಮಾಡುತ್ತಾರೆ -

ಸತ್ತರ್ಕದೀಪಾವಳಿಮುತ್ಯುದಾರಾಂ ಸನ್ನ್ಯಾಯರತ್ನಾವಳಿಮಪ್ಯನಿಂದ್ಯಾಮ್ ।
ಭಾಷ್ಯಾನುಭಾಷ್ಯಾತಯಬೋಧಹೇತೂ ತತಾನ ಯಸ್ತಾರ್ಕಿಕಮೌಳಿರತ್ನಮ್ ॥

ಶ್ರೀಪದ್ಮನಾಭತೀರ್ಥರು ಅನುವ್ಯಾಖ್ಯಾನಕ್ಕೆ ವಿರಚಿಸಿರುವ ಸನ್ನ್ಯಾಯರತ್ನಾವಳಿ ಗ್ರಂಥವು ವಿದ್ವಲ್ಲೋಕದಲ್ಲಿ ಬಲುಪ್ರಸಿದ್ಧವಾಗಿದೆ. ಬ್ರಹ್ಮಸೂತ್ರಭಾಷ್ಯಕ್ಕೆ ಬರೆದಿರುವ ಸತ್ತರ್ಕದೀಪಾವಳಿ ಗ್ರಂಥವನ್ನೂ ಕೂಡ ಸನ್ನ್ಯಾಯರತ್ನಾವಳಿಯಂತೆ ಗೌರವಿಸಬೇಕು. ಇತ್ತೀಚಿನ ಅಧ್ಯಯನ ಪರಂಪರೆಯಲ್ಲಿ ತತ್ವಪ್ರದೀಪದ ಅಧ್ಯಯನವು ನಿಂತಿರುವಂತೆ ಸತ್ತರ್ಕದೀಪಾವಳಿಯ ಅಧ್ಯಯನವೂ ಕೂಡ ನಿಂತುಹೋಗಿದೆ. ಇನ್ನು ಕೆಲವು ವರ್ಷಗಳು ಹೀಗೆ ಉರುಳಿದರೆ ನಾಮಾವಶೇಷವಾಗಿ ಉಳಿದುಬಿಡುವ ಅಪಾಯವಿದೆ. ಶ್ರೀಮದಾಚಾರ್ಯರ ಮುಖಕಮಲದಿಂದ ಬ್ರಹ್ಮಸೂತ್ರಭಾಷ್ಯದ ಪಾಠವನ್ನು ಕೇಳಿದ ಇಬ್ಬರು ಮಹನೀಯರ ಟೀಕೆಗಳನ್ನು ನಾವು ಕಳೆದುಕೊಳ್ಳುವುದೆಂದರೆ ನಮ್ಮ ಅಮೂಲ್ಯ ಆಸ್ತಿಯನ್ನು ಕಳೆದುಕೊಂಡಂತೆ. ಆದ್ದರಿಂದ ಎಲ್ಲಾ ಜಿಜ್ಞಾಸುಗಳು ಅತ್ಯವಶ್ಯವಾಗಿ ತತ್ವಪ್ರಕಾಶಿಕೆಯ ಜೊತೆ ಸತ್ತರ್ಕದೀಪಾವಳಿ ಹಾಗೂ ತತ್ವಪ್ರದೀಪಗ್ರಂಥಗಳನ್ನು ಅಧ್ಯಯನ ಮಾಡಿ, ಜೀವನವನ್ನು ಸಾರ್ಥಕಮಾಡಿಕೊಳ್ಳಬೇಕು.

ನಮ್ಮ ದ್ವಿತೀಯ ಚಾತುರ್ಮಾಸ್ಯದ ಮುಕ್ತಾಯ ಸಂದರ್ಭದಲ್ಲಿ ಭಾವದೀಪಗ್ರಂಥದ ಮೊದಲನೆಯ ಸಂಪುಟವನ್ನು ಶ್ರೀರಾಯರ ಅಂತರ್ಯಾಮಿಯಾದ ಶ್ರೀಮೂಲರಾಮದೇವರಿಗೆ ಸಮರ್ಪಣೆ ಮಾಡಿದೆವು. ಬಲು ಶೀಘ್ರದಲ್ಲಿ ವಿದ್ವಾನ್ ಬೆಮ್ಮತ್ತಿ ವೆಂಕಟೇಶಾಚಾರ್ಯರು ಅತ್ಯಂತ ಶ್ರದ್ಧೆಯಿಂದ ಪ್ರಥಮ ಸಂಪುಟವನ್ನು ಬರೆದು ಸಿದ್ಧಗೊಳಿಸಿದರು. ಇವರ ಈ ಸಾಧನೆಯನ್ನು ಕಂಡು ನಮ್ಮ ಮನಸ್ಸಿಗೆ ಬಹಳ ಸಂತೋಷವಾಯಿತು. ತತ್ವಪ್ರಕಾಶಿಕೆಯನ್ನು ಭಾವದೀಪ ಟಿಪ್ಪಣಿಯ ಜೊತೆ ಅನುವಾದ ಮಾಡಲು ಎಷ್ಟು ಸಾಮರ್ಥ್ಯ ಹಾಗೂ ಉತ್ಸಾಹಗಳು ಬೇಕೋ, ಅದಕ್ಕಿಂತಲೂ ಹೆಚ್ಚಿನ ಸಾಮರ್ಥ್ಯ ಹಾಗೂ ಉತ್ಸಾಹಗಳಿರುವುದನ್ನು ಬೆಮ್ಮತ್ತಿ ವೆಂಕಟೇಶಾಚಾರ್ಯರಲ್ಲಿರುವುದು ಗಮನಿಸಿದೆವು.

ಶ್ರೀರಾಘವೇಂದ್ರಸ್ವಾಮಿಗಳ ಪ್ರೇರಣೆಯಂತೆ ಮೂರು ಟೀಕೆಗಳ ಜೊತೆ ವಿಶೇಷ ವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ ಭಾವದೀಪದ ಅನುವಾದ ಕಾರ್ಯವು ನಡೆಯಬೇಕೆಂದು ಬೆಮ್ಮತ್ತಿಯವರಿಗೆ ನಾವು ಹೇಳಿದೆವು. ಕೂಡಲೇ ಅವರು ಹೇಳಿದಾಕ್ಷಣ ಸಂತೋಷ ಹಾಗೂ ಉತ್ಸಾಹಗಳಿಂದ ಒಪ್ಪಿದರು. ಕೆಲವೇ ಸಮಯದಲ್ಲಿ ಎರಡನೆಯ ಸಂಪುಟವೂ ಕೂಡ ಅನುವಾದಮಾಡಿ ಸಿದ್ಧಗೊಳಿಸಿದರು. ಈ ಪುಸ್ತಕವನ್ನು ನಾವು ಆಮೂಲಾಗ್ರವಾಗಿ ಓದಿರುತ್ತೇವೆ. ಈ ಅನುವಾದ ಕಾರ್ಯದಿಂದ ನಮಗೆ ಮತ್ತಷ್ಟು ಸಂತೋಷವಾಗಿದೆ.

'ಇದೇ ಕ್ರಮದಲ್ಲಿ ಅಥವಾ ಇದಕ್ಕಿಂತಲೂ ಇನ್ನೂ ಹೆಚ್ಚು ವಿಚಾರಗಳನ್ನು ಸೇರಿಸಿ, ಬ್ರಹ್ಮಸೂತ್ರಭಾಷ್ಯದ ಮೇಲಿರುವ ಎಲ್ಲಾ ಗ್ರಂಥಗಳನ್ನು ಅವಲೋಕಿಸಿ ಅವುಗಳಲ್ಲಿರುವ ಅಮೂಲ್ಯರತ್ನಗಳನ್ನು ಸೆರೆಹಿಡಿದು ಮುಂದಿನ ಭಾಗಗಳಲ್ಲಿ ಅವರು ಅನುವಾದ ಮಾಡಲಿ. ಅಂಥ ಶಕ್ತಿಯನ್ನು ಭಗವಂತನು ಅವರಲ್ಲಿ ತುಂಬಲಿ. ಯಾವ ಹಂತದಲ್ಲಿಯೂ ಯಾವುದೇ ರೀತಿಯ ತಪ್ಪುಗಳು ಬಾರದಂತೆ ಎಚ್ಚರವಹಿಸಿ, ಈ ಜ್ಞಾನಕಾರ್ಯವು ಪರಿಪೂರ್ಣವಾಗಲಿ' ಎಂಬುದಾಗಿ ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ-ಭಾರತೀರಮಣ - ಮುಖ್ಯಪ್ರಾಣಾಂತರ್ಗತ - ಶ್ರೀಮನ್ಮೂಲರಘುಪತಿ - ವೇದವ್ಯಾಸದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

- ಇತಿ ಸಪ್ರೇಮ ನಾರಾಯಣಸ್ಮರಣೆಗಳು

# ಅನುಕ್ರಮಣಿಕಾ

## ಮೂರು ಟೀಕೆಗಳ ಜೊತೆ ಭಾವದೀಪ ಓದುವ ಮುನ್ನ..........

ಓ ಮಹಾಜನರೇ.... ! ಇಲ್ಲಿ ಕೇಳಿ....! ಬಹಳ ಸಂತೋಷದ ವಿಷಯ ....!!

ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದರು ಈಗ ಹಮ್ಮಿಕೊಂಡ ಅತ್ಯುತ್ತಮ ಅಪೂರ್ವ ಜ್ಞಾನಕಾರ್ಯದ ಬಗ್ಗೆ ನೀವು ಕೇಳಿದರೆ ...... !!

ನಂಬಲಾಗದಷ್ಟು ಸಂತೋಷ ಪಡುವಿರಿ....!! ಆಶ್ಚರ್ಯ ಪಡುವಿರಿ....!!

ಹೀಗೂ ಒಂದು ಯೋಜನೆ ಹಮ್ಮಿಕ್ಕೊಳ್ಳಲು ಸಾಧ್ಯವೇ.....!! ಎನ್ನುವಿರಿ.

ಕೊನೆಯಲ್ಲಿ... 'ಅಬ್ಬಾ ....!! ಇದು ನನಗೆ ದೇವರು ಕರುಣಿಸಿದ ವರ....!!' ಎಂದು ಭಾವಿಸಿ 'ಧನ್ಯ ...' 'ಧನ್ಯ ....' ಎನ್ನುವಿರಿ.

ಮೋಕ್ಷಶಾಸ್ತ್ರವೆನಿಸಿದ ಬ್ರಹ್ಮಸೂತ್ರಭಾಷ್ಯಕ್ಕೆ ಶ್ರೀಜಯತೀರ್ಥಮುನಿಗಳು ಬರೆದ 'ತತ್ವಪ್ರಕಾಶಿಕೆ'ಯ ಬಗ್ಗೆ ನಿಮಗೆ ಗೊತ್ತು..... ಅಲ್ಲವೇ...?

ಹೌದು.... ಇದೇ ಬ್ರಹ್ಮಸೂತ್ರಕ್ಕೆ ಇನ್ನೂ ಎರಡು ಟೀಕೆಗಳಿವೆ... ಒಂದು ಶ್ರೀಪದ್ಮನಾಭತೀರ್ಥಶ್ರೀಪಾದರು ವಿರಚಿಸಿದ 'ಸತ್ತರ್ಕದೀಪಾವಳಿ'. ಮತ್ತೊಂದು ಶ್ರೀತ್ರಿವಿಕ್ರಮಪಂಡಿತರು ವಿರಚಿಸಿದ 'ತತ್ವಪ್ರದೀಪ'.

ಹೌದು..... ಹೌದು..... ಗೊತ್ತು ..... ಗೊತ್ತು.... ಎನ್ನುವಿರಾ ?

ಗೊತ್ತೇ ಇರಲಿಲ್ಲ..... ಎನ್ನುವಿರಾ ?

ಎಲ್ಲೋ ಹೆಸರು ಕೇಳಿದಂತೆ ಇದೆ ಎನ್ನುವಿರಾ..... ?

ಅಥವಾ ಗೊತ್ತು.... ಆದರೆ ನಮ್ಮ ಜೀವನದಲ್ಲಿ ಎಂದೂ ಓದಲು ಸಾಧ್ಯವಾಗದ ಗ್ರಂಥಗಳು ಎನ್ನುವಿರಾ.... ?

ಚಿಂತಿಸಬೇಕಾಗಿಲ್ಲ. ನಿಮಗಾಗಿ ಈ ಅಪೂರ್ವ ಯೋಜನೆಯನ್ನು ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು ಹಮ್ಮಿಕೊಂಡಿದ್ದಾರೆ.

ಇಂದಿನ ಕಾಲದಲ್ಲಿ ಗುರುಗಳು ಸಿಗುವುದೇ ಕಷ್ಟ.... ಆಧುನಿಕ ಜೀವನಶೈಲಿ..... ಬಿಡುವಿಲ್ಲದ ಕೆಲಸದ ಒತ್ತಡ.....

ಸಿಕ್ಕ ಅವಕಾಶದಲ್ಲಿ ಗುರುಗಳಿಂದ ಪಡೆದ ಉಪದೇಶವೋ ಅತ್ಯಲ್ಪ......

ತೃಪ್ತಿಯಿಲ್ಲ...... ಕಲಿತದ್ದನ್ನು ಜೀರ್ಣಸಿಕೊಳ್ಳುವುದು ಸುಲಭವಲ್ಲ.......

ಮೂರು ಟೀಕೆಗಳ ಜೊತೆ ಬ್ರಹ್ಮಸೂತ್ರಭಾಷ್ಯವನ್ನು ಅಧ್ಯಯನ ಮಾಡಬೇಕೆಂಬ ಹಂಬಲ.....

ಸಂಸ್ಕೃತ ಮೂಲದೊಂದಿಗೆ ಮೂರು ಟೀಕೆಗಳು ಭಾವದೀಪ ಟಿಪ್ಪಣಿಯೊಂದಿಗೆ ಅರ್ಥವಾಗುವಂತೆ ಕಸ್ತೂರಿ ಕನ್ನಡದಲ್ಲಿ ಸಿಕ್ಕಿಬಿಟ್ಟರೆ........

ಆಹಾ ................ ಇದಕ್ಕಿಂತ ಸೌಭಾಗ್ಯ ಇನ್ನೊಂದಿಲ್ಲ !!!

ಗ್ರಂಥವೆಂಬ ಗುರುವಿನ ಪ್ರತಿಬಿಂಬದಿಂದಾದರೂ ತಿಳಿಯುವ ........... 'ಕಾತರ' .......... 'ಶ್ರದ್ಧೆ'.

ಇಂಥ ಜಿಜ್ಞಾಸುಗಳಿಗಾಗಿಯೇ ಇದೋ ನಿಮ್ಮ ಕೈಯಲ್ಲಿದೆ ಮೂರು ಟೀಕೆಗಳ ಜೊತೆ ಭಾವದೀಪ ಗ್ರಂಥ.

## ಮೂರು ಟೀಕೆಗಳು ಅದೆಷ್ಟು ಅದ್ಭುತ !

ಬ್ರಹ್ಮಸೂತ್ರಭಾಷ್ಯಕ್ಕೆ ಸತ್ತರ್ಕದೀಪಾವಳಿ, ತತ್ವಪ್ರದೀಪ, ತತ್ವಪ್ರಕಾಶಿಕಾ ಎಂಬ ಮೂರು ಟೀಕೆಗಳ ಆಳ-ಅಗಲವನ್ನು ನಮ್ಮಿಂದ ಊಹಿಸಲೂ ಕೂಡ ಸಾಧ್ಯವಿಲ್ಲ. 'ಅದ್ಭುತ' ಎಂದಷ್ಟೇ ಹೇಳಬಹುದು.

ಮೈನಿಮಿರೇಳಿಸುವ ವಿಷಯ ಎಂದರೆ ಶ್ರೀಪದ್ಮನಾಭತೀರ್ಥರು ಹಾಗೂ ಶ್ರೀತ್ರಿವಿಕ್ರಮಪಂಡಿತಾಚಾರ್ಯರು ಶ್ರೀಮದಾಚಾರ್ಯರ ಮುಖಕಮಲದಿಂದ ನೇರವಾಗಿ ಬ್ರಹ್ಮಸೂತ್ರಭಾಷ್ಯವನ್ನು ಪಾಠ ಕೇಳಿದ ಮಹಾನುಭಾವರು. ಹೇಳಿದ್ದನ್ನು ಬರೆದಿಟ್ಟರು ಶ್ರೀಪದ್ಮನಾಭತೀರ್ಥರು. 'ನನ್ನ ಭಾಷ್ಯಕ್ಕೆ ನೀನು ಟೀಕೆಯನ್ನು ವಿರಚಿಸು' ಎಂಬ ಶ್ರೀಮದಾಚಾರ್ಯರ ಆಜ್ಞೆಯಂತೆ ಟೀಕೆ ಬರೆದವರು ಶ್ರೀತ್ರಿವಿಕ್ರಮಪಂಡಿತರು.

ಏನಿದು ಆಶ್ಚರ್ಯ.....! ಇದಕ್ಕಿಂತ ಆಶ್ಚರ್ಯವಿಷಯ ಬೇರೆ ಯಾವುದಿದೆ....! ತಮ್ಮ ಭಾಷ್ಯಕ್ಕೆ ಟೀಕೆಯನ್ನು ರಚನೆ ಮಾಡಲು ಹೇಳುವುದು ಸಾಮಾನ್ಯವಿಷಯವೇ.....! ಅದರಲ್ಲಿಯೂ ಬಹುಮಂದಿ ಶಿಷ್ಯಂದಿರಿರುವಾಗ ಒಬ್ಬ ಗೃಹಸ್ಥನಿಗೆ ಹೇಳುವುದೆಂದರೆ ರೋಮಾಂಚನ ಆಗುವುದಿಲ್ಲವೆ? ಶ್ರೀಮದಾಚಾರ್ಯರ ಅಪ್ಪಣೆಯಂತೆ ಪಂಡಿತಾಚಾರ್ಯರು 'ತತ್ವಪ್ರದೀಪ' ಎಂಬ ಟೀಕಯನ್ನು ಬರೆದು ಸಮರ್ಪಣೆ ಮಾಡಿದಾಗ ಶ್ರೀಮದಾಚಾರ್ಯರಿಗೆ ಅದೆಷ್ಟು ಸಂತೋಷವಾಗಿರಲಿಕ್ಕಿಲ್ಲ..... ಶ್ರೀಮದಾಚಾರ್ಯರ ಸಂತೋಷವನ್ನು ನೋಡಿ ಪಂಡಿತಾಚಾರ್ಯರ ಧನ್ಯತಾಭಾವನೆ ಅದೆಷ್ಟಿರಬಹುದು ! .... ಊಹಿಸುವ ಯೋಗ್ಯತೆ.....ಎಲ್ಲರಿಗೂ ಇರುವುದಿಲ್ಲ !! ಅಲ್ಲವೇ .....!!

ಶ್ರೀಮಟ್ಟೀಕಾಕೃತ್ಪಾದರೂ ಕೂಡ ಹಿಂದಿನ ಜನ್ಮದಲ್ಲಿ ಎತ್ತಿನ ಅವತಾರವನ್ನು ತಾಳಿ, ಶ್ರೀಮದಾಚಾರ್ಯರ ಗ್ರಂಥವನ್ನು ಹೊತ್ತುಕೊಳ್ಳುವ ಸೇವೆಯನ್ನು ಗೈದವರೆಂದು ಜಯತೀರ್ಥವಿಜಯದಲ್ಲಿ ತಿಳಿಸಿದ್ದಾರೆ. ಆದ್ದರಿಂದ ಮೂವರೂ ಕೂಡ ಶ್ರೀಮದಾಚಾರ್ಯರಿಂದಲೇ ಪಾಠ ಕೇಳಿದ ಮಹಾನುಭಾವರು.

ಶ್ರೀಮದಾಚಾರ್ಯರ ಅತ್ಯಂತ ಪ್ರೀತಿಗೆ ಪಾತ್ರರಾದ ಮೂವರು ಟೀಕಾಕಾರರ ಮೂರು ಟೀಕೆಗಳನ್ನು ಓದುವ ಅವಕಾಶ ದೊರಕಿರುವುದಂತೂ ನಮ್ಮ ಸೌಭಾಗ್ಯ ...!! ಮೂರು ಟೀಕೆಗಳನ್ನು

ಒಟ್ಟಿಗೆ ಓದಿದರೆ ಅದೆಷ್ಟು ಜ್ಞಾನದಾಯಕ....!! ಭಾವದೀಪವನ್ನು ಜೊತೆ ಸೇರಿಸಿ ಓದಿದರೆ ಇನ್ನೆಷ್ಟು ನಿಶ್ಚಾಯಕ......!! ನಮಗೆ ಇಂಥ ಒಳ್ಳೆಯ ಅವಕಾಶ ಮಾಡಿಕೊಟ್ಟವರು ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದರು.

## ಶ್ರೀಸುಬುಧೇಂದ್ರತೀರ್ಥರ ಜ್ಞಾನನಿಷ್ಠೆ

ಶ್ರೀಗಳು ಮೂರು ಟೀಕೆಗಳ ಜೊತೆ ಭಾವದೀಪವನ್ನು ಅನುವಾದ ಮಾಡಿಸಿ, ಪ್ರಕಟಿಸಬೇಕೆಂದು ಯೋಚಿಸಿದರು. ಯೋಚಿಸಿದ ಕೂಡಲೇ ಕಾರ್ಯರೂಪಕ್ಕೆ ತಂದರು.

ಶ್ರೀಸುಬುಧೇಂದ್ರತೀರ್ಥಶ್ರೀಪಾದರು ತಮ್ಮ ದ್ವಿತೀಯ ಚಾತುರ್ಮಾಸ್ಯದಲ್ಲಿ ಶ್ರೀರಾಘವೇಂದ್ರಸ್ವಾಮಿಗಳ ಆರಾಧನೆಯ ಪವಿತ್ರಸಂದರ್ಭದಲ್ಲಿ ಭಾವದೀಪ ಕನ್ನಡಾನುವಾದವನ್ನು ಮಾಡಬೇಕೆಂದು ಯೋಚಿಸಿದರು. ಅನಂತಚತುರ್ದಶಿಯಂದು ಅತ್ಯಂತ ವೈಭವೋಪೇತವಾಗಿ ಭಾವದೀಪಗ್ರಂಥದ ಪ್ರಥಮ ಸಂಪುಟವನ್ನು ಬಿಡುಗಡೆ ಮಾಡಿದರು. ಭಕ್ತಿ ಹಾಗೂ ಶ್ರದ್ಧೆಗಳಿಂದ ಪ್ರಥಮಸಂಪುಟವನ್ನು ಮೂಲರಾಮದೇವರಿಗೆ ಹಾಗೂ ಶ್ರೀರಾಘವೇಂದ್ರಸ್ವಾಮಿಗಳಿಗೆ ಸಮರ್ಪಣೆ ಮಾಡಿದರು. 'ಕಿಮತೋ ಅನ್ಯನ್ ಮಂಗಳಂ ನಾಮ' 'ಇದಕ್ಕಿಂತ ಮಂಗಳಕಾರ್ಯ ಬೇರೆ ಯಾವುದಿದೆ!!' ಎಂದು ನುಡಿದು ಹರಿಗುರುಗಳಲ್ಲಿ 'ಜ್ಞಾನಕಾರ್ಯ ವ್ಯಾಪಕವಾಗಿ ಬೆಳೆಯಲಿ' ಎಂದು ಪ್ರಾರ್ಥಿಸಿದರು.

ಶ್ರೀಗಳ ದೀಕ್ಷೆಗೆ ಮೆಚ್ಚಿ ರಾಯರು ಮುಂದಿನ ಸಂಪುಟಗಳಲ್ಲಿ ಟೀಕಾತ್ರಯಗಳ ಜೊತೆ ತಮ್ಮ ಭಾವದೀಪ ಟಿಪ್ಪಣಿಯನ್ನು ಅನುವಾದ ಮಾಡಿಸಿ ದಯಪಾಲಿಸುತ್ತಿರುವರು.

ಶ್ರೀಗಳಿಗೆ ಪವಿತ್ರ ಜ್ಞಾನಕಾರ್ಯದಲ್ಲಿ ಎಲ್ಲಿಲ್ಲದ ಆಸಕ್ತಿ. ಸಾವಿರಾರು ಕಾರ್ಯಗಳ ಒತ್ತಡವಿದ್ದರೂ ಜ್ಞಾನಕಾರ್ಯದಲ್ಲಿ ಎಂದೂ ಚ್ಯುತಿ ಬಾರದಂತೆ ಆಸಕ್ತರಾಗಿರುವರು.

ನಮ್ಮ ಮಠಕ್ಕೆ 'ವಿದ್ಯಾಮಠ' ಎಂಬ ಹೆಸರು ಅನ್ವರ್ಥಕವಾಗಲು ಕಾರಣಪುರುಷರಾಗಿರುವರು.

ಈ ವಿಷಯದಲ್ಲಿ ನನ್ನ ಒಂದು ಸಣ್ಣ ಅನುಭವ - ಮೂರು ಟೀಕೆಗಳ ಜೊತೆ ಭಾವದೀಪದ ಅನುವಾದವನ್ನು ಮಾಡಿದ ಮೇಲೆ ಶ್ರೀಗಳವರ ಭೇಟಿ ಮಾಡಿದೆ. ಮಾಡಿದ ಕಾರ್ಯವನ್ನು ಶ್ರೀಗಳವರಲ್ಲಿ ಬಿನ್ನವಿಸಿದೆ. ನೂರಾರು ಕಾರ್ಯಗಳ ಒತ್ತಡದಲ್ಲಿದ್ದ ಶ್ರೀಗಳವರ ಬಳಿ ಒಂದು ನಿಮಿಷಕ್ಕಿಂತಲೂ ಹೆಚ್ಚು ಮಾತನಾಡುವ ಸಮಯಾವಕಾಶ ಸಿಗದೆ ಹಿಂತಿರುಗಿ ಬಂದೆ.

ಪುನಃ ಐದು ದಿವಸಗಳ ಅನಂತರ ಶ್ರೀಗಳವರನ್ನು ಭೇಟಿ ಮಾಡಿದಾಗ ನಂಬಲಾಗದ ಆಶ್ಚರ್ಯ ವಿಷಯ ಕಾದಿತ್ತು. ನಾನು ಅನುವಾದ ಮಾಡಿದ ಈ ಪುಸ್ತಕವನ್ನು ಬಹುಭಾಗ ಓದಿದ್ದರು. ಪ್ರತಿಯೊಂದು ಅಕ್ಷರವನ್ನೂ ಕೂಡ ಲೇಖನಿಯಿಂದ ಗುರುತಿಸುತ್ತಾ ಅಧ್ಯಯನ ಮಾಡಿ, ತಪ್ಪು-ಸರಿಗಳ ವಿಮರ್ಶೆಯನ್ನು ಮಾಡಿಟ್ಟಿದ್ದರು.

ಶ್ರೀಗಳವರಿಗೆ ಕಾರ್ಯಗಳ ಒತ್ತಡ ಎಷ್ಟಿರುತ್ತದೆಂಬುದನ್ನು ಪ್ರತ್ಯೇಕವಾಗಿ ನಾನು ಹೇಳಬೇಕಾಗಿಲ್ಲ. ಇಷ್ಟು ಕಾರ್ಯಗಳ ಮಧ್ಯದಲ್ಲಿಯೂ ಕೇವಲ ಐದು ದಿವಸಗಳಲ್ಲಿಯೇ ಇಷ್ಟು ದೊಡ್ಡ ಗ್ರಂಥವನ್ನು ಓದಿದ್ದಾರೆಂದರೆ ಬಹುಶಃ ಅನೇಕ ರಾತ್ರಿಗಳು ನಿದ್ರೆಮಾಡದೇ ಓದಿರಬೇಕೆಂದು ಅನಿಸುತ್ತದೆ. ಕೇವಲ ಪುಸ್ತಕ ಮುದ್ರಣದ ಉದ್ದೇಶವಷ್ಟೇ ಅಲ್ಲದೇ ಪುಸ್ತಕವು ತಪ್ಪಿಲ್ಲದೆ ಶುದ್ಧವಾಗಿ ಎಲ್ಲಾ ವಿಧ ಜಿಜ್ಞಾಸುಗಳಿಗೆ ಉಪಯೋಗವಾಗುವಂತೆ ಮುದ್ರಣವಾಗಬೇಕೆಂಬುದು ಶ್ರೀಗಳವರ ಉತ್ಕಟ ಅಪೇಕ್ಷೆ. ಅನೇಕ ಬಾರಿ ನನ್ನ ಬಳಿ ಶ್ರೀಗಳವರು ಹೇಳುವ ಮಾತು -

''ಎಲ್ಲಾ ಟಿಪ್ಪಣಿಗಳನ್ನು ಓದಿ, ಟಿಪ್ಪಣಿಗಳಲ್ಲಿರುವ ಅಪೂರ್ವ ವಿಷಯಗಳನ್ನು ಸಂಗ್ರಹಿಸಬೇಕು. ಕೇವಲ ಭಾವದೀಪದಲ್ಲಿರುವ ವಿಷಯವಷ್ಟೇ ಅನುವಾದವಾದರೆ ಸಾಲದು. ಗ್ರಂಥಗೌರವದ ಭಯ ಎಂದೂ ಬೇಡ. ನಮ್ಮ ವಿದ್ಯಾಮಠವು ವಿದ್ಯೆಯ ಪ್ರಚಾರಕ್ಕಾಗಿಯೇ ಕಂಕಣಬದ್ಧವಾಗಿದೆ''

ಶ್ರೀಗಳವರ ಇಂಥ ಮಾತುಗಳು ನನ್ನಲ್ಲಿ ನಿಜವಾಗಿಯೂ ಉತ್ಸಾಹ ತುಂಬಿದೆ. ಮತ್ತೂ ಒಂದು ಆಶ್ಚರ್ಯದ ವಿಷಯವೆಂದರೆ ಈಗಾಗಲೇ ಉಲ್ಲೇಖ ಮಾಡಿರುವಂತೆ ಶ್ರೀಗಳವರು ಮಠದಲ್ಲಿರುವ ಬೊಕ್ಕಸದಿಂದ ಈ ಜ್ಞಾನಕಾರ್ಯವನ್ನು ಮಾಡುತ್ತಿಲ್ಲ. ಭಕ್ತರು ತಮಗೆ ಸಮರ್ಪಣೆ ಮಾಡಿದ ಪಾದಕಾಣಿಕೆಯಿಂದಲೇ ಈ ಎಲ್ಲಾ ಸಂಪುಟಗಳ ವೆಚ್ಚವನ್ನು ಭರಿಸಿ, ಮುದ್ರಣಕ್ಕಾಗಿ ಎಲ್ಲಾ ರೀತಿಯಲ್ಲಿಯೂ ಅನುಕೂಲ ಮಾಡಿಕೊಡುತ್ತಿದ್ದಾರೆ.

ಈ ವಿಷಯದಲ್ಲಿ ಒಂದು ಉದಾಹರಣೆಯನ್ನು ಉಲ್ಲೇಖಿಸಬೇಕು. ಲಕ್ಷ್ಮೀದೇವಿಗೆ ಅನಂತ ಸಂಖ್ಯೆಯಲ್ಲಿ ದಾಸಿಯರಿದ್ದರೂ, ಭಗವಂತನ ಮನೆಯ ಕೆಲಸವನ್ನು ಸ್ವತಃ ತಾನೇ ಮಾಡುತ್ತಾಳಂತೆ. ಅದರಂತೆ ಶ್ರೀಗಳು ಜ್ಞಾನಕಾರ್ಯಕ್ಕಾಗಿ ವಿನಿಯೋಗಿಸಬೇಕಾದ ಶ್ರೀಮಠದ ದ್ರವ್ಯವನ್ನು ಉಪಯೋಗಿಸಿ ಪುಸ್ತಕವನ್ನು ಮುದ್ರಿಸಬಹುದು. ಆದರೂ ತಮ್ಮ ಪಾದಕಾಣಿಕೆಯಿಂದಲೇ ಪುಸ್ತಕವನ್ನು ಮುದ್ರಣ ಮಾಡುತ್ತಿರುವುದು ಅಪಾರವಾದ ಭಗವಂತನ ಅನುಗ್ರಹ ಹಾಗೂ ಪುಣ್ಯವನ್ನು ಸಂಪಾದನೆ ಮಾಡುವ ಉದ್ದೇಶ ಹೊರತು, ಮತ್ತೇನೂ ಅಲ್ಲ.

ಬ್ರಹ್ಮಸೂತ್ರಭಾಷ್ಯ ಓದಬೇಕೆಂಬ ಸಾಧಕರಿಗೆ ಶ್ರೀಸುಬುಧೇಂದ್ರತೀರ್ಥಶ್ರೀಪಾದರು ಮೂರು ಟೀಕೆಗಳ ಹಾಗೂ ಭಾವದೀಪ ಟಿಪ್ಪಣಿಯ ಸಹಿತವಾಗಿ ಬ್ರಹ್ಮಸೂತ್ರಭಾಷ್ಯದ ಅನುವಾದವನ್ನು ನೀಡುತ್ತಿದ್ದಾರೆ. ಇದು ಹಸಿದವನಿಗೆ ಮೃಷ್ಟಾನ್ನಭೋಜನವನ್ನೇ ಮಾಡಿಸಿದಂತಾಗಿದೆ. ಏನೇ ಆಗಲಿ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು ರಾಯರ ಅಪಾರ ಕೃಪೆಗೆ ಪಾತ್ರರಾಗಿದ್ದಾರೆ. ಇವರಲ್ಲಿ ಸ್ವತಃ ರಾಯರೇ ನಿಂತು ಈ ಕಾರ್ಯವನ್ನು ಮಾಡಿಸಿಕೊಳ್ಳುತ್ತಿದ್ದಾರೆ: ಈ ಯೋಜನೆಯನ್ನು ಪರಿಪೂರ್ಣವಾಗಿ ಮಾಡಿಸುವುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಇಂಥ ಶ್ರೀಸುಬುಧೇಂದ್ರತೀರ್ಥ-ಶ್ರೀಪಾದಂಗಳವರಿಗೆ ಎಷ್ಟು ಕೃತಜ್ಞತೆಗಳನ್ನು ಹೇಳಿದರೂ ಕೂಡ ತೃಪ್ತಿಯಾಗುವುದಿಲ್ಲ

## ಸತ್ತರ್ಕದೀಪಾವಳಿ ಗ್ರಂಥದ ಅಧ್ಯಯನ ಏಕಿಲ್ಲ?

ಬ್ರಹ್ಮಸೂತ್ರಭಾಷ್ಯಕ್ಕೆ ಪ್ರಾಚೀನಟೀಕಾಕಾರರಾದ ಶ್ರೀಪದ್ಮನಾಭತೀರ್ಥರು 'ಸತ್ತರ್ಕದೀಪಾವಳಿ' ಎಂಬ ಟೀಕೆಯನ್ನು ಬರೆದಿದ್ದಾರೆ. ಆದರೆ ಇದರ ಅಧ್ಯಯನ ಇಂದು ಎಲ್ಲಿಯೂ ಕಾಣಿಸುತ್ತಿಲ್ಲ. ಬಹುಶಃ ಈ ಗ್ರಂಥ ಅನೇಕ ವರ್ಷಗಳ ಕಾಲ ಅನುಪಲಬ್ಧವಾದ್ದರಿಂದ ಅಧ್ಯಯನವು ನಿಂತಿರಬಹುದು. ಅಥವಾ ತತ್ವಪ್ರಕಾಶಿಕೆಯನ್ನು ಓದಿದ ಮೇಲೆ ಸತ್ತರ್ಕದೀಪಾವಳಿಯಲ್ಲಿ ಹೆಚ್ಚಿನ ವಿಚಾರವಿರಲಾರದೆಂಬ ತಪ್ಪುಗ್ರಹಿಕೆಯಿಂದ ಅಧ್ಯಯನವು ನಿಂತಿರಬಹುದು. ಆದರೆ ಬ್ರಹ್ಮಸೂತ್ರಭಾಷ್ಯವನ್ನು ಅರ್ಥ ಮಾಡಿಕೊಳ್ಳಲು ಮೊದಲು ಸತ್ತರ್ಕದೀಪಾವಳಿಯನ್ನು ಅಧ್ಯಯನ ಮಾಡಿ, ಅನಂತರ ತತ್ವಪ್ರಕಾಶಿಕೆಯನ್ನು ಅಧ್ಯಯನ ಮಾಡಬೇಕು. ಆಗ ಸತ್ತರ್ಕದೀಪಾವಳಿಯ ನಿಜವಾದ ಸ್ವಾರಸ್ಯವನ್ನು ಅನುಭವಿಸಲು ಸಾಧ್ಯವಾಗುತ್ತದೆ.

## ಶ್ರೀಪದ್ಮನಾಭತೀರ್ಥರ ಜೀವನ ಅದೆಷ್ಟು ಸೊಗಸು

ಆದ್ಯಟೀಕಾಕಾರರೆಂದೇ ಪ್ರಸಿದ್ಧರಾದ ಶ್ರೀಪದ್ಮನಾಭತೀರ್ಥರು ವೇದಾಂತಮಾರ್ಗದಲ್ಲಿ ಪ್ರತಿಯೊಬ್ಬರಿಗೂ ಮಾರ್ಗದರ್ಶಕರು. ಸ್ವತಃ ಶ್ರೀಮಟ್ಟೀಕಾಕೃತ್ಪಾದರು 'ನ ತತ್ವಮಾರ್ಗೇ ಗಮನಂ ವಿನಾ ಯದುಪಜೀವನಂ' ಪದ್ಮನಾಭತೀರ್ಥರನ್ನು ಉಪಜೀವಿಸದೇ ತತ್ವಮಾರ್ಗದಲ್ಲಿ ಮುನ್ನಡೆಯಲು ಸಾಧ್ಯವೇ ಆಗುವುದಿಲ್ಲವೆಂದು ಹೇಳಿದ್ದಾರೆ. ಮಧ್ವವಿಜಯಗ್ರಂಥದಲ್ಲಿ ನಾರಾಯಣಪಂಡಿತರು ಶ್ರೀಪದ್ಮನಾಭತೀರ್ಥರನ್ನು ಹೃದಯಂಗಮವಾಗಿ ವರ್ಣಿಸಿದ್ದಾರೆ.

ಶ್ರೀಪದ್ಮನಾಭತೀರ್ಥರ ವ್ಯಾಖ್ಯಾನಗಳನ್ನು ಕೇಳಿದ ಮಾತ್ರಕ್ಕೆ ಮಾಯಿಗಳು ಓಡಿಹೋಗುತ್ತಿದ್ದರು.

'ವ್ಯಾಖ್ಯಾಪ್ರಸಾದಮಾತ್ರೇಣ ವೀರಂಮನ್ಯಾನ್ ಸ್ವಮಂಡಲೇ ।
ಮಾಯಾವಿಗ್ರಾಮಸಿಂಹಾನ್ಯೋ ವಾದಿಸಿಂಹೋ ನಿರಾಕರೋತ್ ॥'

'ಪ್ರತಿವಾದಿಗಳೆಂಬ ಮದದಿಂದ ಉನ್ಮತ್ತವಾದ ಆನೆಗಳ ದುಸ್ತರ್ಕವೆಂಬ ಮಸ್ತಕಗಳನ್ನು ಸೀಳಿಹಾಕುವುದರಲ್ಲಿ ಶ್ರೀಪದ್ಮನಾಭತೀರ್ಥರು ಸಿಂಹದಂತೆ ಇದ್ದರು' ಎಂಬುದಾಗಿ ನಾರಾಯಣಪಂಡಿತಾಚಾರ್ಯರು ಅತ್ಯಂತ ಚಾತುರ್ಯದಿಂದ ಆಲಂಕಾರಿಕವಾಗಿ ಪ್ರಶಂಸಿದ್ದಾರೆ.

ಇವರ ಪೂರ್ವಾಶ್ರಮದ ಹೆಸರು ಶೋಭನಭಟ್ಟರು. ಗೋದಾವರೀ ತೀರದ ರಾಜಮಹೇಂದ್ರಿ ಪ್ರಾಂತ್ಯದಲ್ಲಿ ಗಣಪತಿದೇವನ ಆಸ್ಥಾನದಲ್ಲಿ ವಿದ್ವಾಂಸರಾಗಿದ್ದರು. ನ್ಯಾಯಶಾಸ್ತ್ರದಲ್ಲಿ ಪ್ರಕಾಂಡ ವಿದ್ವಾಂಸರಾಗಿದ್ದರು. ಅವರು ಇರುವ ಕಾಲದಲ್ಲಿ ಭಾಟ್ಟಸಿದ್ಧಾಂತ ಮೊದಲಾದವು ಹೆಚ್ಚು ಪ್ರಚಾರದಲ್ಲಿದ್ದವು. ಅವೆಲ್ಲವನ್ನು ತಮ್ಮ ವಿದ್ವತ್‌ಪ್ರತಿಭೆಯಿಂದ ಇವರು ಖಂಡನೆ ಮಾಡಿ ಕೀರ್ತಿಶಾಲಿಗಳಾಗಿದ್ದರು. ವೇದ, ಮಹಾಭಾರತ, ಪುರಾಣಗಳು ಇವುಗಳನ್ನು ಪರಿಪೂರ್ಣವಾಗಿ ತಿಳಿದು ಇವುಗಳಲ್ಲಿರುವ ಆಚಾರಗಳನ್ನು ನಿಷ್ಠೆಯಿಂದ ಅನುಷ್ಠಾನ ಮಾಡುತ್ತಿದ್ದರು. ತಾರ್ಕಿಕ ಶಿಖಾಮಣಿಗಳೂ, ಅದ್ವೈತಮತದಲ್ಲಿ ದಿಗ್ದಂತಿ ವಿದ್ವಾಂಸರೂ ಆದ ಶೋಭನಭಟ್ಟರು ಒಮ್ಮೆ ಮಹಾಸಭೆಯನ್ನು ಏರ್ಪಾಡು ಮಾಡಿದ್ದರು. ಭಾರತದೇಶದ ಸಮಸ್ತ ಶಾಸ್ತ್ರವರೇಣ್ಯರನ್ನು ಆಹ್ವಾನ ಮಾಡಿ ಆಚಾರ್ಯಮಧ್ವರನ್ನೂ ಕೂಡ ಬರುವಂತೆ ವ್ಯವಸ್ಥೆ ಮಾಡಿದ್ದರು. ಆ ಸಭೆಯಲ್ಲಿ ಆಚಾರ್ಯಮಧ್ವರನ್ನು ಪರೀಕ್ಷೆ ಮಾಡಲು ಎಲ್ಲಾ ವಿದ್ವಾಂಸರೂ ಮುಂದಾದರು. ಎಲ್ಲರೂ ಆಚಾರ್ಯರ ಮುಂದೆ ಸೋತುಹೋದರು. ಆ ಸಭೆಯ ಅಧ್ಯಕ್ಷರಾದ ಶೋಭನಭಟ್ಟರು ತಮ್ಮ ಪಾಂಡಿತ್ಯದ ದುರಭಿಮಾನವನ್ನು ತ್ಯಾಗಮಾಡಿ ವಿದ್ವನ್ಮಣಿಗಳಾದ ಆಚಾರ್ಯಮಧ್ವರ ಪಾದಕ್ಕೆ ಶರಣಾಗತರಾಗಿ ಶಿಷ್ಯತ್ವವನ್ನು ವಹಿಸಿದರು. ಅದ್ವೈತವನ್ನು ತ್ಯಾಗಮಾಡಿ ತತ್ವವಾದವನ್ನು ಅರಿತು ತಮ್ಮ ಜೀವನವು ಧನ್ಯವಾಯಿತೆಂದು ಭಾವಿಸಿದರು.

ವಿದ್ವನ್ಮಂಡಲಿಯಲ್ಲಿಯೇ ಅಗ್ರೇಸರರಾದ ಇವರು ಶ್ರೀಮಧ್ವಾಚಾರ್ಯರ ಶಿಷ್ಯತ್ವವನ್ನು ವಹಿಸಿ ಬ್ರಹ್ಮಸೂತ್ರಭಾಷ್ಯವನ್ನು ಪಾಠ ಕೇಳಿದರು.

ಹಂಸಪಕ್ಷಿಯು ಒಮ್ಮೆ ತಾವರೆ ಹೂವಿನ ಮಕರಂದದ ರುಚಿಯನ್ನು ನೋಡಿದ ಮೇಲೆ ಬೇರೆ ಹೂವಿನ ಮಕರಂದವನ್ನು ಅಪೇಕ್ಷಿಸುವುದೇ ಇಲ್ಲ. ಅದರಂತೆ ಶೋಭನಭಟ್ಟರೂ ಕೂಡ ಶ್ರೀಮಧ್ವಾಚಾರ್ಯರ ಮುಖಕಮಲದಿಂದ ಬ್ರಹ್ಮಸೂತ್ರಭಾಷ್ಯದ ಪಾಠವನ್ನು ಕೇಳಿದ ಮೇಲೆ ಬೇರೆ ಯಾವ ಶಾಸ್ತ್ರವನ್ನೂ ಮೆಚ್ಚಲಿಲ್ಲ.

ಶೋಭನಭಟ್ಟರು ಪಾಂಡಿತ್ಯದಿಂದ ಪ್ರತಿಯೊಂದು ಸಭೆಗಳಲ್ಲಿ ವಿರಾಜಿಸುತ್ತಿದ್ದರು. ಕುಯುಕ್ತಿಜಾಲಗಳನ್ನು ಬೀಸಿ, ವಿತಂಡ ಮಾಡುವ ದುರ್ವಾದಿಗಳನ್ನು ನಿರ್ನಾಮ ಮಾಡುತ್ತಿದ್ದರು. ಶ್ರೀಮಧ್ವಾಚಾರ್ಯರು ಯಾವ ತತ್ತ್ವವನ್ನು ಉಪದೇಶಿಸಿದ್ದಾರೋ. ಅದನ್ನೇ ಎತ್ತಿತೋರಿಸಿ ಸಮರ್ಥನೆ ಮಾಡುತ್ತಾ ಕುಯುಕ್ತಿಗಳನ್ನು ಖಂಡಿಸುತ್ತಿದ್ದರು. ಅನೇಕ ಸಭೆಗಳಲ್ಲಿ ಶ್ರೀಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯ ಮೊದಲಾದ ಸರ್ವಮೂಲ ಗ್ರಂಥಗಳ ವೈಶಿಷ್ಟ್ಯವನ್ನು ಹೃದಯಂಗಮವಾಗಿ ದೃಷ್ಟಾಂತಪುರಸ್ಸರವಾಗಿ ಪ್ರತಿಪಾದನೆ ಮಾಡುತ್ತಿದ್ದರು.

## ಬ್ರಹ್ಮಸೂತ್ರಭಾಷ್ಯದ ಬಗ್ಗೆ ಶೋಭನಭಟ್ಟರ ಪ್ರವಚನ

ಶೋಭನಭಟ್ಟರ ಸೊಬಗಿನ ಪ್ರವಚನವನ್ನು ಶ್ರೀನಾರಾಯಣಪಂಡಿತರು ಬಲು ಸುಂದರವಾಗಿ ಸೆರೆ ಹಿಡಿದಿದ್ದಾರೆ - ಸುಣ್ಣ ತಯಾರಿಸುವವನು ಸಮುದ್ರ ತೀರದಲ್ಲಿ ದೊರೆಯುವ ಕಪ್ಪೆಚಿಪ್ಪು, ಶಂಖ ಮೊದಲಾದವುಗಳನ್ನು ಸಂಗ್ರಹಿಸಿ, ಸುಟ್ಟು ಪುಡಿ ಮಾಡಿ ಸುಣ್ಣವನ್ನು ತಯಾರಿಸುತ್ತಾನೆ. ಇಂಥವನಿಗೆ ಒಮ್ಮೆ ಅಮೂಲ್ಯವಾದ ಬಲಮುರಿಶಂಖವು ದೊರೆಯುತ್ತದೆ. ಉಳಿದ ಕಪ್ಪೆಚಿಪ್ಪುಗಳಂತೆ ಈ ಶಂಖವನ್ನೂ ಕೂಡ ಬೆಂಕಿಯಲ್ಲಿಟ್ಟು ಕಾಯಿಸಿ ಪುಡಿಮಾಡಲು ಪ್ರಯತ್ನಿಸುತ್ತಾನೆ. ಉಳಿದ ಕಪ್ಪೆಚಿಪ್ಪುಗಳು ಪುಡಿಯಾದರೂ ಬಲಮುರಿಶಂಖವು ಪುಡಿಯಾಗುವುದೇ ಇಲ್ಲ. ಇದರಿಂದ ಏನೂ ಪ್ರಯೋಜನವಿಲ್ಲವೆಂದು ಬಲಮುರಿಶಂಖವನ್ನು ಬಿಸಾಡುತ್ತಾನೆ. ಯಾವ ಬಲಮುರಿಶಂಖಕ್ಕೆ ಬೆಲೆ ಕಟ್ಟಲು ಸಾಧ್ಯವೇ ಇಲ್ಲವೋ, ಅದನ್ನು ಕೆಲಸಕ್ಕೆ ಬಾರದ ಪದಾರ್ಥವೆಂಬ ಭಾವನೆಯಿಂದ ಬಿಸಾಡುವುದೆಂದರೆ ಇದೆಂಥಾ ಮೂರ್ಖತನ !

ಬಲಮುರಿಶಂಖದಂತೆ ಶ್ರೀಮಧ್ವಾಚಾರ್ಯರ ಗ್ರಂಥಗಳೂ ಕೂಡ ಅಮೂಲ್ಯವಾಗಿವೆ. ಸುಲಭವಾಗಿ ದೊರಕಲು ಸಾಧ್ಯವಿಲ್ಲ. ಅನಾಯಾಸವಾಗಿ ನಮಗೆ ದೊರಕಿರುವಾಗ ಈ ಶಾಸ್ತ್ರವನ್ನು ಆದರ ಮಾಡದೆ ತಿರಸ್ಕಾರ ಮಾಡುವವನು ಮಹಾಮೂರ್ಖ. ಬಲಮುರಿಶಂಖವನ್ನು ಪುಡಿಮಾಡಲು ಸಾಧ್ಯವಿಲ್ಲವೆಂದು ಬಿಸಾಡುವ ಮೂರ್ಖನಂತೆ ಶ್ರೀಮಧ್ವಾಚಾರ್ಯರ ಗ್ರಂಥವನ್ನು ತ್ಯಾಗ ಮಾಡುವವನೂ ಕೂಡ ಸಮಸ್ತ ಜಗತ್ತಿನಲ್ಲಿಯೇ ಅಗ್ರಪಂಕ್ತಿಯಲ್ಲಿರುವ ಮಹಾಮೂರ್ಖ ಎಂಬುದರಲ್ಲಿ ಸಂದೇಹವಿಲ್ಲ.

ಅಮೂಲ್ಯವಾದ ವಸ್ತುವನ್ನು ಪಡೆಯಲು ಯೋಗ್ಯತೆ ಬೇಕು. ಯೋಗ್ಯತೆಯನ್ನು ಅನುಸರಿಸಿಯೇ ಭಾಗ್ಯದೇವತೆಯು ಒಲಿಯುತ್ತಾಳೆ. ಯೋಗ್ಯತೆಯಿಲ್ಲದಿದ್ದರೆ ಅಮೂಲ್ಯ ಸಂಪತ್ತು ನಮ್ಮ ಕೈಯಲ್ಲಿದ್ದರೂ

ಅದರ ಮಹತ್ವ ತಿಳಿಯದೇ ಮೂರ್ಖರಾಗುತ್ತೇವೆ. ಒಬ್ಬ ಮಹಾನುಭಾವನಿಗೆ ಈ ಅಮೂಲ್ಯವಾದ ಬಲಮುರಿಶಂಖದ ಪ್ರಯೋಜನವು ತಿಳಿದಿತ್ತು. ಇದನ್ನು ಮಾರಾಟ ಮಾಡಿದರೆ ಬಹಳಷ್ಟು ಹಣವನ್ನು ಗಳಿಸಬಹುದೆಂಬ ಅರಿವಿತ್ತು. ಸುಣ್ಣ ಮಾರುವವನು ಬಿಸಾಡಿರುವ ಬಲಮುರಿಶಂಖವನ್ನು ತೆಗೆದುಕೊಂಡು, ಮಾರಾಟ ಮಾಡಿ ಬಹಳಷ್ಟು ಹಣವನ್ನು ಗಳಿಸಿದನು.

ಶ್ರೀಮದಾಚಾರ್ಯರ ಗ್ರಂಥವೂ ಕೂಡ ಬೆಲೆ ಕಟ್ಟಲಾಗದ ಅಮೂಲ್ಯವಾದ ನಿಧಿ. ಇಂಥ ಶಾಸ್ತ್ರವನ್ನು ಅವಲಂಬಿಸಿ ಪರಿಪೂರ್ಣವಾದ ಪ್ರಯೋಜನವನ್ನು ಹೊಂದದೆ ಅಲ್ಪವಾದ ಪ್ರಯೋಜನವನ್ನಷ್ಟೇ ಯಾವ ವ್ಯಕ್ತಿಯು ಪಡೆಯುತ್ತಾನೋ, ಅವನು ಬಲಮುರಿಶಂಖವನ್ನು ಮಾರಾಟ ಮಾಡಿ ಹೆಚ್ಚು ಹಣವನ್ನು ಗಳಿಸಿದ ವ್ಯಕ್ತಿಗೆ ಸಮಾನನಾಗಿದ್ದಾನೆ.

ಆದರೆ ಒಬ್ಬ ರಾಜನು ಬಲಮುರಿಶಂಖದ ಮಹತ್ವವನ್ನು ಅರಿತು ಹಣಕೊಟ್ಟು ಅದನ್ನು ತೆಗೆದುಕೊಂಡನು. ಅತ್ಯಂತ ಶ್ರದ್ಧೆಯಿಂದ ನಿತ್ಯವೂ ಪೂಜಿಸಿದನು. ಹೀಗೆ ಪೂಜಿಸುವುದರಿಂದ ಆ ರಾಜನು ಎಷ್ಟು ಐಶ್ವರ್ಯವನ್ನು ಪಡೆದನೆಂಬುದನ್ನು ಹೇಳಲು ಸಾಧ್ಯವೇ ಇಲ್ಲ. ಆಲೋಚನೆ ಮಾಡಲೂ ಕೂಡ ಸಾಧ್ಯವಿಲ್ಲ.

ಶ್ರೀಮಧ್ವಾಚಾರ್ಯರು ರಚನೆ ಮಾಡಿರುವ ಬ್ರಹ್ಮಸೂತ್ರಭಾಷ್ಯ ಮೊದಲಾದ ಗ್ರಂಥಗಳೂ ಕೂಡ ಹೀಗೆಯೇ ಅನಂತವಾದ ಫಲವನ್ನು ನೀಡುತ್ತವೆ. ಬಲಮುರಿಶಂಖವನ್ನು ಪೂಜೆ ಮಾಡಿ, ಅನಂತವಾದ ಐಶ್ವರ್ಯವನ್ನು ರಾಜನು ಹೇಗೆ ಪಡೆದನೋ, ಅದರಂತೆ ಮಧ್ವಾಚಾರ್ಯರು ರಚಿಸಿರುವ ಶಾಸ್ತ್ರವೂ ಕೂಡ ಅನಂತವಾದ ಫಲವನ್ನು ನೀಡುತ್ತದೆ.

ಹೀಗೆ ಪ್ರವಚನ ಮಾಡಿ ಶೋಭನಭಟ್ಟರು ಸಭೆಯಲ್ಲಿ ನೆರೆದಿರುವ ಜನಸ್ತೋಮವನ್ನು ಸಂತೋಷ ಪಡಿಸಿದರು. ಶ್ರೀಮಧ್ವಾಚಾರ್ಯರ ಬ್ರಹ್ಮಸೂತ್ರಭಾಷ್ಯದ ಮಹಿಮೆಯನ್ನು ಪ್ರತಿಯೊಬ್ಬರಿಗೂ ಮನವರಿಕೆ ಮಾಡಿಸಿದರು.

## ಮಧ್ವವಿಜಯದಲ್ಲಿ ಶ್ರೀಪದ್ಮನಾಭತೀರ್ಥರನ್ನು ವರ್ಣಿಸಿದ ಬಗೆ

ಪ್ರುತ್ಯಾ ಮತ್ಯಾ ಸದಾ ಭಕ್ತ್ಯಾ ವಿರಕ್ತ್ಯಾ ನಿತ್ಯಸೇವಯಾ ।
ಅಸ್ಮೈ ಪ್ರಸನ್ನಃ ಪ್ರಾಜ್ಞೇಶಃ ಸದ್ಯೋ ವಿದ್ಯಾಂ ದಧೌ ಶುಭಾಮ್ ॥

ನಿರಂತರ ವೇದಾಂತಶ್ರವಣ, ಮನನ, ಭಕ್ತಿ, ವೈರಾಗ್ಯ, ನಿರಂತರ ಸೇವೆ ಇವುಗಳಿಂದ ಶ್ರೀಮಧ್ವಾಚಾರ್ಯರನ್ನು ಶ್ರೀಪದ್ಮನಾಭತೀರ್ಥರು ಒಲಿಸಿಕೊಂಡರು. ಪ್ರಸನ್ನರಾದ ಶ್ರೀಮಧ್ವಾಚಾರ್ಯರು ಶ್ರೀಪದ್ಮನಾಭತೀರ್ಥರಿಗೆ ಪರಮಗುಹ್ಯವಾದ ಮಂಗಳಕರವಾದ ವೇದಾಂತವಿದ್ಯೆಯನ್ನು ಉಪದೇಶ ಮಾಡಿದರು.

ಸಮುದ್ರದಲ್ಲಿ ತಿಮಿಂಗಿಲವು ಸಂಚಾರ ಮಾಡುವಂತೆ ಶ್ರೀಪದ್ಮನಾಭತೀರ್ಥರು ವೇದಾಂತಶಾಸ್ತ್ರ ಸಮುದ್ರದಲ್ಲಿ ಯಥೇಚ್ಛವಾಗಿ ವಿಹರಿಸಿದರು. ವೈಶೇಷಿಕರ ಕುಯುಕ್ತಿಗಳನ್ನು ಅದ್ವೈತಿಗಳ ಮಾಯಾವಾದವನ್ನು ಸಂಪೂರ್ಣವಾಗಿ ಖಂಡಿಸುತ್ತಿದ್ದರು.

ಮಾಯಾವಾದಿಗಳು ತಮ್ಮ ಗುಂಪಿನ ಮಧ್ಯದಲ್ಲಿ ಅಹಂಕಾರದಿಂದ ತಮ್ಮ ವಾದವನ್ನು ಕೊಚ್ಚಿಕೊಳ್ಳುತ್ತಿದ್ದರು. ಯಾವಾಗ ಶ್ರೀಪದ್ಮನಾಭತೀರ್ಥರೆಂಬ ಸಿಂಹವು ಶಾಸ್ತ್ರದ ವ್ಯಾಖ್ಯಾನವೆಂಬ ಘರ್ಜನೆ ಮಾಡಿದರೋ, ಆಗ ಮಾಯಾವಾದಿಗಳೆಲ್ಲರೂ ಗ್ರಾಮಸಿಂಹದಂತೆ ತೆಪ್ಪಗೆ ಓಡಿಹೋಗುತ್ತಿದ್ದರು.

ವಿದ್ಯೆಯ ಅಹಂಕಾರದಿಂದ ಎಲ್ಲೆಡೆಯೂ ಮದಗಜದಂತೆ ಸಾವಿರಾರು ಸಂಖ್ಯೆಯಲ್ಲಿ ಮಾಯಾವಾದಿಗಳು ಹಬ್ಬಿಕೊಂಡಿದ್ದರು. ಆ ಮಾಯಾವಾದಿಗಳ ಗುಂಪನ್ನು ಕುಶಲರಾದ ಶ್ರೀಪದ್ಮನಾಭತೀರ್ಥರೆಂಬ ಸಿಂಹವು ಆನೆಗಳ ತಲೆಗಳನ್ನು ಬಗೆಯುವಂತೆ ಅವರ ಕುಯುಕ್ತಿಗಳನ್ನು ಖಂಡಿಸುತ್ತಿದ್ದರು.

'ಶ್ರೀಪದ್ಮನಾಭತೀರ್ಥರೆಂದರೆ ಜ್ಞಾನಸಮುದ್ರ' ಎಂದು ಪಂಡಿತಮಂಡಳಿ ಘೋಷಣೆ ಮಾಡುತ್ತಿತ್ತು. ಇಂಥ ಶ್ರೀಪದ್ಮನಾಭತೀರ್ಥರು ಶ್ರೀಮಧ್ವಾಚಾರ್ಯರು ರಚನೆ ಮಾಡಿರುವ ಅನುವ್ಯಾಖ್ಯಾನಕ್ಕೆ 'ಸನ್ನ್ಯಾಯರತ್ನಾವಳಿ' ಎಂಬ ಟೀಕೆಯನ್ನು, ಬ್ರಹ್ಮಸೂತ್ರಭಾಷ್ಯಕ್ಕೆ 'ಸತ್ತರ್ಕದೀಪಾವಳಿ' ಎಂಬ ಗ್ರಂಥವನ್ನು ವಿರಚಿಸಿದರು. ಈ ಗ್ರಂಥವು ಸಮುದ್ರದಲ್ಲಿ ದೊರಕುವ ರತ್ನದಂತೆ ಅತ್ಯಮೂಲ್ಯವಾಗಿದೆ.

ಶೋಭನಭಟ್ಟರು ಶ್ರೀಮಧ್ವಾಚಾರ್ಯರಿಂದ ಸಮಗ್ರ ಶಾಸ್ತ್ರವನ್ನು ಅಧ್ಯಯನ ಮಾಡುತ್ತಾ ಪರಮತಗಳನ್ನು ನಿರಾಕರಣೆ ಮಾಡುತ್ತಾ ಆಚಾರ್ಯರ ಜೊತೆ ಸಂಚಾರ ಮಾಡುತ್ತಿದ್ದರು. ಅತ್ಯಂತ ವಿರಕ್ತರಾಗಿ ಶ್ರೀಮದಾಚಾರ್ಯರ ಬಳಿ ಸನ್ಯಾಸಾಶ್ರಮವನ್ನು ಸ್ವೀಕರಿಸಿ 'ಪದ್ಮನಾಭತೀರ್ಥ' ಎಂಬ ಎಂದು ಪ್ರಖ್ಯಾತರಾದರು.

'ಸೋದರ್ಯಂ ಸಂವಿರಕ್ತಂ ಯತಿಮಕೃತ ಮಹಾಸದ್ಗುಣಂ ವಿಷ್ಣುತೀರ್ಥಂ
ವಾದೀಂದ್ರಂ ಪದ್ಮನಾಭಂ ಪ್ರಿಯಮಥ ಚ'

ಶ್ರೀಮದಾಚಾರ್ಯರು ತಮ್ಮ ಪೂರ್ವಾಶ್ರಮದ ತಮ್ಮಂದಿರಿಗೆ ಆಶ್ರಮವನ್ನು ನೀಡಿ 'ವಿಷ್ಣುತೀರ್ಥ' ಎಂದು ನಾಮಕರಣ ಮಾಡಿದರು. ಮತ್ತು ಅತ್ಯಂತ ಪ್ರಿಯರಾದ ವಾದಿ ಶ್ರೇಷ್ಠರಾದ ಶೋಭನಭಟ್ಟರಿಗೂ ಆಶ್ರಮವನ್ನು ನೀಡಿ 'ಪದ್ಮನಾಭತೀರ್ಥ' ಎಂದು ನಾಮಕರಣ ಮಾಡಿದರೆಂದು 'ಅಣುಮಧ್ವವಿಜಯ'ದಲ್ಲಿ ವರ್ಣಿಸಿದ್ದಾರೆ.

## ಶ್ರೀಪದ್ಮನಾಭತೀರ್ಥರ ಮಹಿಮೆ

'ಶ್ರೀಪದ್ಮನಾಭತೀರ್ಥರ ಕಾರುಣ್ಯದ ಲೇಶವಾದರೂ ನನ್ನ ಮೇಲೆ ಇರಲಿ' ಎಂದು ಶ್ರೀಜಯತೀರ್ಥರು ತಮ್ಮ ಗ್ರಂಥದ ಪ್ರಾರಂಭದಲ್ಲಿ ಪ್ರಾರ್ಥನೆ ಮಾಡುತ್ತಾರೆ.

'ಶ್ರೀಮಧ್ವಸಂಸೇವನಲಬ್ಧಶುದ್ಧವಿದ್ಯಾಸುಧಾಂಭೋನಿಧಯೋಽಮಲಾಯೇ ।
ಕೃಪಾಲವಃ ಪಂಕಜನಾಭತೀರ್ಥಾಃ ಕೃಪಾಲವಃ ಸ್ಯಾನ್ ಮಯಿ ನಿತ್ಯಮೇಷಾಮ್ ॥'

ಶ್ರೀಮದಾಚಾರ್ಯರಿಂದ ವಿದ್ಯೆಯನ್ನು ಸಂಪಾದನೆ ಮಾಡಿ, ಪರವಾದಿಗಳನ್ನು ಖಂಡನೆ ಮಾಡಿ, ತತ್ವಸಿದ್ಧಾಂತವನ್ನು ಸ್ಥಾಪನೆ ಮಾಡಿ, ಟೀಕೆಗಳನ್ನು ರಚನೆ ಮಾಡಿ ವಿರಕ್ತರಾಗಿ, ಭಾಗ್ಯಶಾಲಿಗಳಾಗಿ, ವೇದ-ವ್ಯಾಖ್ಯಾನ ಮುಂತಾದವುಗಳಿಂದ ತತ್ವವಾದದ ದುಂದುಭಿಯನ್ನು ಮೊಳಗಿಸುತ್ತಾ ಶ್ರೀಪದ್ಮನಾಭತೀರ್ಥರು ಶ್ರೀಮದಾಚಾರ್ಯರ ಅಖಂಡ ಸೇವೆಯಲ್ಲಿ ನಿರತರಾದರು. ಆದ್ದರಿಂದಲೇ ಪಂಡಿತಾಚಾರ್ಯರು ಇವರನ್ನು 'ವೇದಪ್ರವಚನಾಚಾರ್ಯಶಿಷ್ಯೋಽಸಾವಿತಿಪೂಜಿತಃ' 'ವೇದಾಂತಾಬ್ಧಿ-ವಿಹರಣನಿಪುಣವಿದ್ವತ್ತಿಮಿಂಗಿಲಃ'. 'ಮತ್ತದುರ್ವಾದಿಮಾತಂಗತರ್ಕಮಸ್ತಕಧಾರಣೇ ಪಂಚಾಸ್ಯಃ' ಇತ್ಯಾದಿಯಾಗಿ ವರ್ಣನೆ ಮಾಡುತ್ತಾ ಶ್ರೀಪದ್ಮನಾಭತೀರ್ಥರ ಅಪೂರ್ವವಾದ ಪಾಂಡಿತ್ಯ, ಪಟುತ್ವ, ಶಾಸ್ತ್ರಪ್ರಭುತ್ವ, ಪ್ರತಿಭಾಪ್ರಾಗಲ್ಭ್ಯ, ಪ್ರವಚನ ಸಾಮರ್ಥ್ಯ ಮೊದಲಾದವುಗಳನ್ನು ಎತ್ತಿ ತೋರಿಸುತ್ತಾರೆ.

ಶ್ರೀರಿಷಿಕೇಶತೀರ್ಥರು ಪದ್ಮನಾಭತೀರ್ಥರನ್ನು 'ಕರ್ನಾಟಕಪೂರ್ವಸಜ್ಜನಗುರುಃ' ಎಂಬುದಾಗಿ ಮತ್ತು 'ಯೋಗಿಮೌಳಿ' ಎಂಬುದಾಗಿಯೂ ಸಂಪ್ರದಾಯಪದ್ಧತಿಯಲ್ಲಿ ಮುಕ್ತಕಂಠದಿಂದ ಪ್ರಶಂಸೆ ಮಾಡಿದ್ದಾರೆ. ಶ್ರೀನರಹರಿತೀರ್ಥರು ಕೂಡ 'ಪದ್ಮನಾಭತೀರ್ಥಾದಿತ್ಯ' ಎಂಬುದಾಗಿ ಪ್ರಶಂಸೆ ಮಾಡಿದ್ದಾರೆ.

## ಶ್ರೀಪದ್ಮನಾಭತೀರ್ಥರ ಗ್ರಂಥಗಳು

ಇವರು ಹದಿನೈದಕ್ಕೂ ಹೆಚ್ಚು ಗ್ರಂಥಗಳನ್ನು ರಚನೆ ಮಾಡಿದ್ದಾರೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

೧. ಸನ್ನ್ಯಾಯರತ್ನಾವಳಿ (ಬ್ರಹ್ಮಸೂತ್ರ ಅನುವ್ಯಾಖ್ಯಾನದ ಟೀಕೆ)

೨. ಸತ್ತರ್ಕದೀಪಾವಳಿ (ಬ್ರಹ್ಮಸೂತ್ರ ಭಾಷ್ಯದ ಟೀಕೆ)

೩. ಗೀತಾಭಾಷ್ಯ ಭಾವದೀಪಿಕಾ (ಗೀತಾಭಾಷ್ಯದ ಟೀಕೆ)

೪. ಗೀತಾತಾತ್ಪರ್ಯನಿರ್ಣಯ ಪ್ರಕಾಶಿಕಾ (ಗೀತಾತಾತ್ಪರ್ಯದ ಟೀಕೆ)

೫. ನ್ಯಾಯಾವಳಿ (ಉಪಾಧಿಖಂಡನ-ಟೀಕೆ)

೬. ಮಾಯಾವಾದಖಂಡನ-ಟೀಕೆ

೭. ಪ್ರಪಂಚಮಿಥ್ಯಾತ್ವಾನುಮಾನಖಂಡನ-ಟೀಕೆ

೮. ನ್ಯಾಯರತ್ನಾವಳಿ (ವಿಷ್ಣುತತ್ವನಿರ್ಣಯ-ಟೀಕೆ)

೯. ತತ್ವವಿವೇಕ-ಟೀಕೆ

೧೦. ತತ್ವಸಂಖ್ಯಾನ-ಟೀಕೆ

೧೧. ಕರ್ಮನಿರ್ಣಯ-ಟೀಕೆ

೧೨. ಪ್ರಮಾಣಲಕ್ಷಣ-ಟೀಕೆ

೧೩. ಕಥಾಲಕ್ಷಣ-ಟೀಕೆ

೧೪. ತತ್ತ್ವೋದ್ಯೋತ-ಟೀಕೆ

೧೫. ವಾಯುಲೀಲಾವಿಸ್ತರಣ

೧೬. ಮಧ್ವಾಷ್ಟಕ (ವಿ॥ ಪ್ರಭಂಜನಾಚಾರ್ಯರು ತಮ್ಮ ಬಳಿ ಈ ಸ್ತೋತ್ರಕೃತಿಯು ಇರುತ್ತದೆಂದು ಹೇಳಿರುತ್ತಾರೆ.)

ಪ್ರಕೃತ ಬ್ರಹ್ಮಸೂತ್ರಭಾಷ್ಯಕ್ಕೆ ಶ್ರೀಪದ್ಮನಾಭತೀರ್ಥರು ರಚನೆ ಮಾಡಿರುವ ಸತ್ತರ್ಕದೀಪಾವಳಿ ಗ್ರಂಥವನ್ನು ಮೊಟ್ಟಮೊದಲ ಬಾರಿಗೆ ಕನ್ನಡ ಭಾಷೆಯಲ್ಲಿ ಅನುವಾದ ಮಾಡಲಾಗಿದೆ.

## 'ಸತ್ತರ್ಕದೀಪಾವಳಿ' ಬರೆದವರು ಯಾರು ?

'ಸತ್ತರ್ಕದೀಪಾವಳಿ' ಎಂಬ ಗ್ರಂಥವು ಶ್ರೀಪದ್ಮನಾಭತೀರ್ಥರಿಂದ ರಚಿತವಾಗಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲವೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಅವರು ನೀಡುವ ಕಾರಣಗಳು ಹೀಗಿವೆ -

೧. ಮಧ್ವವಿಜಯದಲ್ಲಿ ಶ್ರೀಪದ್ಮನಾಭತೀರ್ಥರ ಬಗ್ಗೆ ವರ್ಣನೆ ಮಾಡುವಾಗ ಸನ್ನ್ಯಾಯರತ್ನಾವಳಿಕಾರರೆಂದು ಮಾತ್ರ ಉಲ್ಲೇಖಿಸಿದ್ದಾರೆ. ಸತ್ತರ್ಕದೀಪಾವಳಿಕಾರರೆಂದು ಉಲ್ಲೇಖಿಸಿರುವುದಿಲ್ಲ.

೨. ಶ್ರೀಜಯತೀರ್ಥಮುನಿಗಳು ಹಾಗೂ ಶ್ರೀರಾಘವೇಂದ್ರಸ್ವಾಮಿಗಳು ಅನೇಕ ಕಡೆ ಸನ್ನ್ಯಾಯರತ್ನಾವಳಿಯನ್ನು ಉದಾಹರಿಸಿದ್ದಾರೆ. ಹೊರತು, ಸತ್ತರ್ಕದೀಪಾವಳಿಯನ್ನು ಎಲ್ಲಿಯೂ ಉದಾಹರಿಸುವುದಿಲ್ಲ.

೩. ತಾತ್ಪರ್ಯಚಂದ್ರಿಕಾಕಾರರು ಒಮ್ಮೆಯೂ ಕೂಡ ಸತ್ತರ್ಕದೀಪಾವಳಿಯನ್ನು ಉಲ್ಲೇಖಿಸಿರುವುದಿಲ್ಲ.

೪. ಸೂತ್ರೇ ಭಾಷ್ಯೇಽನುಭಾಷ್ಯೇ ಚ ಸನ್ನ್ಯಾಯವಿವೃತೌ ತಥಾ ।
ಟೀಕಾಸು ಚ ಯದಸ್ಪಷ್ಟಂ ತಚ್ಚ ಸ್ಪಷ್ಟೀಕರಿಷ್ಯತೇ ॥

ಎಂಬ ತಾತ್ಪರ್ಯಚಂದ್ರಿಕೆಯ ಶ್ಲೋಕಕ್ಕೆ ರಾಯರು ಪ್ರಕಾಶದಲ್ಲಿ ವ್ಯಾಖ್ಯಾನ ಮಾಡುವಾಗ ಸತ್ತರ್ಕದೀಪಾವಳಿಯನ್ನು ಉಲ್ಲೇಖ ಮಾಡುವುದೇ ಇಲ್ಲ. ರಾಯರ ವಾಕ್ಯ ಹೀಗಿದೆ - 'ತ್ರಿವಿಕ್ರಮಪಂಡಿತಾಚಾರ್ಯಕೃತಾ-ತತ್ವಪ್ರದೀಪಾಖ್ಯಾ, ಅನುವ್ಯಾಖ್ಯಾನಟೀಕಾ - ನ್ಯಾಯಸುಧಾ, ಪದ್ಮನಾಭಾಚಾರ್ಯಕೃತಾ - ಸನ್ನ್ಯಾಯರತ್ನಾವಳೀ ಚ ನ್ಯಾಯವಿವರಣಟೀಕಾ ಚ, ತತ್ವಪ್ರಕಾಶಿಕಾ ಚ ಇತ್ಯೇತಾಸು ಟೀಕಾಸು' ಇತ್ಯರ್ಥಃ' । ಎಂದು ಒಂದು ವೇಳೆ ಸತ್ತರ್ಕದೀಪಾವಳಿಯೂ ಕೂಡ ಪ್ರಾಚೀನ ಟೀಕೆಯಾಗಿದ್ದಲ್ಲಿ ರಾಯರು ಇಲ್ಲಿ ಉಲ್ಲೇಖ ಮಾಡಬೇಕಿತ್ತು.

೫. ಶ್ರೀಮಠದ ಮೂಲಪುರುಷರಾದ ಶ್ರೀಪದ್ಮನಾಭತೀರ್ಥರು ಶ್ರೀಮಧ್ವಾಚಾರ್ಯರ ಮುಖದಿಂದ ನೇರವಾಗಿ ಭಾಷ್ಯದ ಪಾಠವನ್ನು ಕೇಳಿ, ಸತ್ತರ್ಕದೀಪಾವಳಿ ಎಂಬ ಟೀಕೆಯನ್ನು ಬರೆದಿದ್ದೇ ಆಗಿದ್ದಲ್ಲಿ ಖಂಡಿತವಾಗಿಯೂ ಪ್ರಸಿದ್ಧಿಯನ್ನು ಪಡೆಯುತ್ತಿತ್ತು. ರಾಯರೂ ಸಹ ಉಲ್ಲೇಖ ಮಾಡುತ್ತಿದ್ದರು. ಅಪ್ರಸಿದ್ಧವಾದ್ದರಿಂದಲೂ ಸತ್ತರ್ಕದೀಪಾವಳಿಯನ್ನು ಶ್ರೀಪದ್ಮನಾಭತೀರ್ಥರು ರಚನೆ ಮಾಡಿದ್ದಲ್ಲ.

ಹೀಗೆ ಅನೇಕ ಕಾರಣಗಳನ್ನು ನೀಡಿ, ಸತ್ತರ್ಕದೀಪಾವಳಿಯು ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದದ್ದಲ್ಲ ಎಂಬುದಾಗಿ ಸಮರ್ಥಿತ್ತಾರೆ.

ಆದರೆ ಸರಿಯಾಗಿ ವಿಚಾರ ಮಾಡದೆ ಇವರ ವಾದವನ್ನು ಒಪ್ಪಲು ಸಾಧ್ಯವಿಲ್ಲ.

ಶ್ರೀಪದ್ಮನಾಭತೀರ್ಥರು ಹದಿಮೂರಕ್ಕೂ ಹೆಚ್ಚು ಗ್ರಂಥಗಳನ್ನು ರಚನೆ ಮಾಡಿದ್ದಾರೆಂಬುದಕ್ಕೆ ದಾಖಲೆಗಳಿವೆ. ಆ ಎಲ್ಲಾ ಗ್ರಂಥಗಳನ್ನು ಮಧ್ವವಿಜಯದ ಶ್ಲೋಕದಲ್ಲಿ ಉಲ್ಲೇಖಿಸಿಲ್ಲವಾದ್ದರಿಂದ ಅಲ್ಲಗೆಳೆಯಲು ಸಾಧ್ಯವೇ?

ಶ್ರೀಜಯತೀರ್ಥಮುನಿಗಳು ಹಾಗೂ ಶ್ರೀರಾಘವೇಂದ್ರಸ್ವಾಮಿಗಳು ಸತ್ತರ್ಕದೀಪಾವಳಿಯನ್ನು ಹೆಸರಿಸಿ ಉಲ್ಲೇಖಿಸಿಲ್ಲ ಎಂಬುದು ಸತ್ಯ. ಆದರೆ ಶ್ರೀಪದ್ಮನಾಭತೀರ್ಥರನ್ನು ಗ್ರಂಥದ ಪ್ರಾರಂಭದಲ್ಲಿ ಭಕ್ತಿಯಿಂದ ನಮಿಸಿ ಪ್ರಾಚೀನ ಟೀಕಾಕಾರರೆಂದು ಪ್ರಶಂಸೆ ಮಾಡುತ್ತಾರೆ. ಇದರಿಂದ ಸತ್ತರ್ಕದೀಪಾವಳಿಯ ಮಾರ್ಗದರ್ಶನದಲ್ಲಿ ತತ್ವಪ್ರಕಾಶಿಕೆಯನ್ನು ಟೀಕಾರಾಯರು ರಚನೆ ಮಾಡಿರಬಹುದೆಂದು ಊಹಿಸಬಹುದು. ಹೀಗೆ ಊಹಿಸಲು ಶ್ರೀಸುಮತೀಂದ್ರತೀರ್ಥರ ಭಾವರತ್ನಕೋಶವು ಪುಷ್ಟಿನೀಡುತ್ತದೆ. 'ಮುಖ್ಯತಃ ವಾಚಕತ್ವೇನ ವಿಶಂತಿ' ಎಂಬ ಟೀಕೆಗೆ ಶ್ರೀಸುಮತೀಂದ್ರತೀರ್ಥರು ವ್ಯಾಖ್ಯಾನ ಮಾಡುವಾಗ 'ಆಸಮಂತಾತ್ ಪರಮಮುಖ್ಯವೃತ್ತ್ಯಾ ಇತಿ ಸತ್ತರ್ಕದೀಪಾವಳಿಂ ತಾತ್ಪರ್ಯತಃ ಅನುವದತಿ - 'ಮುಖ್ಯತೋ ವಾಚಕತ್ವೇನೇತಿ'. ಹೀಗೆ ಹಲವು ಕಡೆ ತತ್ವಪ್ರಕಾಶಿಕೆಯು ಸತ್ತರ್ಕದೀಪಾವಳಿಯ ಬೆಳಕಿನಲ್ಲಿ ಸಾಗಿದೆಯೆಂದು ವ್ಯಾಖ್ಯಾನ ಮಾಡುತ್ತಾರೆ.

ಸುಮಾರು ಹದಿನೈದು ವರ್ಷಗಳ ಹಿಂದೆ ದ್ವೈತವೇದಾಂತ ಪ್ರತಿಷ್ಠಾನದಿಂದ ಮುದ್ರಣವಾದ ಬ್ರಹ್ಮಸೂತ್ರಭಾಷ್ಯದಲ್ಲಿ ಸತ್ತರ್ಕದೀಪಾವಳಿಯು ಶ್ರೀಪದ್ಮನಾಭತೀರ್ಥರಿಂದ ವಿರಚಿತವಾಗಿದೆಯೆಂಬ ವಿಷಯದಲ್ಲಿ ಹಸ್ತಪ್ರತಿಗಳ ಆಧಾರವಿದೆಯೆಂದು ತಿಳಿಸಿ ಮುದ್ರಣ ಮಾಡಿದ್ದಾರೆ. ಮತ್ತು ಸುಮಾರು ಎಂಬತ್ತು ವರ್ಷಗಳ ಹಿಂದೆ 'ಜನರಲ್ ಪ್ರೆಸ್, ಮೈಲಾಪುರ, ಮದ್ರಾಸ್ - ೪' ಈ ಸಂಸ್ಥೆಯು ಶ್ರೀಜಯತೀರ್ಥರ ತತ್ವಪ್ರಕಾಶಿಕೆಯ ಜೊತೆ ಶ್ರೀಪದ್ಮನಾಭತೀರ್ಥರ ಸತ್ತರ್ಕದೀಪಾವಳಿಯನ್ನು ಮುದ್ರಣ ಮಾಡಿದ್ದಾರೆ. ಮತ್ತು ತಮಗೆ ದೊರೆತಿರುವ ಹಸ್ತಪ್ರತಿಯಲ್ಲಿ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾಗಿದೆಯೆಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಇನ್ನೂ ಸ್ಪಷ್ಟವಾದ ಆಧಾರವಿದೆ - ಶ್ರೀರಾಘವೇಂದ್ರವಿಜಯದ ಎರಡನೆಯ ಅಧ್ಯಾಯದಲ್ಲಿ ಶ್ರೀಪದ್ಮನಾಭತೀರ್ಥರನ್ನು ಹೀಗೆ ವರ್ಣಿಸಿದ್ದಾರೆ -

ಸತ್ತರ್ಕದೀಪಾವಳಿಮತ್ಯುದಾರಾಂ ಸನ್ನ್ಯಾಯರತ್ನಾವಳಿಮಪ್ಯನಿಂದ್ಯಾಮ್ ।
ಭಾಷ್ಯಾನುಭಾಷ್ಯಾಶಯಬೋಧಹೇತೂ ತತಾನ ಯಸ್ತಾರ್ಕಿಕಮೌಳಿರತ್ನಮ್ ॥

ತಾರ್ಕಿಕಶಿರೋಮಣಿಗಳಾದ ಶ್ರೀಪದ್ಮನಾಭತೀರ್ಥರು ಶ್ರೇಷ್ಠವಾದ ಭಾಷ್ಯಕ್ಕೆ 'ಸತ್ತರ್ಕದೀಪಾವಳಿ' ಎಂಬ ಟೀಕೆಯನ್ನು ಅನುವ್ಯಾಖ್ಯಾನಕ್ಕೆ ಸ್ತುತ್ಯವಾದ 'ಸನ್ನ್ಯಾಯರತ್ನಾವಳಿ' ಎಂಬ ಟೀಕೆಯನ್ನು ರಚಿಸಿರುವರು.

ಶ್ರೀರಾಘವೇಂದ್ರಸ್ವಾಮಿಗಳು ಸತ್ತರ್ಕದೀಪಾವಳಿ ಎಂಬ ಹೆಸರನ್ನು ತಮ್ಮ ಟಿಪ್ಪಣಿಯಲ್ಲಿ ಉಲ್ಲೇಖ ಮಾಡದಿದ್ದರೂ ರಾಯರ ತರುವಾಯ ಮೂವತ್ತು ವರ್ಷಗಳಲ್ಲಿಯೇ ಪೀಠವನ್ನಲಂಕರಿಸಿದ ಶ್ರೀಸುಮತೀಂದ್ರತೀರ್ಥರು 'ಭಾವರತ್ನಕೋಶ' ಎಂಬ ಟಿಪ್ಪಣಿಯನ್ನು ತತ್ವಪ್ರಕಾಶಿಕೆಗೆ ಬರೆದಿರುವರು. ಈ ಭಾವರತ್ನಕೋಶದಲ್ಲಿ ಅನೇಕ ಕಡೆ ಸತ್ತರ್ಕದೀಪಾವಳಿಯ ವಾಕ್ಯವನ್ನು ಉಲ್ಲೇಖಿಸುತ್ತಾರೆ -

ಸತ್ತರ್ಕದೀಪಾವಳ್ಯಾಂತು - 'ಸರ್ವವಾಗಾತ್ಮಕತ್ವಂ ತ್ವಕಾರಸ್ಯ ಸರ್ವವಾಕ್‌ಪ್ರತಿಪಾದ್ಯ ವಿಷ್ಣುವಾಚಿತ್ವಾತ್' ಇತಿ ಪ್ರಕಾರಾಂತರಮುಕ್ತಮ್ ॥ ಸಕಲವಾಙ್ಮಯದಿಂದ ಪ್ರತಿಪಾದ್ಯನಾದ ವಿಷ್ಣುವನ್ನು ಪ್ರತಿಪಾದಿಸುವ ಕಾರಣ ಅಕಾರವು ಸರ್ವವಾಗಾತ್ಮಕವಾಗಿದೆ ಎಂದು ಸತ್ತರ್ಕದೀಪಾವಳಿಯಲ್ಲಿ ಹೇಳಿದ್ದಾರೆ.

ಮತ್ತೊಂದು ಕಡೆ - ''ಸತ್ತರ್ಕದೀಪಾವಳ್ಯಾಮಪಿ ಕ್ಷೀರಸಮುದ್ರಶಾಯಿತ್ವಲಿಂಗವಿಶಿಷ್ಟಂ ಯಮಂತಃಸಮುದ್ರೇ ಇತ್ಯನೂದ್ಯ ತದೇವ ಬ್ರಹ್ಮ ಪರಮಂ ಕವೀನಾಮ್ । ಇತ್ಯುಕ್ತತ್ವಾತ್' ಇತ್ಯುಕ್ತ್ಯಾ ಖಂಡದ್ವಯಮೇವ ವ್ಯಾಖ್ಯಾತಂ' ಎಂಬುದಾಗಿ 'ಯಮಂತಃ ಸಮುದ್ರೇ' ಎಂಬ ಶ್ರುತಿಯ ಉಲ್ಲೇಖವನ್ನು ಸ್ವರಸವಾಗಿ ಮಾಡುತ್ತಾರೆ.

ಪೂರ್ಣಪ್ರಜ್ಞಕೃತಂ ಭಾಷ್ಯಮಾದೌ ತದ್ಭಾವಪೂರ್ವಕಮ್ ।
ಯೋ ವ್ಯಾಕರೋನ್ನಮಸ್ತಸ್ಮೈ ಪದ್ಮನಾಭಾಖ್ಯಯೋಗಿನೇ ॥

'ಶ್ರೀಪೂರ್ಣಪ್ರಜ್ಞರ ಬ್ರಹ್ಮಸೂತ್ರಭಾಷ್ಯಕ್ಕೆ ಮೊಟ್ಟಮೊದಲು ವ್ಯಾಖ್ಯಾನ ಮಾಡಿದ ಶ್ರೀಪದ್ಮನಾಭತೀರ್ಥ ಎಂಬ ಯೋಗಿಗಳಿಗೆ ನಮಸ್ಕಾರ' -

ಎಂಬುದಾಗಿ ಶ್ರೀಪದ್ಮನಾಭತೀರ್ಥರ ಚರಮಶ್ಲೋಕವೇ ಸತ್ತರ್ಕದೀಪಾವಳಿಯು ಇವರೇ ಬರೆದೆದ್ದೆನ್ನಲು ಸಾಕ್ಷಿಯಾಗಿದೆ.

ಆದ್ದರಿಂದ ಆದ್ಯಟೀಕಾಕಾರರಾದ ಶ್ರೀಪದ್ಮನಾಭತೀರ್ಥರಿಂದ ರಚಿಸಲ್ಪಟ್ಟ ಸತ್ತರ್ಕದೀಪಾವಳಿ ಗ್ರಂಥವನ್ನು ನಾವು ಶ್ರದ್ಧೆಯಿಂದ ಅಧ್ಯಯನ ಮಾಡಲೇ ಬೇಕು.

## ತತ್ವಪ್ರದೀಪ ಗ್ರಂಥದ ಅಧ್ಯಯನ ಏಕಿಲ್ಲ?

ತತ್ವಪ್ರದೀಪ ಗ್ರಂಥದ ಅಧ್ಯಯನವು ಇಂದು ಎಲ್ಲೂ ಕಾಣಸುತ್ತಲೇ ಇಲ್ಲ. ಸಾಮಾನ್ಯವಾಗಿ ಬ್ರಹ್ಮಸೂತ್ರಭಾಷ್ಯವನ್ನು ಅಧ್ಯಯನ ಮಾಡುವವರೆಲ್ಲರೂ ತತ್ವಪ್ರಕಾಶಿಕಾ ಟೀಕೆಯನ್ನು ಓದದೇ ಇರಲಾರರು. ಇನ್ನೂ ಸ್ಪಷ್ಟಪಡಿಸಬೇಕೆಂದರೆ ಇಂದಿನ ಎಲ್ಲಾ ವೇದಾಂತವಿದ್ಯಾಪೀಠಗಳಲ್ಲಿ ತತ್ವಪ್ರಕಾಶಿಕಾ ಅಧ್ಯಯನ ಕಡ್ಡಾಯವಾಗಿದೆ.

ಆದರೆ ಶ್ರೀಮದಾಚಾರ್ಯರ ಮನ್ನಣೆಗೆ ಪಾತ್ರವಾದ ಅತ್ಯಂತ ಅದ್ಭುತ ವಿಚಾರಗಳನ್ನು ತಿಳಿಸಿಕೊಡುವ 'ತತ್ವಪ್ರದೀಪ' ಗ್ರಂಥವನ್ನು ಇಂದು ಏಕೆ ಯಾರೂ ಸಹ ಅಧ್ಯಯನ ಮಾಡುತ್ತಿಲ್ಲ....? ಅಥವಾ ಗುರುಕುಲಗಳಲ್ಲಿ ಸಾಂಪ್ರದಾಯಿಕವಾಗಿ ಏಕೆ ಪಾಠದ ಕ್ರಮದಲ್ಲಿ ಇಟ್ಟುಕೊಂಡಿಲ್ಲ?..... ಎಂಬುದನ್ನು ಹೀಗೆ ವಿಶ್ಲೇಷಿಸಬಹುದು.

ಶ್ರೀಮಟ್ಟೀಕಾಕೃತ್ಪಾದರು ತತ್ವಪ್ರದೀಪದಲ್ಲಿರುವ ಯಾವ ವಿಷಯಗಳನ್ನು ಕೂಡ ತಮ್ಮ ಟೀಕೆಯಲ್ಲಿ ಬರೆದಿಲ್ಲ. ಕೆಲವೊಂದು ಸಂದರ್ಭದಲ್ಲಿ ಮಾತ್ರ ತತ್ವಪ್ರದೀಪ ವ್ಯಾಖ್ಯಾನವನ್ನು ಪ್ರಶಂಸೆ ಮಾಡಲು ಕೆಲವು ವಿಷಯಗಳನ್ನು ಉಲ್ಲೇಖಿಸುತ್ತಾರೆ. ತತ್ವಪ್ರಕಾಶಿಕಾ ಸರಳ ಶೈಲಿಯಲ್ಲಿದ್ದು ತತ್ವಪ್ರದೀಪಕ್ಕೆ ಹೋಲಿಸಿದಾಗ ಸುಲಭ. ಅಂತೆಯೇ, ತತ್ವಪ್ರಕಾಶಿಕೆಯನ್ನು ಅಧ್ಯಯನ ಮಾಡಿ, ಅದಕ್ಕಿಂತಲೂ ಕಠಿಣವಾದ ತತ್ವಪ್ರದೀಪವನ್ನು ನಂತರ ಅಧ್ಯಯನ ಮಾಡಿದಲ್ಲಿ ಬ್ರಹ್ಮಸೂತ್ರಭಾಷ್ಯದ ವಿಶೇಷ ತಿಳುವಳಿಕೆ ಉಂಟಾಗುತ್ತದೆ. ವಿದ್ಯಾರ್ಥಿಗಳಿಗೆ ಒಂದು ಹಂತದವರೆಗಿನ ಸೂಕ್ತ ತಿಳುವಳಿಕೆ, ಶಾಸ್ತ್ರ ತತ್ವ, ಪ್ರಕ್ರಿಯೆಗಳನ್ನು ತಿಳಿಸಿಕೊಡುವುದು ಗುರುಕುಲಗಳ ಉದ್ದೇಶ. ತತ್ವಪ್ರಕಾಶಿಕೆಯ ಬೋಧನೆಯಿಂದ ಈ ಉದ್ದೇಶಗಳು ಈಡೇರುತ್ತವೆ. ಇನ್ನೂ ಆಳವಾದ ವಿಷಯಗಳನ್ನು, ಗಂಭೀರ-ಕಠಿಣ ಶೈಲಿಯ ಗ್ರಂಥಗಳನ್ನು ಅಧ್ಯಯನ ಮಾಡಿ ತಿಳಿದುಕೊಳ್ಳಲು ವಿದ್ಯಾರ್ಥಿಗಳನ್ನು ಸಜ್ಜುಗೊಳಿಸುತ್ತವೆ. ಆಗ, ಸತ್ತರ್ಕದೀಪಾವಳಿ, ತತ್ವಪ್ರದೀಪದಂತಹ ಗ್ರಂಥಗಳನ್ನು ಓದಿ ಪ್ರೌಢ ಪಂಡಿತರಾಗುವರು.

ಶ್ರೀವ್ಯಾಸತೀರ್ಥರೂ ಕೂಡ ತಾತ್ಪರ್ಯಚಂದ್ರಿಕಾ ಬರೆಯುವಾಗ ಪ್ರತಿಯೊಂದು ಸಂದರ್ಭದಲ್ಲಿಯೂ ತತ್ವಪ್ರದೀಪ ಗ್ರಂಥವನ್ನು ವ್ಯಾಖ್ಯಾನ ಮಾಡಿ ಆಪಾತತಃ ತೋರುವ ವಿರೋಧಗಳನ್ನು ಪರಿಹರಿಸಿದ್ದಾರೆ. ಹೀಗೆ ಪ್ರಾಚೀನ ಟೀಕಾಕಾರರು ಹಾಗೂ ಟಿಪ್ಪಣಿಕಾರರು ತತ್ವಪ್ರದೀಪಗ್ರಂಥಕ್ಕೆ ಬಹು ಮನ್ನಣೆಯನ್ನು ನೀಡಿದ್ದಾರೆ. 'ಗೃಹಸ್ಥರಿಂದ ರಚಿತವಾಗಿದೆ' ಎಂದು ತಿಳಿದು ಯಾರೂ ಸಹ ತತ್ವಪ್ರದೀಪಗ್ರಂಥವನ್ನು ಅಗೌರವದಿಂದ ನೋಡುವುದಿಲ್ಲ. ಹೀಗಿರುವಾಗ 'ತತ್ವಪ್ರದೀಪಗ್ರಂಥವು ಅನಾವಶ್ಯಕ' ಟೀಕಾಕೃತ್ಪಾದರ ಟೀಕೆಗೆ ವಿರುದ್ಧವಾದ ಅನೇಕ ವಿಷಯಗಳುಳ್ಳದ್ದು, ಬಲುಕಠಿಣ, ಎಲ್ಲಾ ಸೂತ್ರಗಳಿಗೆ ಸ್ಪಷ್ಟವಾಗಿ ವ್ಯಾಖ್ಯಾನ ಮಾಡದ ಟೀಕೆ ಇತ್ಯಾದಿಯಾಗಿ ಮಾತನಾಡುವುದು ಮೂರ್ಖತನದ ಪರಾಕಾಷ್ಠೆ ಹೊರತು ಮತ್ತೇನು ಅಲ್ಲ. ಶ್ರೀ ತ್ರಿವಿಕ್ರಮಪಂಡಿತರ ವಾಯುಸ್ತುತಿಗ್ರಂಥವು ಸನ್ಯಾಸಿಗಳಿಂದಲೂ ಕೂಡ ಹೇಗೆ ಮಾನ್ಯತೆ ಪಡೆಯಿತೋ. ಅದರಂತೆ ತತ್ವಪ್ರದೀಪ ಗ್ರಂಥವೂ ಕೂಡ ಮಾನ್ಯತೆಯನ್ನು ಪಡೆದಿದೆ. ಈ ವಿಷಯದಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

ಬ್ರಹ್ಮಸೂತ್ರಭಾಷ್ಯವನ್ನು ಅಧ್ಯಯನ ಮಾಡಲು ಹೊರಟ ಪ್ರತಿಯೊಬ್ಬರೂ ಕೂಡ ಶ್ರೀಪದ್ಮನಾಭತೀರ್ಥಶ್ರೀಪಾದಂಗಳವರು ರಚನೆ ಮಾಡಿರುವ 'ಸತ್ತರ್ಕದೀಪಾವಳಿ' ಎಂಬ ಟೀಕೆಯನ್ನು ಶ್ರೀತ್ರಿವಿಕ್ರಮಪಂಡಿತಾಚಾರ್ಯರು ರಚನೆ ಮಾಡಿರುವ 'ತತ್ವಪ್ರದೀಪ' ಎಂಬ ಟೀಕೆಯನ್ನು ಮತ್ತು ಶ್ರೀಮಟ್ಟೀಕಾಕೃತ್ಪಾದರು ರಚನೆ ಮಾಡಿದ 'ತತ್ವಪ್ರಕಾಶಿಕಾ' ಟೀಕೆಯನ್ನು ಒಟ್ಟಿಗೆ ಅಧ್ಯಯನ ಮಾಡಬೇಕು. ಈ ಮೂರು ಟೀಕೆಗಳ ಆಂತರ್ಯವನ್ನು ತಿಳಿಯಲು ಶ್ರೀರಾಘವೇಂದ್ರತೀರ್ಥ-ಶ್ರೀಪಾದಂಗಳವರು ರಚನೆ ಮಾಡಿದ ಭಾವದೀಪ ಎಂಬ ಟಿಪ್ಪಣಿಯನ್ನು ಅಧ್ಯಯನ ಮಾಡಬೇಕು. ಆವಾಗ ಮಾತ್ರ ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯದ ನಿಜವಾದ ಹೃದಯವನ್ನು ತಿಳಿದಂತಾಗುತ್ತದೆ. ಇದರಿಂದ ಶ್ರೀಬಾದರಾಯಣರು ರಚನೆ ಮಾಡಿದ ಬ್ರಹ್ಮಸೂತ್ರಗಳ ಅಧ್ಯಯನವು ಪರಿಪೂರ್ಣ-ವಾಗುತ್ತದೆ. ಇಷ್ಟು ಗ್ರಂಥಗಳಲ್ಲಿ ಯಾವುದೇ ಒಂದು ಗ್ರಂಥದ ಅಧ್ಯಯನವನ್ನು ಬಿಟ್ಟರೂ ಕೂಡ ಅಧ್ಯಯನವು ಅಪರಿಪೂರ್ಣವಾಗುತ್ತದೆ ಎಂಬ ವಿಷಯದಲ್ಲಿ ಸಂದೇಹವಿಲ್ಲ.

## ಶ್ರೀತ್ರಿವಿಕ್ರಮಪಂಡಿತರ ವಾಕ್ಯಶೈಲಿ

ವಾಯುಸ್ತುತಿಯನ್ನು ರಚನೆ ಮಾಡಿದ ತ್ರಿವಿಕ್ರಮಪಂಡಿತರ ಎಲ್ಲಾ ಮಾತುಗಳು ಕಾವ್ಯಮಯ ಮತ್ತು ಶಾಸ್ತ್ರಮಯ. ಅರ್ಥವಾದರೂ ಅರ್ಥವಾಗದಂತೆ ಉಳಿಯುವ ಶಬ್ದತರಂಗಗಳು. ಈ ದೃಷ್ಟಿಯಿಂದ ಅನೇಕ ಕಡೆ ಅವರು ಪುಂಖಾನುಪುಂಖವಾಗಿ ಪ್ರಯೋಗಿಸುವ ಮಾತುಗಳು ಅರ್ಥವಾಗುವುದು ಬಲುಕಠಿಣವೇ ಆಗಿದೆ. ತತ್ವಪ್ರದೀಪಗ್ರಂಥದಲ್ಲಿ ಪಂಡಿತಾಚಾರ್ಯರು ಮಾಡಿರುವ

ಮಂಗಳಾಚರಣ ಶ್ಲೋಕಗಳನ್ನು ಅರ್ಥಮಾಡಿಕೊಳ್ಳುವುದೇ ಬಹಳ ಕಷ್ಟ. 'ಪ್ರಥಮ ಕವಲೇ ಮಕ್ಷಿಕಾಪಾತಃ' ಎಂಬ ನ್ಯಾಯದಂತೆ ತತ್ವಪ್ರದೀಪದ ಅಧ್ಯಯನ ಗ್ರಂಥದಲ್ಲಿ ತೊಡಗಿದ ಪ್ರತಿಯೊಬ್ಬರು ಮಂಗಳಾಚರಣೆಯ ಅಧ್ಯಯನದಲ್ಲೇ ಭಗ್ನರಾಗುತ್ತಾರೆ. ಇನ್ನು ಕೆಲವೆಡೆ ಅಭೂತಪೂರ್ವ ಪ್ರಮೇಯಗಳೆಂಬ ರತ್ನಗಳಿಗೆ ಕಠಿಣ ಸಂಸ್ಕೃತ ಶೈಲಿಯ ಕವಚ ಹಾಕಿಬಿಡುತ್ತಾರೆ. ಅದನ್ನು ದಾಟ ಪ್ರಮೇಯಗಳನ್ನು ತಿಳಿಯುವುದು ಸಾಹಸದ ಮಾತು.

ಪ್ರಾರಂಭದ ಮಂಗಳ ಶ್ಲೋಕದಲ್ಲಿ 'ಕೃತವಿವರಣಬ್ರಹ್ಮಸೂತ್ರಾವತಾರಮ್' ಎಂಬ ಪದವನ್ನು ನೋಡಿದಾಗ ಬ್ರಹ್ಮಸೂತ್ರವನ್ನು ವಿವರಿಸುವ ಭಾಷ್ಯವನ್ನು ಬರೆದ ಶ್ರೀಮದಾಚಾರ್ಯರನ್ನು ಹೇಳುವ ಪದವೆಂದು ಅನಿಸುತ್ತದೆ. ಆದರೆ ಶ್ರೀಮದಾಚಾರ್ಯರ ಅವತಾರಕ್ಕೆ ಕಾರಣನಾದ ಪರಮಾತ್ಮನೆಂಬ ಅರ್ಥವನ್ನು ಬಹುವ್ರೀಹಿಸಮಾಸ ಮಾಡಿ ತಿಳಿಯುವುದು ಸಾಹಸದ ಮಾತೇ ಆಗುತ್ತದೆ. ಅಥವಾ ವೇದಗಳನ್ನು ವಿಭಾಗಗೈದು ಬ್ರಹ್ಮಸೂತ್ರಗಳನ್ನು ರಚನೆ ಮಾಡಿರುವ ವೇದವ್ಯಾಸರೂಪವನ್ನು ಇದರಿಂದ ತಿಳಿಯುವುದೂ ಕೂಡ ಸಾಮಾನ್ಯವ್ಯುತ್ಪನ್ನರಿಂದ ತಿಳಿಯುವುದು ಸುಲಭದ ಮಾತಲ್ಲ.

ಪೂರ್ಣಜ್ಞಾನಂ ವಿಪುಲಪರಮಾನಂದಸಂದೋಹದೇಹಂ
ಭಕ್ತಪ್ರೀತ್ಯಾ ಕೃತವಿವರಣಬ್ರಹ್ಮಸೂತ್ರಾವತಾರಮ್ ।
ಶ್ರೀಮನ್ನಾರಾಯಣಪದಮಹಂ ಧ್ವಸ್ತನಿಃಶೇಷದೋಷಂ
ವಂದೇ ನಿತ್ಯಂ ಗುರುಮಪಿ ಗುರೋರಾಗಮಾರ್ಥಪ್ರಕಾಶಮ್ ॥

ಅನುವಾದ - ಓ ಲಕ್ಷ್ಮೀನಾರಾಯಣನೇ! ಎನ್ನ ಗುರುಗಳೂ ಜಗದ್ಗುರುಗಳೂ ಆದ ಆನಂದತೀರ್ಥರಿಗೂ ಗುರು ಎನಿಸಿದವನು ನೀನು. ಪರಿಪೂರ್ಣವಾದ ಜ್ಞಾನಮೂರುತಿ, ದುಃಖಗಳ ಗೊಡವೆಯೇ ಇಲ್ಲದ ಪರಿಪೂರ್ಣವಾದ ಸುಖದ ಖನಿ ನೀನು. ಭಕುತರೆಂದರೆ ಎಲ್ಲಿಲ್ಲದ ಒಲವು ನಿನಗೆ. ಅವರಿಗಾಗಿ ಭುವಿಗೆ ಇಳಿದು ವೇದಗಳ ವಿಭಾಗಗೈದಿರುವಿ. ಬ್ರಹ್ಮಸೂತ್ರಗಳನ್ನು ವಿರಚಿಸಿರುವಿ. ವೇದಗಳಿಂದಷ್ಟೇ ವೇದ್ಯನಾದವನು ನೀನು. ಸಮಸ್ತದೋಷಗಳಿಂದ ವಿದೂರನಾದ ನಿನಗೆ ಗ್ರಂಥಾರಂಭದಲ್ಲಿ ಭಕ್ತಿಯ ಪರಾಕಾಷ್ಠೆಯಿಂದ ಶಿರಬಾಗುವೆ.

ಇದರಂತೆ ನಾಕನೆಯ ಶ್ಲೋಕವೂ ಕೂಡ ಬಲುಕಠಿಣವಾಗಿದೆ. ಶ್ರೀಮದಾಚಾರ್ಯರ ವಾಣಿಯನ್ನು ಪ್ರಶಂಸೆ ಮಾಡಲು ಹೊರಟಿದೆಯೋ, ಅಥವಾ ವಿದ್ಯಾಲಕುಮಿಯನ್ನು ವರ್ಣನೆ ಮಾಡಲು ಹೊರಟಿದೆಯೋ, ಅಥವಾ ವೇದವ್ಯಾಸದೇವರ ವಾಣಿಯನ್ನು ವರ್ಣಿಸುತ್ತಿದೆಯೋ ? ಆಕಾಂಕ್ಷಾಪೂರ್ವಕವಾದ ಕ್ರಿಯಾಪದವಿಲ್ಲದ ಕಾರಣ ಹಿಂದಿನ ಶ್ಲೋಕದ ಜೊತೆ ಅನ್ವಯವೋ,

ಮುಂದಿನ ಶ್ಲೋಕದ ಜೊತೆ ಅನ್ವಯವೋ ? ಈ ಹಲವು ಗೊಂದಲಗಳ ನಡುವೆ ಕಠಿಣಶೈಲಿಯ ಒಳಹೊಕ್ಕು ಕಾವ್ಯರಸದ ಮಾಧುರ್ಯವನ್ನು ಸವಿಯುವುದು ಪ್ರಾರಂಭದ ಹಂತದಲ್ಲಿ ಪರಿಶ್ರಮದಿಂದಷ್ಟೇ ಸಾಧ್ಯ. ವೇದವ್ಯಾಸದೇವರನ್ನು ಪ್ರಾರ್ಥಿಸಿದ ಮೇಲೆ ಲಕ್ಷ್ಮೀದೇವಿಯನ್ನು ಪ್ರಾರ್ಥಿಸುವುದು ಸಮಂಜಸವಾಗುವುದರಿಂದ ವಿದ್ಯಾಲಕುಮಿಯ ಪರವಾಗಿಯೇ ಇಲ್ಲಿ ಅನುವಾದ ಮಾಡಲಾಗಿದೆ.

ಜಿಹ್ವಾಸೂಲ್ಲಸಿತಾ ಸತಾಂ ಪ್ರತಿಪದಂ ತತ್ವಪ್ರತಿದ್ಯೋತಿಕಾ
ನೃತ್ಯಂತೀ ಪರಮೇರಿತೈವ ಪರಮಾ ವಾಗೀಶ್ವರೀ ಶ್ರೀಃ ಸ್ವಯಮ್ ।
ಯಸ್ಯಾಽಸ್ಯಾದುದಿತಾಽಖಿಲಾಗಮವಪುಃ ಸತ್ಸೂತ್ರಭೂಷಾಮಣಿಃ
ಸರ್ವಜ್ಞಾತ್ ಕವಯಶ್ಚ ಪುಷ್ಕರಭುವೋ ಜಾತಾ ಯದೀಯೇಚ್ಛಯಾ ॥೪॥

ಅನುವಾದ - ಗುರುವ್ಯಾಸರೇ ! ಸರ್ವಜ್ಞಸ್ವರೂಪವಾದ ತಮ್ಮ ಮುಖಕಮಲದಿಂದ ಉದಿಸಿದಳು ಮಹಾಲಕುಮಿ. ವಾಗಭಿಮಾನಿನೀ ಭಾರತೀದೇವಿಗೂ ನಿಯಾಮಕಳಿವಳು. ಆದ್ದರಿಂದಲೇ ಸ್ವಯಂ 'ಶ್ರೀ' ಎನಿಸಿದವಳು. ಸಜ್ಜನರ ನಾಲಿಗೆಯಲ್ಲಿ ಶೋಭಿಸುತಿಹಳು. ಪ್ರತಿಯೊಂದು ಪದಗಳಿಂದಲೂ ಹೊಸ ಹೊಸ ತತ್ವವನ್ನು ತಿಳಿಸುತಾ ನರ್ತನಗೈಯುತಿಹಳು. ಸಮಸ್ತ ಆಗಮಗಳೇ ಇವಳ ಶರೀರ. ಬ್ರಹ್ಮಸೂತ್ರಗಳೇ ಇವಳ ಮಾಂಗಲ್ಯಾಭರಣಗಳು. ಸಕಲ ಜ್ಞಾನಿಗಳ ಹುಟ್ಟು ಇವಳಿಂದ. ಸರ್ವಜ್ಞಶಿಖಾಮಣಿ ಚತುರ್ಮುಖ ಹುಟ್ಟಿದ್ದೂ ಸಹ ಇವಳಿಂದಲೇ. ಇಂಥ ವಿದ್ಯಾಲಕುಮಿ ಯಾರ ಮುಖಕಮಲದಿಂದ ಹೊರಬಂದಳೋ; (ಅಂಥ ವ್ಯಾಸರು ನನ್ನಲ್ಲಿ ಸದಾ ಸಂಪ್ರೀತರಾಗಿರಲಿ.)

'ವಿದ್ಯಾವತಾಂ ಭಾಗವತೇ ಪರೀಕ್ಷಾ' ಎಂಬ ನಾಣ್ನುಡಿಯಂತೆ 'ವಿದ್ಯಾವತಾಂ ತತ್ವಪ್ರದೀಪೇ ಪರೀಕ್ಷಾ ' ಎಂಬುದೂ ಕೂಡ ಪ್ರತಿಯೊಬ್ಬ ವಿದ್ವಾಂಸರ ಅನುಭವವಾಗಿದೆ. ಕನ್ನಡ ಭಾಷೆಯಲ್ಲಿ ಸುಲಭವಾಗಿ ಅರ್ಥವಾಗುವಂತೆ ತತ್ವಪ್ರದೀಪವನ್ನು ಈ ಕೃತಿಯಲ್ಲಿ ಅನುವಾದ ಮಾಡಲಾಗಿದೆ.

## ತತ್ವಪ್ರದೀಪವನ್ನು ಅನುವಾದ ಮಾಡಲು ಪ್ರೇರಣೆ ನೀಡಿದವರು

ಶ್ರೀಮದಾಚಾರ್ಯರ ಭಾಷ್ಯದ ಪ್ರತಿಯೊಂದು ಪದಗಳ ಪ್ರಮೇಯವನ್ನು ನಿರೂಪಣೆ ಮಾಡುವ ತತ್ವಪ್ರದೀಪ ಗ್ರಂಥದ ಕನ್ನಡ ಅನುವಾದವು ಸುಲಭವಾದ ಕಾರ್ಯವಲ್ಲ.

ಕನ್ನಡ ಅನುವಾದ ಮಾಡಬೇಕಾದರೂ ಕೂಡ ತತ್ವಪ್ರದೀಪವನ್ನು ಸಾಂಪ್ರದಾಯಿಕವಾಗಿ ಅಧ್ಯಯನ ಮಾಡಿರಲೇಬೇಕು. ನಾನು ಅಧ್ಯಯನ ಮಾಡಿದ ವಿದ್ಯಾಪೀಠದಲ್ಲಿ ಈ ಗ್ರಂಥದ ಪಾಠದ ಕ್ರಮವಿಲ್ಲ. ಆದರೆ ತತ್ವಪ್ರದೀಪವನ್ನು ಅಧ್ಯಯನ ಮಾಡಲೇಬೇಕು. ಅಧ್ಯಯನ ಮಾಡಿದ್ದನ್ನು

ಮತ್ತೊಬ್ಬರಿಗೂ ತಿಳಿಸಬೇಕೆಂಬ ಉತ್ಕಟ ಅಪೇಕ್ಷೆಯು ನನ್ನದಾಗಿತ್ತು. ಇದರ ಮಧ್ಯ ಅನೇಕ ಜಿಜ್ಞಾಸುಗಳು ನನ್ನ ಬಳಿ "ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಸಂಬಂಧಿಸಿದ ಇಷ್ಟೆಲ್ಲಾ ಗ್ರಂಥಗಳ ಮೇಲೆ ಕೆಲಸ ಮಾಡಿರುವಿರಿ; ಆದರೆ ಶ್ರೀತ್ರಿವಿಕ್ರಮಪಂಡಿತರ ತತ್ವಪ್ರದೀಪ ಗ್ರಂಥವನ್ನೇಕೆ ಪರಿಗಣಿಸುತ್ತಿಲ್ಲ" ಎಂದು ಕೇಳುತ್ತಿದ್ದರು. ಇವರ ಈ ಮಾತುಗಳು ಪುನಃ ನನ್ನ ಹೃದಯಕ್ಕೆ ಘಾಸಿ ಮಾಡುತ್ತಿದ್ದವು.

ಆದರೆ ಪ್ರಾಮಾಣಿಕವಾದ ನನ್ನ ಹಂಬಲಕ್ಕೆ ದೇವರು ವರ ನೀಡಿದ. ಅನಂತಚತುರ್ದಶಿಯಂದು ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರು ಭಾವದೀಪ ಕೃತಿಯ ಮೊದಲನೆಯ ಸಂಪುಟವನ್ನು ಅಮೃತಹಸ್ತದಿಂದ ಬಿಡುಗಡೆ ಮಾಡುವ ಸಂದರ್ಭದಲ್ಲಿ ಸತ್ತರ್ಕದೀಪಾವಳಿ, ತತ್ವಪ್ರದೀಪ ಹಾಗೂ ತತ್ವಪ್ರಕಾಶಿಕಾ ಮೂರು ಟೀಕೆಗಳ ಅನುವಾದ ಮಾಡಬೇಕೆಂದು ಸಭೆಯಲ್ಲಿ ನನಗೆ ಅನುಗ್ರಹಿಸಿದರು. ಇದೇ ನನ್ನ ಸೌಭಾಗ್ಯವೆಂದು ಅರಿತು ಮೂರು ಟೀಕೆಗಳ ಕನ್ನಡ ಅನುವಾದ ಕಾರ್ಯದಲ್ಲಿ ಈಗ ಮುನ್ನುಗ್ಗಿರುವೆ.

ಸತ್ತರ್ಕದೀಪಾವಳಿ ಟೀಕೆಯು ಬಲು ಸುಲಭ ಶೈಲಿಯಲ್ಲಿ ಇರುವುದರಿಂದ ಅದನ್ನು ಅಧ್ಯಯನ ಮಾಡುವುದು ಕಷ್ಟಕರವಾದ ಕಾರ್ಯವಲ್ಲ. ತತ್ವಪ್ರಕಾಶಿಕೆಗೆ ಹತ್ತಾರು ಟಿಪ್ಪಣಿಗಳು ಇರುವುದರಿಂದ ಅದನ್ನು ತಿಳಿಯುವುದು ಹೆಚ್ಚಿನ ಕಷ್ಟವಾಗುವುದಿಲ್ಲ. ಆದರೆ ತತ್ವಪ್ರದೀಪಗ್ರಂಥಕ್ಕೆ ಯಾವುದೇ ಟಿಪ್ಪಣಿಗಳಿಲ್ಲದೆ ಬಲು ಕಠಿಣಶೈಲಿಯಲ್ಲಿ ಹೆಣೆದು ಕೊಂಡಿರುವುದರಿಂದ ಸಾಂಪ್ರದಾಯಿಕವಾಗಿ ಅಧ್ಯಯನ ಮಾಡಲೇಬೇಕಾಗುತ್ತದೆ. ಈ ವಿಷಯದಲ್ಲಿ ಮೊದಲು ನನಗೆ ಉಪಕರಿಸಿದ ಗುರುಗಳಿಗೆ ಹಾಗೂ ಮಾರ್ಗದರ್ಶಕರಿಗೆ ಎಂದೆಂದೂ ಚಿರಋಣಿಯಾಗಿದ್ದೇನೆ. ಅನೇಕ ಸಂದರ್ಭದಲ್ಲಿ, ಅನೇಕ ಕಠಿಣ ವಿಷಯಗಳನ್ನು ಅರ್ಥಮಾಡಿಸಿದ ಅಂತರಂಗದ ಗುರುಗಳಿಗೂ, ಆಚಾರ್ಯರಿಗೂ ಎಂದೆಂದೂ ಚಿರಋಣಿಯಾಗಿದ್ದೇನೆ. ಜ್ಞಾನಭಿಕ್ಷೆಯನ್ನು ಇಂದು ಎಲ್ಲರಿಗೂ ಹಂಚುವ ಸೌಭಾಗ್ಯ ನನಗೆ ಒದಗಿದೆ.

## ತತ್ವಪ್ರದೀಪ ಗ್ರಂಥ ಪ್ರಕಾಶನವು ಇದೇ ಮೊದಲ ಬಾರಿ ನಡೆಯುತ್ತಿದೆಯೇ ?

ತತ್ವಪ್ರದೀಪ ಗ್ರಂಥದ ಕನ್ನಡ ಅನುವಾದವು ಇದೇ ಮೊದಲ ಬಾರಿಗೆ ನಡೆಯುತ್ತಿದೆ. ಆದರೆ ತತ್ವಪ್ರದೀಪದ ಮೂಲಪಾಠದ ಪ್ರಕಾಶನವು ಈ ಹಿಂದೆ ನಡೆದಿದೆ. ಅಣ್ಣಾಮಲೈ ವಿಶ್ವವಿದ್ಯಾನಿಲಯದ ಪ್ರಧಾನ ಅಧ್ಯಾಪಕರಾಗಿದ್ದ ಬಿ.ಎನ್.ಕೆ. ಶರ್ಮ ಅವರು ಮೊಟ್ಟಮೊದಲಿಗೆ ತತ್ವಪ್ರದೀಪದ ಮೊದಲ ಐದು ಅಧಿಕರಣಗಳನ್ನು ಮುದ್ರಣ ಮಾಡಿದ್ದರು.

ಅನಂತರ ಮದ್ರಾಸಿನ ಜನರಲ್ ಪ್ರೆಸ್ ಅವರು ಶ್ರೀಪದ್ಮನಾಭತೀರ್ಥರ ಸತ್ತರ್ಕದೀಪಾವಳಿ, ಶ್ರೀಜಯತೀರ್ಥರ ತತ್ವಪ್ರಕಾಶ, ಶ್ರೀತ್ರಿವಿಕ್ರಮಪಂಡಿತರ ತತ್ವಪ್ರದೀಪ ಮೂರು ಟೀಕೆಗಳನ್ನು ಒಟ್ಟಿಗೆ ಸೇರಿಸಿ ಪ್ರಕಟಣೆ ಮಾಡಿದ್ದರು.

ಅನಂತರ ೧೭-೦೧- ೧೯೫೮ ರಲ್ಲಿ ಅಖಿಲಭಾರತ ಮಾಧ್ವಮಹಾಮಂಡಳದಿಂದ ಸಂಶೋಧಿತವಾದ ತತ್ವಪ್ರದೀಪವು ಮುದ್ರಣವಾಯಿತು. ಉಡುಪಿಯ ಅಷ್ಟಮಠಗಳಲ್ಲಿ ದೊರೆಯುವ ಹಸ್ತಪ್ರತಿಗಳನ್ನು ನೋಡಿ, ಅನೇಕ ವಿದ್ವಾಂಸರು ಈ ಪುಸ್ತಕವನ್ನು ಸಂಶೋಧನೆ ಮಾಡಿದರು. ಶ್ರೀ ಬನ್ನಂಜೆ ಗೋವಿಂದಾಚಾರ್ಯರೂ ಕೂಡ ಆಗ ಸಂಶೋಧನೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದರು.

ಅನಂತರ ೧೫ ಅಥವಾ ೨೦ ವರ್ಷಗಳ ಹಿಂದೆ ದ್ವೈತವೇದಾಂತ ಸಂಶೋಧನಾ ಸಂಸ್ಥೆಯವರು ಬ್ರಹ್ಮಸೂತ್ರಭಾಷ್ಯಮ್ ಎಂಬ ಪುಸ್ತಕದಲ್ಲಿ ತತ್ವಪ್ರದೀಪ ಗ್ರಂಥವನ್ನು ಮುದ್ರಣ ಮಾಡಿದರು.

## ಈ ಪುಸ್ತಕದಲ್ಲಿರುವ ಶುದ್ಧಪಾಠದ ಬಗ್ಗೆ

ಇದುವರೆಗೂ ಮುದ್ರಿತವಾದ ಎಲ್ಲಾ ಪುಸ್ತಕಗಳಲ್ಲಿ 'ತತ್ವದೀಪಿಕಾ' ಎಂಬ ಹೆಸರನ್ನೇ ಉಲ್ಲೇಖಿಸಲಾಗಿದೆ. ಆದರೆ ಈ ಪುಸ್ತಕದಲ್ಲಿ ಪರಮಪೂಜ್ಯಶ್ರೀಗಳವರು ತಮ್ಮ ಅನುಗ್ರಹವಚನದಲ್ಲಿ ತಿಳಿಸಿದ ಕಾರಣಗಳಂತೆ 'ತತ್ವಪ್ರದೀಪ' ಎಂಬ ಹೆಸರನ್ನು ಉಲ್ಲೇಖ ಮಾಡಲಾಗಿದೆ. ಹಾಗೂ ಇದುವರೆಗೂ ಮುದ್ರಿತವಾದ ಪುಸ್ತಕಗಳಲ್ಲಿರುವ ಪಾಠಕ್ಕಿಂತ ಶುದ್ಧವಾದ ಪಾಠವನ್ನು ಈ ಪುಸ್ತಕದಲ್ಲಿ ಗಮನಿಸಿ ಅಳವಡಿಸಲಾಗಿದೆ. ಉದಾ - 'ಅಥ ಇಷ್ಟಾನಿಷ್ಟಪ್ರಾಪ್ತಿಪರಿಹಾರೇಚ್ಛೂನಾಮ್'' ಎಂಬ ಭಾಷ್ಯಕ್ಕೆ ವ್ಯಾಖ್ಯಾನ ಮಾಡುವಾಗ ತತ್ವಪ್ರದೀಪದಲ್ಲಿ ಇದುವರೆಗೂ ಮುದ್ರಿತವಾದ ಪಾಠ ಹೀಗಿದೆ - ಅಥ ಅನಂತರಮೇವ ಅನ್ಯತ್ರಾವ್ಯಾಪೃತಸುಖಪ್ರಾಪ್ತೌ ದುಃಖಪರಿಹಾರೇಚ್ಛವತಾಂ ತಯೋರುಪಾಯಂ ವಿಶಿಷ್ಟಮಜಾನತಾಂ' ಎಂದು. ಇದು ಅಶುದ್ಧ ಪಾಠ. 'ಅಥ ಅನಂತರಮೇವ ಅನ್ಯತ್ರ ಅವ್ಯಾಪೃತಃ । ಸುಖಪ್ರಾಪ್ತೌ ದುಃಖಪರಿಹಾರೇಚ್ಛವತಾಂ' ಎಂಬುದು ಶುದ್ಧವಾದ ಪಾಠ. ಏಕೆಂದರೆ 'ಅನ್ಯತ್ರಾವ್ಯಾಪೃತ ಸುಖಪ್ರಾಪ್ತೌ' ಎಂಬ ಪದಕ್ಕೆ ಅರ್ಥವೇ ಇರುವುದಿಲ್ಲ. 'ಅನ್ಯತ್ರ ಅವ್ಯಾಪೃತಃ' ಎಂಬುದಾಗಿ ಪದವನ್ನು ಬಿಡಿಸಿ ಹಿಂದಿನ ವಾಕ್ಯದ ಜೊತೆ ಅನ್ವಯವನ್ನು ಮಾಡಿದಾಗ 'ಅನಂತರಮೇವ' ಎಂಬ ಪದದ ವಿವರಣೆ ಎಂದು ಸ್ಪಷ್ಟವಾಗುತ್ತದೆ. 'ವೇದವ್ಯಾಸದೇವರು ಅವತಾರ ಮಾಡಿದ ಮೇಲೆ ಗುರುಕುಲವಾಸ ಮೊದಲಾದ ಕಾರ್ಯಗಳಲ್ಲಿ ತೊಡಗದೆ' ಎಂಬರ್ಥವು ದೊರೆಯುತ್ತದೆ.

ಹೀಗೆ ಅನೇಕ ಶುದ್ಧಪಾಠಗಳನ್ನು ಅಲ್ಲಲ್ಲಿ ವಿದ್ವಾನ್ ಬನ್ನಂಜೆ ಗೋವಿಂದಾಚಾರ್ಯರ ಮಾರ್ಗದರ್ಶನದಲ್ಲಿ ಅಳವಡಿಸಲಾಗಿದೆ.

ತತ್ವಪ್ರದೀಪದಲ್ಲಿ ಮಾತ್ರವಲ್ಲದೇ ಬ್ರಹ್ಮಸೂತ್ರಭಾಷ್ಯದ ಪಾಠವನ್ನೂ ಕೂಡ ತತ್ವಪ್ರದೀಪಕ್ಕೆ ಅನುಗುಣಗವಾಗಿಯೇ ಮುದ್ರಿಸಲಾಗಿದೆ. ಈಕ್ಷತ್ಯಧಿಕರಣದಲ್ಲಿ 'ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾ ಅಸ್ಮಿನ್ ಸಂದೋಘೇ ಗಹನೇ ಪ್ರವಿಷ್ಟಃ' ಎಂಬಲ್ಲಿ 'ಸಂದೋಹೇ' ಎಂಬುದು ಪ್ರಚಲಿತ ಪಾಠ; ಆದರೆ ತತ್ವಪ್ರದೀಪದಲ್ಲಿ 'ಸಂದೋಘೇ' ಎಂಬ ಪಾಠವಿದೆ. ಗುರ್ವರ್ಥದೀಪಿಕೆಯಲ್ಲಿ 'ಸಂದೋಘೇ' ಎಂಬ ಪಾಠವನ್ನೇ ಸಮರ್ಥಿಸಿದ್ದಾರೆ. ದುಹ ಪ್ರಪೂರಣೇ' ಇತಿ ಧಾತೋಃ ದಾದೇರ್ಧಾತೋರ್ಘಃ' ಇತಿ ಹಕಾರಸ್ಯ ಘಕಾರೇ ಕೃತೇ ಸಂದೋಹ ಏವ ಸಂದೋಘಃ'

'ತಮೇವೈಕಂ ಜಾನಥ ಆತ್ಮಾನಮನ್ಯಾ ವಾಚೋ ವಿಮುಂಚಥ' ಎಂಬುದಾಗಿ 'ಹೇಯತ್ವಾವಚನಾಚ್ಚ' ಎಂಬ ಸೂತ್ರದ ಭಾಷ್ಯದಲ್ಲಿ ಇರುವ ಪ್ರಚಲಿತ ಪಾಠ. ಆದರೆ ತತ್ವಪ್ರದೀಪದಲ್ಲಿ 'ಮುಂಚಥ' ಎಂಬ ಪಾಠವನ್ನು ಸ್ವೀಕರಿಸಲಾಗಿದೆ. 'ವಿಮುಂಚಥ' ಎಂಬುದು ಪ್ರಚಲಿತ ಪಾಠ. ಆದರೆ 'ಮುಂಚಥ' ಎಂಬುದು ಪ್ರಾಚೀನಪಾಠ. ಹನ್ನೊಂದು ಅಕ್ಷರಗಳುಳ್ಳ ಎರಡು ಪಾದಗಳುಳ್ಳ 'ತ್ರಿಷ್ಟುಪ್' ಛಂದಸ್ಸಿನಲ್ಲಿ ಈ ಶ್ರುತಿಯು ಪ್ರಯುಕ್ತವಾಗಿದೆ. ಆಚಾರ್ಯರು 'ಆತ್ಮಾನಂ' ಎಂದು ಪ್ರತ್ಯೇಕವಾಗಿ ಬಿಡಿಸಿ ಹೇಳಿದ್ದರಿಂದ, ಹನ್ನೊಂದು ಅಕ್ಷರಗಳ ಎರಡು ಪಾದವನ್ನು ಕೂಡಿಸಲು 'ವಿ' ಎಂಬ ಪದವನ್ನು ತೆಗೆದು ಉಚ್ಚರಿಸಬೇಕು.

'ಸ್ವಾಪ್ಯಯಾತ್' ಎಂಬ ಸೂತ್ರ ಭಾಷ್ಯದಲ್ಲಿ 'ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ' ಎಂಬುದಷ್ಟೇ ಭಾಷ್ಯದಲ್ಲಿರುವ ಪಾಠ. ಇದರ ಪೂರ್ಣಪಾಠವನ್ನು ತತ್ವಪ್ರದೀಪಕಾರರು 'ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ' ಎಂದು ಉಲ್ಲೇಖಿಸಿದ್ದಾರೆ.

'ಸ ಆತ್ಮಾನಂ' ಎಂಬ ಶ್ರುತಿಯಲ್ಲಿ 'ವಿಲಾಪಯತಿ' ಎಂಬುದಾಗಿ ಮುದ್ರಿತ ಪುಸ್ತಕಗಳಲ್ಲಿ ಪಾಠವಿದೆ. ಆದರೆ ಇದು ಅಪಪಾಠ. 'ವಿಲಾಯಯತಿ' ಎಂಬುದೇ ಯಥಾರ್ಥವಾದ ಪಾಠ. ತನ್ನಲ್ಲಿ ಲಯಗೊಳಿಸುತ್ತಾನೆ ಎಂಬರ್ಥವನ್ನು 'ವಿಲಾಯಯತಿ' ಎಂಬ ಪದಕ್ಕೆ ತಿಳಿಯಬೇಕು. ಈ ಅರ್ಥವನ್ನು 'ವಿಲಾಪಯತಿ' ಎಂಬುದಕ್ಕೆ ಹೇಳಲು ಸಾಧ್ಯವಿಲ್ಲ. ಮತ್ತು 'ವಿಲಾಪಯತಿ' ಎಂಬ ಪಾಠವನ್ನು ಯಾವ ವ್ಯಾಖ್ಯಾನದಲ್ಲಿಯೂ ಕೂಡ ಸ್ವೀಕರಿಸಿಲ್ಲ.

## ತತ್ವಪ್ರದೀಪದ ಕೆಲವು ಸ್ವಾರಸ್ಯಗಳು

ಶ್ರೀತ್ರಿವಿಕ್ರಮಪಂಡಿತರ ವ್ಯಾಖ್ಯಾನಚಾತುರ್ಯ ಬಲು ಚೇತೋಹಾರಿ. ಪ್ರತಿಯೊಂದು ಅಕ್ಷರ-ಅಕ್ಷರ- ಗಳಲ್ಲಿಯೂ ಹೊಸ-ಹೊಸ ಪ್ರಮೇಯ ವಿಚಾರಗಳನ್ನು ತುಂಬಿದ್ದಾರೆ. ಭಾಷ್ಯದ ನಿಜವಾದ ಅಭಿಪ್ರಾಯವನ್ನು ಅರ್ಥಮಾಡಿಕೊಳ್ಳಲು ಈ ತತ್ವಪ್ರದೀಪ ಗ್ರಂಥವನ್ನು ಅಧ್ಯಯನ ಮಾಡಲೇ ಬೇಕು.

ಮಂಗಳಶ್ಲೋಕಕ್ಕೆ ವ್ಯಾಖ್ಯಾನ ಮಾಡುವಾಗ ಪಂಡಿತಾಚಾರ್ಯರು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಭಗವಂತನ ನಾಕು ರೂಪಗಳು, ನಾಕು ಅಧ್ಯಾಯಗಳಿಂದ ಹೇಗೆ ಪ್ರತಿಪಾದ್ಯವಾಗಿದೆಯೆಂಬುದನ್ನು ಬಲುಸುಂದರವಾಗಿ ವರ್ಣಿಸಿದ್ದನ್ನು ಗಮನಿಸಬಹುದು. ಮತ್ತು ಪ್ರಣವದಲ್ಲಿರುವ ಅಕಾರ, ಉಕಾರ, ಮಕಾರಗಳು ನಾಲ್ಕು ಅಧ್ಯಾಯಗಳ ಸಾರವನ್ನು ಹೇಗೆ ಪ್ರತಿಪಾದನೆ ಮಾಡುತ್ತವೆ ಎಂಬುದೂ ಕೂಡ ಈ ವಿಷಯದಲ್ಲಿ ಉತ್ತಮ ನಿದರ್ಶನವಾಗಿದೆ.

ಶ್ರೀಮಟ್ಟೀಕಾಕೃತ್ಪಾದರು ತತ್ವಪ್ರದೀಪವನ್ನು ಓದಲಿ ಎಂಬ ಅಭಿಪ್ರಾಯದಿಂದಲೇ ಈ ವಿಚಾರವನ್ನು ತಮ್ಮ ವ್ಯಾಖ್ಯಾನದಲ್ಲಿ ಸೇರಿಸದೆ, ಬೇರೆ ಕ್ರಮದಲ್ಲಿಯೇ ತಾವು ವ್ಯಾಖ್ಯಾನವನ್ನು ಮಾಡಿರುತ್ತಾರೆಂಬುದನ್ನೂ ಕೂಡ ಹೃದಯವಂತರು ಗಮನಿಸಬೇಕು.

'ಸರ್ವತ್ರ ಜ್ಞಾನ ಆಕೂಲೀಭೂತೇ' ಎಂಬ ಭಾಷ್ಯಕ್ಕೆ ವ್ಯಾಖ್ಯಾನ ಮಾಡುವಾಗ ಪಂಡಿತಾಚಾರ್ಯರ ವ್ಯಾಖ್ಯಾನವನ್ನು ಗಮನಿಸೋಣ. ತತ್ವಜ್ಞಾನದಲ್ಲಿ ಆಕುಲೀಭಾವವುಂಟಾಯಿತು ಎಂದಷ್ಟೇ ಭಾಷ್ಯದಲ್ಲಿ ಹೇಳಿದ್ದಾರೆ. ಇದನ್ನು ಪಂಡಿತಾಚಾರ್ಯರು ಸುಂದರವಾಗಿ ಅನೇಕ ವಿಧದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಜ್ಞಾನವು ಆಕುಲೀಭಾವವನ್ನು ಹೊಂದಿತೆಂದರೆ ತತ್ವಜ್ಞಾನದ ವಿಷಯದಲ್ಲಿ ಸಜ್ಜನರು ಸಂಶಯಕ್ಕೆ ಈಡಾದರು ಎಂಬುದು ಸಾಮಾನ್ಯವಾದ ಅರ್ಥ. ಈ ಸಂಶಯವನ್ನು ಅನೇಕ ಕ್ರಮದಲ್ಲಿ ಇಟ್ಟುಕೊಳ್ಳಬೇಕು.

೧. 'ವಿಷ್ಣುಸರ್ವೋತ್ತಮತ್ವ' ಎಂಬುದು ತತ್ವವೋ ಅಥವಾ ಅತತ್ವವೋ ? ಎಂಬ ಸಂಶಯ ಕೆಲವರಿಗೆ ಉಂಟಾಯಿತು. ೨. ವಿಷ್ಣು, ಸರ್ವೋತ್ತಮನಾಗಿರಬಹುದು ಎಂಬ ಸಂಶಯ ಕೆಲವರಿಗೆ. ೩. ವಿಷ್ಣು, ಸರ್ವೋತ್ತಮನಲ್ಲದಿರಬಹುದು ಎಂಬ ಸಂಶಯ ಕೆಲವರಿಗೆ. ೪. ವಿಷ್ಣು, ಸರ್ವೋತ್ತಮ ಎಂಬ ವಿಷಯದಲ್ಲಿ ವಿಚಾರವಿಲ್ಲದ ದುರಾಗ್ರಹ ಕೆಲವರಿಗೆ. ೫. ವಿಷ್ಣು, ಸರ್ವೋತ್ತಮ ಅಲ್ಲವೇ ಅಲ್ಲ ಎಂಬ ದುರಾಗ್ರಹ ಇನ್ನು ಕೆಲವರಿಗೆ.

ಹೀಗೆ ಅನೇಕ ಬಗೆಯ ಆಕುಲೀಭಾವವನ್ನು ತಿಳಿಯಬೇಕು. ವಿಚಾರ ಮಾಡದೆ ಕೇವಲ ದುರಾಗ್ರಹದಿಂದ ಒಪ್ಪಿಕೊಳ್ಳುವ ಸತ್ಯವೂ ಕೂಡ ತತ್ತ್ವಜ್ಞಾನದ ಕಾಲುಷ್ಯವೆಂದು ಪಂಡಿತಾಚಾರ್ಯರು ಇಲ್ಲಿ ವ್ಯಾಖ್ಯಾನ ಮಾಡಿದ್ದನ್ನು ಗಮನಿಸಬೇಕು.

ಭಾಷ್ಯದಲ್ಲಿ 'ಬ್ರಹ್ಮರುದ್ರೇಂದ್ರಾದಿಭಿಃ' ಎಂಬ ಪದಕ್ಕೆ 'ಬ್ರಹ್ಮ ಚ ರುದ್ರಶ್ಚ ಇಂದ್ರಶ್ಚ ಬ್ರಹ್ಮರುದ್ರೇಂದ್ರಾಃ' ಹೀಗೆ ಸಮಾಸವನ್ನು ಮಾಡಬಾರದು. 'ಬ್ರಹ್ಮ ಚ ರುದ್ರಶ್ಚ ಬ್ರಹ್ಮರುದ್ರೌ ಬ್ರಹ್ಮರುದ್ರೌ ಚ ಇಂದ್ರಶ್ಚ ಬ್ರಹ್ಮರುದ್ರೇಂದ್ರಾಃ' ಎಂಬುದಾಗಿ ಸಮಾಸವನ್ನು ಮಾಡಬೇಕೆಂಬ ಸಮಾಸವಿಚಾರವನ್ನು ಪಂಡಿತಾಚಾರ್ಯರು 'ಇಂದ್ರಾದಿಭಿಃ ಅರ್ಥಿತಃ ಬ್ರಹ್ಮ ರುದ್ರಶ್ಚ' ಎಂಬುದರಿಂದ ತಿಳಿಸಿದ್ದಾರೆ.

'ಅರ್ಥಿತಃ' ಎಂಬ ಪದಕ್ಕೆ ಸ್ಪಷ್ಟವಾದ ಅರ್ಥವನ್ನು ಹೀಗೆ ತಿಳಿಯಬೇಕು - ಸಜ್ಜನರಲ್ಲಿ ತತ್ತ್ವಜ್ಞಾನದ ಉಪದೇಶನಗಾಗಿ ಸಕಲದೇವತೆಗಳಿಂದ ಇಂದ್ರದೇವರು ಪ್ರಾರ್ಥಿತರಾದರು. ಸಕಲ ದೇವತೆಗಳಿಂದ ಕೂಡಗೂಡಿದ ಇಂದ್ರಾದಿದೇವರಿಂದ, ರುದ್ರದೇವರು ಪ್ರಾರ್ಥಿತರಾದರು. ಸಕಲ ದೇವತೆಗಳಿಂದ ಕೂಡಗೂಡಿದ ರುದ್ರದೇವರಿಂದ ಬ್ರಹ್ಮದೇವರು ಪ್ರಾರ್ಥಿತರಾದರು. ಸಕಲ ದೇವತೆಗಳಿಂದ ಜೊತೆಗೂಡಿದ ಬ್ರಹ್ಮದೇವರಿಂದ ಕ್ಷೀರ ಸಮುದ್ರಶಾಯಿಯಾದ ನಾರಾಯಣನು ಪ್ರಾರ್ಥಿತನಾದನು. ಈ ಕ್ರಮದಲ್ಲಿ ಪ್ರಾರ್ಥನೆಯನ್ನು ತಿಳಿದಾಗ ಪರಮಾತ್ಮನೊಬ್ಬನೇ ಅನನ್ಯ ಶರಣನೆಂದು ಸ್ಪಷ್ಟವಾಗುತ್ತದೆ.

ಸಮನ್ವಯಾಧಿಕರಣದಲ್ಲಿ ಉಪಕ್ರಮ ಉಪಸಂಹಾರಗಳ ನಡುವೆ ವಿವಕ್ಷಾಭೇದದಿಂದ ಎರಡೂ ಪ್ರಬಲವಾಗಬಹುದೆಂದು ಪಂಡಿತಾಚಾರ್ಯರು ಹೀಗೆ ಸಮರ್ಥಿಸಿದ್ದಾರೆ - 'ಉಪಕ್ರಮೋಪಸಂಹಾರಯೋರ್ವಿಶೇಷಸಾಮಾನ್ಯೋಕ್ತಿತಯಾ ಯತ್ರಾವಿರೋಧಸ್ತತ್ರ ಕ್ವಚಿದುಪಕ್ರಮೋ ಬಲವಾನ್ । ಪ್ರಥಮಪ್ರಾಪ್ತತ್ವಾತ್ । ತದನುರೋಧ್ಯುಪಸಂಹಾರಃ ।' 'ಉಪಕ್ರಮ ಹಾಗೂ ಉಪಸಂಹಾರಗಳ ನಡುವೆ ಯಾವುದು ಪ್ರಬಲ ? ಎಂಬ ಸಂಶಯ ಬರುತ್ತದೆ. ಏಕೆಂದರೆ ಪ್ರಾರಂಭದಲ್ಲಿರುವುದರಿಂದ ಉಪಕ್ರಮವು ಬಲಿಷ್ಠವೋ ಅಥವಾ ಉಪಕ್ರಮಕ್ಕೆ ಅನುಸಾರಿ-ಯಾಗಿರುವುದರಿಂದ ಉಪಸಂಹಾರವು ಪ್ರಬಲವೋ ? ಎಂದು. ಇದಕ್ಕೆ ಉತ್ತರವನ್ನು ಹೀಗೆ ತಿಳಿಯಬೇಕು - ಉಪಕ್ರಮ ಹಾಗೂ ಉಪಸಂಹಾರಗಳ ನಡುವೆ ಯಾವುದು ಸ್ಪಷ್ಟವಾದ ವಿಷಯವನ್ನು ಪ್ರತಿಪಾದನೆ ಮಾಡುತ್ತದೋ ಅದು ಪ್ರಬಲವಾಗುತ್ತದೆ. ಕೆಲವೊಮ್ಮೆ ಉಪಕ್ರಮವೂ ಕೂಡ ಪ್ರಬಲವಾಗಬಹುದು. ಇನ್ನು ಕೆಲವೊಮ್ಮೆ ಉಪಸಂಹಾರವು ಪ್ರಬಲವಾಗಬಹುದು. ಹೀಗೆ ಅನೇಕ ಕಡೆ ಅವರ ವ್ಯಾಖ್ಯಾನದ ಸ್ವಾರಸ್ಯವನ್ನು ಮತ್ತು ಅಪೂರ್ವತ್ವವನ್ನು ಗಮನಿಸಬಹುದು.

## ತತ್ವಪ್ರದೀಪ ಗ್ರಂಥರಚನೆಯ ಹಿನ್ನೆಲೆ

ತ್ರಿವಿಕ್ರಮಪಂಡಿತರು ಶ್ರೀಮಧ್ವಾಚಾರ್ಯರ ಶಿಷ್ಯತ್ವವನ್ನು ವಹಿಸಿದ ಮೇಲೆ ಶ್ರೀಮದಾಚಾರ್ಯರ ಮುಖಕಮಲದಿಂದ ಬ್ರಹ್ಮಸೂತ್ರಭಾಷ್ಯದ ಪಾಠ ಕೇಳುತ್ತಿದ್ದರು. ಒಂದು ದಿವಸ ಶ್ರೀಮದಾಚಾರ್ಯರು ತಾವು ರಚಿಸಿರುವ ಬ್ರಹ್ಮಸೂತ್ರಭಾಷ್ಯಕ್ಕೆ ಟೀಕೆಯನ್ನು ಬರೆಯುವಂತೆ ತ್ರಿವಿಕ್ರಮಪಂಡಿತಾಚಾರ್ಯರಿಗೆ ಅಪ್ಪಣೆ ಮಾಡುತ್ತಾರೆ -

ಗುರ್ವಾಜ್ಞಾಗೌರವಾಟ್ಟೀಕಾಂ ಕುರ್ವನ್ ಭಾಷ್ಯಸ್ಯ ದುಷ್ಕರಾಮ್ ।
ಷಡರ್ಧವಿಕ್ರಮಾರ್ಯೋಽಸೌ ಮಹಾಚಾರ್ಯಮವೋಚತ ॥

ಬಲುಕಠಿಣವಾದ ಗುರುಗಳ ಆಜ್ಞೆಯಿಲ್ಲದೇ ಬರೆಯಲು ಸಾಧ್ಯವಾಗದ ಬ್ರಹ್ಮಸೂತ್ರಭಾಷ್ಯದ ಟೀಕೆಯನ್ನು ತ್ರಿವಿಕ್ರಮಪಂಡಿತರು ರಚನೆ ಮಾಡಿದರು. ಇದಕ್ಕೆ 'ತತ್ವಪ್ರದೀಪ' ಎಂಬ ಹೆಸರನ್ನಿಟ್ಟರು. ನಾಕು ಅಧ್ಯಾಯಗಳ ವ್ಯಾಖ್ಯಾನವನ್ನು ಮಾಡಿ, ಶ್ರೀಮದಾಚಾರ್ಯರಿಗೆ ಸಮರ್ಪಣೆ ಮಾಡಿದರು.

ಮಧ್ವವಿಜಯದಲ್ಲಿ ತತ್ವಪ್ರದೀಪ ಗ್ರಂಥದ ರಚನೆಯ ಬಗ್ಗೆ ಶ್ರೀನಾರಾಯಣಪಂಡಿತರು ಹೀಗೆ ಸ್ಪಷ್ಟವಾಗಿ ಹೇಳಿದ್ದಾರೆ. ಇದನ್ನು ಗಮನಿಸಿದಾಗ ಅನುವ್ಯಾಖ್ಯಾನ ಗ್ರಂಥಕ್ಕಿಂತಲೂ ಮೊದಲು ತತ್ವಪ್ರದೀಪವನ್ನು ರಚನೆ ಮಾಡಲು ಪ್ರಾರಂಭಿಸಿದ್ದರೆಂದು ತತ್ವಪ್ರದೀಪ ಬರೆಯುತ್ತಿರುವಾಗ ಮಧ್ಯದಲ್ಲಿ ಶ್ರೀಮದಾಚಾರ್ಯರ ಬಳಿ ಅನುವ್ಯಾಖ್ಯಾನವನ್ನು ರಚನೆ ಮಾಡಲು ಪ್ರಾರ್ಥನೆ ಮಾಡಿದ್ದಾರೆಂದು ತಿಳಿಯುತ್ತದೆ.

ತಾವು ಬ್ರಹ್ಮಸೂತ್ರಭಾಷ್ಯಕ್ಕೆ ಟೀಕೆಯನ್ನು ರಚನೆ ಮಾಡುವಾಗ ತಮಗೆ ಅನಿಸಿದ ಅಭಿಪ್ರಾಯವನ್ನು ಶ್ರೀಮದಾಚಾರ್ಯರ ಬಳಿ ಪಂಡಿತಾಚಾರ್ಯರು ಹೀಗೆ ನಿವೇದನೆ ಮಾಡುತ್ತಾರೆ -

ಗ್ರಂಥೇಭ್ಯ ಏಭ್ಯೋಽಗಾಧೇಭ್ಯೋ ಯುಕ್ತಯೋ ನೋ ದುರುದ್ಧರಾಃ ।
ಮನೋಮಾಂದ್ಯಾತ್ ತತೋ ಗ್ರಂಥಂ ವ್ಯಕ್ತತರ್ಕತತಿಂ ಕುರು ॥

ತಾವು ಈಗಾಗಲೇ ರಚನೆ ಮಾಡಿರುವ ಪ್ರೌಢಗ್ರಂಥಗಳಲ್ಲಿರುವ ಯುಕ್ತಿಗಳನ್ನು ಆರಿಸಿ ತೆಗೆಯಲು ಮಂದಬುದ್ಧಿಯವರಿಂದ ಸಾಧ್ಯವಾಗುವುದಿಲ್ಲ. ಆದ್ದರಿಂದ ತಾವು ಯುಕ್ತಿಗಳುಳ್ಳ ಮತ್ತೊಂದು ಗ್ರಂಥವನ್ನು ಬರೆದು ನೀಡಬೇಕು.

ಹೀಗೆ ಪ್ರಾರ್ಥನೆ ಮಾಡುತ್ತಾರೆ. ಇವರ ಪ್ರಾರ್ಥನೆಯಂತೆ ಸಜ್ಜನನಿಗೆ ಅಮೃತವನ್ನು ನೀಡುವಂತೆ ದುಷ್ಟವಾದಿಗಳ ಅಹಂಕಾರಕ್ಕೆ ವಜ್ರಾಯುಧವನ್ನು ಪ್ರಯೋಗ ಮಾಡಿದಂತೆ, ಸೂರ್ಯನು ತನ್ನ

ಕಾಂತಿಯಿಂದ ಗೂಬೆಗಳಿಗೆ ದುಃಖ ನೀಡುವಂತೆ ಮಾಯಾವಾದಿಗಳಿಗೆ ದುಃಖವನ್ನು ನೀಡುವಂಥ ಅನುವ್ಯಾಖ್ಯಾನವೆಂಬ ಗ್ರಂಥವನ್ನು ಶ್ರೀಮದಾಚಾರ್ಯರು ರಚನೆ ಮಾಡುತ್ತಾರೆ. ಒಂದೇ ಸಲ ನಾಕು ಮಂದಿ ಶಿಷ್ಯರನ್ನು ಕೂಡಿಸಿಕೊಂಡು ನಾಕು ಅಧ್ಯಾಯಗಳ ವ್ಯಾಖ್ಯಾನವನ್ನು ರಚನೆ ಮಾಡುತ್ತಾರೆ.

ಹೀಗೆ ಪಂಡಿತಾಚಾರ್ಯರು ತಾವು ತತ್ವಪ್ರದೀಪವನ್ನು ಬರೆಯುವುದರ ಜೊತೆ ಅನುವ್ಯಾಖ್ಯಾನವೆಂಬ ಮತ್ತೊಂದು ಗ್ರಂಥವನ್ನು ಶ್ರೀಮದಾಚಾರ್ಯರು ಜಗತ್ತಿಗೆ ನೀಡಲು ಕಾರಣರಾದರು.

ಅವರು ತತ್ವಪ್ರದೀಪವನ್ನು ರಚನೆ ಮಾಡುತ್ತಿರುವಾಗ ಅನುವ್ಯಾಖ್ಯಾನವು ರಚನೆಯಾಗಿರಲಿಲ್ಲ ಎಂಬ ವಿಷಯಕ್ಕೆ ಮತ್ತೊಂದು ಆಧಾರವನ್ನು ಊಹಿಸಬಹುದು. ತತ್ವಪ್ರದೀಪದ ಪ್ರಾರಂಭದಲ್ಲಿ ಎಲ್ಲಿಯೂ ಕೂಡ ಅವರು ಅನುವ್ಯಾಖ್ಯಾನವನ್ನು ಉಲ್ಲೇಖ ಮಾಡುವುದಿಲ್ಲ. ಆದರೆ ಗ್ರಂಥದ ಕೊನೆಯಲ್ಲಿ ಅನೇಕ ಕಡೆ ಅನುವ್ಯಾಖ್ಯಾನವನ್ನು ಉಲ್ಲೇಖಿಸುತ್ತಾರೆ. ಮತ್ತು ಪ್ರಶಂಸೆ ಮಾಡುತ್ತಾರೆ -

'ಪರಮಪುರುಷಗುಣಗಣಮಣಿನಿಕರನಿಧಾನಭೂತಯೋರ್ಭಾಷ್ಯಾನುಭಾಷ್ಯಾಮೃತ-ಸಮುದ್ರಯೋಃ' ಇತ್ಯಾದಿಯಾಗಿ.

## ಶ್ರೀತ್ರಿವಿಕ್ರಮಪಂಡಿತರಿಗೆ ಆಚಾರ್ಯಮಧ್ವರಲ್ಲಿ ಬಲು ಭಕುತಿ

ತ್ರಿವಿಕ್ರಮಪಂಡಿತರಿಗೆ ತಮ್ಮ ಗುರುಗಳಾದ ಶ್ರೀಮದಾನಂದತೀರ್ಥರ ವಿಷಯದಲ್ಲಿ ಇರುವ ಭಕ್ತಿಯ ಅತಿಶಯವು ಊಹಾತೀತ, ವಾಚಾಮಗೋಚರ.

ತತ್ವಪ್ರದೀಪಗ್ರಂಥದಲ್ಲಿ ಮಂಗಳಾಚರಣಶ್ಲೋಕದಲ್ಲಿ ಭಗವಂತನಿಗೆ ನಮಸ್ಕಾರ ಮಾಡಿದ ಮೇಲೆ ಸುಮಾರು ಇಪ್ಪತ್ತು ಶ್ಲೋಕಗಳಲ್ಲಿ ಶ್ರೀಮಧ್ವಾಚಾರ್ಯರನ್ನು ಹೃದಯಂಗಮವಾಗಿ ಸ್ತೋತ್ರ ಮಾಡಿದರೂ ಅವರಿಗೆ ಪೂರ್ಣವಾಗಿ ಸಂತೋಷವಾಗಿಲ್ಲ. ಟಿಪ್ಪಣಿ ಬರೆಯುವಾಗ ಪ್ರತಿಯೊಂದು ಹಂತದಲ್ಲಿಯೂ 'ಅತ್ರ ಅಯಮೇವ ಪಕ್ಷಃ ಶ್ರೇಯಾನ್' ಇತ್ಯಾದಿ ಮಾತುಗಳಿಂದ ಶ್ರೀಮದಾಚಾರ್ಯರ ಸಿದ್ಧಾಂತವನ್ನು ಪ್ರಶಂಸೆ ಮಾಡುತ್ತಾರೆ.

ನಾಕನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿರುವ ಬ್ರಹ್ಮದೃಷ್ಟ್ಯಧಿಕರಣದಲ್ಲಿ ಶ್ರೀಮದಾಚಾರ್ಯರ ಭಾಷ್ಯ ಹಾಗೂ ಅನುವ್ಯಾಖ್ಯಾನಗಳು ಅಮೃತಸಮುದ್ರವೆಂದು ಅನೇಕ ಗುಣಗಳೆಂಬ ರತ್ನಮಾಣಿಕ್ಯಗಳ ಆಗರವೆಂದು ಹೃದಯಂಗಮವಾಗಿ ವರ್ಣಿಸುತ್ತಾರೆ -

'ಯಸ್ಯ ಖಲು ಹಂತ ಪರಮದಯಾನಿಧೇಃ ಪರಮಪುರುಷಗುಣಗಣಮಣಿನಿಕರನಿಧಾನ-ಭೂತಯೋರ್ಭಾಷ್ಯಾನುಭಾಷ್ಯಾಮೃತಸಮುದ್ರಯೋಃ ಕಲಿಮಲಕರ್ದಮಮಾವರ್ಜಯಿತುಂ ಸಜ್ಜನಮಾಮಜ್ಜಯತಃ ಸಮೀಚೀನವಚನಸುಸ್ವಾದುಸುಧಾರಸಾಸ್ವಾದಪ್ರಮೋದನಿರ್ಭರಹೃದಯಾಃ ವಿಶದಮತಯಃ ಕರತಲವಿಲಸಿತಾಮಲಕವದಲಮಖಿಲಪುರುಷಾರ್ಥಸಾರ್ಥಕಂ ಸದ್ಯಃ ಸಾಧು ಸಮರ್ಥಯಂತಿ'' ಎಂಬುದಾಗಿ.

ಶ್ರೀಮದಾಚಾರ್ಯರನ್ನು ಪ್ರಶಂಸೆ ಮಾಡುತ್ತಲೇ ತತ್ವಪ್ರದೀಪ ಟೀಕೆಯ ಮುಕ್ತಾಯವನ್ನು ಹೀಗೆ ಮಾಡಿದ್ದಾರೆ -

''ಯಸ್ಯಾಸ್ಖಲಿತಾನವರತವೇದಶಾಸ್ತ್ರವ್ಯಾಖ್ಯಾನಶ್ರವಣಕೌತುಕಸಮುತ್ಥಾತದುಃಖಸಂಘಾತೋ ನಿಖಿಲಪಂಡಿತವರ್ಗೋಃ ಪರಮಾಮೃತಸಮುದ್ರಾವಗಾಹೀವ ಬಹಳಮಾಹ್ಲಾದಮಾಪ್ನೋತಿ''

## ಶ್ರೀತ್ರಿವಿಕ್ರಮಪಂಡಿತರಿಗೆ ಮಾಯಾವಾದಿಗಳಲ್ಲಿರುವ ಆಕ್ರೋಶ

ಶ್ರೀತ್ರಿವಿಕ್ರಮಪಂಡಿತರು ತಮ್ಮ ಬಾಲ್ಯದಿಂದಲೂ ಅದ್ವೈತಮತದಲ್ಲಿಯೇ ಬೆಳೆದವರು. ಶ್ರೀಮದಾಚಾರ್ಯರ ಸಂದರ್ಶನವಾದ ಮೇಲೆ ಸ್ವತಃ ವಿಚಾರಮಾಡಿ ಅದ್ವೈತಮತವನ್ನು ಪರಿತ್ಯಾಗ ಮಾಡಿದರು. ತಾವು ಅದ್ವೈತಮತದಲ್ಲಿಯೇ ಬೆಳೆದಿದ್ದರಿಂದ ಅವರು ಮಾಡುವ ಎಲ್ಲಾ ವಂಚನೆಗಳನ್ನು ಕೂಡ ಅನುಭವಿಸಿ ಆಕ್ರೋಶದ ಮಾತುಗಳನ್ನು ಅಲ್ಲಲ್ಲಿ ಹೇಳುತ್ತಾರೆ. ತ್ರಿವಿಕ್ರಮಪಂಡಿತರು ಅನುಭವಿಸಿದ ದುಃಖ ನಮಗೆ ಅರ್ಥವಾಗದ ವಿಚಾರ. ಮಾಯಾವಾದಿಗಳ ಬಗ್ಗೆ ತತ್ವಪ್ರದೀಪಗ್ರಂಥದಲ್ಲಿ ಪಂಡಿತಾಚಾರ್ಯರು ಪ್ರಯೋಗಿಸಿದ ಶಬ್ದತರಂಗಗಳು ಹೀಗಿವೆ -

''ಯಚ್ಚೋಕ್ತಂ ಬ್ರಹ್ಮವ್ಯತಿರಿಕ್ತಸ್ಯ ಜೀವಸ್ಯೈವಾಭಾವಾತ್-ಬ್ರಹ್ಮೈವಾಜ್ಞಂ ಭವೇದಿತಿ ತದಪಿಭೇದ-ವಿದ್ವೇಷದೋಷವಿಷದೂಷಿತತ್ವಾತ್ತ್ವಮುಷಿತಶೇಮುಷಿಗುಣೋನ್ಮೇಷೈರಭಿಲಷಿತಮಿತಿ ಮನೀಷಿಣೋ ಮನ್ಯಂತೇ''

'ಬ್ರಹ್ಮನಿಗಿಂತ ಅತಿರಿಕ್ತನಾದ ಜೀವನೇ ಇಲ್ಲದ ಕಾರಣ ಬ್ರಹ್ಮನೇ ಅಜ್ಞಾನಿ ಎಂದು ಅದ್ವೈತಿಗಳು ಹೇಳುತ್ತಾರೆ. ಇದು ಕೇವಲ ಭೇದದ ಮೇಲಿರುವ ದ್ವೇಷವೆಂಬ ದೋಷದ ವಿಷದ ಬಾಧೆ ಹೊರತು ಮತ್ತೇನೂ ಅಲ್ಲ. ಈ ವಿಷಯವನ್ನು ಕೇಳಿ ಪ್ರಜ್ಞೆಯಿಲ್ಲದವರಷ್ಟೇ ತಲೆದೂಗುತ್ತಾರೆ. ಯಾವ ಪ್ರಜ್ಞಾವಂತರೂ ಕೂಡ ಒಪ್ಪುವುದಿಲ್ಲ' ಎಂಬುದಾಗಿ ಧೈರ್ಯವಾಗಿ ನುಡಿಯುತ್ತಾರೆ.

ಈಕ್ಷತ್ಯಧಿಕರಣದಲ್ಲಿಯೇ ಮತ್ತೊಂದು ಕಡೆ ಅದ್ವೈತಮತದ ಬಗ್ಗೆ ಆಕ್ರೋಶವನ್ನು ವ್ಯಕ್ತಪಡಿಸುತ್ತಾರೆ -

''ಯದಪೀದಮುದಿತಂ ಷಷ್ಠ್ಯಾದೀನಾಂ ಮುಖ್ಯವೃತ್ತಿಹೇತೂನಾಮಭಾವಾದಶಬ್ದಂ ಬ್ರಹ್ಮೇತಿ ಚ । ತದಪಿ ನಿಖಿಲವೇದವಾಕ್ಯಸಮನ್ವಯಪರಿನಿರ್ಣೀಯಮಾನಪರಮಪುರುಷಗತಗುರುತರಗುಣಗಣ್ಯತಾ-ಕರ್ಣನ ಕರ್ಣಶೂಲಮಿವ ದುಃಸಹಮಸಹಮಾನಾನಾಂ ಸ್ವಮತಮಾನದುರ್ಬಲಾನಾಂ ಬಾಲಿಶಾನಾಮಿವಾಽಕ್ರೋಶಮಾತ್ರಮುತ್ಪಶ್ಯಾಮಃ ।''

'ಶಬ್ದಪ್ರವೃತ್ತಿಗೆ ಕಾರಣವಾದವು ಷಷ್ಠೀ, ಗುಣ, ಕ್ರಿಯಾ, ಜಾತಿ, ರೂಢಿ ಮೊದಲಾದವು. ಇವುಗಳು ಬ್ರಹ್ಮನಲ್ಲಿ ಇರುವುದಿಲ್ಲ. ಆದ್ದರಿಂದ ಬ್ರಹ್ಮನು ಶಬ್ದಪ್ರತಿಪಾದ್ಯನಲ್ಲವೆಂದು ಮಾಯಾವಾದಿಗಳು ಆಕ್ಷೇಪ ಮಾಡುತ್ತಾರೆ. ಇದು ಕೇವಲ ದುರಾಗ್ರಹ ಪೀಡಿತವಾದದ್ದು, ಸಮಸ್ತ ವೇದವಾಕ್ಯಗಳ ಸಮನ್ವಯದಿಂದ ಸರ್ವೋತ್ತಮನಾದ ಪರಮಾತ್ಮನಲ್ಲಿ ಅತ್ಯಂತ ಶ್ರೇಷ್ಠವಾದ ಅನಂತಗುಣಪರಿಪೂರ್ಣತ್ವವು ನಿರ್ಣಯವಾಗಿದೆ. ಇದನ್ನು ಮಾಯಾವಾದಿಯು ಕಿವಿಗೆ ನೋವು ಬಂದವನು ಶಬ್ದವನ್ನು ಕೇಳಲು ಕಷ್ಟಪಡುವಂತೆ ಕೇಳಲು ಕಷ್ಟಪಡುತ್ತಿದ್ದಾನೆ. ಇದು ಕೇವಲ ತನ್ನ ಮತದ ದುರಭಿಮಾನದಿಂದ ಹೀಗೆ ನಾಟಕವಾಡುತ್ತಿದ್ದಾನೆ. ತನ್ನ ಮತದ ಸ್ಥಾಪನೆಗೆ ಯಾವುದೇ ಪ್ರಮಾಣಗಳಿಲ್ಲದೇ ದುರ್ಬಲನಾಗಿ ಬಾಲಿಶನಾಗಿ ಅಕ್ರೋಶವನ್ನಷ್ಟೇ ವ್ಯಕ್ತಪಡಿಸುತ್ತಿದ್ದಾನೆ.'

'ಅಪಿಚ, ಬ್ರಹ್ಮಾವಾಚ್ಯಮಿತಿ ವದನ್ ವಾದೀ, ಬ್ರಹ್ಮ ವಕ್ತಿ ವಾ ನ ವೇತಿ ವಿಕಲ್ಪ್ಯಯಾಮಃ । ಯದ್ಯಾದ್ಯಪಕ್ಷಪಕ್ಷೀರಕಾರಸ್ತರ್ಹ್ಯವಾಚ್ಯತ್ವಂ ವಿವದಿಷತೋಽಸ್ಮದಭಿಮತವಾಚ್ಯತ್ವಾನುಮೋದನಾತ್ ಸ್ವವ್ಯಾಹತ್ಯಾದಿನಿಗ್ರಹಮಹಾಗ್ರಾಹಗ್ರಸ್ತತಯಾ ಪೃಥುಕಥಾಪ್ರಥಮಸಾಗರೇ ಪ್ರಮಾಣತರ್ಕತದಾ-ಭಾಸವೀಚೀತರಂಗಮಾಲಾಜಾಲಾವಲೋಲಿತೇ ನಿಮಜ್ಜತೋ ವಾದಿನೋ ನಿರ್ಣಯಪಾರದರ್ಶನಂ ದುಃಶಕಂ ಪ್ರಸಜ್ಯೇತ ।'

'ಮತ್ತು ಬ್ರಹ್ಮನು ಅವಾಚ್ಯನಾಗಿದ್ದಾನೆಂದು ಹೇಳುವ ಮಾಯಾವಾದಿಯು ಬ್ರಹ್ಮನನ್ನು ಹೇಳುತ್ತಾನೋ, ಹೇಳುವುದಿಲ್ಲವೋ ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ಬ್ರಹ್ಮನನ್ನು ಹೇಳುತ್ತಾನೆಂದರೆ ಬ್ರಹ್ಮನು ಅವಾಚ್ಯನಾಗಿದ್ದಾನೆಂಬ ವಿಷಯವನ್ನು ಒಪ್ಪದ ನಮ್ಮ ಅಭಿಪ್ರಾಯದಂತೆ ವಾಚ್ಯತ್ವವನ್ನೇ ಅನುಮೋದನೆ ಮಾಡಿದಂತಾಯಿತು. ಸ್ವವಾಹ್ಯತಿ ಎಂಬ ದೊಡ್ಡ ಮೊಸಳೆಯ ಬಾಯಲ್ಲಿ ಸಿಕ್ಕಿಕೊಂಡು, ವಿಶಾಲವಾದ ವಾಕ್ಯಾರ್ಥಕಥಾ ಎಂಬ ಮಾರ್ಗವೆಂಬ ಸಾಗರದಲ್ಲಿ ಪ್ರಮಾಣಾಭಾಸ, ತರ್ಕಾಭಾಸಗಳೆಂಬ

ದೊಡ್ಡ ಅಲೆಗಳ ಮಾಲೆಗಳ ಸುಳಿಗಳಲ್ಲಿ ಸಿಕ್ಕಿಹಾಕಿಕೊಂಡು, ಮುಳುಗಿ, ಮುಳುಗಿ ಏಳುತ್ತಿರುವ ಮಾಯಾವಾದಿಗೆ ತತ್ವನಿರ್ಣಯವೆಂಬ ದಡವನ್ನು ಕಾಣುವುದೇ ಬಲುಕಷ್ಟವಾಗಿದೆ'.

ಇಂಥ ನೂರಾರು ಸ್ವಾರಸ ವಾಕ್ಯಗಳಿವೆ. ಆ ಎಲ್ಲಾ ವಿಷಯಗಳನ್ನು ಇಲ್ಲಿ ಉಲ್ಲೇಖಿಸಲು ಅಸಮರ್ಥನಾಗಿದ್ದೇನೆ. ಗ್ರಂಥವನ್ನು ಅಧ್ಯಯನ ಮಾಡುವಾಗಲೇ ಅದನ್ನು ಓದಿ ಅನುಭವಿಸಬೇಕು.

## ಶ್ರೀತ್ರಿವಿಕ್ರಮಪಂಡಿತರಿಗೆ ಮಾಯಾವಾದಿಗಳ ಮೇಲೆ ಏಕಿಷ್ಟು ಆಕ್ರೋಶ ?

ಶ್ರೀತ್ರಿವಿಕ್ರಮಪಂಡಿತರು ಮಾಯಾವಾದಿಗಳ ಮೇಲೆ ಆಕ್ರೋಶದ ಮಾತುಗಳನ್ನು ತಮ್ಮ ಗ್ರಂಥಗಳಲ್ಲಿ ಆಡುತ್ತಾರೆ. ಹೀಗೇಕೆ ಆಕ್ರೋಶವನ್ನು ವ್ಯಕ್ತಪಡಿಸಬೇಕು. ನಮ್ಮ ಸಿದ್ಧಾಂತವನ್ನು ಸರಿಯಾಗಿ ತಿಳಿದರೆ ಸಾಕು, ಮಾಯಾವಾದಿಗಳನ್ನು ಆಕ್ರೋಶದಿಂದ ಏಕೆ ನಿಂದಿಸಬೇಕು ? ಎಂದು ಈಗಿನವರ ಗೊಂದಲ. ಈ ವಿಷಯದಲ್ಲಿ ಲಿಕುಚವಂಶೋದ್ಭವರ ಬಗ್ಗೆ ನಿಖರವಾಗಿ ಮಾತನಾಡುವ ವಿದ್ವಾನ್ ಶ್ರೀಬನ್ನಂಜೆ ಗೋವಿಂದಾಚಾರ್ಯರು ಹೃದಯಂಗಮವಾದ ಉತ್ತರವನ್ನು ನುಡಿಯುತ್ತಾರೆ. ಅವರ ಮಾತುಗಳಿಂದಲೇ ನಿಜವಾದ ಉತ್ತರವನ್ನು ತಿಳಿಯೋಣ. ಅವರು ಬರೆದ ವಿಷ್ಣುಸ್ತುತಿ, ವಾಯುಸ್ತುತಿ ಪುಸ್ತಕದ ಪೀಠಿಕೆಯನ್ನು ಓದೋಣ -

''ಕೆಲವರಿಗೊಂದು ಶಂಕೆ : ತ್ರಿವಿಕ್ರಮ ಪಂಡಿತರು ಮಾಯಾವಾದವನ್ನು, ಅದರ ಪ್ರತಿಪಾದಕರಾದ ಶಂಕರರನ್ನು ಕಟುನುಡಿಯಿಂದ ಹೀಗಳೆಯುತ್ತಾರೆ ! ಇಂಥ ಪರನಿಂದೆಯ ಪರಿಭಾಷೆ ಸರಿಯೆ ?

ಶಂಕೆ ಸಹಜವಾದದ್ದು ; ಪ್ರಾಮಾಣಿಕವಾದದ್ದು. ಅದಕ್ಕೆ ಪ್ರಾಮಾಣಿಕವಾದ ಪರಿಹಾರ ಬೇಕು. ಎಲ್ಲ ದಾರಿಗೂ ಗುರಿ ಒಂದೆ ಎನ್ನುವವರಿಗೆ ಇದನ್ನು ಜೀರ್ಣಿಸಿಕೊಳ್ಳುವುದು ತುಂಬ ಕಷ್ಟ.

ಅಂಥವರು ಹೇಳುತ್ತಾರೆ : 'ಹರಿಯಾದರೇನು ? ಹರನಾದರೇನು ? ಎಲ್ಲ ಒಂದೆ. ದ್ವೈತವಾದರೇನು? ಅದ್ವೈತವಾದರೇನು ? ಎಲ್ಲ ಒಂದೆ. ಒಂದಾದರೇನು ? ಎರಡಾದರೇನು ? ಎಲ್ಲ ಒಂದೆ. ದಾರಿ ಹಲವು. ಯಾವ ದಾರಿಯಲ್ಲಿ ಸಾಗಿದರೂ ಕೊನೆಗೆ ಸೇರುವ ಗುರಿ ಒಂದೆ'.

ಇದು ಎಲ್ಲವನ್ನೂ ಮತ್ತೆ ಅದ್ವೈತದ ಮುಸುಕಿನೊಳಗೆ ಮುಚ್ಚಿಟ್ಟು ಕೇಳುಗರನ್ನು ಬೆರಗುಗೊಳಿಸುವ ಮೋಸಗಾರಿಕೆ.

ಹಿಂದಿನವರು ಹೀಗೆ ನಂಬಿದವರಲ್ಲ.

ಅವರಿಗೆ ಸತ್ಯದ ದಾರಿ ಬೇರೆ ; ಅಸತ್ಯದ ದಾರಿ ಬೇರೆ.

ಸತ್ಯವನ್ನು ಸೇರಬೇಕಾದರೆ ಸತ್ಯದ ದಾರಿಯಲ್ಲೆ ಸಾಗಬೇಕು. ಅಸತ್ಯದ ದಾರಿಗುಂಟ ಸಾಗಿ ಸತ್ಯವನ್ನು ಸೇರುವುದು ಸಾಧ್ಯವಿಲ್ಲ.

ಗುರಿಯಂತೆ ದಾರಿಯೂ ಖಚಿತವಾಗಿರಬೇಕು.

ಏಕೆಂದರೆ ಸಾಧನೆ ಎಂದರೆ ಚಕ್ರಭ್ರಮಣವಲ್ಲ. ಅದೊಂದು ಸರಳರೇಖೆಯ ನಿರಂತರ ಪಯಣ.

ವಿರುದ್ಧ ದಿಕ್ಕಿನಲ್ಲಿ ಸಾಗಿದವರು ಎಂದೂ ಒಂದೆಡೆ ಸೇರುವುದಿಲ್ಲ. ಬದಲಾಗಿ ಅವರು ಇನ್ನಷ್ಟು ದೂರವಾಗುತ್ತಲೆ ಇರುತ್ತಾರೆ: 'ಸತ್ಯಮೇವ ಜಯತಿ ನಾನೃತಮ್'.

ಕೃಷ್ಣ ಗೀತೆಯಲ್ಲಿ ನುಡಿದಿದ್ದ :

'ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ'.

ಒಂದು ದೈವಮಾರ್ಗ. ಒಂದು ಅಸುರಮಾರ್ಗ.

ಒಂದು ಅರಿವಿನ ದಾರಿ. ಒಂದು ಅರಿವುಗೇಡಿನ ದಾರಿ.

ಒಂದು ಸತ್ಯದ ದಾರಿ. ಇನ್ನೊಂದು ಅಸತ್ಯದ ದಾರಿ.

ಒಂದು ಬೆಳಕಿನ ದಾರಿ. ಒಂದು ಕತ್ತಲಿನ ದಾರಿ.

ದಾರಿ ಬೇರೆ ; ದಾರಿಯ ಗುರಿಯೂ ಬೇರೆ.

ತ್ರಿವಿಕ್ರಮಪಂಡಿತರು ಮಾಯಾವಾದವನ್ನು ನಂಬಿ ಬಾಳಿದ ಮನೆತನದಲ್ಲಿ ಹುಟ್ಟಿ ಬಂದವರು.

ಮೊದಲು ಮಾಯಾವಾದವೆ ಸತ್ಯದ ದಾರಿ, ಬೆಳಗಿನ ದಾರಿ ಎಂದು ನಂಬಿ ಬದುಕಿದವರು.

ಜತೆಗೆ ಮಾಯಾವಾದದ ವಕ್ತಾರರಾಗಿ, ಪ್ರಕಾಂಡಪಂಡಿತರಾಗಿ ಖ್ಯಾತರಾದವರು.

ಒಮ್ಮೆ ಆಚಾರ್ಯರ ತತ್ವವಾದದ ಪರಿಚಯವಾಯಿತು.

ಪಂಡಿತರು ಆಚಾರ್ಯರ ಪಟ್ಟಶಿಷ್ಯರಾದರು.

ಆ ಕ್ಷಣವೆ ಅವರ ಮನಸ್ಸು ತೀರ್ಮಾನಿಸಿತು: ತತ್ವವಾದವೆ ಸತ್ಯದ ದಾರಿ ; ಸಾತ್ವಿಕ ದಾರಿ, ಅರಿವಿನ ದಾರಿ; ಬೆಳಕಿನ ದಾರಿ; ಮೇಲಕ್ಕೊಯ್ಯುವ, ದೇವತೆಗಳ ದಾರಿ.

ಅದರಿಂದಲೆ ಮಾಯಾವಾದ ಅಸತ್ಯದ ದಾರಿ; ತಾಮಸ ದಾರಿ; ಅಜ್ಞಾನದ ದಾರಿ; ಕತ್ತಲಿನ ದಾರಿ; ಕೆಳಕ್ಕೆ, ತಮಸ್ಸಿನಾಳಕ್ಕೆ ತಳ್ಳುವ, ಅಸುರರ ದಾರಿ.

ಅವರ ಮಟ್ಟಿಗೆ ಎರಡೂ ಸತ್ಯದ ದಾರಿ ಆಗುವುದು ಸಾಧ್ಯವಿಲ್ಲ.

XLIV

ಮಾಯಾವಾದ ನಿಜವಾದರೆ ತತ್ವವಾದ ಸುಳ್ಳು.

ತತ್ವವಾದ ನಿಜವಾದರೆ ಮಾಯಾವಾದ ಸುಳ್ಳು.

ಅದು ದೈವವಾದರೆ ಇದು ಆಸುರ.

ಇದು ದೈವವಾದರೆ ಅದು ಆಸುರ.

ತ್ರಿವಿಕ್ರಮಪಂಡಿತರಿಗೆ ಖಚಿತವಾಗಿತ್ತು: ತತ್ವವಾದ ದಿಟದ ದಾರಿ; ಸಾತ್ವಿಕದ ದಾರಿ; ದೇವತೆಗಳ ದಾರಿ.

ಆದರಿಂದ ಅವರು ನಿಷ್ಠುರವಾಗಿ ಸಾರಿದರು: ಮಾಯಾವಾದ ಸಟೆಯ ದಾರಿ; ತಾಮಸರ ದಾರಿ; ಅಸುರರ ದಾರಿ : 'ಏಷ ಪಾಷಂಡವಾದಃ'. ಆ ದಾರಿ ಹಿಡಿದು ಪಾಷಂಡಿಗಳಾಗಬೇಡಿ.

ಆಚಾರ್ಯಮಧ್ವರ ತತ್ವವಾದದ ಸಿಂಹನಾದದೆದುರು ಈ ನರಿಗಳ ಊಳಿಗೆ ಮರುಳಾಗಬೇಡಿ.

ಇದು ಅವರ ಅಂತರಂಗದ ಕಳಕಳಿಯ ಅನ್ನಿಸಿಕೆ; ಹೃದಯದಾಳದ ಕರೆ.

ಅದಕೆಂದೆ ಅವರು ಇದನ್ನು ಸ್ತುತಿಯಲ್ಲಿ ದಾಖಲುಗೊಳಿಸಿದರು.

ಆದರೂ ಐಕ್ಯವಾದಿಗಳಿಗೆ ಈ ಸ್ತೋತ್ರ ನೋವು ತಂದದ್ದು ನಿಜ.

ಪರಿಣಾಮ : ಮಧ್ವರನ್ನು ನಿಂದಿಸುವುದಕ್ಕಾಗಿಯೆ ರಚನೆಗೊಂಡ 'ಈಶಾನಸ್ತುತಿ'ಯಂಥ ಸ್ತೋತ್ರದ ನಿರ್ಮಾಣ.

ಸತ್ಯದ ಪ್ರಾಸಾದಕ್ಕೆ ಬೈಗಳ ಮೆಟ್ಟಲು !

ಇದರಲ್ಲಿ ಅಸಂಗತವಾದದ್ದೇನೂ ಇಲ್ಲ. ತ್ರಿವಿಕ್ರಮಪಂಡಿತರ ನಿಷ್ಠುರವಾದ ಪ್ರಾಮಾಣಿಕತೆಗೆ ನಾವು ತಲೆದೂಗಬೇಕು.

ದಾಕ್ಷಿಣ್ಯದ ಸಮನ್ವಯವೂ ಒಂದು ಬಗೆಯ ಸ್ವ-ಪರವಂಚನೆಯೆ ಅಲ್ಲವೇ?

ತ್ರಿವಿಕ್ರಮಪಂಡಿತರದು ದಾಕ್ಷಿಣ್ಯದ ಧರ್ಮ ಅಲ್ಲ; ನಿಷ್ಠುರದ ಧರ್ಮ.

ಪ್ರಾಚೀನರಲ್ಲಿ ಎಲ್ಲರಲ್ಲು ಈ ತತ್ವನಿಷ್ಠುರತೆಯನ್ನು ಕಾಣುತ್ತೇವೆ.

ಶಂಕರರು ಕೂಡ ಪರಮತವನ್ನು ನಿರಾಕರಿಸುವಾಗ ತುಂಬ ಕಟುವಾದ ಭಾಷೆಯನ್ನೆ ಬಳಸುತ್ತಾರೆ.

ವೇದಾಂತದಲ್ಲಿ ಸಮನ್ವಯದ ಘ್ಯಾಶನ್ನು ತೀರ ಇತ್ತೀಚಿನದು.

ಆದ್ದರಿಂದ ನಾವೂ ಕೂಡ ಶ್ರೀತ್ರಿವಿಕ್ರಮಪಂಡಿತರ ಮಾರ್ಗದರ್ಶನದಲ್ಲಿ ಮುನ್ನಡೆಯಲು ಪ್ರಯತ್ನ ಪಡೋಣ.

ಈಗ ಶ್ರೀತ್ರಿವಿಕ್ರಮಪಂಡಿತರ ಜೀವನ ಚರಿತ್ರೆಯನ್ನು ಅವಲೋಕಿಸೋಣ -

## ಶ್ರೀತ್ರಿವಿಕ್ರಮಪಂಡಿತರ ಜನನ ಮತ್ತು ಬಾಲ್ಯ

ಸುಮಾರು ಎಂಟುನೂರು ವರ್ಷಗಳ ಹಿಂದಿನ ಕಥೆ ಇದು - ತುಳುನಾಡಿನಲ್ಲಿ 'ಪೆಜತ್ತಾಯ' ವಂಶ ಆಗ ಬಲು ಹೆಸರುವಾಸಿ. 'ಸುಬ್ರಹ್ಮಣ್ಯ' ಎಂಬ ಪಂಡಿತರು ಪೆಜತ್ತಾಯ ವಂಶದಲ್ಲೇ ಹೆಸರುವಾಸಿ. ಆಚಾರ, ವಿಚಾರ, ತಪಸ್ಸು, ಕವಿತ್ವ, ವಾಗ್ಮಿತ್ವ, ಋಜುಜೀವನ, ಸರಳ ವ್ಯಕ್ತಿತ್ವ ಎಲ್ಲ ಗುಣಗಳಲ್ಲಿಯೂ ಇವರದ್ದೇ ಮೊದಲ ಹೆಸರು.

ಬಹುಕಾಲ ಮಕ್ಕಳಾಗದ ಒಂದು ನ್ಯೂನತೆ ಈ ದಂಪತಿಗಳಲ್ಲಿ ಎದ್ದು ಕಾಣುತ್ತಿತ್ತು. ಮಕ್ಕಳು ಹುಟ್ಟಲೇ ಇಲ್ಲವೆಂದಲ್ಲ. ಅನೇಕರು ಹುಟ್ಟಿದರು, ಹುಟ್ಟಿದ ಕೂಡಲೇ ತೀರಿಕೊಳ್ಳುತ್ತಿದ್ದವು. ಉಪಾಯ ಕಾಣದ ಸುಬ್ರಹ್ಮಣ್ಯಪಂಡಿತರ ಹೆಂಡತಿ ಹರಿಹರರ ಸೇವೆಗೈದಳು. ಇವಳ ಪ್ರಾಮಾಣಿಕವಾದ ದಿಟ್ಟಸೇವೆಗೆ ಹರಿಹರರು ಅನುಗ್ರಹಿಸಿದರು. ವಂಶೋದ್ಧಾರಕ ಪುತ್ರನ ಜನನವಾಯಿತು. ಅವನಿಗೆ 'ತ್ರಿವಿಕ್ರಮ' ಎಂದು ನಾಮಕರಣ ಮಾಡಿದರು.

ತ್ರಿವಿಕ್ರಮನು ಬಾಲ್ಯದಲ್ಲಿಯೇ ಸಂಸ್ಕೃತ ವಾಙ್ಮಯಪ್ರಪಂಚವನ್ನು ಕರತಲಾಮಲಕ ಮಾಡಿಕೊಂಡ. ಇವನ ವಾಣಿಯೆಲ್ಲವೂ ಕಾವ್ಯಮಯವಾಗಿತ್ತು. ಇವನ ನಡೆ-ನುಡಿ ಎಲ್ಲವೂ ಅನ್ಯಾದೃಶವಾಗಿತ್ತು.

ತ್ರಿವಿಕ್ರಮನು ಹುಟ್ಟಿದ ಮೇಲೆ ಮತ್ತೊಬ್ಬ ಮಗ ಹುಟ್ಟಿದ. ಅವನ ಹೆಸರು ಶಂಕರ. ಅನಂತರ ಮತ್ತೊಬ್ಬ ಮಗಳು ಹುಟ್ಟಿದಳು. ಅವಳ ಹೆಸರು ಕಲ್ಯಾಣದೇವಿ.

ಈ ಮೂವರಲ್ಲಿ ತ್ರಿವಿಕ್ರಮನ ಪ್ರತಿಭೆ ಎಂಥ ವಿದ್ವಾಂಸರಿಗೂ ದಿಗ್ಭ್ರಮೆ ಮೂಡಿಸುವಂತಿತ್ತು. ಬಾಲ್ಯದಲ್ಲಿ ಒಮ್ಮೆ ತ್ರಿವಿಕ್ರಮನು ತನ್ನ ಗೋವಳರ ಜೊತೆ ಆಟವಾಡುತ್ತಿದ್ದ. ಹಸುಗಳೆಲ್ಲವೂ ಮನೆಗೆ ಹೊರಡುವ ಸಮಯವದು. ಸೂರ್ಯನು ಅಸ್ತಂಗತನಾಗುತ್ತಿರುವುದನ್ನು ಮರೆತು ಪುಟ್ಟ ಬಾಲಕರು ಆಟದಲ್ಲಿ ಮುಳುಗಿದ್ದರು. ಅದೇ ದಾರಿಯಲ್ಲಿ ಒಬ್ಬ ಪಥಿಕನು ನಡೆದು ಗ್ರಾಮಕ್ಕೆ ತೆರಳುತ್ತಿದ್ದ.

ಬಾಲಕನ ವರ್ಚಸ್ಸನ್ನು ಉತ್ಸಾಹದಲ್ಲಿ ಆಟವಾಡುತ್ತಿರುವ ಅವನ ಮುಖವನ್ನು ಕಂಡ ಆ ಪಥಿಕನು ಹತ್ತಿರ ಬಂದು ಪ್ರಶ್ನಿಸಿದ - "ಓ ಮಗುವೇ! ನಾನು ಮುಂದಿನ ಊರಿಗೆ ತೆರಳಬೇಕಾಗಿದೆ, ಎಷ್ಟು ದೂರವಿದೆ?". ಬಾಲಕನು ಆಟದಲ್ಲಿ ಮಗ್ನನಾಗಿದ್ದುಕೊಂಡೇ ಉದಾಸೀನದಿಂದ ಉತ್ತರಿಸಿದ - "ಆಟವಾಡುವ ನನ್ನನ್ನು ನೋಡು, ಆಕಾಶದಲ್ಲಿ ಮುಳುಗುವ ಸೂರ್ಯನನ್ನು ನೋಡು, ಈ ಹಸುಗಳನ್ನು ನೋಡು, ನೀನೇ ಅರ್ಥ ಮಾಡಿಕೋ".

ಬಾಲಕನ ಮಾತಿನ ಚಾತುರ್ಯವನ್ನು ಗಮನಿಸಿದ ಪಥಿಕ ಮಂತ್ರಮುಗ್ಧನಾದ. ಅರ್ಥವಾಗದಿದ್ದರೂ ಅರ್ಥವಾದಂತೆ ನಟಿಸುತ್ತಿದ್ದ. ಅವನ ಸ್ಥಿತಿಯನ್ನು ಅರ್ಥ ಮಾಡಿಕೊಂಡ ಬಾಲಕನು ಆಟವಾಡಿಕೊಂಡೇ ಮುಂದಿನ ಮಾತನ್ನು ಹೇಳಿದ -

"ಹೋ! ನಾನು ಹೇಳಿದ್ದು ನಿನಗೆ ಅರ್ಥವಾಗಲಿಲ್ಲವೇ? ನಾನು ಅನೇಕ ಪುಟ್ಟಬಾಲಕರ ಜೊತೆ ಆಟವಾಡುತ್ತಿರುವೆನು. ಸಮಯ ಸಾಯಂಕಾಲವಾಗಿದೆ. ಅನೇಕ ಹಸುಗಳು ಇಲ್ಲಿ ನೆರೆದಿವೆ. ಒಂದುವೇಳೆ ಗ್ರಾಮವು ದೂರದಲ್ಲಿದ್ದರೆ ನಾವು ಹೇಗೆ ಇಲ್ಲೇ ಇರುತ್ತಿದ್ದೆವು? (ಗ್ರಾಮವು ತುಂಬ ಹತ್ತಿರದಲ್ಲಿದೆ ಎಂಬುದು ಬಾಲಕನ ಮಾತಿನ ಆಂತರ್ಯ)".

ಪ್ರೌಢಮತಿಯಾಗಿದ್ದರೂ ಅರ್ಥವಾಗದ ಬಾಲಕನ ವಾಕ್‌ಚಾತುರ್ಯವನ್ನು ಗಮನಿಸಿ ಸಂತೋಷದಿಂದ ಬಾಲಕನನ್ನು ಅಪ್ಪಿ , ಹರಸಿ ಮುಂದೆ ಹೊರಟ.

ತ್ರಿವಿಕ್ರಮನ ಮತ್ತೊಂದು ಬಾಲ್ಯಲೀಲೆ ಬಲು ಪ್ರಸಿದ್ಧವಾಗಿದೆ. ಒಮ್ಮೆ ಪುಟ್ಟ ಬಾಲಕನಾದ ತ್ರಿವಿಕ್ರಮನು ಮನೆಯ ಮುಂದೆ ಆಟವಾಡುತ್ತಿದ್ದ. ಒಬ್ಬ ಬೌದ್ಧಭಿಕ್ಷು 'ಭಿಕ್ಷಾಂ ದೇಹಿ' ಎಂದು ಮನೆಯ ಮುಂದೆ ಆಗಮಿಸಿದ. ಆಗ ವಿಚಾರ ಮಾಡದೇ, ಕೂಡಲೇ ಶ್ಲೋಕವನ್ನು ರಚಿಸಿ ಮಗು ತ್ರಿವಿಕ್ರಮನು ಉತ್ತರಿಸಿದ -

ಏಕಃ ಕ್ಷಪಣಕ ಶಾಖಾಹರ್ತಾ
ಬಹವಃ ಕ್ಷಪಣಕ ಶಾಖಾದಾನಾಃ ।
ಯತ್ರ ಕ್ಷಪಣಕ ಬಹುಶಾಖಾದಾಃ
ತತ್ರ ಕ್ಷಪಣಕ ಶಾಖಾಶಾ ಕಾ ॥

'ಓ ಕ್ಷಪಣಕನೇ ! ಈ ಮನೆಯಲ್ಲಿ ಆಹಾರ ತರುವವನು ಒಬ್ಬ, ತಿನ್ನುವವರು ಬಹುಮಂದಿ. ಯಾವ ಮನೆಯಲ್ಲಿ ತಿನ್ನುವವರೇ ಬಹಳ ಮಂದಿ ಇರುವರೋ ಅಂತಹ ಮನೆಯಲ್ಲಿ ನೀನು ಭಿಕ್ಷೆಯ ಆಸೆಯನ್ನು ಏಕೆ ಮಾಡುವೆ?'

ಪ್ರಾಸಬದ್ಧವಾದ ಮಗುವಿನ ಕಾವ್ಯಸಾಮರ್ಥ್ಯವನ್ನು ಗಮನಿಸಿದ ಕ್ಷಪಣಕನು ಬಲು ಸಂತೋಷಪಟ್ಟು ಓಂತಿರುಗಿದ.

ತನ್ನ ಬಾಲ್ಯದಲ್ಲಿಯೇ 'ಉಷಾಹರಣ' ಎಂಬ ಮಹಾಕಾವ್ಯವನ್ನು ರಚಿಸಿದನು. ಎಂಥ ವಿದ್ವಾಂಸರೂ ಈ ಕಾವ್ಯದ ಮುಂದೆ ಸೋಲನ್ನೊಪ್ಪುವಂತಿತ್ತು. ಕೌಮಾರಾವಸ್ಥೆಯಲ್ಲಿಯೇ ತ್ರಿವಿಕ್ರಮನಿಗೆ 'ಕವಿಕುಲತಿಲಕ' ಎಂದು ಎಲ್ಲಾ ವಿದ್ವಾಂಸರು ಬಿರುದು ನೀಡಿದರು. ತ್ರಿವಿಕ್ರಮನು ಶ್ರೀಮತ್-ಕವಿಕುಲ-ತಿಲಕ-ತ್ರಿವಿಕ್ರಮಪಂಡಿತಾಚಾರ್ಯನಾಗಿ ಬೆಳೆದು ನಿಂತ.

## ಮಾಯಾವಾದ ಗೊಂದಲಗೋಪುರದಲ್ಲಿ ಶ್ರೀತ್ರಿವಿಕ್ರಮರು

ತ್ರಿವಿಕ್ರಮಪಂಡಿತಾಚಾರ್ಯರು ಅದ್ವೈತ ವೇದಾಂತದ ಒಂದೂಕಾಲು ಲಕ್ಷ ಗ್ರಂಥಗಳನ್ನು ತಳಸ್ಪರ್ಶಿಯಾಗಿ ಅಧ್ಯಯನ ಮಾಡಿದರು. ಇವರ ಮನೆತನ ಶಂಕರರ ಮಾಯಾವಾದವನ್ನು ಅನುಸರಿಸಿ ಬಂದದ್ದು. ತ್ರಿವಿಕ್ರಮಪಂಡಿತಾಚಾರ್ಯರಿಗೆ ಅಧ್ಯಯನ ಮಾಡುವಾಗಲೇ ಮಾಯಾವಾದವು ಪರಸ್ಪರ ವ್ಯಾಹತವಾದ ಗೊಂದಲಗೋಪುರ ಎಂಬ ಅರಿವಾಗಿತ್ತು. ಯಾವ ಸಮಸ್ಯೆಗಳಿಗೂ ಪರಿಪೂರ್ಣವಾದ ಉತ್ತರವನ್ನು ಕಾಣದಿದ್ದರೂ ತಾಳ್ಮೆಯನ್ನು ಕಳೆದುಕೊಳ್ಳದೇ ಮಾಯಾವಾದವನ್ನೇ ಅಭ್ಯಾಸ ಮಾಡಿದರು. ಮಾಯಾವಾದದಲ್ಲಿ ತಮಗೂ ಅನೇಕ ಗೊಂದಲವಿದ್ದರೂ ಉಳಿದೆಲ್ಲಾ ಪ್ರತಿವಾದಿಗಳಿಗೆ ಭಯಂಕರರಾಗಿ ಪ್ರಕಾಂಡ ಪಂಡಿತರಾದರು. ಭೂಮಂಡಲದಲ್ಲಿ ಎಲ್ಲೆಡೆಯೂ ಜಯಭೇರಿ ಬಾರಿಸಿದರು. ದಿಗ್ದಂತಿ ಮಾಯಾವಾದ ಪಂಡಿತರಲ್ಲಿ ಅಗ್ರೇಸರರಾಗಿ ಮೆರೆದರು.

ತ್ರಿವಿಕ್ರಮಪಂಡಿತರಿಗೆ ಮಾತ್ರ ಮಾಯಾವಾದದಲ್ಲಿ ಗೊಂದಲವಲ್ಲ, ಇವರ ತಂದೆಗೂ ಮಾಯಾವಾದ ಗೊಂದಲವು ಮನೆ ಮಾಡಿತ್ತು. ಒಮ್ಮೆ ಮಗನನ್ನು ಏಕಾಂತದಲ್ಲಿ ಕರೆದು ರಹಸ್ಯವಾಗಿ ಹೇಳಿದರು -

''ಮಗು ! ನಾವು ಅದ್ವೈತಮತದ ಅನುಯಾಯಿಗಳ ವಂಶದಲ್ಲಿ ಜನಿಸಿದ್ದೇವೆ. ನಿರ್ಗುಣಬ್ರಹ್ಮನನ್ನು ಉಪಾಸನೆ ಮಾಡುವುದು ನಮ್ಮ ಪರಂಪರೆಯಲ್ಲಿ ಬಂದ ಸದಾಚಾರವಾಗಿದೆ. ಆದರೆ, ವೇದಶಾಸ್ತ್ರಗಳನ್ನು ಪರಿಶೀಲನೆ ಮಾಡಿದಾಗ ನಿರ್ಗುಣೋಪಾಸನೆಯಿಂದ ಯಾವ ಪುರುಷಾರ್ಥವೂ ದೊರೆಯುವು-ದಿಲ್ಲವೆಂದು ನನಗೆ ಖಚಿತವಾಗಿದೆ. ಜ್ಞಾನಾನಂದಾದಿಗುಣಸ್ವರೂಪವಾದ ಮೋಕ್ಷವನ್ನು ನಾವು ಪಡೆಯಬೇಕೆಂದರೆ ಪರಮಾತ್ಮನನ್ನು ಜ್ಞಾನಾನಂದಾದಿಗುಣಪರಿಪೂರ್ಣನನ್ನಾಗಿಯೇ ಉಪಾಸನೆಗೈಯ-ಬೇಕು. ನಮಗೆ ನಿರ್ಗುಣಮೋಕ್ಷ ಬೇಡ. 'ಅಹಂ ಬ್ರಹ್ಮಾಸ್ಮಿ' ಎಂಬ ಉಪಾಸನೆ ಉದ್ಧಾರದ ದಾರಿಯಲ್ಲ. ನಾರಾಯಣನು ಸರ್ವೋತ್ತಮನೆಂಬ ಉಪಾಸನೆಯೇ ಉದ್ಧಾರದ ದಾರಿಯೆಂಬುದು ನನ್ನ ಮನದಾಳದ ಮಾತುಗಳು''.

ತಂದೆಯ ಮಾತಿನಿಂದ ತ್ರಿವಿಕ್ರಮಪಂಡಿತರು ಮತ್ತಷ್ಟು ಗೊಂದಲಗಳ ಸುರುಳಿಯಲ್ಲಿ ಸಿಲುಕಿದರು. ನಿರ್ಗುಣೋಪಾಸನೆಯ ಬಗ್ಗೆ ಎಲ್ಲಾ ಗ್ರಂಥಗಳನ್ನು ಅಧ್ಯಯನ ಮಾಡಿದರು. ಮಾಯಾವಾದಪಂಡಿತರ ಜೊತೆ ಸಾಕಷ್ಟು ಚರ್ಚಿಸಿದರು. ಬ್ರಹ್ಮಸೂತ್ರಗಳ ಮೇಲೆ ಹೊರಟ ಇಪ್ಪತ್ತೊಂದು ಭಾಷ್ಯಗಳನ್ನು ಕೂಲಂಕಷವಾಗಿ ಅಧ್ಯಯನಗೈದರು. ಆದರೆ, ಎಲ್ಲಾ ಭಾಷ್ಯಗಳಲ್ಲಿಯೂ ಆಮೂಲಾಗ್ರವಾಗಿ ದೋಷಗಳೇ ಹೆಮ್ಮರವಾಗಿ ಕಾಣಸುತ್ತಿದ್ದವು. ಪರಸ್ಪರ ವ್ಯಾಹತಿದೋಷವು ಎದ್ದು ಕಾಣಸುತ್ತಿತ್ತು. ಕಾಲಕ್ರಮದಲ್ಲಿ ಅದ್ವೈತಮತದ ವಿಷಯದಲ್ಲಿ ಅವಿಶ್ವಾಸವೇ ಹೆಚ್ಚಿತು. ಆದರೆ, ಪರಂಪರೆಯ ನಂಬಿಕೆಯ ಸೆಳೆತ ಬಿಡಲು ಹೇಗೆ ಸಾಧ್ಯ? ಒಂದೆಡೆ ನಂಬಿಕೆಯ ಸೆಳೆತ, ಮತ್ತೊಂದೆಡೆ ಅಂತಃಸಾಕ್ಷಿಯು ಖಚಿತಪಡಿಸುವ ವಿಚಾರ. ಹೀಗೆ ತರ್ಕ-ವಿತರ್ಕಗಳ ಗೊಂದಲದಲ್ಲಿ ಜೀವನ ಸಾಗಿಸುವಂತಿತ್ತು.

ಹೀಗಿರುವಾಗ, ಪಂಡಿತರು ಒಮ್ಮೆ ದೀರ್ಘವಾಗಿ ಆಲೋಚನೆ ಮಾಡಿದರು. ವೇದಗಳ ಅರ್ಥವನ್ನು 'ಇದಮಿತ್ಥಂ' ಎಂದು ನಿರ್ಣಯಿಸಲು ಬ್ರಹ್ಮಸೂತ್ರಗಳು ಹೊರಟಿವೆ. ಬ್ರಹ್ಮಸೂತ್ರಗಳನ್ನು ಸಾಮಾನ್ಯಜನರು ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಇದನ್ನು ಅರ್ಥಮಾಡಿಸುವುದಕ್ಕಾಗಿ ಅನೇಕ ವಿದ್ವಾಂಸರು ಭಾಷ್ಯಗಳನ್ನು ರಚಿಸಿರುವರು. ಆದರೆ ಯಾವ ಭಾಷ್ಯಕಾರರೂ ಕೂಡ ಬ್ರಹ್ಮಸೂತ್ರಗಳ ನಿಜಹೃದಯವನ್ನು ಅರ್ಥಮಾಡಿಕೊಂಡಂತೆ ಕಾಣಿಸುವುದಿಲ್ಲ. ಸ್ವಕಪೋಲಕಲ್ಪಿತವಾದ ವ್ಯರ್ಥವಿಚಾರಗಳನ್ನೇ ಬ್ರಹ್ಮಸೂತ್ರಗಳ ಮೇಲೆ ಹೇರಿರುವರು. ಸೂತ್ರಕಾರರಾದ ಶ್ರೀವೇದವ್ಯಾಸದೇವರ ಅಭಿಪ್ರಾಯ ಯಾವ ಭಾಷ್ಯಕಾರರಿಗೂ ಅರ್ಥವಾದಂತೆ ಕಾಣಿಸುತ್ತಿಲ್ಲ. ಇವುಗಳನ್ನು ನಂಬಿ ನಾವು ಅಧ್ಯಾತ್ಮಮಾರ್ಗದಲ್ಲಿ ಸಾಗುವುದು ಹೇಗೆ ಸಾಧ್ಯ ?

ನಮ್ಮ ಮನೆತನ ಶಾಂಕರ ಸಂಪ್ರದಾಯದಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದಿದೆ. ಮನೆತನದ ಸಂಪ್ರದಾಯ ಎಂಬ ಆಗ್ರಹವನ್ನು ತೊರೆದು ಮುಕ್ತ ಮನಸ್ಸಿನಿಂದ ವಿಚಾರಮಾಡಿದಾಗ ಮಾಯಾವಾದದಲ್ಲಿ ಹಾಗೂ ಇತರ ಭಾಷ್ಯಗಳ ವಿಚಾರದಲ್ಲಿ 'ಸ್ವವ್ಯಾಹತ' ಮಾತುಗಳೇ ಹೇರಳವಾಗಿ ತುಂಬಿಕೊಂಡಿವೆಯೆಂದು ಕಾಣಿಸುತ್ತಿದೆ. ಆದರೂ ನಮ್ಮ ವಂಶಪರಂಪರೆಯನ್ನು ಕಿತ್ತೊಗೆಯುವ ಇಚ್ಛೆ ನನಗಿಲ್ಲ. ಮತ್ತಷ್ಟು ಪ್ರಾಮಾಣಿಕನಾಗಿ ಮಾಯಾವಾದಸಿದ್ಧಾಂತದ ಅಂತರಾಳದಲ್ಲಿ ತೆರಳಿ ಅದರ ನಿಜಹೃದಯವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತೇನೆ. ಉಪನಿಷತ್ತುಗಳು ಬ್ರಹ್ಮನು ಜೀವರಿಗಿಂತ ಭಿನ್ನವೆಂದು ಹೇಳುತ್ತಿದೆಯೋ, ಅಥವಾ ಜೀವರೇ ಬ್ರಹ್ಮನಾಗಿದ್ದಾನೆಂದು ಹೇಳುತ್ತಿದೆಯೋ?

ಎಷ್ಟು ವಿಮರ್ಶಿಸಿದರೂ ಈ ವಿಚಾರವು ನಿಗೂಢವಾಗಿಯೇ ಉಳಿಯುತ್ತಿದೆ. ಆದರೆ, 'ನಾನೇ ಭಗವಂತ' ಎಂಬ ಉಪಾಸನೆ ಮಾಡಲು ಸಾಧ್ಯವಾಗುತ್ತಿಲ್ಲ. ಅಲ್ಪಜ್ಞರಾದ, ಅಲ್ಪಶಕ್ತರಾದ ನಾವು

ಸರ್ವಜ್ಞರೂ, ಸರ್ವಶಕ್ತರಾಗಲು ಹೇಗೆ ಸಾಧ್ಯ ? ಭಗವಂತನ ಉಪಾಸನೆಯಿಂದಲೇ ಮೋಕ್ಷವಾಗುತ್ತದೆ ಎಂದು ಶಾಸ್ತ್ರಗಳು ಸಾರುತ್ತಿವೆ. ಆ ಭಗವಂತನನ್ನು ನಿರಾಕಾರನೆಂದು ಉಪಾಸನೆ ಮಾಡಬೇಕೋ? ಸಾಕಾರನೆಂದು ಉಪಾಸನೆ ಮಾಡಬೇಕೋ? ನಿರ್ಗುಣನಾಗಿದ್ದಾನೆಂದು ಉಪಾಸನೆ ಮಾಡಬೇಕೋ? ಸಗುಣನೆಂದು ಉಪಾಸನೆ ಮಾಡಬೇಕೋ? ಅವನು ಸಚ್ಚಿದಾನಂದಸ್ವರೂಪನೋ ಅಥವಾ ಜೀವಸ್ವರೂಪನೋ?

ಎಲ್ಲಾ ವೇದ-ಶಾಸ್ತ್ರಗಳನ್ನು, ಇತಿಹಾಸ-ಪುರಾಣಗಳನ್ನು ಪರಿಶೀಲನೆ ಮಾಡಿದಾಗ ಭಗವಂತನು ಸಕಲಗುಣಪರಿಪೂರ್ಣನೆಂಬ ಉಪಾಸನೆಯೇ ಸಾಧುವಾಗಿದೆಯೆಂದು ಅನಿಸುತ್ತದೆ. ಆ ಭಗವಂತನೇ ನನಗೆ ಋಜುಮಾರ್ಗವನ್ನು ತೋರಿಸಿ ಉದ್ಧರಿಸಬೇಕು.

## ಅದ್ವೈತಿಗಳು ಶ್ರೀತ್ರಿವಿಕ್ರಮಪಂಡಿತರನ್ನು ಶರಣೆಂದರು

ಹೀಗೆ ಆಲೋಚನೆಯಲ್ಲಿ ಮುಳುಗಿರುವಾಗಲೇ ಶ್ರೀಮದಾಚಾರ್ಯರ ತತ್ತ್ವವಾದದ ಪ್ರಚಾರದ ವಿಚಾರ ಇವರ ಕಿವಿಗೆ ಬೀಳುತ್ತದೆ.

ಶ್ರೀಮದಾಚಾರ್ಯರು ಎಲ್ಲೆಡೆಯೂ ಸಂಚರಿಸಿ ಮಾಯಾವಾದಮತವನ್ನು ಖಂಡಿಸುತ್ತಾ ತತ್ತ್ವವಾದವನ್ನು ಸಮರ್ಥಿಸುತ್ತಿದ್ದರು. ಇದನ್ನು ಕಂಡು ದುರಾಗ್ರಹಿಗಳಾದ ಮಾಯಾವಾದಿಗಳಿಗೆ ಕಡುಕೋಪ ಬರುತ್ತಿತ್ತು. ಹೊಟ್ಟೆಯಲ್ಲಿ ಕಿಚ್ಚು ತುಂಬಿದ್ದರೂ ಆಚಾರ್ಯರ ಜೊತೆ ವಾದವೇದಿಕೆಯಲ್ಲಿ ಕುಳಿತಾಗ ದಿಗ್ಗಜಪಂಡಿತರು ಧೂಳೀಪಟವಾಗುತ್ತಿದ್ದರು. ಆಚಾರ್ಯಮಧ್ವರ ವಾಗ್ವೈಖರಿಗೆ ಮಾಯಾವಾದಿಗಳ ವಾದಾಟೋಪವೆಲ್ಲವೂ ಕುಸಿದು ಬೀಳುತ್ತಿತ್ತು. ಶ್ರೀಮದಾಚಾರ್ಯರ ಜೊತೆ ವಾದ ಮಾಡುವ ಧೈರ್ಯ, ಚಾತುರ್ಯ ಯಾವೊಬ್ಬ ಪಂಡಿತರಲ್ಲಿಯೂ ಕಾಣದಂತಾಯಿತು.

ಹೀಗಿರುವಾಗ ಎಲ್ಲಾ ಮಾಯಾವಾದದಿಗ್ಗಜ ಪಂಡಿತರು ತ್ರಿವಿಕ್ರಮಪಂಡಿತರಿಗೆ ದುಂಬಾಲು ಬಿದ್ದರು. ತ್ರಿವಿಕ್ರಮಪಂಡಿತರ ಅದ್ಭುತವಾದ ಶಾಸ್ತ್ರಪಾಂಡಿತ್ಯ, ವಾದವೈದುಷ್ಯ, ಗ್ರಂಥಸ್ಫೂರ್ತಿ, ತರ್ಕಕರ್ಕಶ ತೈಲಬುದ್ಧಿ, ಚಾಕಚಕ್ಯತೆ ಮೊದಲಾದ ಗುಣಗಳು ಎಲ್ಲಾ ಪಂಡಿತರಿಗೂ ಅಚ್ಚರಿ ಪಡಿಸಿತ್ತು. ಅವರ ಪ್ರತಿಭಾಪ್ರಭಾವವನ್ನು ತಿಳಿದ ಪಂಡಿತಾಚಾರ್ಯರು ಮಾತ್ರ ಮಧ್ವಾಚಾರ್ಯರ ಜೊತೆ ವಾದ ಮಾಡಿ ನಮ್ಮ ಮಾಯಾವಾದಮತವನ್ನು ಜೀವಂತವಾಗಿ ಉಳಿಸಲು ಸಾಧ್ಯ. ಹೀಗೆ ವಿಚಾರ ಮಾಡಿ ತ್ರಿವಿಕ್ರಮಪಂಡಿತರನ್ನು ಶರಣೆಂದರು, ಹುರಿದುಂಬಿಸಿದರು, ಬಿನ್ನವಿಸಿದರು.

'ಕವಿಕುಲತಿಲಕರೇ! ಕಾಲ ಹಾಳಾಯಿತು. ನಮ್ಮ ಅನಾದಿ ಪರಂಪರೆಯಿಂದ ಪ್ರಾಪ್ತವಾದ ಸನಾತನ ಆಚಾರ್ಯಶಂಕರರ ಅದ್ವೈತಸಿದ್ಧಾಂತ ನಶಿಸುತ್ತಿದೆ. ಒಬ್ಬ ಪ್ರಚಂಡ ವಾಗ್ಮಿ ಧಾಪಿಸಿ ಬರುತ್ತಿದ್ದಾನೆ. ನಮ್ಮ ಅಗಾಧ ನಂಬಿಕೆಯನ್ನು ಹಾಳುಗೈಯುತ್ತಿದ್ದಾನೆ. ನಿಮ್ಮಂಥ ಮಹಾಪಂಡಿತರೇ ಅವನನ್ನು ಸೋಲಿಸಲು ಸಾಧ್ಯ. ಅವನನ್ನು ಸೋಲಿಸಲು ಯಾರಿಗೂ ಸಾಧ್ಯವಾಗುತ್ತಿಲ್ಲ. ಈಗ ನಮ್ಮ ಮತವು ನಿಮ್ಮ ಕೈಯಲ್ಲಿ ಉಳಿದಿದೆ. ನೀವು ಗೆದ್ದರೆ ನಮ್ಮ ಮಾಯಾವಾದಮತ ಗೆದ್ದೀತು, ನೀವು ಸೋತರೆ ನಮ್ಮ ಮಾಯಾವಾದಮತ ಸೋತಿತು ಎಂದೇ ಅರ್ಥ. ವೇದದ ನದಿಗಳಲ್ಲಿ ಅವಗಾಹನೆ ಮಾಡಿ ಶಾಸ್ತ್ರಸಾಗರವನ್ನೇ ದಾಟುವ ಸಾಮರ್ಥ್ಯವುಳ್ಳ ಕಾವ್ಯಕಲಾಕುಶಲರಾದ ನೀವು ವಾದವೇದಿಕೆಗೆ ಆಗಮಿಸಬೇಕು. ಅದ್ವೈತ ಪರಂಪರೆಗೆ ಬಂದಿರುವ ದೊಡ್ಡ ಭಯದ ಅಪಾಯವನ್ನು ದೂರಮಾಡಿರಿ. ಅದ್ವೈತಮತದ ಗೌರವವನ್ನು ಉಳಿಸಿ ರಕ್ಷಿಸಿರಿ.''

ಹೀಗೆ ಶರಣಾಗತರಾದ ಎಲ್ಲ ವಿದ್ವಾಂಸರಿಗೂ ತ್ರಿವಿಕ್ರಮಪಂಡಿತರು ಅಭಯಪ್ರದಾನ ಮಾಡಿದರು. ಆದರೆ, ಮಧ್ವಾಚಾರ್ಯರನ್ನು ತಾನು ಸೋಲಿಸಿಬಿಡುವೆನೆಂಬ ಧೈರ್ಯ ಒಳಗಿರಲಿಲ್ಲ. ಆದರೂ, ಛಲ ಬಿಡದೆ ಮಧ್ವಾಚಾರ್ಯರ ಶಿಷ್ಯತ್ವವನ್ನು ವಹಿಸಿದ್ದ ಅನೇಕ ಪಂಡಿತರ ಜೊತೆ ವಾದ ಮಾಡಿ ಅವರನ್ನು ಸೋಲಿಸಿ ಸ್ವಲ್ಪ ಧೈರ್ಯ ತಂದುಕೊಂಡರು.

## ಯಾರಿಗೂ ತಿಳಿಯದಂತೆ ಸರ್ವಮೂಲಗ್ರಂಥವನ್ನು ಅಭ್ಯಾಸ ಮಾಡಿದರು

ಅಷ್ಟರಲ್ಲಿಯೇ ತಮ್ಮ ತಮ್ಮಂದಿರಾದ ಶಂಕರಪಂಡಿತರು ಮಧ್ವಾಚಾರ್ಯರ ಶಿಷ್ಯರಾಗಿ ದೀಕ್ಷೆ ಪಡೆದಿದ್ದರು. ತಮ್ಮ ಮನೆಯಲ್ಲಿಯೇ ತತ್ತ್ವವಾದವು ಪ್ರವೇಶ ಪಡೆದಿತ್ತು. ತಂಗಿಯಾದ ಕಲ್ಯಾಣಿದೇವಿಯೂ ಆಚಾರ್ಯಮಧ್ವರ ಸಿದ್ಧಾಂತಕ್ಕೆ ಶರಣಾಗಿದ್ದಳು. ಶಂಕರಪಂಡಿತರು ಶ್ರೀಮದಾಚಾರ್ಯರ ಶಿಷ್ಯರಷ್ಟೇ ಅಲ್ಲ ಅವರ ಗ್ರಂಥಾಲಯದ ಗ್ರಂಥಪಾಲಕರೂ ಆಗಿದ್ದರು. ತಮ್ಮ ಮನೆಯಲ್ಲಿ ಮಧ್ವಾಚಾರ್ಯರ ಗ್ರಂಥಗಳನ್ನು ಸಂಗ್ರಹಿಸಿಟ್ಟು ರಕ್ಷಿಸುತ್ತಿದ್ದರು.

ಎಲ್ಲರೂ ಮಲಗಿದ್ದಾಗ ರಾತ್ರಿಯ ಸಮಯದಲ್ಲಿ ತ್ರಿವಿಕ್ರಮಪಂಡಿತರು ನಿದ್ದೆಗೆಟ್ಟು ಆಚಾರ್ಯಮಧ್ವರ ಗ್ರಂಥಗಳ ಕಟ್ಟನ್ನು ಬಿಚ್ಚಿ ಓಲೆಗಳನ್ನು ಬಿಡಿಸಿ ಮೆಲ್ಲನೆ ಓದುತ್ತಿದ್ದರು. ಮನದಾಳದಲ್ಲಿ ಮನೆ ಮಾಡಿದ ಗೊಂದಲಗಳಿಗೆ ಅಂತಿಮವಾದ ಉತ್ತರಗಳು ದೊರೆಯುತ್ತಿದ್ದವು. ಜ್ಞಾನದ ನಿಧಿಯನ್ನೇ ಪಡೆದುಕೊಂಡರು. ಹತ್ತಾರು ವರ್ಷಗಳ ಕಾಲ ಹುಳದಂತೆ ತಮ್ಮನ್ನು ತಿನ್ನುತ್ತಿದ್ದ ಪ್ರಶ್ನೆಗಳಿಗೆ ಸಮಾಧಾನಗಳನ್ನು ಕಂಡು ತೃಪ್ತರಾದರು. ಪರಮಾತ್ಮನು ತನಗೆ ಮಾಡಿದ ದಿವ್ಯ ಅನುಗ್ರಹವೆಂದು

ಭಾವಿಸಿದರು. ಎಲ್ಲ ಪ್ರಶ್ನೆಗಳಿಗೂ ಸಮಂಜಸವಾದ ಪರಿಹಾರವನ್ನು ಮಧ್ವಾಚಾರ್ಯರ ಗ್ರಂಥಗಳಲ್ಲಿ ಕಂಡರು.

## ಆಚಾರ್ಯಮಧ್ವರ ಮೊದಲ ಸಂದರ್ಶನ

ಇಷ್ಟಾದರೂ ಒಮ್ಮೆಯೂ ಮಧ್ವಾಚಾರ್ಯರ ಸಂದರ್ಶನವಾಗಿರಲಿಲ್ಲ. ಎಲ್ಲರೆದುರು 'ಮಾಯಾವಾದವನ್ನು ತಾನು ಸಮರ್ಥವಾಗಿ ನಿಭಾಯಿಸುವೆ' ಎಂದು ಹೇಳಿಕೊಳ್ಳುತ್ತಿದ್ದರು. ಒಳಗೊಳಗೇ 'ಈ ಮಾಯಾವಾದದಲ್ಲಿ ಯಾವ ಪ್ರಶ್ನೆಗೂ ಉತ್ತರ ಸಿಗುವುದಿಲ್ಲ'ವೆಂದು ಹೇಳುತ್ತಿದ್ದರು.

ದೈವೇಚ್ಛೆಯಂತೆ ಒಮ್ಮೆ ಶ್ರೀಮದಾಚಾರ್ಯರು ಕಾಸರಗೂಡಿಗೆ ಆಗಮಿಸಿದರು. ಅಲ್ಲಿರುವ ವಿಷ್ಣುಮಂಗಲ ದೇವಾಲಯದಲ್ಲಿ ತಂಗಿದರು. ರಾಜನಾದ ಜಯಸಿಂಹನು ಮಧ್ವಾಚಾರ್ಯರನ್ನು ವೈಭವೋಪೇತವಾಗಿ ಸ್ವಾಗತ ಮಾಡಿ ತಮ್ಮ ನಾಡಿಗೆ ಬಂದು ಆಶೀರ್ವದಿಸುವಂತೆ ಬೇಡಿಕೊಂಡನು. ತ್ರಿವಿಕ್ರಮಪಂಡಿತರು ಜಯಸಿಂಹರಾಜನ ರಾಜಗುರುವಾಗಿದ್ದರು. ತಮ್ಮ ರಾಜಸ್ಥಾನಕ್ಕೆ ಮಧ್ವಾಚಾರ್ಯರು ಆಗಮಿಸುವ ವಿಚಾರವನ್ನು ತಿಳಿದ ಪಂಡಿತರು ತಮಗೆ ಇದೊಂದು ಸುವರ್ಣ ಅವಕಾಶವೆಂದು ಭಾವಿಸಿದರು. ಶ್ರೀಮದಾಚಾರ್ಯರ ದರ್ಶನಕ್ಕಾಗಿ ನೇರವಾಗಿ ವಿಷ್ಣುಮಂಗಲ ದೇವಾಲಯಕ್ಕೆ ತೆರಳಿದರು. ವೇದಾಂತಪ್ರವಚನದಲ್ಲಿ ಮಗ್ನರಾದ ಆಚಾರ್ಯರನ್ನು ಕಂಡಕೂಡಲೇ ಅವರ ದೇಹ ಬಾಗಿ ಅವರ ತಲೆ ಆಚಾರ್ಯಮಧ್ವರ ಕಾಲುಗಳಲ್ಲಿ ಪುಷ್ಪವಾಯಿತು.

ರಾಜಸಭೆಯಲ್ಲಿ ಶ್ರೀಮದಾಚಾರ್ಯರು ಸತ್ಯಲೋಕದಲ್ಲಿ ಬ್ರಹ್ಮದೇವರಂತೆ ರಾರಾಜಿಸುತ್ತಿದ್ದರು. ಜಯಸಿಂಹರಾಜನು ವಿನೀತನಾಗಿ ಕುಳಿತಿದ್ದ. ಕಬೆನಾಡಿಗೆ ಆಚಾರ್ಯರನ್ನು ಸ್ವಾಗತ ಮಾಡಿದ ಜಯಸಿಂಹನನ್ನು ಕಂಡು ಕವಿಕುಲತಿಲಕರು ತಮ್ಮ ಸಹಜ ಕವಿವಾಣಿಯಿಂದ ಹೀಗೆ ಹರಸಿದರು -

'ಸ್ವಃಸುಂದರೀಭುಜಲತಾಪರಿರಂಭಣೇ ಧೂಃ
ಪೌರಂದರೀ ಭವತಿ ಯಂ ಭಜತಾಂ ಭುಜಿಷ್ಯಾ ।
ಆನಂದತೀರ್ಥಭಗವತ್ಪದಪದ್ಮರೇಣುಃ ।
ಸ್ವಾನಂದದೋ ಭವತು ತೇ ಜಯಸಿಂಹಭೂಪ ॥''

'ಆಚಾರ್ಯಮಧ್ವರ ಪಾದಕಮಲಗಳ ಧೂಳುಗಳನ್ನು ಯಾರು ಮುಡಿಯುತ್ತಾನೋ ಅವನನ್ನು ಸ್ವರ್ಗದ ಅಪ್ಸರೆಯರು ದಾಸಿಯರಾಗಿ ಸೇವಿಸುತ್ತಾರೆ. ಇಂತ ಶ್ರೇಷ್ಠವಾದ ಮಧ್ವಾಚಾರ್ಯರ ಪಾದಕಮಲಗಳ ಧೂಳಿಗಳು ನಿನಗೆ ಅನಂತ ಆನಂದವನ್ನು ನೀಡಲಿ.'

L

'ಕವಿಕುಲತಿಲಕರೇ! ಕಾಲ ಹಾಳಾಯಿತು. ನಮ್ಮ ಅನಾದಿ ಪರಂಪರೆಯಿಂದ ಪ್ರಾಪ್ತವಾದ ಸನಾತನ ಆಚಾರ್ಯಶಂಕರರ ಅದ್ವೈತಸಿದ್ಧಾಂತ ನಶಿಸುತ್ತಿದೆ. ಒಬ್ಬ ಪ್ರಚಂಡ ವಾಗ್ಮಿ ಧಾವಿಸಿ ಬರುತ್ತಿದ್ದಾನೆ. ನಮ್ಮ ಅಗಾಧ ನಂಬಿಕೆಯನ್ನು ಹಾಳುಗೈಯುತ್ತಿದ್ದಾನೆ. ನಿಮ್ಮಂಥ ಮಹಾಪಂಡಿತರೇ ಅವನನ್ನು ಸೋಲಿಸಲು ಸಾಧ್ಯ. ಅವನನ್ನು ಸೋಲಿಸಲು ಯಾರಿಗೂ ಸಾಧ್ಯವಾಗುತ್ತಿಲ್ಲ. ಈಗ ನಮ್ಮ ಮತವು ನಿಮ್ಮ ಕೈಯಲ್ಲಿ ಉಳಿದಿದೆ. ನೀವು ಗೆದ್ದರೆ ನಮ್ಮ ಮಾಯಾವಾದಮತ ಗೆದ್ದೀತು, ನೀವು ಸೋತರೆ ನಮ್ಮ ಮಾಯಾವಾದಮತ ಸೋತಿತು ಎಂದೇ ಅರ್ಥ. ವೇದದ ನದಿಗಳಲ್ಲಿ ಅವಗಾಹನೆ ಮಾಡಿ ಶಾಸ್ತ್ರಸಾಗರವನ್ನೇ ದಾಟುವ ಸಾಮರ್ಥ್ಯವುಳ್ಳ ಕಾವ್ಯಕಲಾಕುಶಲರಾದ ನೀವು ವಾದವೇದಿಕೆಗೆ ಆಗಮಿಸಬೇಕು. ಅದ್ವೈತ ಪರಂಪರೆಗೆ ಬಂದಿರುವ ದೊಡ್ಡ ಭಯದ ಅಪಾಯವನ್ನು ದೂರಮಾಡಿರಿ. ಅದ್ವೈತಮತದ ಗೌರವವನ್ನು ಉಳಿಸಿ ರಕ್ಷಿಸಿರಿ.''

ಹೀಗೆ ಶರಣಾಗತರಾದ ಎಲ್ಲ ವಿದ್ವಾಂಸರಿಗೂ ತ್ರಿವಿಕ್ರಮಪಂಡಿತರು ಅಭಯಪ್ರದಾನ ಮಾಡಿದರು. ಆದರೆ, ಮಧ್ವಾಚಾರ್ಯರನ್ನು ತಾನು ಸೋಲಿಸಿಬಿಡುವೆನೆಂಬ ಧೈರ್ಯ ಒಳಗಿರಲಿಲ್ಲ. ಆದರೂ, ಛಲ ಬಿಡದೆ ಮಧ್ವಾಚಾರ್ಯರ ಶಿಷ್ಯತ್ವವನ್ನು ವಹಿಸಿದ್ದ ಅನೇಕ ಪಂಡಿತರ ಜೊತೆ ವಾದ ಮಾಡಿ ಅವರನ್ನು ಸೋಲಿಸಿ ಸ್ವಲ್ಪ ಧೈರ್ಯ ತಂದುಕೊಂಡರು.

## ಯಾರಿಗೂ ತಿಳಿಯದಂತೆ ಸರ್ವಮೂಲಗ್ರಂಥವನ್ನು ಅಭ್ಯಾಸ ಮಾಡಿದರು

ಅಷ್ಟರಲ್ಲಿಯೇ ತಮ್ಮ ತಮ್ಮಂದಿರಾದ ಶಂಕರಪಂಡಿತರು ಮಧ್ವಾಚಾರ್ಯರ ಶಿಷ್ಯರಾಗಿ ದೀಕ್ಷೆ ಪಡೆದಿದ್ದರು. ತಮ್ಮ ಮನೆಯಲ್ಲಿಯೇ ತತ್ತ್ವವಾದವು ಪ್ರವೇಶ ಪಡೆದಿತ್ತು. ತಂಗಿಯಾದ ಕಲ್ಯಾಣಿದೇವಿಯೂ ಆಚಾರ್ಯಮಧ್ವರ ಸಿದ್ಧಾಂತಕ್ಕೆ ಶರಣಾಗಿದ್ದಳು. ಶಂಕರಪಂಡಿತರು ಶ್ರೀಮದಾಚಾರ್ಯರ ಶಿಷ್ಯರಷ್ಟೇ ಅಲ್ಲ ಅವರ ಗ್ರಂಥಾಲಯದ ಗ್ರಂಥಪಾಲಕರೂ ಆಗಿದ್ದರು. ತಮ್ಮ ಮನೆಯಲ್ಲಿ ಮಧ್ವಾಚಾರ್ಯರ ಗ್ರಂಥಗಳನ್ನು ಸಂಗ್ರಹಿಸಿಟ್ಟು ರಕ್ಷಿಸುತ್ತಿದ್ದರು.

ಎಲ್ಲರೂ ಮಲಗಿದ್ದಾಗ ರಾತ್ರಿಯ ಸಮಯದಲ್ಲಿ ತ್ರಿವಿಕ್ರಮಪಂಡಿತರು ನಿದ್ದೆಗೆಟ್ಟು ಆಚಾರ್ಯಮಧ್ವರ ಗ್ರಂಥಗಳ ಕಟ್ಟನ್ನು ಬಿಚ್ಚಿ ಓಲೆಗಳನ್ನು ಬಿಡಿಸಿ ಮೆಲ್ಲನೆ ಓದುತ್ತಿದ್ದರು. ಮನದಾಳದಲ್ಲಿ ಮನೆ ಮಾಡಿದ ಗೊಂದಲಗಳಿಗೆ ಅಂತಿಮವಾದ ಉತ್ತರಗಳು ದೊರೆಯುತ್ತಿದ್ದವು. ಜ್ಞಾನದ ನಿಧಿಯನ್ನೇ ಪಡೆದುಕೊಂಡರು. ಹತ್ತಾರು ವರ್ಷಗಳ ಕಾಲ ಹುಳದಂತೆ ತಮ್ಮನ್ನು ತಿನ್ನುತ್ತಿದ್ದ ಪ್ರಶ್ನೆಗಳಿಗೆ ಸಮಾಧಾನಗಳನ್ನು ಕಂಡು ತೃಪ್ತರಾದರು. ಪರಮಾತ್ಮನು ತನಗೆ ಮಾಡಿದ ದಿವ್ಯ ಅನುಗ್ರಹವೆಂದು

ಭಾವಿಸಿದರು. ಎಲ್ಲ ಪ್ರಶ್ನೆಗಳಿಗೂ ಸಮಂಜಸವಾದ ಪರಿಹಾರವನ್ನು ಮಧ್ವಾಚಾರ್ಯರ ಗ್ರಂಥಗಳಲ್ಲಿ ಕಂಡರು.

## ಆಚಾರ್ಯಮಧ್ವರ ಮೊದಲ ಸಂದರ್ಶನ

ಇಷ್ಟಾದರೂ ಒಮ್ಮೆಯೂ ಮಧ್ವಾಚಾರ್ಯರ ಸಂದರ್ಶನವಾಗಿರಲಿಲ್ಲ. ಎಲ್ಲರೆದುರು 'ಮಾಯಾವಾದವನ್ನು ತಾನು ಸಮರ್ಥವಾಗಿ ನಿಭಾಯಿಸುವೆ' ಎಂದು ಹೇಳಿಕೊಳ್ಳುತ್ತಿದ್ದರು. ಒಳಗೊಳಗೇ 'ಈ ಮಾಯಾವಾದದಲ್ಲಿ ಯಾವ ಪ್ರಶ್ನೆಗೂ ಉತ್ತರ ಸಿಗುವುದಿಲ್ಲ'ವೆಂದು ಹೇಳುತ್ತಿದ್ದರು.

ದೈವೇಚ್ಛೆಯಂತೆ ಒಮ್ಮೆ ಶ್ರೀಮದಾಚಾರ್ಯರು ಕಾಸರಗೂಡಿಗೆ ಆಗಮಿಸಿದರು. ಅಲ್ಲಿರುವ ವಿಷ್ಣುಮಂಗಲ ದೇವಾಲಯದಲ್ಲಿ ತಂಗಿದರು. ರಾಜನಾದ ಜಯಸಿಂಹನು ಮಧ್ವಾಚಾರ್ಯರನ್ನು ವೈಭವೋಪೇತವಾಗಿ ಸ್ವಾಗತ ಮಾಡಿ ತಮ್ಮ ನಾಡಿಗೆ ಬಂದು ಆಶೀರ್ವದಿಸುವಂತೆ ಬೇಡಿಕೊಂಡನು. ತ್ರಿವಿಕ್ರಮಪಂಡಿತರು ಜಯಸಿಂಹರಾಜನ ರಾಜಗುರುವಾಗಿದ್ದರು. ತಮ್ಮ ರಾಜಸ್ಥಾನಕ್ಕೆ ಮಧ್ವಾಚಾರ್ಯರು ಆಗಮಿಸುವ ವಿಚಾರವನ್ನು ತಿಳಿದ ಪಂಡಿತರು ತಮಗೆ ಇದೊಂದು ಸುವರ್ಣ ಅವಕಾಶವೆಂದು ಭಾವಿಸಿದರು. ಶ್ರೀಮದಾಚಾರ್ಯರ ದರ್ಶನಕ್ಕಾಗಿ ನೇರವಾಗಿ ವಿಷ್ಣುಮಂಗಲ ದೇವಾಲಯಕ್ಕೆ ತೆರಳಿದರು. ವೇದಾಂತಪ್ರವಚನದಲ್ಲಿ ಮಗ್ನರಾದ ಆಚಾರ್ಯರನ್ನು ಕಂಡಕೂಡಲೇ ಅವರ ದೇಹ ಬಾಗಿ ಅವರ ತಲೆ ಆಚಾರ್ಯಮಧ್ವರ ಕಾಲುಗಳಲ್ಲಿ ಪುಷ್ಪವಾಯಿತು.

ರಾಜಸಭೆಯಲ್ಲಿ ಶ್ರೀಮದಾಚಾರ್ಯರು ಸತ್ಯಲೋಕದಲ್ಲಿ ಬ್ರಹ್ಮದೇವರಂತೆ ರಾರಾಜಿಸುತ್ತಿದ್ದರು. ಜಯಸಿಂಹರಾಜನು ವಿನೀತನಾಗಿ ಕುಳಿತಿದ್ದ. ಕಬೆನಾಡಿಗೆ ಆಚಾರ್ಯರನ್ನು ಸ್ವಾಗತ ಮಾಡಿದ ಜಯಸಿಂಹನನ್ನು ಕಂಡು ಕವಿಕುಲತಿಲಕರು ತಮ್ಮ ಸಹಜ ಕವಿವಾಣಿಯಿಂದ ಹೀಗೆ ಹರಸಿದರು -

'ಸ್ವಃಸುಂದರೀಭುಜಲತಾಪರಿರಂಭಣೇ ಧೂಃ
ಪೌರಂದರೀ ಭವತಿ ಯಂ ಭಜತಾಂ ಭುಜಿಷ್ಯಾ ।
ಆನಂದತೀರ್ಥಭಗವತ್ಪದಪದ್ಮರೇಣುಃ ।
ಸ್ವಾನಂದದೋ ಭವತು ತೇ ಜಯಸಿಂಹಭೂಪ ॥''

'ಆಚಾರ್ಯಮಧ್ವರ ಪಾದಕಮಲಗಳ ಧೂಳುಗಳನ್ನು ಯಾರು ಮುಡಿಯುತ್ತಾನೋ ಅವನನ್ನು ಸ್ವರ್ಗದ ಅಪ್ಸರೆಯರು ದಾಸಿಯರಾಗಿ ಸೇವಿಸುತ್ತಾರೆ. ಇಂತ ಶ್ರೇಷ್ಠವಾದ ಮಧ್ವಾಚಾರ್ಯರ ಪಾದಕಮಲಗಳ ಧೂಳಿಗಳು ನಿನಗೆ ಅನಂತ ಆನಂದವನ್ನು ನೀಡಲಿ.'

ರ್ ಆಶೀರ್ವಾದ ಪದ್ಯದಲ್ಲಿರುವ ಸಂಸ್ಕೃತದ ಸೊಗಸು, ಸೌಂದರ್ಯ, ನಾದ-ಮಾಧುರ್ಯಗಳನ್ನು ಕೇಳಿದ ಸಭಿಕರೆಲ್ಲರೂ ಸ್ತಬ್ಧಚಿತ್ತರಾದರು, ವಿಸ್ಮಿತಭೂತರಾದರು, ಕೆಲವರು 'ಪ್ರಥಮ ಸಂದರ್ಶನವೇ ಹೀಗಾಯಿತಲ್ಲಾ !' ಎಂದರು. ಸಾಮಾನ್ಯರು ಕೌತುಕಸಮುದ್ರದಲ್ಲಿ ಮುಳುಗಿದರು.

ಮಧ್ವಾಚಾರ್ಯರನ್ನು ಭೇಟಿ ಮಾಡಿದ ಮೇಲೆ ಕೆಲವು ದಿನಗಳು ಉರುಳಿದವು. ಆಚಾರ್ಯರ ಪ್ರತಿಯೊಂದು ಚಲನ-ವಲನಗಳನ್ನು ಕುತೂಹಲದಿಂದ ಗಮನಿಸುತ್ತಿದ್ದರು. ಆಚಾರ್ಯರ ಕೀರ್ತಿಯನ್ನು ಕೇಳಿದ ಮಾತ್ರಕ್ಕೆ ಖುಷಿಪಟ್ಟ ಪಂಡಿತರಿಗೆ, ಆಚಾರ್ಯರ ದರ್ಶನದಿಂದ ಮತ್ತಷ್ಟು ಸಂತೋಷವಾಗಿತ್ತು. ಅವರ ಚಲನವಲನಗಳನ್ನು ಮತ್ತು ವ್ಯಕ್ತಿತ್ವವನ್ನು ಕೂಲಂಕಷವಾಗಿ ಗಮನಿಸಿದಾಗ ಅವರ ಆನಂದಕ್ಕೆ ಪಾರವೇ ಇರಲಿಲ್ಲ. ಇಷ್ಟಾದರೂ ಒಂದೇ ಬಾರಿ ತಮ್ಮ ಅದ್ವೈತಮತವನ್ನು ಬಿಟ್ಟು ಆಚಾರ್ಯರ ಮತವನ್ನು ಸ್ವೀಕರಿಸಿರಲಿಲ್ಲ. ನಿಜವಾದ ವಿವೇಕಿಯು ವಿಚಾರ ಮಾಡದೇ ಏನನ್ನೂ ಒಪ್ಪುವುದಿಲ್ಲ ತಾನೇ? 'ನನು ವಿಮೃಷ್ಯ ಕೃತೀ ಕುರುತೇಽಖಿಲಂ' ಒಮ್ಮೆ ಮಧ್ವಾಚಾರ್ಯರು 'ಕುಟಿ' ಎಂಬ ಊರಿಗೆ ಬಂದರು. ಅಲ್ಲಿ ಆಚಾರ್ಯರು ಬ್ರಹ್ಮಸೂತ್ರಭಾಷ್ಯದ ಪ್ರವಚನವನ್ನು ನಡೆಸುತ್ತಿದ್ದರು.

## ಆಚಾರ್ಯಮಧ್ವರ ಜೊತೆ ತ್ರಿವಿಕ್ರಮರ-ವಾಕ್-ಯುದ್ಧ

ಸಭೆಯಲ್ಲಿ ದಿಗ್ದಂತಿ ಪಂಡಿತರು ನೆರೆದಿದ್ದರು. ಸಾಮಾನ್ಯ ಜನರೂ ತುಂಬಿದ್ದರು. ತ್ರಿವಿಕ್ರಮ ಪಂಡಿತರು ಆಚಾರ್ಯರ ಉಪನ್ಯಾಸಗಳನ್ನು ಶ್ರದ್ಧೆಯಿಂದ ಕೇಳತೊಡಗಿದರು. ಪ್ರತಿವಾದಿ ಪಂಡಿತರಾಗಿ ಆಚಾರ್ಯರನ್ನು ಎದುರಿಸುವ ಸನ್ನಾಹದಲ್ಲಿ ನಿಂತರು. ಮಾಯಾವಾದದ ಮಹಾರಥವನ್ನು ಏರಿ ತರ್ಕಾಯುಧವನ್ನು ಹಿಡಿದು ತಮ್ಮ ಮೇಲೆ ಎರಗುವ ಸಿದ್ಧತೆಯಲ್ಲಿದ್ದ ತ್ರಿವಿಕ್ರಮರ ಪರಾಕ್ರಮಗಳನ್ನು ಕಂಡು, ಶಾಸ್ತ್ರದ ಸಾಣೆ ಹಿಡಿದು ಹರಿತವಾದ ಆಚಾರ್ಯರ ವಾಣಿಯು ಬಾಣದಂತೆ ಹೊರಬಿದ್ದಿತು. ಬ್ರಹ್ಮಸೂತ್ರಗಳೇ ರಥ, ವೇದಮಂತ್ರಗಳೇ ಗಜ, ಸ್ಮೃತಿವಚನಗಳು ಕುದುರೆ, ನಿರ್ದುಷ್ಟತರ್ಕಗಳು ಸೈನಿಕರು, ಹೀಗೆ ಚತುರಂಗಬಲ ಸಹಿತರಾಗಿ ಆಚಾರ್ಯರ ತತ್ವನಿರ್ಣಾಯಕವಾದ ಯುದ್ಧವು ಪ್ರಾರಂಭವಾಯಿತು. ಗಂಗಾಪ್ರವಾಹದಂತೆ ನಿರರ್ಗಳವಾಗಿ ಆಚಾರ್ಯರ ವಾಗ್‌ಭಾರತಿ ಹರಿದಳು. ಪ್ರತಿ ಮಾತುಗಳಲ್ಲಿಯೂ ವೇದಮಂತ್ರಗಳ ಸಮಾಖ್ಯೆ, ವೇದೋಪನಿಷತ್ತುಗಳ ಸಂವಾದ, ಯುಕ್ತಿಯ ಬೆಂಬಲವನ್ನು ಉದಾಹರಿಸುತ್ತಿದ್ದರು. ಮೇಘಗಂಭೀರವಾದ ಧ್ವನಿಯಿಂದ ಸುಸ್ಪಷ್ಟವಾದ ಶೈಲಿಯಲ್ಲಿ ವೇದ-ವೇದಾಂತಗಳ ರಹಸ್ಯಗಳನ್ನು ತಿಳಿಸುತ್ತಾ ಸಾಗಿದ ಬ್ರಹ್ಮಮೀಮಾಂಸಾಶಾಸ್ತ್ರದ ಮೇಲಿನ ಆಚಾರ್ಯರ ಅಮೋಘ ಪ್ರವಚನವನ್ನು ಕೇಳಿ, ತ್ರಿವಿಕ್ರಮಪಂಡಿತರು ತಬ್ಬಿಬ್ಬಾದರು.

ನಾರಾಯಣನು ಗುಣಪರಿಪೂರ್ಣನು, ವೇದ ಪ್ರತಿಪಾದ್ಯನಾದ ಬ್ರಹ್ಮನೆಂದರೆ ಅವನೊಬ್ಬನೇ. ಈ ಪ್ರಪಂಚದ ಸೃಷ್ಟ್ಯಾದ್ಯಷ್ಟಕರ್ತೃ ಅವನ ಬಿಟ್ಟು ಬೇರಾರೂ ಅಲ್ಲ. ನಿರ್ದೋಷವಾದ ವಸ್ತುವೆಂದರೆ ಅವನು ಮಾತ್ರ. ಸರ್ವಜ್ಞನಾದವನು ಅವನೊಬ್ಬನೇ ಇದನ್ನು ಆಚಾರ್ಯರು ಯುಕ್ತಿಯಿಂದ ಸಾಧಿಸಿದರು. ಅನೇಕ ವೇದಪುರಾವೆಗಳನ್ನು ದೃಢಪಡಿಸಿದರು. ಇದಕ್ಕೆ ವಿರುದ್ಧವಾದ ಸಾಂಖ್ಯಮತ, ವೈಶೇಷಿಕಮತ, ನೈಯಾಯಿಕಮತ, ಭಾಸ್ಕರಮತ, ಬೌದ್ಧಮತ, ಅದ್ವೈತಮತಗಳೆಲ್ಲವನ್ನೂ ಮೊದಲು ಅನುವಾದ ಮಾಡಿ, ಅನಂತರ ಅವುಗಳನ್ನು ಅಕ್ಷರಶಃ ಖಂಡನೆ ಮಾಡಿದರು. ಶ್ರುತಿ-ಸ್ಮೃತಿಗಳಿಂದ ಸಿದ್ಧವಾದ ವೇದಮತವನ್ನು ಉಪಪತ್ತಿ ಸಹಿತವಾಗಿ ನಿರ್ಣಯಿಸಿಬಿಟ್ಟರು. ಉದ್ಧಾರದ ಮಾರ್ಗವನ್ನು ಬಯಸಿದ ಸಾಧಕನು ವಿಷ್ಣುವನ್ನೇ ಉಪಾಸನೆ ಮಾಡಬೇಕು. ಅವನನ್ನೇ ಒಲಿಸಿಕೊಳ್ಳಬೇಕು. ಅವನ ಪ್ರಸಾದಕ್ಕಾಗಿ ಹಾತೊರೆಯಬೇಕು. ಅಂಥವನಿಗೆ ಮಾತ್ರ ನಿಜವಾದ ಮೋಕ್ಷ ಕಟ್ಟಿಟ್ಟಬುತ್ತಿ. ಅವನ ಅಪರೋಕ್ಷಜ್ಞಾನದಿಂದ ನಿತ್ಯಸುಖಸ್ವರೂಪವಾದ ಮೋಕ್ಷವು ದೊರೆಯುವುದರಲ್ಲಿ ಸಂಶಯವಿಲ್ಲ. ಆದಕ್ಕಾಗಿ ಶ್ರೀಹರಿಯನ್ನು ಸರ್ವೋತ್ತಮ ಎಂದು ಅನುದಿನವೂ, ಅನುಕಾಲವೂ ಭಕ್ತಿಯಿಂದ ಧ್ಯಾನಗೈಯಬೇಕು.

ಆಚಾರ್ಯಮಧ್ವರ ಪಾಂಡಿತ್ಯಪೂರ್ಣವಾದ ಯುಕ್ತಿಯಿಂದ ಉಪೋದ್ಬಲಿತವಾದ ಪ್ರಮಾಣಗಳಿಂದ ಪರಿಬೃಂಹಿತವಾದ ಉಪನ್ಯಾಸವನ್ನು ಕೇಳಿದ ಸಭಿಕರು ಆನಂದಸಾಗರದಲ್ಲಿ ಮುಳುಗಿದರು. ತ್ರಿವಿಕ್ರಮಪಂಡಿತರು ಕಂಗಾಲಾದರು. ಜ್ಞಾನದ ಉಚ್ಚಮಟ್ಟವನ್ನು ಅದರ ಆಳ, ಅಗಲಗಳನ್ನು ಕಂಡು ಆಶ್ಚರ್ಯಸಾಗರದಲ್ಲಿ ಮುಳುಗಿದರು. ಆದರೂ ತಮ್ಮ ಅದ್ವೈತಮತವನ್ನು ಕೂಡಲೇ ಬಿಡಲಿಲ್ಲ. ಆಚಾರ್ಯರ ಮೇಲೆ ಅದ್ವೈತಮತವೆಂಬ ಬಿಲ್ಲಿಗೆ ಯುಕ್ತಿಯ ಬಾಣವನ್ನು ಹೂಡಿಬಿಟ್ಟರು. ತ್ರಿವಿಕ್ರಮಪಂಡಿತರ ವಾದಮಂಡನೆಯನ್ನು ಕೇಳಿ ಮಂದಹಾಸದಿಂದ ಉತ್ತರಿಸಿದರು ಮಧ್ವರು.

ಆಚಾರ್ಯಮಧ್ವರ ಜೊತೆ ಪಂಡಿತಾಚಾರ್ಯರ ವಾದಸರಣಿ ಮುಂದುವರೆಯಿತು. ತ್ರಿವಿಕ್ರಮಪಂಡಿತರೇನು ಸಾಮಾನ್ಯರೇ ? ಯಾರ ಮುಂದೆ ನಿಂತು ಪಂಡಿತ ಮಂಡಳಿಯು ಬಾಯಿ ತೆಗೆಯಲೂ ಕೂಡ ಬೆಚ್ಚಿ ಬೀಳುತ್ತಿತ್ತೋ, ಅಂಥ ಆಚಾರ್ಯರ ಜೊತೆ ತ್ರಿವಿಕ್ರಮಪಂಡಿತರು ಪ್ರಚಂಡವಾಗಿಯೇ ವಾದಗೈದರು.

ಇವರೀರ್ವರ ವಾದಸರಣಿಯನ್ನು ಕಂಡು ಪಂಡಿತಮಂಡಳಿಯು ಉಸಿರು ಬಿಗಿಹಿಡಿದಿತ್ತು. ದಿನಗಳೇ ಉರುಳಿದವು. ಆಚಾರ್ಯರು ಉತ್ತರಿಸುವುದನ್ನು ಬಿಡಲಿಲ್ಲ. ಪಂಡಿತರು ಪ್ರಶ್ನಿಸುವುದನ್ನೂ ಬಿಡಲಿಲ್ಲ. ಪಂಡಿತಾಚಾರ್ಯರ ತರ್ಕದ ಮಳೆಸುರಿಸುವ ಕಾರ್ಮೋಡವನ್ನು ಮುಗುಳ್ನಗೆಯಿಂದಲೇ

ಆಚಾರ್ಯರು ಬರಿದಾಗಿಸಿದರು. ವೇದಗಳ ವಿಷಯದಲ್ಲಿ ಚರ್ಚೆಯಾಯಿತು. ಎಲ್ಲಾ ಮತಗಳ ವಿಷಯದಲ್ಲಿಯೂ ಚರ್ಚೆ ನಡೆಯಿತು. ಆಚಾರ್ಯರ ಪ್ರತಿಯೊಂದು ಉತ್ತರಗಳು ಮನನಾಟಿದವು. ಪಂಡಿತರ ಮನಸ್ಸಿನ ಮೂಲೆಮೂಲೆಗಳಲ್ಲಿ ಅಂಟಿರುವ ಗೊಂದಲಗಳೆಲ್ಲವೂ ಪರಿಹಾರವಾದವು. ಹೀಗೆ ಏಳು ಅಥವಾ ಎಂಟು ದಿವಸಗಳ ಕಾಲ ಅನೂಚಾನವಾಗಿ ವಾದ-ವಿವಾದವು ನಡೆಯಿತು. ಅಂತಿಮವಾಗಿ ಕವಿಕುಲತಿಲಕರಾದ ಪಂಡಿತರು ನಿರುತ್ತರಾದರು. ಜ್ಞಾನಮೇರುವಿಗೆ ಶರಣೆಂದರು. ಸಾವಿರಾರು ಜನರು ಸೇರಿರುವ ಸಭೆಯಲ್ಲಿ ಪ್ರಾಂಜಲಿಗಳಾಗಿ ಸೋಲನ್ನು ಒಪ್ಪಿದರು. ಸೋಲಿನಲ್ಲೇ ಸುಖವನ್ನು ಕಂಡು ಸಚೇತನರಾದ ನಿಜಧೀರರೆಂದರೆ ಇವರು ಮಾತ್ರ. ಪಂಡಿತರ ಕಣ್ಣುಗಳಿಂದ ಆನಂದಬಾಷ್ಪಗಳು ಉದುರಿದವು. ಕಂಠ ಬಿಗಿಯಿತು. ಮನಸ್ಸಿನಲ್ಲಿದ್ದ ಸಂದೇಹಗಳ ಕಗ್ಗಂಟುಗಳು ತಾವಾಗಿಯೇ ಬಿಚ್ಚಿಕೊಂಡಿದ್ದವು. ಭಕ್ತಿಯ ಭಾರದಿಂದ ಆಚಾರ್ಯಮಧ್ವರ ಕಾಲ್ಕಮಲಗಳಲ್ಲಿ ಸಾಷ್ಟಾಂಗ ನಮಿಸಿದರು.

## ಸೋತು ಗೆದ್ದರು ತ್ರಿವಿಕ್ರಮರು

ಗುರುಗಳೇ ! ನನ್ನ ವಾದಚಾಪಲ್ಯವನ್ನು ಕ್ಷಮಿಸಿರಿ. ಜನ್ಮ-ಜನ್ಮದಲ್ಲಿಯೂ ತಮ್ಮ ಪಾದಪದ್ಮಗಳ ಧೂಳಿನ ದಾಸ್ಯವನ್ನು ನೀಡಿ, ಉದ್ಧಾರ ಮಾಡಿರಿ. ಯಾವ ಕ್ಷಣದಲ್ಲಿಯೂ ನನ್ನನ್ನು ಬಿಡಬೇಡಿ.

ನೆರೆದಿರುವ ಜನಸ್ತೋಮವು ಶ್ರೀಮದಾಚಾರ್ಯರಿಗೆ ಜಯಘೋಷ ಮಾಡಿತು.

ಅನಂತರ ಪಂಡಿತಾಚಾರ್ಯರು ಶ್ರೀಮದಾಚಾರ್ಯರ ಅಂತರಂಗದ ಶಿಷ್ಯರಾಗಿ ವೈಷ್ಣವ ದೀಕ್ಷೆಯನ್ನು ಪಡೆದರು. 'ಅಷ್ಯಸ್ತೇಹಂ' ಎಂದು ಶಾಂತಿಪಾಠ ಹಾಕಿ, ಆಚಾರ್ಯರ ಮುಖಕಮಲದಿಂದ ಬ್ರಹ್ಮಸೂತ್ರಭಾಷ್ಯವನ್ನು ಶ್ರವಣ ಮಾಡಿ ಧನ್ಯರಾದರು. ಆಚಾರ್ಯರ ಗ್ರಂಥಗಳನ್ನು ತಿಳಿದಷ್ಟು, ತಿಳಿದಷ್ಟು ಜ್ಞಾನಸಮುದ್ರವನ್ನೇ ಆಚಮನ ಮಾಡಿದ ಅನುಭವವಾಗುತ್ತಿತ್ತು.

ಒಮ್ಮೆ ತ್ರಿವಿಕ್ರಮಪಂಡಿತರಿಗೆ ಶ್ರೀಮದಾಚಾರ್ಯರು ಸೂತ್ರಭಾಷ್ಯಕ್ಕೆ ವ್ಯಾಖ್ಯಾನ ಮಾಡಲು ಅಪ್ಪಣೆ ಮಾಡಿದರು. ಏನಾಶ್ಚರ್ಯ ! ಹಲವು ಸನ್ಯಾಸಿ ಶಿಷ್ಯರಿದ್ದರೂ, ಒಬ್ಬ ಗೃಹಸ್ಥನಿಗೆ ಟೀಕೆಯನ್ನು ಬರೆಯಬೇಕು ಎಂದು ಆಜ್ಞಾಪಿಸುವುದು ಕಲ್ಪನಾತೀತ ವಿಚಾರವಲ್ಲವೇ? ಶ್ರೀಮದಾಚಾರ್ಯರ ಅಪ್ಪಣೆಯಂತೆ ತ್ರಿವಿಕ್ರಮಪಂಡಿತರು ಸೂತ್ರಭಾಷ್ಯಕ್ಕೆ 'ತತ್ವಪ್ರದೀಪ' ಎಂಬ ಟೀಕೆಯನ್ನು ರಚಿಸಿದರು. ವೇದಾಂತ ಪ್ರಪಂಚದಲ್ಲಿ ಸರ್ವಮಾನ್ಯವಾಗಿ ಉತ್ಕೃಷ್ಟವಾದ ಸ್ಥಾನವನ್ನು ಈ ಗ್ರಂಥವು ಪಡೆಯಿತು.

ಶ್ರೀಮದಾಚಾರ್ಯರ ಸಾಕ್ಷಾತ್ ಮುಖಕಮಲದಿಂದ ಭಾಷ್ಯದ ನಿಜವಾದ ಅರ್ಥವನ್ನು ಶ್ರವಣ ಮಾಡಿ, ಅದನ್ನೇ ತಮ್ಮ ಟೀಕೆಯಲ್ಲಿ ವ್ಯಕ್ತ ಪಡಿಸಿದ 'ತತ್ವಪ್ರದೀಪ' ಗ್ರಂಥವನ್ನು ಓದಿದವನೇ ನಿಜವಾಗಿ ಧನ್ಯನು.

## ಶ್ರೀತ್ರಿವಿಕ್ರಮರ ಬಾಯಿಯಲ್ಲಿ ಸರ್ವಮೂಲಗ್ರಂಥಗಳ ಪ್ರಶಂಸೆ

ಹೀಗೆ ಆಚಾರ್ಯ ಮಧ್ವರ ಶಿಷ್ಯತ್ವವನ್ನು ವಹಿಸಿದ ಪಂಡಿತಾಚಾರ್ಯರು ಮಧ್ವಾಚಾರ್ಯರ ಎಲ್ಲಾ ಗ್ರಂಥಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದರು. ಒಂದೊಂದು ಗ್ರಂಥವೂ ಕೂಡ ಅನರ್ಘ್ಯರತ್ನವೆಂದರಿತರು. ಶ್ರೀಮದಾಚಾರ್ಯರ ಸರ್ವಮೂಲಗ್ರಂಥಗಳನ್ನು ಮುಕ್ತಕಂಠದಿಂದ ಸಭೆಯಲ್ಲಿ ಪ್ರಶಂಸೆ ಮಾಡುತ್ತಿದ್ದ ಸೊಬಗು ಅನ್ಯಾದೃಶವಾಗಿತ್ತು-

ಶ್ರೀಮದಾಚಾರ್ಯರು ಬರೆದ ಬ್ರಹ್ಮಸೂತ್ರದಭಾಷ್ಯ ರತ್ನಾಕರವಿದ್ದಂತೆ. ಆ ಸಾಗರದ ಆಳದಲ್ಲಿ ಇಳಿದು ಎಷ್ಟು ಮಣಿಗಳನ್ನು ಹೊರತೆಗೆದರೂ ಅವು ಮುಗಿಯುವುದೇ ಇಲ್ಲ. ಅಸಂಖ್ಯೇಯ ಯುಕ್ತಿರತ್ನಗಳ ಆಗರವೇ ಈ ಗ್ರಂಥ.

ಪ್ರಿಯರಾದ ದೇವತೆಗಳು ತಮ್ಮ ಮನೆಗಳಲ್ಲಿ ಪತ್ನಿಯರನ್ನು ಆನಂದಗೊಳಿಸುವರು. ಹಾಗೆಯೇ ತಾವು ಉಪನಿಷತ್ತುಗಳ ಭಾಷ್ಯಗಳಲ್ಲಿ ಯೋಗ್ಯವಾದ ಮತ್ತು ಇಷ್ಟವಾದ ಅರ್ಥಗಳನ್ನು ಹೇಳಿದ್ದೀರಿ. ಈ ಅರ್ಥಗಳಿಂದ ಎಲ್ಲಾ ಉಪನಿಷತ್ತುಗಳ ಅರ್ಥಗಳು ಸ್ಪಷ್ಟವಾಗಿ ಓದುವವರಿಗೆ ಸುಲಭವಾಗಿ ತಿಳಿಯುವುವು.

ತಾವು ರಚಿಸಿದ ಗೀತಾತಾತ್ಪರ್ಯ ಮತ್ತು ಗೀತಾಭಾಷ್ಯಗಳು ಸೂರ್ಯಚಂದ್ರರಂತೆ ಇವೆ. ಆ ಸೂರ್ಯಚಂದ್ರರು ದ್ವೈತಸಿದ್ಧಾಂತ ತತ್ವಗಳನ್ನೆಲ್ಲ ಸ್ಪಷ್ಟಗೊಳಿಸುತ್ತವೆ.

ತಮ್ಮ ಮನಸ್ಸು ಮಂದರಪರ್ವತದಂತಿರುವುದು. ತಾವು ಅದರಿಂದ ಕ್ಷೀರಸಮುದ್ರದಂತಿರುವಭಾರತ ಭಾಗವತಾದಿ ಗ್ರಂಥಗಳನ್ನು ಚೆನ್ನಾಗಿ ವಿಮರ್ಶಿಸಿ ಮಹಾಭಾರತತಾತ್ಪರ್ಯನಿರ್ಣಯವೆಂಬ ಗ್ರಂಥವನ್ನು ರಚಿಸಿದ್ದೀರಿ. ಇದು ಅಮೃತದಂತಿರುವುದು. ಇದನ್ನು ಪ್ರತಿಯೊಬ್ಬ ಸಜ್ಜನನೂ ಅಮೃತವನ್ನು ಕುಡಿಯುವಂತೆ ಶ್ರವಣಮನನಾದಿಗಳಿಂದ ಸೇವಿಸುವನು.

ಪ್ರಪಂಚದಲ್ಲಿ ಆಯಾ ದೇಶದ ಭಾಷೆಗಳನ್ನರಿಯದ ದಾರಿಹೋಕರಿಗೆ ಒಳ್ಳೆ ಸ್ನೇಹಿತನು ದಾರಿಯನ್ನು ತೋರಿಸುವನು. ಅದರಂತೆ ತಾವು ರಚಿಸಿದ ಭಾಗವತ ತಾತ್ಪರ್ಯನಿರ್ಣಯವು ಸ್ನೇಹಿತನಂತಿರುವುದು. ಅದು ಗುಹ್ಯ, ದರ್ಶನ, ಸಮಾಧಿ ಎಂಬ ಮೂರು ಭಾಷೆಗಳನ್ನು ತಿಳಿಯದ, ಆದರೂ,

ಪುರಾಣಗಳಿಂದಲೇ ತತ್ವಜ್ಞಾನವನ್ನರಿಯಲು ಬಯಸುವ ಸಜ್ಜನರಿಗೆ ಪುರಾಣಗಳ ಅರ್ಥವನ್ನು ಸರಿಯಾಗಿ ತಿಳಿಸುವುದು.

ದೇವತೆಗಳಿಂದಾಶ್ರಯಿಸಲ್ಪಟ್ಟ ನೆರಳುಳ್ಳ ಮತ್ತೊಂದು ಕಲ್ಪವೃಕ್ಷದಂತಿರುವ ತಮ್ಮ ತಂತ್ರಸಾರವನ್ನು ಆಶ್ರಯಿಸಿದವನು ತನ್ನೆಲ್ಲಾ ಇಷ್ಟಾರ್ಥಗಳನ್ನೂ ಪಡೆಯುವನು.

ದಯಾಶಾಲಿ ಗುರುಗಳೇ ! ತಾವು ಕಥಾಲಕ್ಷಣ ಮತ್ತು ಪ್ರಮಾಣಲಕ್ಷಣ ಎಂಬ ಎರಡು ಗ್ರಂಥಗಳನ್ನು ರಚಿಸಿದ್ದೀರಿ. ಈ ಗ್ರಂಥಗಳಲ್ಲಿ ಕಥಾಲಕ್ಷಣವು ಜನರಿಗೆ ವಾದ, ಜಲ್ಪ, ವಿತಂಡ ಎಂಬ ಮೂರು ಕಥಾಮಾರ್ಗಗಳನ್ನೂ, ಪ್ರಮಾಣಲಕ್ಷಣವು ಪ್ರತ್ಯಕ್ಷ, ಅನುಮಾನ, ಆಗಮ ಎಂಬ ಮೂರು ಪ್ರಮಾಣಮಾರ್ಗಗಳನ್ನೂ ನೋಡಿ ತಿಳಿದುಕೊಳ್ಳುವುದಕ್ಕೆ ಎರಡು ಕಣ್ಣುಗಳಂತಿವೆ.

ಕುಂತೀತನಯನಾದ ಅರ್ಜುನನು ಯಾರ ಸಹಾಯವೂ ಇಲ್ಲದೆ ವಿರಾಟನ ಪಟ್ಟಣದಲ್ಲಿ ಗೋಗ್ರಹಣದಲ್ಲಿಯೂ, ನಿವಾತಕವಚರ ಮೊದಲಾದ ದಾನವರ ಸಂಹಾರ ಕಾಲದಲ್ಲಿಯೂ ಒಬ್ಬನೇ ಶತ್ರುಗಳನ್ನು ಸೋಲಿಸಿ ಲೋಕ ಪೂಜ್ಯನಾಗಿರುವನು. ಹಾಗೆಯೇ ತಾವು ರಚಿಸಿದ ವಿಷ್ಣುತತ್ವ-ನಿರ್ಣಯವೆಂಬ ಗ್ರಂಥವು ಇತರ ಗ್ರಂಥಗಳ ಸಹಾಯವಿಲ್ಲದೆ ಪರಾಪರತತ್ವಗಳನ್ನು ತಿಳಿಸುತ್ತ ವಿರುದ್ಧಮತೀಯರ ಸಿದ್ಧಾಂತವನ್ನು ಖಂಡಿಸುವುದು. ಆದ್ದರಿಂದ ಈ ಗ್ರಂಥವು ಪ್ರತಿಯೊಬ್ಬರ ಗೌರವಕ್ಕೆ ಪಾತ್ರವಾಗಿರುವುದು.

ತಾವು ತತ್ವೋದ್ಯೋತ ಮೊದಲಾದ ಪ್ರಕರಣಗಳನ್ನು ರಚಿಸಿದ್ದೀರಿ. ಗಾಳಿಯಿಂದ ಜ್ವಲಿಸಿದ ಬೆಂಕಿಕಿಡಿಗಳಂತಿರುವ ಅವು ಬಹಳ ಸಣ್ಣವಾಗಿದ್ದರೂ ಒಣಗಿದ ಕಾಡಿನಂತಿರುವ ಪ್ರತಿವಾದಿಗಳನ್ನು ಖಂಡಿಸುವುವು.

ಹಿಂದೆ ಮಣ್ಣನ್ನು ತಿಂದಿರುವಿ ಎಂದು ಗದರಿಸಿದ ಯಶೋದೆಗೆ ಶ್ರೀಕೃಷ್ಣನು ತನ್ನ ಸಾಮಾರ್ಥ್ಯವನ್ನು ತಿಳಿಸಲು ಬಾಯಿಯನ್ನು ತೆರೆದು ಒಳಗಿರುವ ಸಮಸ್ತ ಬ್ರಹ್ಮಾಂಡವನ್ನು ತೋರಿಸಿದ್ದಾನೆ. ಹಾಗೆಯೇ ತಾವು ತಮ್ಮ ಸಾಮರ್ಥ್ಯವನ್ನು ಜನರಿಗೆ ತಿಳಿಸಲೋಸುಗ 'ಅಣುಭಾಷ್ಯ' ಎಂಬ ಗ್ರಂಥವನ್ನು ರಚಿಸಿ ದ್ವೈತಸಿದ್ಧಾಂತದ ಸಕಲ ಪ್ರಮೇಯವನ್ನು ಸ್ಪಷ್ಟಪಡಿಸಿದ್ದೀರಿ.

ಪೂಜ್ಯರೇ ! ತಾವು ಲೋಕಪ್ರಸಿದ್ಧವಾದ ಅದ್ಭುತ ಕವಿತೆಯನ್ನು ತೋರಿಸುತ್ತಾ, ಮಹಾಭಾರತ-ತಾತ್ಪರ್ಯ(ಯಮಕಭಾರತ)ವೆಂಬ ಗ್ರಂಥವನ್ನು ರಚಿಸಿದ್ದೀರಿ. ಇದರಲ್ಲಿ ಭಾರತದ ಕಥೆಯು ಸಂಕ್ಷೇಪವಾಗಿರುವುದು. ಇದು ಸಮಸ್ತಜನರಿಗೆ ಆಶ್ಚರ್ಯವನ್ನುಂಟು ಮಾಡುತ್ತಿರುವುದು.

ಸಮುದ್ರದಲ್ಲಿ ಅಡಗಿರುವ ರತ್ನಗಳನ್ನು ಎಣಿಸಲು ಸಾಧ್ಯವಿಲ್ಲ. ಹಾಗೆಯೇ ತಾವು ರಚಿಸಿರುವ ಸುಭಾಷಿತ, ಸ್ತೋತ್ರ, ಸದಾಚಾರಸ್ಮೃತಿ, ಜಯಂತೀನಿರ್ಣಯ ಮೊದಲಾದ ಉತ್ತಮ ಗ್ರಂಥಗಳನ್ನು ಎಣಿಸಲು ಸಾಧ್ಯವಿಲ್ಲ.

ತಾವು ರಚಿಸಿದ ಗ್ರಂಥಗಳು ಸಣ್ಣದಾಗಿದ್ದರೂ ಮಿತಿಯಿಲ್ಲದ ಅರ್ಥಗಳನ್ನು ಕೊಡುವುವು. ಸಜ್ಜನರು ಇವುಗಳನ್ನು ಬೇಡಿದವುಗಳನ್ನೆಲ್ಲ ನೀಡುವ ದೇವತೆಗಳ ಚಿಂತಾಮಣಿರತ್ನಗಳ ಹಾಗೆ ಇವೆಯೆಂದು ತಿಳಿಯುತ್ತಾರೆ. ಇವು ಸಣ್ಣಗ್ರಂಥಗಳೆಂದು ಹಾಸ್ಯಮಾಡುವ ಅಲ್ಪಜನರನ್ನು ಇವರು ಎಷ್ಟು ದಡ್ಡರೆಂದು ಸಜ್ಜನರು ಹಾಸ್ಯಮಾಡುತ್ತಾರೆ.

ಗುರುಗಳೇ! ನಾವು ಮಂದಬುದ್ಧಿಯವರು. ನಮಗೆ ತಾವು ಈಗಾಗಲೇ ರಚಿಸಿರುವ ಪ್ರೌಢಗ್ರಂಥಗಳಿಂದ ಯುಕ್ತಿಗಳನ್ನು ಆರಿಸಿ ತೆಗೆಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ನಮಗಾಗಿ ತಾವು ಸ್ಪಷ್ಟವಾಗಿ ತಿಳಿಯುವ ಯುಕ್ತಿಗಳುಳ್ಳ ಹೊಸದೊಂದು ಗ್ರಂಥವನ್ನು ರಚಿಸಿಕೊಡಿ.

ತ್ರಿವಿಕ್ರಮಪಂಡಿತಾಚಾರ್ಯರು ಹೀಗೆ ಪ್ರಾರ್ಥಿಸಿದ ಕೂಡಲೇ ಮಧ್ವಾಚಾರ್ಯರು 'ಅನುವ್ಯಾಖ್ಯಾನ'ವೆಂಬ ಉತ್ತಮ ಗ್ರಂಥವನ್ನು ರಚಿಸಿದರು. ಈ ಗ್ರಂಥವು ಸಜ್ಜನರಿಗೆ ಅಮೃತವನ್ನು ಕುಡಿದಂತೆ ಆನಂದವನ್ನುಂಟುಮಾಡುತ್ತಿದ್ದವು. ದುಷ್ಟವಾದಿಗಳ ಅಹಂಕಾರವನ್ನು ವಜ್ರಾಯುಧವು ಬೆಟ್ಟಗಳ ರೆಕ್ಕೆಗಳನ್ನು ಕತ್ತರಿಸಿದಂತೆ ಖಂಡಿಸುತ್ತಿದ್ದಿತು. ಮಾಯಾವಾದಿಗಳನ್ನು ಸೂರ್ಯನು ತನ್ನ ಕಾಂತಿಯಿಂದ ಕತ್ತಲೆಯನ್ನು ದೂರಮಾಡುವಂತೆ ನಿವಾರಿಸುತ್ತಿದ್ದಿತು.

ಶ್ರೀಮದಾಚಾರ್ಯರು ಏಕಕಾಲದಲ್ಲಿ ನಾಕು ಅಧ್ಯಾಯವುಳ್ಳ ಅನುವ್ಯಾಖ್ಯಾನವನ್ನು ರಚಿಸಿದರು. ಸಮರ್ಥರಾದ ಅವರು ಆ ಗ್ರಂಥವನ್ನು ಜಾಣರಾದ ನಾಕು ಮಂದಿ ಶಿಷ್ಯರಿಂದ ಎಡೆಬಿಡದೆ ಒಂದೇ ಸಲ ಅನಾಯಾಸವಾಗಿ ಬರೆಯಿಸಿದರು.

ಶ್ರೀಮದಾಚಾರ್ಯರು ಆ ಅನುವ್ಯಾಖ್ಯಾನದಲ್ಲಿ ಯೋಗ್ಯವಾದ ಯುಕ್ತಿಗಳನ್ನು ಉದಾಹರಿಸಿದ್ದರು. ಅವು ಪಂಡಿತೋತ್ತಮರಿಂದಲೂ ವಿವರಿಸಲು ಸಾಧ್ಯವಾಗಿರಲಿಲ್ಲ. ಆದ್ದರಿಂದ ಅವರು ತಾವೇ ಆ ಯುಕ್ತಿಗಳನ್ನು ಸ್ಪಷ್ಟವಾಗಿ ವಿವರಿಸುವ ನ್ಯಾಯವಿವರಣವೆಂಬ ಮತ್ತೊಂದು ಗ್ರಂಥವನ್ನು ರಚಿಸಿದರು.

## ಶ್ರೀತ್ರಿವಿಕ್ರಮಪಂಡಿತರ ಯೋಗ್ಯತೆ ಊಹಿಸಲಸಾಧ್ಯ

ನಿಜವಾಗಿಯೂ ಪಂಡಿತಾಚಾರ್ಯರೇ ಧನ್ಯರು. ಶ್ರೀಮದಾಚಾರ್ಯರ ಏಕಾಂತಶಿಷ್ಯರಾಗಿ ಮಾಧ್ವಸಮುದಾಯಕ್ಕೆ ಆದರ್ಶಪುರುಷರಾಗಿ ಕಾಣಿಸಿಕೊಂಡ ಇವರಿಗೆ ನಾವೆಲ್ಲರೂ ಚಿರಋಣಿಗಳಾಗಿರಬೇಕು. ಪರಂಪರಾಗತ ಹೇಳಿಕೆ ಎಂಬ ಪ್ರಮಾಣದಿಂದ ಶ್ರೀಜಯತೀರ್ಥರು ದೇವೇಂದ್ರನ

ಅಂಶಸಂಭೂತರೆಂದು ಹೇಗೆ ಪ್ರಸಿದ್ಧವಿದೆಯೋ, ಅದರಂತೆ ತ್ರಿವಿಕ್ರಮಪಂಡಿತರು ರುದ್ರಾಂಶ-ಸಂಭೂತರೆಂಬ ಪ್ರಸಿದ್ಧಿಯಿದೆ. ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯತ್ವವನ್ನು ವಹಿಸಿ, ಅವರ ಭಾಷ್ಯಗಳಿಗೆ ಟೀಕೆಯನ್ನು ಬರೆದು ಶ್ರೀಮದಾಚಾರ್ಯರನ್ನು ಮೆಚ್ಚಿಸಬೇಕೆಂದರೆ ಸಾಮಾನ್ಯ-ದೇವತೆಗಳಿಗೂ ಸಾಧ್ಯವಾಗದ ಮಾತು. ಆದ್ದರಿಂದಲೂ ಇವರು ರುದ್ರಾಂಶಸಂಭೂತರೆಂದು ತಿಳಿಯುತ್ತದೆ. ಮೂಲರೂಪದಲ್ಲಿ ವಾಯುದೇವರ ಅನಂತರದ ಕಕ್ಷೆಯಲ್ಲಿ ರುದ್ರದೇವರು ವಾಯುದೇವರ ಶಿಷ್ಯರಾಗಿದ್ದಾರೆ. ಅವತಾರದಲ್ಲಿಯೂ ಶ್ರೀಮದಾಚಾರ್ಯರ ಶಿಷ್ಯತ್ವವನ್ನು ವಹಿಸಿ ಮೆಚ್ಚುಗೆಗೆ ಪಾತ್ರರಾಗಿದ್ದರಿಂದ ಇವರು ರುದ್ರಾಂಶಸಂಭೂತರಾಗಿದ್ದಾರೆಂದು ಜ್ಞಾನಿಗಳು ತಿಳಿಸುತ್ತಾರೆ.

## ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಕೃತಿಗಳು

ಉಷಾಹರಣ - ೮ ಸರ್ಗಗಳುಳ್ಳ ಅಪೂರ್ವವಾದ ಮಹಾಕಾವ್ಯ. ಶ್ರೀಸುಮತೀಂದ್ರತೀರ್ಥ-ಶ್ರೀಪಾದರು ಇದಕ್ಕೆ ಸಂಸ್ಕೃತ ಟೀಕೆಯನ್ನು ಬರೆದಿರುವರು.

ವಾಯುಸ್ತುತಿ - ಅವತಾರತ್ರಯಗಳನ್ನು ಬಣ್ಣಿಸುವ ಸ್ತೋತ್ರ-ಮಂತ್ರ.

ಮಧ್ವಾಷ್ಟಕ - (ಇದನ್ನು ರಚಿಸಿದವರು ತ್ರಿವಿಕ್ರಮಪಂಡಿತರು ಹೌದೋ, ಅಲ್ಲವೋ? ಎಂಬ ವಿಷಯದಲ್ಲಿ ಸಂಶಯವಿದೆ ಎನ್ನುತ್ತಾರೆ ಹಿರಿಯರು.)

ತತ್ವಪ್ರದೀಪ - ಶ್ರೀಮದಾಚಾರ್ಯರ ಆಜ್ಞೆಯಂತೆ ಬ್ರಹ್ಮಸೂತ್ರಭಾಷ್ಯಕ್ಕೆ ಬರೆದಿರುವ ಟೀಕೆ.

ತಿಥಿನಿರ್ಣಯ - ಶ್ರೀವಾದಿರಾಜರು ಏಕಾದಶಿನಿರ್ಣಯಗ್ರಂಥದಲ್ಲಿ ತ್ರಿವಿಕ್ರಮಪಂಡಿತರು ರಚನೆ ಮಾಡಿದ ತಿಥಿನಿರ್ಣಯವನ್ನು ಉಲ್ಲೇಖ ಮಾಡುತ್ತಾರೆ. ಆದರೆ ಇದು ಇಂದು ಉಪಲಬ್ಧವಿಲ್ಲ.

ವಿಷ್ಣುಸ್ತುತಿ - ಭಗವಂತನನ್ನು ಆಪಾದಮೌಳಿಪರ್ಯಂತ ವರ್ಣನೆ ಮಾಡುವ ಕೃತಿ ಧ್ಯಾನ ಮಾಡುವವರಿಗೆ ಅತ್ಯಂತ ಅನುಕೂಲವಾದ ಶ್ರೇಷ್ಠವಾದ ಸ್ತುತಿರತ್ನ.

## ಶ್ರೀತ್ರಿವಿಕ್ರಮಪಂಡಿತರ ಮನೆತನ

ಶಂಕರಪಂಡಿತರಿಗೆ ಮೂವರು ಮಕ್ಕಳು. ತ್ರಿವಿಕ್ರಮ, ಶಂಕರ, ಕಲ್ಯಾಣದೇವಿ.

ತ್ರಿವಿಕ್ರಮಪಂಡಿತರಿಗೆ ಮೂವರು ಗಂಡುಮಕ್ಕಳು. ಕೊನೆಯವರೇ ಮಧ್ವವಿಜಯವನ್ನು ರಚನೆ ಮಾಡಿದ ಶ್ರೀನಾರಾಯಣಪಂಡಿತಾಚಾರ್ಯರು.

ನಾರಾಯಣಪಂಡಿತಾಚಾರ್ಯರ ಮಗ ವಾಮನಪಂಡಿತಾಚಾರ್ಯರು.

## ಮೂರುಮಂದಿ ಟೀಕಾರಾಯರ ಅನುಗ್ರಹ ಎಂದೆಂದೂ ಇರಲಿ

ಶ್ರೀಪದ್ಮನಾಭತೀರ್ಥರು, ಶ್ರೀಮಟ್ಟೀಕಾರಾಯರು ಹಾಗೂ ಶ್ರೀ ತ್ರಿವಿಕ್ರಮಪಂಡಿತಾಚಾರ್ಯರು ಬರೆದಿರುವ ಮೂರು ಟೀಕೆಗಳನ್ನು ಓದುವ ಅವಕಾಶ ದೊರೆತಿರುವುದು ನಮ್ಮೆಲ್ಲರ ಮಹಾಸೌಭಾಗ್ಯ. ಮೂರುಮಂದಿ ಟೀಕಾರಾಯರ ಅನುಗ್ರಹವಿಲ್ಲದೇ ಒಂದಕ್ಷರವನ್ನೂ ಕೂಡ ತಿಳಿಯಲು, ಓದಲು, ಬರೆಯಲು ಯಾರಿಂದಲೂ ಸಾಧ್ಯವಿಲ್ಲ. ಇವರ ಅನುಗ್ರಹವಿದ್ದರೆ ಮಾತ್ರ ತತ್ವಜ್ಞಾನವನ್ನು ಪಡೆದು ಬ್ರಹ್ಮಸೂತ್ರಭಾಷ್ಯದ ಅಧ್ಯಯನವನ್ನು ಮಾಡಿ, ವಾಯುದೇವರ ಕೃಪೆಗೆ ನಾವು ಪಾತ್ರರಾಗಬಹುದು.

ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ
ಮನೋ ವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ।
ಸುರಾದ್ಯಾ ನರಾಂತಾ ಮುಕುಂದಪ್ರಸಾದಾತ್
ಇಮಂ ಮೋಕ್ಷಮೇತೇ ಭಜಂತೇ ಸದೇತಿ ॥

ಸರ್ವಜೀವರಲ್ಲಿ ಉತ್ತಮರಾದ ಶ್ರೀಮದಾನಂದತೀರ್ಥರ ಬ್ರಹ್ಮಸೂತ್ರಭಾಷ್ಯದ ಅರ್ಥವನ್ನು ತಮ್ಮ ಶಕ್ತ್ಯಾನುಸಾರ ಯಾವಾಗಲೂ ಮನಸ್ಸಿನಿಂದ ಮನನ ಮಾಡುವ ಮತ್ತು ಮಾತಿನಿಂದ ಹೇಳುವ ದೇವತೆ ಮೊದಲ್ಗೊಂಡು ಮನುಷ್ಯರೇ ಕೊನೆಯಾಗುವಳ್ಳವರೆಲ್ಲರೂ ಆ ವೈಕುಂಠಾಧಿಪನ ಅನುಗ್ರಹದಿಂದ ಯಾವಾಗಲೂ ಮೋಕ್ಷವನ್ನು ಪಡೆಯುವರು.

ಹೀಗೆ ಕವಿಕುಲತಿಲಕ ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಸುಪುತ್ರರಾದ ಶ್ರೀಮನ್ನಾರಾಯಣ ಪಂಡಿತಾಚಾರ್ಯರು ಮಧ್ವವಿಜಯದ ಹನ್ನೊಂದನೆಯ ಸರ್ಗದಲ್ಲಿ ಬ್ರಹ್ಮಸೂತ್ರಭಾಷ್ಯದ ಮಹಿಮೆಯನ್ನು ಕೊಂಡಾಡಿದ್ದಾರೆ. ಮನುಷ್ಯೋತ್ತಮರು ಮಾತ್ರವಲ್ಲದೇ ದೇವಾನುದೇವತೆಗಳೂ ಕೂಡ ಬ್ರಹ್ಮಸೂತ್ರಭಾಷ್ಯವನ್ನು ಅಧ್ಯಯನ ಮಾಡುತ್ತಾರೆ, ಮತ್ತು ಇದರ ಅಧ್ಯಯನದಿಂದಲೇ ಮೋಕ್ಷವನ್ನು ಹೊಂದುತ್ತಾರೆ. ಇಂಥ ಶ್ರೇಷ್ಠವಾದ ಬ್ರಹ್ಮಸೂತ್ರಭಾಷ್ಯವನ್ನು ಓದುವ ಸೌಭಾಗ್ಯ ನಮಗೆ ದೊರಕಿರುವುದು ಕೇವಲ ಶ್ರೀಮದಾಚಾರ್ಯರ ಕೃಪೆಯಿಂದ.

ಬನ್ನಿ ! ಈಗ ಸಾಕ್ಷಾತ್ ಶ್ರೀಮದಾಚಾರ್ಯರ ಮುಖಕಮಲದಿಂದ ಪಾಠ ಕೇಳಿರುವ ಶ್ರೀಪದ್ಮನಾಭತೀರ್ಥರ ಹಾಗೂ ಶ್ರೀತ್ರಿವಿಕ್ರಮಪಂಡಿತಾಚಾರ್ಯರ ಟೀಕೆಗಳನ್ನು ಓದೋಣ. ಟೀಕಾರಾಯರೆಂದೇ ಪ್ರಸಿದ್ಧರಾದ ಶ್ರೀಜಯತೀರ್ಥರ ತತ್ವಪ್ರಕಾಶಿಕೆಯ ಸವಿಯನ್ನು ಅನುಭವಿಸೋಣಃ ಮೂರು ಟೀಕೆಗಳ ಜೊತೆ ಭಾವದೀಪವನ್ನು ಓದಿ ಧನ್ಯರಾಗೋಣ. ಆಚಾರ್ಯ ಮಧ್ವರ

ಬ್ರಹ್ಮಸೂತ್ರಭಾಷ್ಯವೆಂಬ ಅಮೃತಸಮುದ್ರದ ಆಳ-ಅಗಲವನ್ನು ನೋಡೋಣ. ಬ್ರಹ್ಮಸೂತ್ರಗಳೆಂಬ ಅಮೂಲ್ಯರತ್ನಗಳನ್ನು ಹುಡುಕಿ ತೆಗೆಯೋಣ. ವೇದದ ಜ್ಞಾನವನ್ನು ಹೊಂದಿ, ಹರಿಪ್ರಸಾದಕ್ಕೆ ಪಾತ್ರರಾಗಿ ದುಃಖದ ಸಂಕೋಲೆಯಿಂದ ಬಿಡುಗಡೆ ಪಡೆದು ಧನ್ಯರಾಗೋಣ.

ಈ ಕೃತಿಯ ಅನುವಾದಕ್ಕೆ ಉಪಕರಿಸಿದ ಗುರುಗಳಿಗೆ, ಮಾರ್ಗದರ್ಶಕರಿಗೆ ಮತ್ತು ಹಿರಿಯರಿಗೆ ನಾನು ಎಂದೆಂದೂ ಆಭಾರಿ.

ಲೇಖಕ - ಬೆಮ್ಮತ್ತಿ ವೇಂಕಟೇಶಾಚಾರ್ಯ

ದಿನಾಂಕ : ೬-೧೧-೨೦೧೪ ಬೆಂಗಳೂರು.

# ತತ್ವಪ್ರಕಾಶಿಕಾ - ಭಾವದೀಪ

# ಸಾರಾಂಶ

## ಈಕ್ಷತ್ಯಧಿಕರಣ

### ಸಂಶಬ್ದಾರ್ಥದ ವ್ಯಾಖ್ಯಾನಕ್ಕಾಗಿ ಈಕ್ಷತ್ಯಧಿಕರಣ

ಈಕ್ಷತ್ಯಧಿಕರಣದಲ್ಲಿ ಬ್ರಹ್ಮನು ಸರ್ವಶಬ್ದವಾಚ್ಯನೆಂದು ಸಮರ್ಥಿಸಲಾಗಿದೆ. ಹಿಂದಿನ ಸಮನ್ವಯ ಸೂತ್ರದಲ್ಲಿರುವ 'ಸಂ' ಶಬ್ದಾರ್ಥದ ವಿವರಣೆಗಾಗಿಯೇ ಈ ಅಧಿಕರಣ ಹೊರಟಿದೆ. 'ಸಮ್' ಎಂಬ ಉಪಸರ್ಗ ಮುಖ್ಯತ್ವವನ್ನು ಹೇಳುತ್ತದಲ್ಲದೇ ಸಾಕಲ್ಯವನ್ನೂ ಹೇಳುತ್ತದೆ. ಇದರಿಂದ ತಿಳಿಯುವುದಿಷ್ಟು · ಭಗವಂತನು ಆಗಮದಿಂದ ಮುಖ್ಯವಾಗಿ ವಾಚ್ಯನಾಗಿದ್ದಾನೆ. ಅಷ್ಟೇ ಅಲ್ಲದೇ ಸಕಲ ವೇದಗಳಿಂದಲೂ ಪ್ರತಿಪಾದ್ಯನಾಗಿದ್ದಾನೆ. ಈಕ್ಷತ್ಯಧಿಕರಣದ ಮೊದಲಿನ ಆರು ಸೂತ್ರಗಳು ಹಾಗೂ ಕೊನೆಯಸೂತ್ರ ಮುಖ್ಯವಾಚ್ಯತ್ವವನ್ನು ಸಮರ್ಥಿಸಿದರೆ ಗತಿಸಾಮಾನ್ಯಸೂತ್ರ ಮಾತ್ರ ಸಕಲವೇದಪ್ರತಿಪಾದ್ಯತ್ವವನ್ನು ಸಮರ್ಥಿಸುತ್ತದೆ.

ವಾಚ್ಯತ್ವವನ್ನು ಹೇಳದ ಗತಿಸಾಮಾನ್ಯಸೂತ್ರಕ್ಕೆ ಈ ಅಧಿಕರಣದಲ್ಲಿ ಹೇಗೆ ಪ್ರವೇಶ? ವೇದಗಳು ಅನಂತವಾಗಿವೆ. ಆ ವೇದದಲ್ಲಿ ಕೆಲವು ಶಾಖೆಗಳು ಪ್ರಸಿದ್ಧವಾಗಿವೆ. ಕೆಲವು ಅಪ್ರಸಿದ್ಧವಾಗಿವೆ. ಇವುಗಳಿಗೆ ಬರುವ ಪರಸ್ಪರ ವಿರೋಧವನ್ನು ತಡೆಯಲು ಈ ಗತಿಸೂತ್ರವು ಸಾರ್ಥಕವೆಂದು ಉತ್ತರಿಸಬೇಕು. ಹಾಗಾದಲ್ಲಿ ಅವಿರೋಧಾಧ್ಯಾಯದಲ್ಲಿ ಈ ಸೂತ್ರ ಸೇರಬೇಕಿತ್ತು ಈ ಅಧಿಕರಣದಲ್ಲಿ ಹೇಳಿದ್ದು ಅಸಂಗತ.

ಈ ಪ್ರಶ್ನೆ ಸಹಜವಾಗಿ ಬರುತ್ತದೆ. ಆದರೆ ಇದು ಕೇವಲ ಮೇಲುನೋಟದ ಚಿಂತನೆ. ಈಗಾಗಲೇ ಹೇಳಿದಂತೆ ಈಕ್ಷತ್ಯಧಿಕರಣ ಹೊರಟಿರುವುದೇ ಸಂಶಬ್ದಾರ್ಥವನ್ನು ವಿವರಿಸಲು. ಉಳಿದೆಲ್ಲ ಸೂತ್ರಗಳು ಕೇವಲ ಮುಖ್ಯವಾಚ್ಯತ್ವವನ್ನು ಸಮರ್ಥಿಸುತ್ತವೆ, ಹೊರತು ಸಕಲಶಬ್ದವಾಚ್ಯತ್ವವನ್ನು ಸಮರ್ಥಿಸಲಾರವು.

ಒಂದುವೇಳೆ ಗತಿಸೂತ್ರವೇ ಇಲ್ಲದಿದ್ದಲ್ಲಿ ಭಗವಂತನಲ್ಲಿ ಮುಖ್ಯವಾಚ್ಯತ್ವವಷ್ಟೇ ಸಿದ್ಧವಾಗುತ್ತಿತ್ತು. ಸಕಲಶಬ್ದವಾಚ್ಯತ್ವ ಸಿದ್ಧವಾಗುತ್ತಿರಲಿಲ್ಲ. ಅಷ್ಟೇ ಅಲ್ಲದೆ ಸಂಶಬ್ದಾರ್ಥವೂ ದೃಢವಾಗುತ್ತಿರಲಿಲ್ಲ. ಆದ್ದರಿಂದ ಈ ಸೂತ್ರ ಸಾರ್ಥಕ.

ಮತ್ತೊಂದು ಪ್ರಧಾನವಾದ ಕಾರಣ - ಈ ಅಧಿಕರಣದಲ್ಲಿ ವಾಚ್ಯತ್ವವನ್ನು ಸಮರ್ಥಿಸುವ ಸೂತ್ರ 'ಈಕ್ಷತೇರ್ನಾಶಬ್ದಂ' ಎಂಬ ಸೂತ್ರ ಮಾತ್ರ. ಮುಂದಿನ ನಾಲ್ಕೈದು ಸೂತ್ರಗಳು ವಾಚ್ಯತ್ವಕ್ಕೆ ಹೇತುವಾಗಿರುವ ಈಕ್ಷಣೀಯತ್ವದ ಸಮರ್ಥನೆಗಾಗಿ ಇರುವಂತಹವು. ಆತ್ಮಶಬ್ದಾದಿಗಳ ಆಧಾರದಿಂದ ನಿರ್ಗುಣನೇ ಈಕ್ಷಣೀಯನಾಗಿದ್ದಾನೆಂದು. ಈ ಆತ್ಮಶಬ್ದಾದಿ ಹೇತುಗಳು ನಿರ್ಗುಣನಲ್ಲೇ ಇರಲು ಏನು ಕಾರಣ? ಎಂಬ ಆಶಂಕೆ ಬಂದರೆ ಇದನ್ನು ಕಡೆಯದಾಗಿ ಪರಿಹರಿಸಲು ಗತಿಸೂತ್ರ ಹೊರಟಿದೆ. ಈ ಸೂತ್ರವೇ ಇಲ್ಲದಿದ್ದಲ್ಲಿ ಆತ್ಮಶಬ್ದಾದಿಗಳು ನಿರ್ಗುಣನಲ್ಲಿ ಸಿದ್ಧವಾಗುತ್ತಿರಲಿಲ್ಲ. ಆತ್ಮಶಬ್ದಾದಿಗಳು ಸಿದ್ಧವಾಗದೆ ಈಕ್ಷಣೀಯತ್ವ ಸಿದ್ಧವಾಗುತ್ತಿರಲಿಲ್ಲ. ಈಕ್ಷಣೀಯತ್ವ ಸಿದ್ಧವಾಗದೆ ವಾಚ್ಯತ್ವ ಸಿದ್ಧವಾಗುತ್ತಿರಲಿಲ್ಲ. ಹೀಗೆ ವಾಚ್ಯತ್ವಸಮರ್ಥನೆಯ ಬುನಾದಿಯೇ ಗತಿಸಾಮಾನ್ಯಸೂತ್ರವಾಗಿದೆ. ಇನ್ನು ವಾಚ್ಯತ್ವವನ್ನು ಗತಿಸಾಮಾನ್ಯಸೂತ್ರವು ನೇರವಾಗಿ ಸಮರ್ಥಿಸದ ಕಾರಣ ಈಕ್ಷತ್ಯಧಿಕರಣದಲ್ಲಿ ಸೇರಬಾರದೆಂದರೆ 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' ಇತ್ಯಾದಿಸೂತ್ರಗಳೂ ಸಹ ಇಲ್ಲಿ ಸೇರದಿರಬೇಕಾದೀತು.

ಇಷ್ಟೆಲ್ಲ ವಿಷಯ 'ಶ್ರುತತ್ವಾಚ್ಚ' ಎಂಬ ಸೂತ್ರವನ್ನು ಕೊನೆಯಲ್ಲಿ ಸೂತ್ರಕಾರರು ಹೇಳಿದ್ದರಿಂದ ತಿಳಿಯಿತು. ಇಲ್ಲವಾದಲ್ಲಿ ವಾಚತ್ವವನ್ನು ಸಮರ್ಥಿಸದ ಈ ಸೂತ್ರವನ್ನು ಮಧ್ಯದಲ್ಲೇಕೆ ಉಚ್ಚರಿಸಬೇಕಿತ್ತು. ಹೀಗೆ ಗತಿಸಾಮಾನ್ಯ ಸೂತ್ರವು ರ ಅಧಿಕರಣದಲ್ಲಿ ಮಹತ್‌ಸ್ಥಾನ ಪಡೆದಿದೆ.

### ಎಂಟು ಬಗೆಯ ಚಿಂತೆಗಳು

ಸತ್ತ್ವಾದಿಗುಣರಹಿತನಾದ್ದರಿಂದ ನಿರ್ಗುಣನೆನಿಸಿದ ಬ್ರಹ್ಮನಲ್ಲೇ ಮೋಕ್ಷೋಪದೇಶಾದಿಹೇತುಗಳು ಬರಬೇಕು ಆವಾಗ ಮಾತ್ರ ಆತ್ಮಶಬ್ದವು ಮುಖ್ಯವಾಗಿ ನಿರ್ಗುಣನಲ್ಲಿ ಬರಲು ಸಾಧ್ಯ. ಆತ್ಮಶಬ್ದವು ನಿರ್ಗುಣನಲ್ಲಿ ಮುಖ್ಯವಾಗಿ ಬಂದರೆ ಮಾತ್ರ ಈಕ್ಷಣೀಯತ್ವಹೇತುವು ಪಕ್ಷನಾದ ನಿರ್ಗುಣಬ್ರಹ್ಮನಲ್ಲಿ ಬರುತ್ತದೆ. ಆವಾಗ ನಿರ್ದುಷ್ಟವಾದ ಈಕ್ಷಣೀಯತ್ವಹೇತುವಿನಿಂದ ವಾಚ್ಯತ್ವವನ್ನು ಸುಲಭವಾಗಿ ಸಾಧಿಸಬಹುದು. ಇಲ್ಲವಾದರೆ ಗೌಣಾತ್ಮನೇ ವಾಚ್ಯನಾಗುವಂತಹ ಪರಿಸ್ಥಿತಿ ಬಂದು ನಿರ್ಗುಣನಲ್ಲಿ ಯಾವುದೇ ಶಬ್ದಗಳ ಸಮನ್ವಯವು ಕೂಡದಿರುವ ಪ್ರಸಂಗ ಬರುತ್ತದೆ.

### ಪೂರ್ವಪಕ್ಷ – ನಿರ್ಗುಣನು ವಾಚ್ಯನಾಗಲಾರ

ಈಕ್ಷಣೀಯನಾದವನು ಜೀವ. ಜೀವನಲ್ಲಿರುವ ಈಕ್ಷಣೀಯತ್ವಹೇತುವಿನಿಂದ ಬ್ರಹ್ಮನಲ್ಲಿ ವಾಚ್ಯತ್ವವನ್ನು ಸಿದ್ಧಾಂತಿಗಳಿಗೆ ಸಮರ್ಥಿಸಲಾಗದು. ಅಷ್ಟೂ ಮೀರಿ ವಾಚ್ಯತ್ವವನ್ನು ಸಮರ್ಥಿಸಿದರೆ 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯ ವಿರೋಧ ಬರುತ್ತದೆ.

ಇನ್ನು ಈಕ್ಷಣೀಯನಾಗದ ಬ್ರಹ್ಮನನ್ನು ತಿಳಿಯುವುದು ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಪ್ರತ್ಯಕ್ಷ ಅನುಮಾನಗಳಿಗೆ ಗೋಚರನಾಗದ ಬ್ರಹ್ಮನು ಶಬ್ದದಿಂದಷ್ಟೇ ವೇದ್ಯನೆಂಬುದು ನಿಜ. ಆದರೆ ಶಬ್ದವು ವಾಚಕವಾದರೆ ಮಾತ್ರ ಬ್ರಹ್ಮನನ್ನು ತಿಳಿಸುತ್ತದೆ. ಎಂದೇನಿಲ್ಲ. ಲಕ್ಷಣಾವೃತ್ತಿಯಿಂದಲೂ ತಿಳಿಸುತ್ತದೆ. ಆದ್ದರಿಂದ ಬ್ರಹ್ಮನು ತಿಳುವಳಿಕೆಗೂ ನಿಲುಕುತ್ತಾನೆ. ಅವಾಚ್ಯನೂ ಆಗುತ್ತಾನೆಂದು ಈಕ್ಷತ್ಯಧಿಕರಣದ ಪೂರ್ವಪಕ್ಷ.

## ಸಿದ್ಧಾಂತ – ಈಕ್ಷಣೀಯನಾದ ಶುದ್ಧಬ್ರಹ್ಮ ವಾಚ್ಯನೇ ಆಗಿದ್ದಾನೆ

ಶುದ್ಧನಾದ ಆತ್ಮನೇ ಈಕ್ಷಣೀಯನಾದ್ದಾನೆ. ಆದ್ದರಿಂದ ವಾಚ್ಯನೂ ಆಗುತ್ತಾನೆಂದು ಸಿದ್ಧಾಂತ. ಸೂತ್ರಕಾರರು ಈಕ್ಷಣೀಯತ್ವವನ್ನು ಆತ್ಮಶಬ್ದ, ಮೋಕ್ಷೋಪದೇಶ ಹೇಯತ್ವಾವಚನವೆಂಬ ಮೂರು ಹೇತುಗಳಿಂದ ಸಮರ್ಥಿಸಿದ್ದಾರೆ. ನೀವೂ ಕೂಡ ಶುದ್ಧಾತ್ಮನ ಜ್ಞಾನದಿಂದಲೇ ಮೋಕ್ಷವಾಗುತ್ತದೆಂದು ಹೇಳುವುದರಿಂದ ಅನಿವಾರ್ಯವಾಗಿ ಈಕ್ಷಣೀಯತ್ವವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಈಕ್ಷಣೀಯ ಎಂದರೆ ಜ್ಞಾನವಿಷಯನೆಂದರ್ಥ. ಇದರ ಮೇಲೆ ಶುದ್ಧಾತ್ಮನ ಜ್ಞಾನ ಯಾವುದರಿಂದ ಬರುತ್ತದೆಂಬ ಪ್ರಶ್ನೆ ಬರುತ್ತದೆ. ಪ್ರತ್ಯಕ್ಷ ಅನುಮಾನಗಳಿಗೆ ನಿಲುಕದ ಅವನು ಶಬ್ದದಿಂದಷ್ಟೇ ತಿಳಿಯುತ್ತಾನೆ. ಶಬ್ದದಿಂದ ತಿಳಿಯುವಾಗ ಲಕ್ಷಣಾವೃತ್ತಿಯಿಂದಲೂ ತಿಳಿಯಬಹುದು ಶಕ್ತಿವೃತ್ತಿಯಿಂದಲೂ ತಿಳಿಯಬಹುದು. ಲಕ್ಷಣಾವೃತ್ತಿಯು ಶಕ್ತಿವೃತ್ತಿಯ ಅಧೀನ. ಆದ್ದರಿಂದ ಲಕ್ಷಣಾವೃತ್ತಿಯಿಂದ ಶುದ್ಧಬ್ರಹ್ಮನು ತಿಳಿಯುತ್ತಾನೆಂದು ಹೇಳಿದರೂ ಶಕ್ತಿವೃತ್ತಿಯಿಂದ ತಿಳಿಯುತ್ತಾನೆಂದು ಒಪ್ಪಲೇಬೇಕಾಗುತ್ತದೆ. ಆದಕ್ಕಿಂತ ಶಕ್ತಿವೃತ್ತಿಯಿಂದ ತಿಳಿಯುತ್ತಾನೆನ್ನುವುದು ಎಲ್ಲರೀತಿಯಿಂದ ಸೂಕ್ತ.

ಹೀಗೆ ಶುದ್ಧಬ್ರಹ್ಮನು ಈಕ್ಷಣೀಯನಾದ್ದರಿಂದ ವಾಚ್ಯನಾಗಿದ್ದಾನೆಂದು ಸೂತ್ರಕಾರರು ಹೇಳಿದ್ದು ಅತ್ಯಂತ ನಿರ್ದುಷ್ಟವಾಗಿದೆ.

## (ಪ್ರಥಮ ಸೂತ್ರಾರ್ಥ) ನ್ಯಾಯೋಪೇತ ಶ್ರುತಿಯೇ ವಾಚ್ಯತ್ವಸಾಧಕ

ಬ್ರಹ್ಮನು ಸಕಲಶಬ್ದಗಳಿಂದ ವಾಚ್ಯನಾಗಿದ್ದಾನೆನ್ನಲು ಈಕ್ಷಣೀಯತ್ವಯುಕ್ತಿಯು ಪ್ರಮಾಣವಾಗಿದೆ. 'ಯತೋ ವಾ' ಇತ್ಯಾದಿ ಶ್ರುತಿಗಳಿಗೆ ವಾಚ್ಯತ್ವನಿಷೇಧದಲ್ಲಿ ತಾತ್ಪರ್ಯವಿದ್ದಂತೆ ಕಾಣುತ್ತದೆ. ಆದರೆ ಸಾಕಲ್ಯೇನ ಭಗವಂತನನ್ನು ತಿಳಿಯಲು ಸಾಧ್ಯವಿಲ್ಲ ಎಂದೇ ಆ ಶ್ರುತಿಗಳ ಅಭಿಪ್ರಾಯ. ಇದಕ್ಕೆ ವಿರುದ್ಧವಾಗಿ ಅನೇಕ ಶ್ರುತಿಸ್ಮೃತಿಗಳು ವಾಚ್ಯತ್ವವನ್ನು ವಿಧಿಸುತ್ತಿರುವಾಗ ವಾಚ್ಯತ್ವವೇ ಇಲ್ಲವೆಂದು ಹೇಳಲಾಗದು.

ಆದ್ದರಿಂದ ಈಕ್ಷಣೀಯತ್ವಯುಕ್ತಿಯಿಂದ ಉಪೋದ್ಬಲಿತವಾದ ಶ್ರುತಿಗಳೇ ವಾಚ್ಯತ್ವವಿಷಯದಲ್ಲಿ ಪ್ರಮಾಣಗಳಾಗಿವೆ. ಸೂತ್ರಕಾರರೂ ಕೇವಲ ಯುಕ್ತಿಯನ್ನು ಪ್ರಮಾಣವನ್ನಾಗಿ ಹೇಳಿಯೇ ಇಲ್ಲ.

## ಸರ್ವಶಬ್ದಾವಾಚ್ಯತ್ವವು ನ್ಯಾಯೋಪೇತಶ್ರುತಿಸ್ಮೃತಿವಿರುದ್ಧ

ಸೂತ್ರದಲ್ಲಿರುವ 'ಈಕ್ಷತೇಃ' ಎಂಬ ಪದಕ್ಕೆ ಯುಕ್ತಿಸಹಿತವಾದ ಶ್ರುತಿಯಿರುವುದರಿಂದ ಎಂದರ್ಥ. ಆದ್ದರಿಂದಲೇ ಭಾಷ್ಯಕಾರರು 'ಶ್ರುತತ್ವಾಚ್ಚ' ಎಂಬ ಸೂತ್ರಕ್ಕೆ ವಾಚ್ಯತ್ವವಿಷಯದಲ್ಲಿ ಶ್ರುತಿಪ್ರಮಾಣವಿರುವುದರಿಂದ ಎಂಬರ್ಥವನ್ನು ಹೇಳುವುದೇ ಇಲ್ಲ. ಹಾಗೆ ಹೇಳಿದರೆ ಚರ್ವಿತಚರ್ವಣವಾಗುತ್ತದೆ. ಇನ್ನು ಅದ್ವೈತಿಗಳು ವಾಚ್ಯತ್ವಪ್ರತಿಪಾದಕ ಶ್ರುತಿಗಳಿಗೆ ಚಿನ್‌ಮಾತ್ರಸ್ವರೂಪದಲ್ಲಿ ಲಕ್ಷಣಾ ಮಾಡುತ್ತಾರೆ. ಹಾಗಾದಲ್ಲಿ ಅವಾಚ್ಯತ್ವಪ್ರತಿಪಾದಕ ಶ್ರುತಿಗಳಿಗೂ ಚಿನ್‌ಮಾತ್ರ ಸ್ವರೂಪದಲ್ಲಿ ಲಕ್ಷಣಾ ಮಾಡಬೇಕಾದೀತು. ಆದ್ದರಿಂದ ಬ್ರಹ್ಮನು ಸಕಲಶಬ್ದ ಅವಾಚ್ಯನಾಗಿದ್ದಾನೆಂಬ ಅದ್ವೈತಿಗಳ ವಾದ ನ್ಯಾಯೋಪೇತಶ್ರುತಿವಿರುದ್ಧವಾಗಿದೆ. ಮತ್ತು ನ್ಯಾಯೋಪೇತಸ್ಮೃತಿಗಳಿಂದಲೂ ವಿರುದ್ಧವಾಗಿದೆ.

### 'ಗೌಣಃ' ಎಂಬ ಪುಲ್ಲಿಂಗಪ್ರಯೋಗ ಸಾಧುವೇ?

'ಗೌಣಶ್ಚೇನ್ನಾತ್ಮಶಬ್ದಾತ್' ಎಂಬ ಸೂತ್ರದಲ್ಲಿ 'ಗೌಣಃ' ಎಂದು ಪುಲ್ಲಿಂಗಪ್ರಯೋಗವಿದೆ. ಇದು ಹಿಂದಿನ ಸೂತ್ರದಲ್ಲಿ ನಪುಂಸಕಲಿಂಗದಿಂದ ಪ್ರಸಕ್ತವಾದ 'ಅಶಬ್ದಮ್' ಎಂಬುದರ ಜೊತೆ ಅನ್ವಯ ಹೊಂದುವುದೇ ಇಲ್ಲ. ಹಾಗೆ ಅನ್ವಯ ಹೊಂದಿದ್ದರೆ ಪುಲ್ಲಿಂಗ ತಪ್ಪಾಗುತ್ತಿತ್ತು. ಹೊರತಾಗಿ 'ಆತ್ಮನ್ಯೇವಾತ್ಮಾನಮ್' ಎಂಬ ಶ್ರುತಿಯಲ್ಲಿರುವ ಆತ್ಮಶಬ್ದದ ಜೊತೆ ಅನ್ವಯ ಹೊಂದಿದೆ ಆತ್ಮಶಬ್ದವು ಪುಲ್ಲಿಂಗವಾದ್ದರಿಂದ ಸಮಸ್ಯೆ ಇಲ್ಲ.

ಆದರೆ ಅದ್ವೈತಿಗಳಿಗೆ ಹೀಗೆ ಹೇಳಲಾಗದು. ಅವರು 'ಸ ಈಕ್ಷಾಂ ಚಕ್ರೇ' ಎಂಬುದನ್ನು ವಿಷಯವಾಕ್ಯವೆನ್ನುತ್ತಾರೆ.'ಈಕ್ಷಾಂ'ಎಂಬುದುಸ್ತ್ರೀಲಿಂಗವಾದ್ದರಿಂದಗೌಣಶಬ್ದವೂಸ್ತ್ರೀಲಿಂಗವಾಗಬೇಕಾಗುತ್ತದೆ. ಇನ್ನು ಹಿಂದಿನ ಸೂತ್ರದಲ್ಲಿ ಪುಲ್ಲಿಂಗವಾದ ಈಕ್ಷತಿ ಶಬ್ದದ ಜೊತೆಗೆ ಅನ್ವಯ ಹೇಳಲಾಗದು. ಹಾಗೆ ಹೇಳಿದರೆ ಧಾತುವನ್ನು ವಿವಕ್ಷಿಸಿದಂತಾಗುತ್ತದೆ. ಇದು ಅಸಂಗತ. ಆದ್ದರಿಂದ ಅನಿವಾರ್ಯವಾಗಿ ಈಕ್ಷತಿ ಧಾತುವಿಗೆ ಈಕ್ಷಣವೆಂದರ್ಥ ಹೇಳಬೇಕು. ಅವಾಗ ಈಕ್ಷಣಶಬ್ದವು ನಪುಂಸಕವಾದ್ದರಿಂದ ಗೌಣಶಬ್ದವೂ ನಪುಂಸಕವಾಗಲಿ ಎಂಬ ಆಪತ್ತಿ ಬಂದೇ ಬರುತ್ತದೆ.

### ಬಹುವಿಷಯವಾಕ್ಯಗಳ ಅನಿವಾರ್ಯತೆ

'ಈಕ್ಷತೇರ್ನಾಶಬ್ದಮ್' ಎಂಬ ಸೂತ್ರದಲ್ಲಿ 'ಸ ಏತಸ್ಮಾತ್' ಇತ್ಯಾದಿ ಶ್ರುತಿಮಾತ್ರ ವಿಷಯವಾಕ್ಯವಲ್ಲ. 'ಆತ್ಮನ್ಯೇವಾತ್ಮಾನಮ್' 'ಯಸ್ಯಾನುವಿತ್ತಃ' ಇತ್ಯಾದಿ ಜ್ಞಾನಕರ್ಮತ್ವ ಹೇಳುವ ಸಕಲಶ್ರುತಿಗಳೂ ಈ ಸೂತ್ರದಲ್ಲಿ ವಿಷಯವಾಕ್ಯಗಳಾಗಿವೆ. ಈ ಸೂತ್ರದಲ್ಲಿ ಮಾತ್ರವಲ್ಲ. ಮೊದಲಿನ ನಾಲ್ಕೂ ಸೂತ್ರಗಳಲ್ಲಿ ಈ ಶ್ರುತಿಗಳು ವಿಷಯವಾಕ್ಯಗಳಾಗಿವೆ. ಹೀಗೆ ಒಪ್ಪದಿದ್ದರೆ ಪರಸ್ಪರ ಕಾರ್ಯಕಾರಣಭಾವ ಹೇಳುವುದೇ ಅಸಂಗತವಾಗುತ್ತದೆ. ಈಕ್ಷಣಕರ್ಮನು ಬ್ರಹ್ಮನಾಗಲು ಮತ್ತೊಂದು ಶ್ರುತಿಯಲ್ಲಿರುವ ಆತ್ಮಶಬ್ದ

ಹೇಗೆ ತಾನೆ ಕಾರಣವಾಗುತ್ತದೆ? ಎಂಬ ಪ್ರಶ್ನೆಗೆ ಉತ್ತರಿಸಬೇಕೆಂದರೆ ಪ್ರತಿಯೊಂದು ಸೂತ್ರಗಳಲ್ಲಿಯೂ ಜ್ಞಾನಕರ್ಮತ್ವ ಹೇಳುವ ಶ್ರುತಿಗಳನ್ನು ವಿಷಯವಾಕ್ಯವೆಂದು ಹೇಳಬೇಕು. ಆವಾಗ ಈಕ್ಷಣಕರ್ಮತ್ವವು ಬಹುಶ್ರುತಿಗಳಿಂದ ಸಿದ್ಧವಾಗುತ್ತದೆಂದು ತಿಳಿಸಿದಂತಾಗುತ್ತದೆ. ಒಂದೇ ವಿಷಯದಲ್ಲಿ ಅನೇಕಶ್ರುತಿಗಳನ್ನು ಉದಾಹರಿಸುವುದರಿಂದ ಪ್ರಮೇಯ ದೃಢವಾಗುತ್ತದೆ. ಆದ್ದರಿಂದಲೇ 'ತಮೇವೈಕಂ ಜಾನಥ' ಎಂಬ ಒಂದೇ ಶ್ರುತಿಯನ್ನು ಉದಾಹರಿಸಿದರೆ ಸಾಕು. ಸಕಲಹೇತುಗಳು ಸಿದ್ಧವಾಗುತ್ತದೆಯೆಂಬ ಆಕ್ಷೇಪಕ್ಕೂ ಆಸ್ಪದವಿಲ್ಲ. ಅನೇಕ ಶ್ರುತಿಗಳನ್ನು ಉದಾಹರಿಸುವುದರಿಂದ ದೊರೆಯುವ ಮತ್ತೊಂದು ಲಾಭ ನಿರ್ಗುಣನಿಗೆ ಸಾಧಕವಾಗಿ ಪರಾತ್ಪರತ್ವಲಿಂಗಗಳನ್ನು ಪುರುಷಾದಿಶಬ್ದಗಳನ್ನು ಹೇಳಿದಂತಾಗುತ್ತದೆ. ಶ್ರುತಿಯಲ್ಲಿ 'ಪುರುಷಮೀಕ್ಷತೇ' ಎಂದಿದೆ. ಅದೇ ಶಬ್ದ ಸೂತ್ರದಲ್ಲಿಯೂ ಇದೆಯೆಂದು ಶ್ರುತ್ಯನುಗಮ ಮಾಡಿದಂತೆಯೂ ಆಗುತ್ತದೆ.

### ಅದ್ವೈತಿಗಳ ವಿಷಯವಾಕ್ಯ ಸರಿಯಲ್ಲ.

ನಮ್ಮ ಪ್ರಕಾರ ಜ್ಞಾನಕರ್ಮತ್ವವನ್ನು ನಿರ್ಗುಣನಲ್ಲಿ ಹೇಳುವ ಸಕಲಶ್ರುತಿಗಳೂ ಈಕ್ಷತ್ಯಧಿಕರಣದ ವಿಷಯವಾಕ್ಯಗಳಾಗಿವೆ. ಆದರೆ ಅದ್ವೈತಿಗಳು 'ಸದೇವ ಸೌಮ್ಯ' ಎಂಬ ಒಂದೇ ಶ್ರುತಿಯನ್ನು ವಿಷಯವಾಕ್ಯವನ್ನಾಗಿ ಹೇಳಿ ಹೆಮ್ಮೆ ಪಡುತ್ತಾರೆ. ನಿಜವಾಗಿಯೂ ಅದ್ವೈತಿಗಳಿಗಿಂತ ಹೆಚ್ಚು ಹೆಮ್ಮೆ ಪಡಬೇಕಾದವರು ನಾವು. ಏಕೆಂದರೆ ಪ್ರತಿಯೊಂದು ಸೂತ್ರಗಳಲ್ಲಿರುವ ಹೇತುಗಳಿಗೆ ಶ್ರುತಿಪ್ರಾಮಾಣ್ಯವನ್ನು ನೀಡಲೇಬೇಕು. ಅದ್ವೈತಿಗಳ ವಿಷಯವಾಕ್ಯದಲ್ಲಿ ಗತಿಸಾಮಾನ್ಯ, ಶ್ರುತತ್ವಗಳು ಕೇಳಿಸುತ್ತಿಲ್ಲ. ಇದಕ್ಕೋಸ್ಕರ 'ಯಃ ಸರ್ವಜ್ಞಃ' ಎಂಬುದನ್ನು ವಿಷಯವಾಕ್ಯವೆಂದರೆ ಅದರಲ್ಲಿ ಸ್ವಾಪ್ಯಯಾದಿಗಳು ಕೇಳಿಸುತ್ತಿಲ್ಲ.

ವಿಚಾರ ಮಾಡಿದರೆ ಅನೇಕ ಶ್ರುತಿಗಳನ್ನು ಉದಾಹರಿಸಿದಾಗ ಪ್ರಮೇಯವು ಅತ್ಯಂತ ದೃಢವಾಗುವುದರಿಂದ ಅನುಕೂಲವೇ ಹೆಚ್ಚು ಅನಾನುಕೂಲ ಏನೂ ಇಲ್ಲ. ಅದ್ವೈತಿಗಳೂ ಸಹ ಪ್ರಕೃತ್ಯಧಿಕರಣದಲ್ಲಿ ಬ್ರಹ್ಮನಲ್ಲಿ ಉಪಾದಾನತ್ವವನ್ನು ಸಮರ್ಥಿಸಲು ಬಹಳ ಶ್ರುತಿಗಳನ್ನು ಉದಾಹರಿಸಿದ್ದಾರೆ. ಹೀಗಿರುವಾಗ ಅದ್ವೈತಿಗಳ ಹೆಮ್ಮೆಗೆ ಅರ್ಥವೇ ಇಲ್ಲ.

ಮತ್ತೊಂದು ಸೂಕ್ಷ್ಮವಿಚಾರ - ಮೋಕ್ಷೋಪದೇಶ ಹಾಗೂ ಅಹೇಯತ್ವಲಿಂಗಗಳು ಆತ್ಮಶಬ್ದವು ನಿರ್ಗುಣಪರವೆನ್ನಲು ಕಾರಣಗಳಾಗಿವೆ. ಅಷ್ಟೇ ಅಲ್ಲದೆ ಈಕ್ಷಣೀಯನು ನಿರ್ಗುಣನೆನ್ನಲೂ ಸಹ ನೇರವಾಗಿ ಕಾರಣಗಳಾಗಿವೆ. ಆದ್ದರಿಂದ ಈಕ್ಷಣೀಯತ್ವ ಸಾಧನೆಗೆ ಅನೇಕ ಯುಕ್ತಿಗಳನ್ನು ಹೇಳಿದಂತಾಗುತ್ತದೆ. ಆತ್ಮಶಬ್ದಕ್ಕೂ ಯುಕ್ತಿಗಳನ್ನು ಹೇಳಿದಂತಾಗುತ್ತದೆ.

### ಸೂತ್ರಗಳ ಜೋಡಣೆಯಲ್ಲೂ ಸ್ವಾರಸ್ಯ

ಈಕ್ಷತ್ಯಧಿಕರಣದಲ್ಲಿ ಒಟ್ಟು ಏಳು ಸೂತ್ರಗಳಿವೆ. ಇವುಗಳ ಜೋಡಣೆಯಲ್ಲೂ ಬಹಳ ಅರ್ಥವಿದೆ. ವಾಚ್ಯತ್ವದ ಸಮರ್ಥನೆಗಾಗಿ ಪ್ರಥಮ ಸೂತ್ರದಲ್ಲಿ ಈಕ್ಷಣೀಯತ್ವವನ್ನು ಹೇತುವನ್ನಾಗಿ ಹೇಳಿದ್ದಾರೆ. ಈ ಹೇತುವು ನಿರ್ಗುಣ

ಬ್ರಹ್ಮನಲ್ಲೇ ಇದೆಯೆಂದು ತಿಳಿಸಲು 'ಗೌಣಶ್ಚೇತ್' ಎಂಬ ಎರಡನೆಯ ಸೂತ್ರ ಹೊರಟಿದೆ. ಈ ಸೂತ್ರದಲ್ಲಿ ಹೇಳಿದ ಆತ್ಮಶಬ್ದವೆಂಬ ಹೇತುವೂ ಸಹ ನಿರ್ಗುಣನಲ್ಲೇ ಇದೆಯೆಂದು ಸಮರ್ಥಿಸಲು ಮುಂದಿನೆರಡು ಸೂತ್ರಗಳು ಹೊರಟವೆ. ವಾಚ್ಯತ್ವವನ್ನು ಸಾಧಿಸಲು ಈಕ್ಷಣೀಯತ್ವ ಬಿಟ್ಟು ಬೇರೆ ಹೇತುವಿಲ್ಲವೆಂಬ ಸಮರ್ಥನೆಗಾಗಿ ಐದನೆಯ ಸ್ವಾಪ್ಯಯಸೂತ್ರ ಹೊರಟಿದೆ. ಸ್ವಾಪ್ಯಯಾದಿಗಳನ್ನು ಬೇರೆ ಶಾಖೆಯಲ್ಲಿ ಜೀವನಿಗೂ ಹೇಳಿರಬಹುದೆಂಬ ಆಶಂಕೆಯ ಪರಿಹಾರಕ್ಕಾಗಿ ಗತಿಸಾಮಾನ್ಯ ಸೂತ್ರ ಹೊರಟಿದೆ. ಗತಿಸಾಮಾನ್ಯವು ಶ್ರುತಿಸಿದ್ಧವಾಗಿದೆಯೆಂಬ ಸಮರ್ಥನೆಗಾಗಿ 'ಶ್ರುತತ್ವಾಚ್ಚ' ಎಂಬ ಏಳನೆಯ ಸೂತ್ರ ಹೊರಟಿದೆ.

## ಆನಂದಮಯಾಧಿಕರಣ

### ಅನ್ಯತ್ರೈವಪ್ರಸಿದ್ಧಶಬ್ದಗಳ ವಿಭಾಗ ಪ್ರತ್ಯೇಕ ಅನಾವಶ್ಯಕ

ಆನಂದಮಯಾಧಿಕರಣದಿಂದ ಸಮನ್ವಯವು ಪ್ರಾರಂಭವಾಗುತ್ತಿದೆ. ಸಮನ್ವಯಕ್ಕೆ ಅನುಕೂಲವಾಗಲು ಸಮಸ್ತ ಸಂಸ್ಕೃತಶಬ್ದಗಳನ್ನು ಒಟ್ಟು ನಾಲ್ಕು ಬಗೆಯಲ್ಲಿ ವಿಂಗಡಿಸುತ್ತಿದ್ದಾರೆ. ಆ ನಾಲ್ಕರ ಪೈಕಿ ತತ್ರಪ್ರಸಿದ್ಧಶಬ್ದಗಳು ವಿಷ್ಣುವಿನಲ್ಲಿ ಈಗಾಗಲೇ ಪ್ರಸಿದ್ಧವಾದ್ದರಿಂದ ಪ್ರತ್ಯೇಕವಾಗಿ ಸಮನ್ವಯ ಮಾಡಬೇಕಾಗಿಲ್ಲ. ೧) ಅನ್ಯತ್ರಪ್ರಸಿದ್ಧ, ೨) ಉಭಯತ್ರಪ್ರಸಿದ್ಧ, ೩) ಅನ್ಯತ್ರೈವಪ್ರಸಿದ್ಧ ಈ ಮೂರು ಬಗೆಯ ಶಬ್ದಗಳನ್ನು ಸಮನ್ವಯ ಮಾಡಲು ನಾಲ್ಕು ಪಾದಗಳು ಹೊರಟವೆ.

ಈ ಮೂರು ಬಗೆಯ ವಿಂಗಡನೆ ಸರಿಯಿಲ್ಲವೆಂದು ಮೊದಲು ಆಕ್ಷೇಪ ಮಾಡಲಾಗಿದೆ. ಏಕೆಂದರೆ ಅನ್ಯತ್ರೈವಪ್ರಸಿದ್ಧಿಯೆಂದರೆ ಅನ್ಯತ್ರೈವಪ್ರಸಿದ್ಧಿ ಎಂದೇ ಅರ್ಥ. ಪುನಃ ಅನ್ಯತ್ರೈವಪ್ರಸಿದ್ಧಿಯೆಂಬ ಪ್ರತ್ಯೇಕ ವಿಭಾಗ ಬೇಕಾಗಿಲ್ಲ ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾದದ್ದು ಅನ್ಯತ್ರೈವಪ್ರಸಿದ್ಧವೆನಿಸುತ್ತದೆ. ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾದ್ದು ಅನ್ಯತ್ರಪ್ರಸಿದ್ಧ ಎನಿಸುತ್ತದೆಂಬ ವೈಲಕ್ಷಣ್ಯವನ್ನೇನೋ ನೀವು ಹೇಳುತ್ತೀರಿ. ಆದರೆ ಇದು ಕೇವಲ ಮೇಲ್ನೋಟದ ಸಮಾಧಾನ. ಏಕೆಂದರೆ ಅನ್ಯತ್ರಪ್ರಸಿದ್ಧವಾದ ಇಂದ್ರ ಆಕಾಶಾದಿಶಬ್ದಗಳೂ ಸಹ ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾಗಿವೆ. ಸರ್ವಗತತ್ವ ಅಂತರ್ಯಾಮಿತ್ವ ಮೊದಲಾದ ಲಿಂಗಗಳೂ ಸಹ ಶ್ರುತಿಲಿಂಗಾದಿಗಳಿಂದ ಅನ್ಯತ್ರಪ್ರಸಿದ್ಧವಾಗಿವೆ. ಆದ್ದರಿಂದ ಅನ್ಯತ್ರಪ್ರಸಿದ್ಧಶಬ್ದಗಳೆಲ್ಲವೂ ಅನ್ಯತ್ರೈವಪ್ರಸಿದ್ಧದಲ್ಲೇ ಸೇರುವಾಗ ಮೂರು ಬಗೆಯ ವಿಭಾಗ ಅನಾವಶ್ಯಕ.

### ಪಾದಭೇದಕ ಉಪಾಧಿ ಸಾಧುವೆ?

ಅವ್ಯಕ್ತ ಪ್ರಕೃತಿ ಮೊದಲಾದ ಶಬ್ದಗಳ ಸಮನ್ವಯವನ್ನು ನಾಲ್ಕನೆಯ ಪಾದದಲ್ಲಿ ಇಂದ್ರ ಆಕಾಶ ಮೊದಲಾದ ಶಬ್ದಗಳ ಸಮನ್ವಯವನ್ನು ಮೊದಲನೆಯ ಪಾದದಲ್ಲಿ ಮಾಡುತ್ತಿದ್ದೀರಿ. ಇದು ಸರಿಯಲ್ಲ. ಅವ್ಯಕ್ತ, ಪ್ರಕೃತಿ ಮೊದಲಾದ ಶಬ್ದಗಳು ಲೋಕರೂಢಿಯಿಂದಲೂ ಅನ್ಯತ್ರಪ್ರಸಿದ್ಧವಾದ್ದರಿಂದ ಪ್ರಥಮಪಾದದಲ್ಲೇ ಇವುಗಳ

ಸಮನ್ವಯ ಮಾಡಬಹುದು. ಮತ್ತು ಇಂದ್ರ ಆಕಾಶಾದಿಶಬ್ದಗಳು ಶ್ರುತಿಯಿಂದಲೂ ಅನ್ಯತ್ರಪ್ರಸಿದ್ಧವಾದ್ದರಿಂದ ನಾಲ್ಕನೆಯ ಪಾದದಲ್ಲೇ ಸಮನ್ವಯ ಮಾಡಬಹುದು. ಆದ್ದರಿಂದ ನೀವು ಮಾಡಿದ ಪಾದಭೇದದ ಉಪಾಧಿಯು ಅಸಂಗತವಾಗಿದೆ.

## ಪ್ರಥಮ ದ್ವಿತೀಯ ಪಾದಗಳ ಉಪಾಧಿನಿರಾಕರಣೆ

ನಾಲ್ಕು ಪಾದಗಳಲ್ಲಿ ವಿಭಿನ್ನತೆಯನ್ನು ತೋರಿಸಲಾಗದೆಂದು ಸಾಮಾನ್ಯವಾಗಿ ಆಕ್ಷೇಪಿಸಿದ್ದಾಯಿತು. ಪ್ರಕೃತ ಪ್ರಥಮ ಹಾಗೂ ದ್ವಿತೀಯಪಾದಗಳನ್ನು ಪ್ರತ್ಯೇಕ ಮಾಡಲು ಕಾರಣವೇನೆಂದು ಆಕ್ಷೇಪಿಸಲಾಗಿದೆ. ಸಕಲಶಬ್ದಗಳ ಸಮನ್ವಯವನ್ನು ಮಹಾಯೋಗವೃತ್ತಿಯಿಂದ ವಿಷ್ಣುವಿನಲ್ಲಿ ಅಂಗೀಕರಿಸಿದ್ದೀರಿ. ಹೀಗಿರುವಾಗ ನಾಮ ಮತ್ತು ಲಿಂಗಗಳೆಂಬ ಭೇದವೇ ಕೂಡುವುದಿಲ್ಲ. ಏಕೆಂದರೆ ನಾಮ ಎಂದರೆ ರೂಢವೆಂದರ್ಥ. ಎಲ್ಲ ಶಬ್ದಗಳನ್ನು ಭಗವಂತನಲ್ಲಿ ಯೌಗಿಕವೆಂದು ಒಪ್ಪಿದ ಮೇಲೆ ಪುನಃ ನಾಮಾತ್ಮಕ ಲಿಂಗಾತ್ಮಕವೆಂಬ ಪ್ರತ್ಯೇಕತೆಗೆ ಅರ್ಥವಿಲ್ಲ. ಹಾಗಾಗಿದ್ದಲ್ಲಿ ಪ್ರಥಮದ್ವಿತೀಯಪಾದಗಳಿಗೆ ಸಂಗತಿ ದೊರೆಯುತ್ತಿತ್ತು.

ಮತ್ತು ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನೇ ಎರಡೂ ಪಾದಗಳಲ್ಲಿ ಸಮನ್ವಯ ಮಾಡುತ್ತಿರುವುದರಿಂದ ಪಾದಭೇದಕ್ಕೆ ನಿಮಿತ್ತವಿಲ್ಲ. ಹಾಗಾದಲ್ಲಿ ಮೂರನೆಯ ಮತ್ತು ನಾಲ್ಕನೆಯ ಪಾದದಲ್ಲಿ ನಾಮಾತ್ಮಕ ಲಿಂಗಾತ್ಮಕ ಶಬ್ದಗಳ ಸಮನ್ವಯ ಇರುವುದರಿಂದ ಅವುಗಳಿಗಾಗಿ ಇನ್ನೂ ಎರಡೂ ಪಾದಗಳನ್ನು ಪ್ರತ್ಯೇಕವಾಗಿ ರಚಿಸಬೇಕಾಗುತ್ತದೆ.

## ತ್ರಿವಿಧ ಪಾದೋಪಾಧಿಗಳಲ್ಲಿ ತ್ರಿವಿಧ ಲಕ್ಷಣಗಳು

ಪರಮಾತ್ಮನಲ್ಲಿ ಹಾಗೂ ಬೇರೆ ಕಡೆ ಶ್ರುತಿಯಿಂದಲೇ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧಿ ಎನಿಸುತ್ತದೆ. ಶ್ರುತಿಯಿಂದಾಗಲೀ ಲೋಕರೂಢಿಯಿಂದಾಗಲಿ ಅನ್ಯತ್ರಪ್ರಸಿದ್ಧವಾಗಿದ್ದರೆ ಅನ್ಯತ್ರಪ್ರಸಿದ್ಧ ಎನಿಸುತ್ತದೆ. ಬಲಿಷ್ಠವಾದ ಶ್ರುತಿಲಿಂಗಾದಿಗಳಿಂದ ಶಬ್ದಗಳು ಬೇರೆ ಕಡೆಯೇ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧಿ ಎನಿಸುತ್ತದೆ. ಅಥವಾ ಶಬ್ದಗಳು ಪರಮಾತ್ಮನಲ್ಲಿ ಪ್ರಸಿದ್ಧವಾಗಿರುವಂತೆ ಬೇರೆ ಕಡೆಯೂ ಪ್ರಸಿದ್ಧವಾಗಿದ್ದರೆ ಉಭಯತ್ರಪ್ರಸಿದ್ಧ ಎನಿಸುತ್ತದೆ. ಅನ್ಯತ್ರಪ್ರಸಿದ್ಧವಾಗಿರುವಿಕೆ ಮಾತ್ರ ಇಲ್ಲಿ ಸಮನ್ವಯಕ್ಕೆ ವಿರೋಧಿ ಆಗಿದೆ. ಬೇರೆ ಕಡೆ ಪ್ರಸಿದ್ಧವಾಗಿದ್ದು ಪರಮಾತ್ಮನಲ್ಲಿ ಪ್ರಸಿದ್ಧವಾಗದಿದ್ದರೆ ಅನ್ಯತ್ರಪ್ರಸಿದ್ಧ ಎನಿಸುತ್ತದೆ. ಬ್ರಹ್ಮನಲ್ಲಿ ಅಪ್ರಸಿದ್ಧಿ ಬೇರೆಡೆ ಪ್ರಸಿದ್ಧಿ ಎಂಬೆರಡು ಸಮನ್ವಯಕ್ಕೆ ವಿರೋಧಿಗಳಾಗಿವೆ.

ಅನ್ಯತ್ರೈವಪ್ರಸಿದ್ಧಿಯಲ್ಲಿ ಒಟ್ಟು ಮೂರು ವಿರೋಧಗಳು ೧) ಪರಮಾತ್ಮನಲ್ಲಿ ಪ್ರಸಿದ್ಧಿ ಇಲ್ಲದಿರುವಿಕೆ ೨) ಅನ್ಯತ್ರಪ್ರಸಿದ್ಧವಾಗಿರುವಿಕೆ ೩) ಪರಮಾತ್ಮನಲ್ಲಿ ಸಮನ್ವಯವು ಅತ್ಯಂತ ಅಶಕ್ಯವಾಗಿರುವಿಕೆ. ಉಭಯತ್ರಪ್ರಸಿದ್ಧಿಯ ಹೇತುಮುಖಲಕ್ಷಣ

## ಉಭಯತ್ರಪ್ರಸಿದ್ಧಿಯ ಹೇತುಮುಖಲಕ್ಷಣ

ಇಷ್ಟು ಕಾರಣಗಳಿಂದ ಉಭಯತ್ರಪ್ರಸಿದ್ಧಿಯನ್ನು ಹೇಳಬಹುದು

೧) ಶ್ರುತ್ಯಂತರಸಾಧಾರಣ್ಯದಿಂದ
೨) ಪ್ರವೃತ್ತಿನಿಮಿತ್ತಸಾಧಾರಣ್ಯದಿಂದ
೩) ವಿಷಯವಾಕ್ಯದಲ್ಲಿರುವ ಕಾರಣತ್ವಾದಿಧರ್ಮಸಾಧಾರಣ್ಯದಿಂದ
೪) ಪ್ರಯೋಗಸಾಧಾರಣ್ಯದಿಂದ

ಈ ನಾಲ್ಕು ಕಾರಣಗಳಿಂದಷ್ಟೇ ಉಭಯತ್ರಪ್ರಸಿದ್ಧಿಯನ್ನು ಹೇಳಬೇಕು. ಪೂರ್ವಪಕ್ಷಸಿದ್ಧಾಂತನ್ಯಾಯಗಳಿಂದ ಉಭಯತ್ರಪ್ರಸಿದ್ಧಿಯನ್ನು ಹೇಳಬಾರದು.

ಇನ್ನು ಆಕಾಶ ಮೊದಲಾದ ಒಂದೇ ಶಬ್ದಗಳನ್ನು ಮೂರೂ ಪಾದಗಳಲ್ಲಿಯೂ ಸಮನ್ವಯ ಮಾಡುವ ಆವಶ್ಯಕತೆ ಏನು? ಎಂದು ಪ್ರಶ್ನಿಸಲಾಗಿತ್ತು. ಆದರೆ 'ಆಕಾಶಸ್ತಲ್ಲಿಂಗಾತ್' ಎಂದು ವಿಷ್ಣುವಿನಲ್ಲಿ ಸಮನ್ವಯ ಮಾಡುವ ಮೊದಲು ಆಕಾಶಶಬ್ದವು ಲೋಕತಃ ಅನ್ಯತ್ರಪ್ರಸಿದ್ಧವಾಗಿರುತ್ತದೆ.ಆದ್ದರಿಂದ ಪ್ರಥಮಪಾದದಲ್ಲಿ ಸಮನ್ವಯ ಮಾಡಲೇ ಬೇಕು. ವಿಷ್ಣುವಿನಲ್ಲಿ ಸಮನ್ವಯ ಮಾಡಿದ ಮೇಲೆ ಲೋಕದಲ್ಲಿ ಮತ್ತು ವಿಷ್ಣುವಿನಲ್ಲಿ ಪ್ರಸಿದ್ಧವಾಗುವುದರಿಂದ ಉಭಯತ್ರಪ್ರಸಿದ್ಧವಾಗುತ್ತದೆ. ಆದ್ದರಿಂದ ಮೂರನೆಯ ಪಾದದಲ್ಲಿಯೂ ಸಮನ್ವಯ ಮಾಡಬೇಕಾಗುತ್ತದೆ. ಪುನಃ 'ಆತ್ಮನಃ ಆಕಾಶಸ್ಸಂಭೂತಃ' ಇತ್ಯಾದಿ ವಾಕ್ಯಗಳನ್ನು ನೋಡಿದಾಗ ಬ್ರಹ್ಮಲಿಂಗಗಳು ಕಾಣುವುದಿಲ್ಲ. ಸಂಭೂತತ್ವ ಮೊದಲಾದ ವಿಪರೀತಲಿಂಗಗಳಿಂದ ಲೋಕಪ್ರಸಿದ್ಧವಾದ ಭೂತಾಕಾಶವನ್ನೇ ಇಟ್ಟುಕೊಳ್ಳಬೇಕಾಗುತ್ತದೆ. ಹೀಗೆ ಅನ್ಯತ್ರೈವಪ್ರಸಿದ್ಧವೂ ಆಗುವುದರಿಂದ ಅದೇ ಆಕಾಶಶಬ್ದವನ್ನು ನಾಲ್ಕನೆಯ ಪಾದದಲ್ಲಿಯೂ ಸಮನ್ವಯ ಮಾಡಬೇಕಾಗುತ್ತದೆ. ಆದ್ದರಿಂದ ಆಯಾ ಪಾದೋಪಾಧಿಗಳಿದ್ದಾಗ ಒಂದೇ ವಿಧವಾದ ಶಬ್ದಗಳನ್ನು ಮೂರು ಪಾದಗಳಲ್ಲಿಯೂ ಸಮನ್ವಯ ಮಾಡಬಹುದು.

## ಅನ್ಯತ್ರಪ್ರಸಿದ್ಧಿ ಮತ್ತು ಅನ್ಯತ್ರೈವಪ್ರಸಿದ್ಧಿಯ ಹೇತುಮುಖಲಕ್ಷಣ

'ಶ್ರುತ್ಯಾದಿತೋ ಲೋಕತೋ ವಾಽಪೀತರೇಷು ಪ್ರಸಿದ್ಧತಾ' ಎಂದು ಅನ್ಯತ್ರಪ್ರಸಿದ್ಧಿಯ ಹೇತುಮುಖ ಲಕ್ಷಣವನ್ನು ಹಿಂದೆ ಹೇಳಿದ್ದರು. ಅದನ್ನು ಈಗ ಲಕ್ಷ್ಯದಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಇಂದ್ರಾದಿಶಬ್ದಗಳು ಮತ್ತು ಸರ್ವಗತತ್ವಾದಿಲಿಂಗಗಳು ಲೋಕರೂಢಿಯಿಂದ ಅನ್ಯತ್ರಪ್ರಸಿದ್ಧವಾಗಿವೆ. ಕೆಲವೊಮ್ಮೆ ಲಿಂಗಗಳು ಶ್ರುತ್ಯಾದಿಸಾಹಚರ್ಯದಿಂದ ಅನ್ಯತ್ರಪ್ರಸಿದ್ಧವಾಗುತ್ತವೆ. ಆದರೆ ಆ ಶ್ರುತಿಗಳು ನಾಲ್ಕನೇ ಪಾದದ ಶ್ರುತಿಗಳಂತೆ ಪ್ರಬಲವಾಗಿರುವುದಿಲ್ಲವೆಂಬುದು ಗಮನಾರ್ಹವಿಷಯ. ಆದ್ದರಿಂದ ಅನ್ಯತ್ರೈವಪ್ರಸಿದ್ಧಿಯಿಂದ ಸಾಂಕರ್ಯ ಬರುವುದಿಲ್ಲ. ಶ್ರುತ್ಯಂತರ ಸಾಧಾರಣ್ಯದಿಂದ ಅನ್ಯತ್ರಪ್ರಸಿದ್ಧಿಯನ್ನು ಹೇಳದ ಕಾರಣ ಉಭಯತ್ರಪ್ರಸಿದ್ಧಿಯಿಂದಲೂ ಸಾಂಕರ್ಯ ಬರುವುದಿಲ್ಲ.

''ಬಲವತ್‌ಶ್ರುತಿಲಿಂಗಾದ್ಯೈರನ್ಯೇಷ್ವೇವ ಪ್ರಸಿದ್ಧತಾ'' ಎಂದು ಅನ್ಯತ್ರೈವಪ್ರಸಿದ್ಧಿಯ ಹೇತುಮುಖ ಲಕ್ಷಣವನ್ನು ಲಕ್ಷ್ಯದಲ್ಲಿ ತೋರಿಸುವ ಬಗೆ ಹೀಗೆ - 'ಅವ್ಯಕ್ತಾತ್ ಪುರುಷಃ ಪರಃ' 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ವಾಕ್ಯಗಳು ಪ್ರಬಲವಾಗಿವೆ. ಶ್ರುತಿಗಳು ಪ್ರಬಲವಾದ್ದರಿಂದ ಅವ್ಯಕ್ತಾದಿಶಬ್ದಗಳು ಅನ್ಯತ್ರೈವಪ್ರಸಿದ್ಧಗಳೆನಿಸುತ್ತವೆ. ಇವುಗಳನ್ನು ಪರಮಮುಖ್ಯವೃತ್ತಿಯಿಂದ ವಿಷ್ಣುಪರವಾಗುತ್ತವೆಂದು ಸಮನ್ವಯ ಮಾಡಿದರೂ ಅಪರಮಮುಖ್ಯವೃತ್ತಿಯಿಂದ ಅನ್ಯಪರತ್ವವನ್ನು ಅಂಗೀಕರಿಸಲೇಬೇಕು.

## ಅನ್ಯತ್ರೈವಪ್ರಸಿದ್ಧಿಯ ಲಕ್ಷಣದಲ್ಲಿ ಬಲವತ್ ಪದಕ್ಕೆ ಎರಡು ಅರ್ಥ

ನಾಲ್ಕನೇ ಪಾದದ ಪ್ರತಿಯೊಂದು ಅಧಿಕರಣಗಳಲ್ಲಿಯೂ ಉದಾಹರಿಸುವ ಶ್ರುತಿವಾಕ್ಯಗಳು ಪರಮಮುಖ್ಯವೃತ್ತಿಯಿಂದ ಹರಿಪರವಾದರೂ ಅಪರಮಮುಖ್ಯವೃತ್ತಿಯಿಂದ ಅನ್ಯಪರವಾಗಿರುತ್ತವೆ. ಆದರೆ 'ಏತೇನ ಸರ್ವೇ' ಇತ್ಯಾದಿ ಕೊನೆಯ ಅಧಿಕರಣದಲ್ಲಿ ಮಾತ್ರ ಕಥಂಚಿದಪಿ ಅನ್ಯಪರವಾಗದ 'ಅಸದ್ವಾ ಇದಮಗ್ರ' ಎಂಬುದನ್ನು ವಿಷಯವಾಕ್ಯವನ್ನಾಗಿ ಉಲ್ಲೇಖಿಸಿದ್ದಾರಲ್ಲ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಎರಡು ಬಗೆಯಲ್ಲಿ ಉತ್ತರಿಸಬಹುದು - 'ಅಸದ್ವಾ ಇದಮಗ್ರ' ಎಂಬುದು ವಿಷಯವಾಕ್ಯವೇ ಅಲ್ಲ. ಬೇರೆ ವಾಕ್ಯಗಳೇ ವಿಷಯವಾಕ್ಯಗಳು. ಆ ವಿಷಯವಾಕ್ಯದಲ್ಲಿರುವ ಅಸತ್‌ಶಬ್ದವು ಬ್ರಹ್ಮಪರವಾಗದೆ ಶೂನ್ಯಪರವಾದರೆ 'ಅಸದ್ವಾ ಇದಮಗ್ರ' ಎಂಬ ವಾಕ್ಯದಲ್ಲಿರುವ ಅಸತ್ ಶಬ್ದವೂ ಶೂನ್ಯಪರವಾಗಬೇಕಾಗುತ್ತದೆ. ಆದರೆ ಶೂನ್ಯದಿಂದ ಜಗತ್ತು ಹುಟ್ಟಲಾರದು. ಈ ಯುಕ್ತಿಸೂಚನೆಗಾಗಿ ಮಾತ್ರ 'ಅಸದ್ವಾ' ಎಂಬ ವಾಕ್ಯವನ್ನು ಉದಾಹರಿಸಿದ್ದಾರೆ.

ಅಥವಾ 'ಅಸದ್ವಾ ಇದಮಗ್ರ' ಎಂಬುದನ್ನು ವಿಷಯವಾಕ್ಯವನ್ನಾಗಿಯೂ ಪರಿಗಣಿಸಬಹುದು. ಬಲವತ್ ಶ್ರುತಿಲಿಂಗಾದಿಗಳ ಸಮನ್ವಯ ನಾಲ್ಕನೆಯ ಪಾದದಲ್ಲಿ ಮಾಡುತ್ತಾರೆ. ಇಲ್ಲಿ 'ಬಲವತ್' ಎಂದರೆ ಅಪರಮಮುಖ್ಯವೃತ್ತಿಯಿಂದ ಅನ್ಯಪರವಾಗಿರಬೇಕೆಂದು ಅರ್ಥವೇ ಅಲ್ಲ. ಹೊರತಾಗಿ 'ಬ್ರಹ್ಮಪರವಾದರೆ ಬಹುವಿಪ್ಲವವೆಂಬ ತರ್ಕದಿಂದ ಅನುಗ್ರಹವಾಗಿರುವಿಕೆ' ಎಂದು ಅರ್ಥ. ಪ್ರಕೃತ 'ಅಸತ್' ಶಬ್ದವು ನಿಷೇಧವಸ್ತುವಾಚಕ ಶಬ್ದವಾಗಿದೆ. ಇಂತಹ ಅಸತ್ ಶಬ್ದದಿಂದ ಭಗವಂತನು ವಾಚ್ಯನಾದರೆ ಭಾವತ್ವಕ್ಕೆ ಭಂಗ ಬರುತ್ತದೆಂಬ ಬಹುವಿಪ್ಲವ ದೋಷ ಬರುತ್ತದೆ. ಆದ್ದರಿಂದ ಬಹುವಿಪ್ಲವಾಪತ್ತಿಯೆಂಬ ತರ್ಕದಿಂದ ಅನುಗ್ರಹವಿರುವುದರಿಂದ ಬಲವತ್ತ್ವ ಬರುತ್ತದೆ. ಟೀಕೆಯಲ್ಲಿ ಹೇಳಿದಂತೆ 'ಅಸದ್ವಾ ಇದಮಗ್ರ ಆಸೀತ್' ಎಂಬುದೂ ವಿಷಯವಾಕ್ಯವಾಗುತ್ತದೆ.

ಆದ್ದರಿಂದ 'ಬಲವತ್ ಶ್ರುತಿಲಿಂಗಾದ್ಯೈರನ್ಯೇಷ್ವೇವಪ್ರಸಿದ್ಧತಾ' ಎಂಬ ಅನ್ಯತ್ರೈವಪ್ರಸಿದ್ಧಿಯ ಹೇತುಮುಖಲಕ್ಷಣಕ್ಕೆ ಅತಿವ್ಯಾಪ್ತಿ ಮೊದಲಾದ ದೋಷಗಳು ಬರುವುದಿಲ್ಲ. ಇಲ್ಲಿಗೆ ಹೇತುಮುಖಲಕ್ಷಣದ ಸಾಮಾನ್ಯ ಪರಿಚಯ ಮಾಡಿಕೊಟ್ಟಂತಾಯಿತು. ಇದು ಕೇವಲ ದಿಕ್‌ಪ್ರದರ್ಶನ. ಇನ್ನೂ ಹೆಚ್ಚಿನ ವಿಚಾರಗಳನ್ನು ಇದೇ ಮಾರ್ಗದಲ್ಲಿ ವಿಚಾರ ಮಾಡಿ ತಿಳಿದುಕೊಳ್ಳಬೇಕು.

## ನಾಮಲಿಂಗಶಬ್ದಗಳ ಪರಿಚಯ ಮತ್ತು ಪಾದಭೇದವಿಚಾರ

ಇಲ್ಲಿಯ ತನಕ ಅನ್ಯತ್ರಪ್ರಸಿದ್ಧಾದಿಗಳ ಲಕ್ಷಣವನ್ನು ವಿಮರ್ಶಿಸಿದ್ದಾಯಿತು. ಇನ್ನು ಅನ್ಯತ್ರಪ್ರಸಿದ್ಧಾದಿಗಳ ಅವಾಂತರಭೇದದ ಬಗ್ಗೆ ವಿಚಾರ ಮಾಡೋಣ. ಅನ್ಯತ್ರಪ್ರಸಿದ್ಧಾದಿಗಳು ನಾಮಾತ್ಮಕ ಹಾಗು ಲಿಂಗಾತ್ಮಕವೆಂದು ಎರಡೆರಡು ವಿಧಗಳಾಗಿವೆ. ನಾಮಾತ್ಮಕ ಲಿಂಗಾತ್ಮಕ ಶಬ್ದಗಳಲ್ಲಿ ವೈಲಕ್ಷಣ್ಯವನ್ನು ಒಟ್ಟು ಮೂರು ಬಗೆಯಲ್ಲಿ ತೋರಿಸಬಹುದು.

೧) ಆಪಾತತಃ ರೂಢವೇ ಆದದ್ದು ನಾಮಾತ್ಮಕ
ಆಪಾತತಃ ಯೌಗಿಕ ಅಥವಾ ಯೋಗರೂಢವಾದದ್ದು ಲಿಂಗಾತ್ಮಕ

೨) ಆಪಾತತಃ ರೂಢವಾದದ್ದು ನಾಮಾತ್ಮಕ
ಆಪಾತತಃ ಯೋಗಿಕವಾದದ್ದು ಅಥವಾ ಯೋಗರೂಢವಾದ್ದು ಲಿಂಗಾತ್ಮಕ

೩) ಧರ್ಮದ ಮೂಲಕ ಧರ್ಮಿಯ ಉಪಸ್ಥಾಪಕವಾದದ್ದು ಲಿಂಗಾತ್ಮಕ
ಧರ್ಮಿಯನ್ನೇ ನೇರವಾಗಿ ತಿಳಿಸುತ್ತಿದ್ದರೆ ನಾಮಾತ್ಮಕ ಎಂದು.

ಅನ್ಯತ್ರಪ್ರಸಿದ್ಧಿಯು ನಾಮ ಲಿಂಗವೆಂದು ಎರಡು ವಿಧವಾಗಿದೆ. ಆದ್ದರಿಂದ ನಾಮಾತ್ಮಕಶಬ್ದಗಳ ಸಮನ್ವಯಕ್ಕೆ ಪ್ರಥಮಪಾದವು, ಲಿಂಗಾತ್ಮಕ ಶಬ್ದಗಳ ಸಮನ್ವಯಕ್ಕೆ ದ್ವಿತೀಯಪಾದವು ಹೊರಟಿದೆ. ಹಾಗಾದರೆ ಉಭಯತ್ರಪ್ರಸಿದ್ಧಿಯಲ್ಲಿ ಮತ್ತು ಅನ್ಯತ್ರೈವಪ್ರಸಿದ್ಧಿಯಲ್ಲಿಯೂ ಪ್ರತ್ಯೇಕ ಪಾದಗಳಿಂದ ನಾಮ ಲಿಂಗಗಳ ಸಮನ್ವಯ ಮಾಡಬೇಕಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಮೂರು ಬಗೆಯಲ್ಲಿ ಉತ್ತರಿಸಬಹುದು -

೧) ಒಂದು ಅಧ್ಯಾಯದಲ್ಲಿ ನಾಲ್ಕೇ ಪಾದಗಳಿರಬೇಕು. ನಿಮ್ಮ ಪ್ರಕಾರ ಆರು ಪಾದಗಳಾಗಬೇಕಾಗುತ್ತವೆ.

೨) ನಾಮಾತ್ಮಕಶಬ್ದಗಳು ಪ್ರಧಾನವಾಗಿವೆ. ಲಿಂಗಾತ್ಮಕಶಬ್ದಗಳು ಬುದ್ಧಿಸ್ಥವಾಗಿವೆ. ಈಗ ಪ್ರಸಕ್ತವಾದ ಎರಡೂ ವಿಧ ಶಬ್ದಗಳನ್ನು ಮೂರನೆಯ ನಾಲ್ಕನೆಯ ಪಾದದಲ್ಲಿ ಒಟ್ಟಿಗೆ ಸಮನ್ವಯ ಮಾಡಿದ್ದಾರೆ.

೩) ಮೊದಲೆರಡು ಪಾದಗಳಲ್ಲಿ ನಾಮಲಿಂಗವೆಂಬ ಅವಾಂತರಭೇದವನ್ನು ವಿವಕ್ಷಿಸಿ ಪಾದಭೇದ ಮಾಡಿದ್ದಾರೆ. ಮೂರು ನಾಲ್ಕನೆಯ ಪಾದಗಳಲ್ಲಿ ನಾಮಲಿಂಗವೆಂಬ ಅವಾಂತರಭೇದವನ್ನು ವಿವಕ್ಷಿಸದೇ ಮಹಾಯೋಗ ವಿದ್ವದ್ರೂಢಿಗಳಿಂದ ಏಕೀಕರಿಸಿ ಒಟ್ಟಿಗೆ ಸಮನ್ವಯ ಮಾಡಿದ್ದಾರೆ. ಆದ್ದರಿಂದ ಸೂತ್ರಕಾರರು ವಿಭಾಗಿಸಿದ ಪಾದಭೇದವು ಅತ್ಯಂತ ಸಮಂಜಸವಾಗಿದೆ.

### ಪಾದಕ್ರಮ ನಿರೂಪಣೆ

ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯವನ್ನು ಕೊನೆಯಲ್ಲೇ ಮಾಡಬೇಕು. ಆ ಶಬ್ದಗಳು ಬ್ರಹ್ಮಾದಿಗಳಿಂದಷ್ಟೇ ಚಿಂತಿಸಲು ಅರ್ಹವಾದವುಗಳು. ಸಾತ್ವಿಕಜೀವಿಗಳಿಂದ ಚಿಂತಿಸಲು ಅರ್ಹವಾದ ಶಬ್ದಗಳನ್ನು ಮೊದಲು ಸಮನ್ವಯ

ಮಾಡುವುದು ಅತ್ಯಂತ ಉಚಿತ. ಮತ್ತು ಮೂರು ಪಾದಗಳಲ್ಲಿ ಸಮರ್ಥಿಸಿದ ವಿಚಾರದ ಬಳಿಕ ಹೆಚ್ಚಿನ ವಿಚಾರವನ್ನು ಮಾಡಿದ್ದರಿಂದ ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯವನ್ನು ಕೊನೆಯದಾಗಿ ಹೇಳಿದ್ದಾರೆ. ಮತ್ತು ಮೊದಲ ಮೂರು ಪಾದಗಳ ಶಬ್ದಗಳೆಲ್ಲ ಜಗತ್ಕಾರಣತ್ವಾದಿ ಗುಣಗಳ ಸಮನ್ವಯದಲ್ಲಿ ಪರ್ಯವಸಾನವಾಗಿವೆ. ಆದರೆ ನಾಲ್ಕನೆಯ ಪಾದ ಹಾಗಿಲ್ಲದ ಕಾರಣ ಕೊನೆಯದಾಗಿ ಹೇಳುವ ಅನಿವಾರ್ಯತೆ ಬಹಳ ಇದೆ.

ಇನ್ನು ಉಭಯತ್ರಪ್ರಸಿದ್ಧವಾದ ಶಬ್ದಗಳನ್ನು ಮೊದಲು ಹೇಳಿ ಆಮೇಲೆ ಅನ್ಯತ್ರಪ್ರಸಿದ್ಧವಾದ ಶಬ್ದಗಳ ಸಮನ್ವಯ ಮಾಡಬಹುದಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಉಭಯತ್ರಪ್ರಸಿದ್ಧಶಬ್ದಗಳು ಭಾಗಶಃ ವಿಷ್ಣುವಿನಲ್ಲಿ ಪ್ರಸಿದ್ಧಗಳಾದ್ದರಿಂದ ಅವುಗಳ ಸಮನ್ವಯ ಸುಲಭ. ಅನ್ಯತ್ರಪ್ರಸಿದ್ಧಶಬ್ದಗಳು ಹಾಗಲ್ಲದ ಕಾರಣ ಅವುಗಳ ಸಮನ್ವಯ ಕಷ್ಟಕರವಾಗಿದೆ. ಆದ್ದರಿಂದ ಯುದ್ಧದಲ್ಲಿ ಮಹಾಮಲ್ಲನನ್ನೇ ಮೊದಲು ಕೊಲ್ಲುವಂತೆ ಇಲ್ಲಿ ಅನ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವನ್ನು ಮೊದಲು ಮಾಡಿದ್ದಾರೆ. ಅನ್ಯತ್ರಪ್ರಸಿದ್ಧಶಬ್ದಗಳಲ್ಲಿಯೂ ನಾಮಮಾತ್ರಕಶಬ್ದಗಳು ಪ್ರಬಲವಾದ್ದರಿಂದ ಮೊದಲು ನಾಮಸಮನ್ವಯ ಮಾಡಿ ಅನಂತರ ಲಿಂಗಸಮನ್ವಯ ಮಾಡಿದ್ದಾರೆ. ಮತ್ತು ನಾಮಸಮನ್ವಯ ಮಾಡುವಾಗ ಉಪಯೋಗಿಸಿದ ಲಿಂಗಗಳು ಹರಿಪರವೇ? ಅಲ್ಲವೇ? ಎಂಬ ಪ್ರಶ್ನೆ ಬಂದರೆ ಅದಕ್ಕೆ ಸಮಾಧಾನವಾಗಿರುವುದಕ್ಕಾಗಿಯೂ ಲಿಂಗಸಮನ್ವಯವನ್ನು ಎರಡನೆಯದಾಗಿ ಹೇಳಿದ್ದಾರೆ. ಆದ್ದರಿಂದ ೧) ಅನ್ಯತ್ರಪ್ರಸಿದ್ಧನಾಮಸಮನ್ವಯ ೨) ಅನ್ಯತ್ರಪ್ರಸಿದ್ಧಲಿಂಗಸಮನ್ವಯ ೩) ಉಭಯತ್ರ-ಪ್ರಸಿದ್ಧಶಬ್ದಸಮನ್ವಯ ೪) ಅನ್ಯತ್ರೈವಪ್ರಸಿದ್ಧಶಬ್ದಸಮನ್ವಯ. ಈ ಕ್ರಮವು ಅತ್ಯಂತ ಸ್ವಾರಸ್ಯಮಯವೂ ಅರ್ಥಪೂರ್ಣವೂ ಆಗಿದೆ.

### ಅನ್ಯತ್ರ ಹಾಗೂ ಉಭಯತ್ರಪ್ರಸಿದ್ಧಿಶಬ್ದಗಳ ಸಮನ್ವಯವು ಅತ್ಯಾವಶ್ಯಕ

ಅನ್ಯತ್ರಪ್ರಸಿದ್ಧಶಬ್ದಗಳನ್ನು ಸಮನ್ವಯ ಮಾಡುವಾಗ ಅನ್ಯಪರತ್ವವನ್ನು ಅಂಗೀಕರಿಸದೆ ಕೇವಲ ಬ್ರಹ್ಮಪರತ್ವವನ್ನು ಹೇಳಬೇಕು. ಅನ್ಯತ್ರೈವಪ್ರಸಿದ್ಧಶಬ್ದಗಳನ್ನು ಸಮನ್ವಯ ಮಾಡುವಾಗ ಅನ್ಯಪರತ್ವವನ್ನು ಒಪ್ಪಿ ಬ್ರಹ್ಮಪರತ್ವವನ್ನು ಹೇಳಬೇಕು. ಹೀಗೆ ಎರಡು ವಿಧ ಶಬ್ದಗಳಲ್ಲಿರುವ ಸೂಕ್ಷ್ಮವ್ಯತ್ಯಾಸವನ್ನು ಗಮನಿಸಬೇಕು. ಈ ವ್ಯತ್ಯಾಸವಿಲ್ಲದಿದ್ದಲ್ಲಿ ಅತ್ಯತ್ರಪ್ರಸಿದ್ಧಶಬ್ದಗಳ ಸಮನ್ವಯವು ಪ್ರಬಲವಾದ ಅನ್ಯತ್ರೈವಪ್ರಸಿದ್ಧಶಬ್ದಗಳ ಸಮನ್ವಯದಿಂದಲೇ ಸಿದ್ಧವಾಗುತ್ತಿತ್ತು. ಪ್ರತ್ಯೇಕವಾಗಿ ಸಮನ್ವಯ ಮಾಡುವ ಅವಶ್ಯಕತೆ ಇರುತ್ತಿರಲಿಲ್ಲ.

ಮತ್ತು ಮೊದಲ ಮೂರು ಪಾದಗಳಲ್ಲಿ ನಿರ್ಣಯಿಸಿದ ವಿಚಾರವನ್ನು ಆಶ್ರಯಿಸಿ ನಾಲ್ಕನೆಯ ಪಾದ ಹೊರಟಿದೆ. ಹೀಗೆ ಒಪ್ಪದಿದ್ದರೂ ಮೂರು ಪಾದಗಳಿಗೆ ಸಾರ್ಥಕ್ಯ ಹೇಳುವುದು ಕಷ್ಟವಾಗುತ್ತದೆ. ಮೊದಲ ಮೂರುಪಾದಗಳು ನಾಲ್ಕನೆಯ ಪಾದಕ್ಕೆ ಉಪಜೀವ್ಯವೆಂದು ಹೇಳಿದಾಗ ಮೊದಲ ಮೂರುಪಾದಗಳಿಲ್ಲದೆ ನಾಲ್ಕನೇ ಪಾದ ಹೊರಡಲು ಸಾಧ್ಯವಿಲ್ಲ. ಆದರೂ ನಾಲ್ಕನೇ ಪಾದದಿಂದ ಮೂರು ಪಾದಗಳಿಗೆ ವೈಯ್ಯರ್ಥ್ಯ ಹೇಳಿದರೆ ಪೂರ್ವಮೀಮಾಂಸೆಯಲ್ಲಿ ಸ್ವರ್ಗಕಾಮಾಧಿಕರಣವನ್ನು ಉಪಜೀವಿಸಿ ಹೊರಟ ಭಾವಾರ್ಥಾಧಿ-ಕರಣದಿಂದ ಸ್ವರ್ಗಕಾಮಾಧಿಕರಣಕ್ಕೆ ವೈಯ್ಯರ್ಥ್ಯ ಹೇಳಬೇಕಾಗುತ್ತದೆ. ಆದ್ದರಿಂದ ಯಾವ ಅಧಿಕರಣದ

ಸಿದ್ಧಾಂತವನ್ನು ಆಶ್ರಯಿಸಿ ಯಾವ ಅಧಿಕರಣ ಹೊರಟಿರುತ್ತದೋ ಅದೇ ಅಧಿಕರಣದ ಸಿದ್ಧಾಂತಕ್ಕೆ ಆ ಅಧಿಕರಣದ ಪೂರ್ವಪಕ್ಷದಿಂದ ವಿರೋಧ ಹೇಳಬಾರದು.

ಇನ್ನು 'ತತ್ರಪ್ರಸಿದ್ಧ' ಶಬ್ದಕ್ಕೆ 'ಅನ್ಯಪರತ್ವ ಶಂಕೆ ಇಲ್ಲದ್ದು' ಎಂದರ್ಥ. ಆದ್ದರಿಂದ ತತ್ರಪ್ರಸಿದ್ಧವಾದ 'ವಿಷ್ಣು' 'ನಾರಾಯಣ' ಮೊದಲಾದ ಶಬ್ದಗಳನ್ನೂ ಪ್ರತ್ಯೇಕ ಸಮನ್ವಯ ಮಾಡಬೇಕೆಂಬ ಆಕ್ಷೇಪ ಬರುವುದಿಲ್ಲ. 'ಜನಿತೋತ ವಿಷ್ಣೋಃ' ಎಂಬಲ್ಲಿರುವ 'ವಿಷ್ಣು' ಶಬ್ದವು ಅನ್ಯಪರತ್ವಶಂಕೆಯಿಂದ ಕೂಡಿದೆ; ಹಾಗಾಗಿ ಅನ್ಯತ್ರಪ್ರಸಿದ್ಧವೆನಿಸುತ್ತದೆ. ಇಂತಹ ಶಬ್ದಗಳ ಸಮನ್ವಯವು ಅತ್ಯಾವಶ್ಯಕ.

## ನಾಲ್ಕು ಪಾದಗಳಲ್ಲಿ ಏನೇನು? (ಅದ್ವೈತಮತ ವಿಮರ್ಶೆ)

ಅದ್ವೈತಿಗಳೂ ಕೂಡ ಪ್ರಥಮಾಧ್ಯಾಯವನ್ನು ಸಮನ್ವಯಾಧ್ಯಾಯವೆಂದು ಒಪ್ಪುತ್ತಾರೆ. ಆದರೆ 'ಅನ್ಯತ್ರಪ್ರಸಿದ್ಧ' ಇತ್ಯಾದಿಯಾಗಿ ನಾವು ಹೇಳುವಂತೆ ಪಾದೋಪಾಧಿಗಳನ್ನು ಹೇಳುವುದಿಲ್ಲ. ಅವರು ಹೇಳುವ ಪಾದಭೇದದ ವ್ಯವಸ್ಥೆ ಹೀಗಿದೆ -

ಪ್ರಥಮಪಾದ - ಸ್ಪಷ್ಟಬ್ರಹ್ಮಲಿಂಗಗಳ ಸಮನ್ವಯ
ದ್ವಿತೀಯಪಾದ - ಸವಿಶೇಷನಲ್ಲಿ ಅಸ್ಪಷ್ಟಲಿಂಗಗಳ ಸಮನ್ವಯ
ತೃತೀಯಪಾದ - ನಿರ್ವಿಶೇಷನಲ್ಲಿ ಅಸ್ಪಷ್ಟಲಿಂಗಗಳ ಸಮನ್ವಯ
ಚತುರ್ಥಪಾದ - ಪ್ರಧಾನಕ್ಕೆ ಶಬ್ದಪ್ರತಿಪಾದ್ಯತ್ವ ನಿರಾಕರಣೆ.

ಈ ಕ್ರಮದಲ್ಲಿ ಪಾದಭೇದದ ವ್ಯವಸ್ಥೆ ಮಾಡಿದ್ದಾರೆ. ಆದರೆ ವ್ಯವಸ್ಥೆಗೆ ವಿರುದ್ಧವಾಗಿ ವಿಷಯವಾಕ್ಯಗಳನ್ನು ಉಲ್ಲೇಖಿಸಿದ್ದಾರೆ. ಪ್ರಥಮಪಾದದಲ್ಲಷ್ಟೇ ಸ್ಪಷ್ಟಬ್ರಹ್ಮಲಿಂಗಗಳನ್ನು ಹೇಳಿ ಮುಗಿಸಬೇಕಿತ್ತು. ಆದರೆ ಎರಡನೆಯ ಪಾದದ ಅನೇಕ ಅಧಿಕರಣಗಳಲ್ಲಿ ಪುನಃ ಸ್ಪಷ್ಟಬ್ರಹ್ಮಲಿಂಗಗಳುಳ್ಳ ವಿಷಯವಾಕ್ಯಗಳನ್ನೇ ಹೇಳಿದ್ದಾರೆ. ಅಷ್ಟೇ ಅಲ್ಲದೇ ಮೂರನೆಯ ಪಾದದಲ್ಲಿಯೂ ಅನೇಕ ಕಡೆ ಸ್ಪಷ್ಟಬ್ರಹ್ಮಲಿಂಗಗಳೇ ಕಾಣಸುತ್ತಿವೆ.

ಇನ್ನು ಅದ್ವೈತಿಗಳು ಸ್ಪಷ್ಟತ್ವದ ಪರಿಷ್ಕಾರವನ್ನು ಮೂರು ಬಗೆಯಲ್ಲಿ ಮಾಡುತ್ತಾರೆ -

೧) ಸ್ವಾರಸ್ಯದಿಂದ ಅಥವಾ ಅಸ್ವಾರಸ್ಯದಿಂದ ಜೀವನಲ್ಲಿ ಆ ಧರ್ಮವು ಬರಬಾರದು.
೨) ವಿಷಯವಾಕ್ಯದಲ್ಲಿ ಬ್ರಹ್ಮನ ಧರ್ಮವಾಗಿ ನಿರ್ಣೀತವಾಗಿರಬೇಕು.
೩) ಜೀವಾದಿಗಳನ್ನು ತಿಳಿಸುವ ಲಿಂಗಗಳು ಇರಬಾರದು ಎಂದು.

ಆದರೆ ಈ ಮೂರರಲ್ಲಿ ಯಾವುದೇ ಒಂದನ್ನು ಇಟ್ಟುಕೊಂಡರೂ ಯಾವ ಅಧಿಕರಣದ ಪೂರ್ವಪಕ್ಷವೂ ಹುಟ್ಟುವುದಿಲ್ಲ. ಆದ್ದರಿಂದ ಸ್ಪಷ್ಟತ್ವದ ಪರಿಷ್ಕಾರವನ್ನು ಹೀಗೆ ಮಾಡಬೇಕು -

೧) ವಿಷಯವಾಕ್ಯ ಬಿಟ್ಟು ಬೇರೆ ವಾಕ್ಯಗಳಿಂದ ಬ್ರಹ್ಮನ ಧರ್ಮವೆಂದು ನಿರ್ಣಯವಾಗಿರಬೇಕು.
೨) ಜೀವಾದಿಗಳಲ್ಲಿ ಸ್ವಾರಸ್ಯವಾಗಿ ಕೂಡಬಾರದು ಎಂದು.

ಸವಿಶೇಷನನ್ನು ಎರಡನೆಯ ಪಾದವು ಸಮರ್ಥಿಸುತ್ತದೆಂದು ಹೇಳುತ್ತಾರೆ. ಆದರೆ ಸರ್ವಭ್ರಮಾಧಿಷ್ಠಾನತ್ವ, ಕಾಲತ್ರಯಾತೀತತ್ವ ಮೊದಲಾದವು ಸವಿಶೇಷನಲ್ಲ; ಬಾರದ ಧರ್ಮಗಳನ್ನೇ ಎರಡನೆಯ ಪಾದದಲ್ಲಿ ಹೇಳಿದ್ದಾರೆ. ನಿರ್ವಿಶೇಷನನ್ನು ಮೂರನೆಯ ಪಾದ ಸಮರ್ಥಿಸುತ್ತದೆಂದು ಹೇಳಿದ್ದಾರೆ. ಆದರೆ ದೃಶ್ಯತ್ವ, ರೂಪಿತ್ವ, ಸಪ್ರಕಾರಕಜ್ಞಾನವಿಷಯತ್ವವೇ ಮೊದಲಾದ ಧರ್ಮಗಳನ್ನು ಹೇಳಿದ್ದಾರೆ. ಇವು ಸವಿಶೇಷನಲ್ಲಿ ಬರುತ್ತವೆ ಹೊರತು ನಿರ್ವಿಶೇಷನಲ್ಲಿ ಬರುವುದಿಲ್ಲ.

ಹೀಗೆ ಅದ್ವೈತಿಗಳ ಪಾದೋಪಾಧಿಗಳು ಸಾಂಕರ್ಯದೋಷಗ್ರಸ್ತಗಳಾಗಿವೆ.

## ಐದು ಸಂಗತಿಗಳ ನಿರೂಪಣೆ

ಒಟ್ಟು ಸಂಗತಿಯು ಐದುವಿಧವಾಗಿದೆ ೧) ಶಾಸ್ತ್ರಸಂಗತಿ ೨) ಅಧ್ಯಾಯಸಂಗತಿ ೩) ಪಾದಸಂಗತಿ ೪) ಶ್ರುತಿಸಂಗತಿ ೫) ಅಧಿಕರಣಸಂಗತಿ ಎಂದು. ಈ ಐದು ಸಂಗತಿಗಳನ್ನು ಮುಂದೆ ಪ್ರತಿಯೊಂದು ಅಧಿಕರಣಗಳ ಪ್ರಾರಂಭದಲ್ಲಿ ಸಮನ್ವಯ ಮಾಡಿ ತಿಳಿದುಕೊಳ್ಳಬೇಕು.

ವಸ್ತುತಃ ಸಂಗತಿಯು ಎರಡುವಿಧ - ೧) ಅಂತರ್ಭಾವ ೨) ಆನಂತರ್ಯ ಎಂದು. ಇವೆರಡರಲ್ಲಿ ಅಂತರ್ಭಾವಸಂಗತಿಯು ಪ್ರಧಾನವಾಗಿ ಮೂರುವಿಧ - ೧) ಶಾಸ್ತ್ರಾಂತರ್ಭಾವ ೨) ಅಧ್ಯಾಯಾಂತರ್ಭಾವ ೩) ಪಾದಾಂತರ್ಭಾವ ಎಂದು. ಇನ್ನು ಆನಂತರ್ಯಸಂಗತಿಯು ಪ್ರಧಾನವಾಗಿ ಎರಡುವಿಧ - ೧) ಶ್ರುತ್ಯಾನಂತರ್ಯ ೨) ಅಧಿಕರಣಾನಂತರ್ಯ ಎಂದು. ಆದರೆ ಅಂತರ್ಭಾವಸಂಗತಿಯಾಗಲೀ ಆನಂತರ್ಯಸಂಗತಿಯಾಗಲೀ ಇನ್ನೂ ಅನೇಕ ಬಗೆಯಲ್ಲಿವೆ. ಅವುಗಳಲ್ಲಿ ಕೆಲವನ್ನಷ್ಟೇ ಗ್ರಂಥಕಾರರು ಇಲ್ಲಿ ಹೇಳಿದ್ದಾರೆ. ೧) ಪೇಟಿಕಾಸಂಗತಿ ೨) ಅಧ್ಯಾಯದ್ವಿಕಸಂಗತಿ ೩) ಪಾದತ್ರಿಕಸಂಗತಿ ೪) ಪಾದದ್ವಯಸಂಗತಿ ಹೀಗೆ ಅಂತರ್ಭಾವಸಂಗತಿಯು ಹಲವು ಬಗೆಯಲ್ಲಿ ತಿಳಿಯಬಹುದು.

ಆನಂತರ್ಯಸಂಗತಿಯೂ ಸಹ ೧) ಆಕ್ಷೇಪಿಕೀ ೨) ಅತಿದೇಶಿಕೀ ೩) ಔಪೋದ್ಘಾತಕೀ ೪) ಅಪವಾದಿಕೀ ೫) ಪ್ರಾಸಂಗಿಕೀ ೬) ಪ್ರತ್ಯುದಾಹರಣ ೭) ಬುದ್ಧಿಸ್ಥಾನಾ ಹೀಗೆ ಹಲವು ಬಗೆಯಲ್ಲಿವೆ. ಆನಂತರ್ಯಸಂಗತಿಯು ಬಹುಬಗೆಯಲ್ಲಿದ್ದರೂ ೧) ಪ್ರಾಸಂಗಿಕೀ ೨) ಔಪೋದ್ಘಾತಕೀ ೩) ಅವಸರಪ್ರಾಪ್ತಿ ೪) ಕಾರಣತಾ ೫) ಕಾರ್ಯತಾ ೬) ಏಕಕಾರ್ಯತ್ವ ಎಂಬ ಆರುವಿಧಸಂಗತಿಗಳಲ್ಲೇ ಸೇರುತ್ತವೆ.

## ನಾಮಾತ್ಮಕವಾದ ಆನಂದಮಯಶಬ್ದಕ್ಕೆ ಪಾದಾಂತರ್ಭಾವ

ನಮ್ಮಲ್ಲೇ ಕೆಲವರು ಆನಂದಮಯಶಬ್ದವನ್ನು ಕೇವಲ ಯೌಗಿಕವೆನ್ನುತ್ತಾರೆ. ಕೆಲವರು ಕೇವಲ ರೂಢವೆನ್ನುತ್ತಾರೆ. ಇವರಿಬ್ಬರ ಅಭಿಪ್ರಾಯವೂ ಸಮಂಜಸವಲ್ಲ. ಆನಂದಮಯಶಬ್ದವನ್ನು ರೂಢವೆಂದು ನಾಮಪಾದದಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಯೌಗಿಕವೆಂದು ಹೇಳಿದರೆ ರೂಢಲಕ್ಷಣ ಬಾರದಕಾರಣ ಇಲ್ಲಿ ಮಾಡುವ ಸಮನ್ವಯವು ತಪ್ಪಾಗುತ್ತದೆ. ಕೇವಲ ರೂಢವೆನ್ನುವುದೂ ತಪ್ಪಾಗುತ್ತದೆ. ಪೂರ್ವಪಕ್ಷದಲ್ಲಿ ಹಾಗೂ ಸಿದ್ಧಾಂತದಲ್ಲಿ ಆನಂದವಿಕಾರಪ್ರಚುರವಾದ ಆನಂದ ಎಂದು ಅವಯವಾರ್ಥವನ್ನು ಸ್ವೀಕರಿಸಿದ್ದಾರೆ.

ಇನ್ನೂ ಕೆಲವರು ಆನಂದಮಯಶಬ್ದವು ಯೌಗಿಕವೂ ರೂಢವೂ ಆಗಿದೆ ಎನ್ನುತ್ತಾರೆ. ಆದರೆ ಇವರು ಹೇಳುವ ಪಾದಾಂತರ್ಭಾವಸಂಗತಿಯು ಅಸಾಧುವಾಗಿದೆ. ಆನಂದಮಯಶಬ್ದವು ನಾಮಾತ್ಮಕವೂ ಲಿಂಗಾತ್ಮಕವೂ ಆಗಿರುವುದರಿಂದ ಎರಡೂ ಪಾದಗಳಲ್ಲಿ ಸೇರುವುದಿಲ್ಲ. ಆದ್ದರಿಂದ ಎರಡು ಪಾದಗಳ ಮೊದಲು ಅಥವಾ ಕೊನೆಯಲ್ಲಿ ಹೇಳಬೇಕು. 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಮೊದಲೇ ಹೇಳಿದ್ದಾರೆಂದು ಇವರ ವಾದ. ಈ ವಿಷಯದಲ್ಲಿ ದೃಷ್ಟಾಂತವನ್ನೂ ಹೇಳುತ್ತಾರೆ. ಸ್ಮೃತ್ಯಧಿಕರಣದಲ್ಲಿ ಶ್ರುತಿ, ಸಮಯ ಮೊದಲಾದ ನಾಲ್ಕು ವಿಧವಾದ ವಿರೋಧಗಳನ್ನು ಪರಿಹರಿಸುವುದರಿಂದ ಎರಡನೆಯ ಅಧ್ಯಾಯದ ನಾಲ್ಕೂ ಪಾದಗಳಲ್ಲಿ ಹೇಗೆ ಸೇರುವುದಿಲ್ಲವೋ ಅದರಂತೆ ಎಂದು.

ಇವರ ವಾದದಲ್ಲಿ ಹುರುಳಿಲ್ಲ. ಸ್ಮೃತ್ಯಧಿಕರಣದ ದೃಷ್ಟಾಂತ ಅತ್ಯಂತ ವಿಷಮವಾಗಿದೆ. ಸ್ಮೃತ್ಯಧಿಕರಣದಲ್ಲಿ ನಾಲ್ಕುವಿಧವಾದ ವಿರೋಧಗಳನ್ನು ಪರಿಹರಿಸಿದ್ದರಿಂದ ಯಾವ ಪಾದದಲ್ಲಿ ಬೇಕಾದರೂ ಸೇರಿಸಬಹುದು. ಆದ್ದರಿಂದ ಮೊದಲೇ ಹೇಳಿದ್ದಾರೆ. ಇದರಂತೆ ಆನಂದಮಯಶಬ್ದವೂ ಸಹ ನಾಮಾತ್ಮಕ ಹಾಗೂ ಲಿಂಗಾತ್ಮಕ ಆಗಿದ್ದರಿಂದ ಎರಡು ಪಾದದಲ್ಲಿ ಎಲ್ಲಿ ಬೇಕಾದರೂ ಸೇರಿಸಬಹುದು. 'ಪ್ರಥಮಾತಿಕ್ರಮಣೇ ಮಾನಾಭಾವಾತ್' ಮೊದಲೇ ಹೇಳಿದ್ದಾರೆಂದು ತಿಳಿಯಬೇಕು. ಅಥವಾ ಆನಂದಮಯಶಬ್ದವು ಆಪಾತತಃ ರೂಢವಾದ್ದರಿಂದ ಕೇವಲ ನಾಮಾತ್ಮಕವಾಗಿದೆಯೆಂದೂ ಹೇಳಬಹುದು.

## ಆನಂದಮಯಾಧಿಕರಣದಲ್ಲಿ ಮುಖತಃ ಲಿಂಗಸಮನ್ವಯ

ಆನಂದಮಯ ಶಬ್ದವು ನಾಮಾತ್ಮಕವೆಂದು ಈ ಹಿಂದೆ ಹೇಳಿದರು. ಆದರೆ ಈಗ ಲಿಂಗಾತ್ಮಕವೆಂದು ಹೇಳುತ್ತಿದ್ದಾರೆ. 'ಆನಂದ' ಎಂಬುದು ನಾಮಾತ್ಮಕ ಶಬ್ದ. ಆನಂದಮಯವೆಂಬ ಲಿಂಗದ ಸಮನ್ವಯದಿಂದ ಆನಂದಾದಿ ಅನೇಕನಾಮಗಳ ಸಮನ್ವಯವು ಫಲತಃ ಸಿದ್ಧವಾಗುತ್ತದೆ. ಯಾವ ರೀತಿಯಾಗಿ ನಾಮಪಾದದಲ್ಲಿ ಸೇರಿದೆಯೋ ಅದರಂತೆ ಆನಂದಮಯಾಧಿಕರಣವೂ ಸೇರಿದೆ. ಹಾಗಾದರೆ ನಾಮಪಾದದಿಂದ ಸಂಗತಿ ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಸುಲಭವಾಗಿ ಉತ್ತರಿಸಬಹುದು. ಮೇಲ್ನೋಟಕ್ಕೆ ಆನಂದಮಯ ಎಂಬ ಲಿಂಗಸಮನ್ವಯ ಮಾಡುತ್ತಿದ್ದರೂ ಅನೇಕ ನಾಮಗಳ ಸಮನ್ವಯವೇ ಫಲತಃ ಸಿದ್ಧವಾಗುತ್ತದೆ. ಫಲತಃ ಸಿದ್ಧವಾಗುವ ನಾಮಸಮನ್ವಯವನ್ನು ವಿವಕ್ಷಿಸಿ ನಾಮಪಾದದಲ್ಲಿ ಸೇರಿಸಿದ್ದು ಯುಕ್ತವಾಗಿದೆ. ಈ

ವಿಷಯದಲ್ಲಿ ಪೂರ್ವಮೀಮಾಂಸೆಯ ವಿದ್ವದ್ವಾಕ್ಯಾಧಿಕರಣವು ಬ್ರಹ್ಮಮೀಮಾಂಸೆಯಲ್ಲಿ ಅಸದಧಿಕರಣ ಅಂತರಧಿಕರಣಗಳು ಉದಾಹರಣೆಯಾಗಿವೆ. ಸೂತ್ರಕಾರರು ಆನಂದ ಎಂಬ ನಾಮಸಮನ್ವಯವನ್ನೇ ನೇರವಾಗಿ ಮಾಡಿದ್ದರೆ ನಾಮಪಾದದ ಸಂಗತಿ ಇನ್ನೂ ಹೆಚ್ಚು ಸ್ವರಸವಾಗುತ್ತಿತ್ತಲ್ಲವೇ? ಎಂದರೆ, ಹೌದು. ಆದರೆ ಕೇವಲ ಆನಂದ ಶಬ್ದದಿಂದ ಪೂರ್ವಪಕ್ಷಸಿದ್ಧಾಂತ ಬೀಜಗಳೇ ಸ್ಥಾಪನೆಯಾಗುತ್ತಿರಲಿಲ್ಲ. ಆನಂದಮಯ ಎಂಬಲ್ಲಿರುವ ಮಯಟ್ ಪ್ರತ್ಯಯ ಇರುವುದೇ ಈ ಅಧಿಕರಣ ರಚನೆಗೆ ಪ್ರಧಾನ ಕಾರಣವಾಗಿದೆ.

## ಈಕ್ಷತ್ಯಧಿಕರಣದಿಂದ ಆನಂತರ್ಯಸಂಗತಿ

ಈಕ್ಷತ್ಯಧಿಕರಣದ ಅನಂತರ ಬೇರೆ ಅಧಿಕರಣಗಳನ್ನು ಹೇಳಬಹುದಿತ್ತು. ಅಥವಾ ಈಕ್ಷತ್ಯಧಿಕರಣಕ್ಕಿಂತ ಮೊದಲೇ ಆನಂದಮಯಾದ್ಯಧಿಕರಣಗಳನ್ನು ಹೇಳಬಹುದಿತ್ತು? ಎಂಬ ಪ್ರಶ್ನೆಗೆ ಇಲ್ಲಿ ಸಮಂಜಸವಾಗಿ ಉತ್ತರ ನೀಡಿದ್ದಾರೆ. ಆನಂದಮಯಾಧಿಕರಣದಿಂದ ಆರಂಭಿಸಿ ಸಂಪೂರ್ಣ ಅಧ್ಯಾಯದಲ್ಲಿ ಸಕಲಶಬ್ದಗಳ ಸಮನ್ವಯ ಮಾಡಿದ್ದಾರೆ. ಇದನ್ನು ಸಮನ್ವಯಸೂತ್ರದ ಅನಂತರವೇ ಹೇಳಿದರೆ ಸಂಗತವೆಂದು ಮೇಲ್ನೋಟಕ್ಕೆ ತೋರುತ್ತದೆ. ಆದರೆ ಯಾವ ಶಬ್ದಗಳಿಂದಲೂ ವಾಚ್ಯನೇ ಆಗದ ಪರಮಾತ್ಮನಲ್ಲಿ ಸಕಲ ಶಬ್ದಗಳ ಸಮನ್ವಯವು ಅತ್ಯಂತ ಅಸಾಧ್ಯ ಎಂಬ ಗೊಂದಲವನ್ನು ಪರಿಹರಿಸಲು ಮಧ್ಯದಲ್ಲಿ ವಾಚ್ಯತ್ವಸಮರ್ಥನೆಗಾಗಿ ಈಕ್ಷತ್ಯಧಿಕರಣ ಹೊರಟಿದೆ. ಇನ್ನು ಈಕ್ಷತ್ಯಧಿಕರಣದ ಅನಂತರವೇ ಆನಂದಮಯಾಧಿಕರಣವನ್ನು ಉಲ್ಲೇಖಿಸಲು ಬಹಳ ಕಾರಣಗಳಿವೆ. ಮುಖ್ಯವಾಗಿ ಎಲ್ಲರಿಗೂ ಅಪೇಕ್ಷೆ ಇರುವುದು ಆನಂದದ ಪರಾಕಾಷ್ಠೆ. ಇದು ಲಭಿಸಬೇಕಾದರೆ ಭಗವಂತನ ಮಹಾಗುಣವೆನಿಸಿದ ಪೂರ್ಣಾನಂದತ್ವವನ್ನು ಉಪಾಸನೆ ಮಾಡಬೇಕು. ಮಹಾಗುಣವನ್ನೇ ಮೊದಲು ಉಪಾಸನೆ ಮಾಡಿದರೆ ನಾವೂ ಸಹ ಖಚಿತವಾಗಿ ಯೋಗ್ಯತಾನುಸಾರಿಯಾಗಿ ಆನಂದದ ಪರಾಕಾಷ್ಠೆಯನ್ನು ತಲುಪಬಹುದು.

ಅಷ್ಟೇ ಅಲ್ಲದೇ ಈಕ್ಷತ್ಯಧಿಕರಣದ ಅನೇಕ ಸೂತ್ರಗಳಿಂದ ಆನಂದಮಯಾಧಿಕರಣಕ್ಕೆ ಆನಂತರ್ಯ ಕೊಡುತ್ತದೆ. ಗೌಣಸೂತ್ರದಲ್ಲಿ ಹೇಳಿದ ಆತ್ಮಶಬ್ದ ತನ್ನಿಷ್ಠಸೂತ್ರದಲ್ಲಿ ಹೇಳಿದ ಮೋಕ್ಷೋಪದೇಶ, ಸ್ವಾಪ್ಯಯಸೂತ್ರದಲ್ಲಿ ಹೇಳಿದ ಪೂರ್ಣತ್ವ ಗತಿಸೂತ್ರದಲ್ಲಿ ಹೇಳಿದ ಗತಿಸಾಮಾನ್ಯ ಇವುಗಳು ಬ್ರಹ್ಮನಲ್ಲಿ ಬರುವುದೇ ಇಲ್ಲ. ಬ್ರಹ್ಮನು ಆನಂದಮಯನ ಅವಯವನಾಗಿದ್ದಾನೆ. ಅವಯವ ಅವಯವಿಗಳಿಗೆ ಭೇದವಿರುವುದರಿಂದ ಆನಂದಮಯನು ಮಾತ್ರ ಪೂರ್ಣತ್ವಾದಿಗುಣವುಳ್ಳವನಾಗುತ್ತಾನೆಂಬ ಆಕ್ಷೇಪ ಬರುತ್ತದೆ. ಈ ಆಕ್ಷೇಪವನ್ನು ಪರಿಹರಿಸಿ ಬ್ರಹ್ಮನಿಗೂ ಆನಂದಮಯನಿಗೂ ಅಭೇದವನ್ನು ಸ್ಥಾಪನೆ ಮಾಡಬೇಕೆಂದರೆ ಈಕ್ಷತ್ಯಧಿಕರಣದ ಅನಂತರವೇ ಆನಂದಮಯಾಧಿಕರಣ ಹೊರಡಬೇಕಾಗುತ್ತದೆ. ಹೀಗೆ ಈಕ್ಷತ್ಯಧಿಕರಣದದಿಂದ ಇರುವ ಆನಂತರ್ಯಸಂಗತಿಯನ್ನು ತಿಳಿಯಬೇಕು.

## ಅವ್ಯವಹಿತಪೂರ್ವಾಧಿಕರಣದ ಸಂಗತಿಯು ಆಚಾರ್ಯರಿಗೆ ಸಮ್ಮತವೇ?

ಈಕ್ಷತ್ಯಧಿಕರಣದಿಂದ ಸಂಗತಿಯನ್ನು ತೋರಿಸಿದ್ದಾಯಿತು. ವಿಚಾರ ಮಾಡಿದರೆ ಅವ್ಯವಹಿತವಾದ ಹಿಂದಿನ ಅಧಿಕರಣದಿಂದಲೇ ಸಂಗತಿಯನ್ನು ತೋರಿಸಬೇಕಾಗಿಲ್ಲ. ಮುಂದೆ ಅನೇಕ ಕಡೆ ವ್ಯವಹಿತವಾದ

ಅಧಿಕರಣಗಳಿಂದಲೂ ಸಂಗತಿ ತೋರಿಸುತ್ತಾರೆ. ಆದ್ದರಿಂದ ಜಿಜ್ಞಾಸಾಧಿಕರಣದಿಂದಲೇ ಈ ಅಧಿಕರಣಕ್ಕೆ ನೇರವಾದ ಸಂಗತಿಯನ್ನು ಆಚಾರ್ಯರು ತೋರಿಸುತ್ತಾರೆ. ಅಷ್ಟೇ ಅಲ್ಲದೆ ಆಚಾರ್ಯರ ಮಾತುಗಳಲ್ಲಿ ಈಕ್ಷತ್ಯಧಿಕರಣದಿಂದ ಆನಂದಮಯಾಧಿಕರಣಕ್ಕೆ ಸಂಗತಿ ತೋರಿಸಿದ್ದು ಸ್ಪಷ್ಟವಾಗಿ ಕಾಣಿಸುತ್ತಿಲ್ಲ. ಹಾಗಂದಮಾತ್ರದಿಂದ ಹಿಂಟಿನ ಅಧಿಕರಣದಿಂದ ಸಂಗತಿಯೇ ಇರುವುದಿಲ್ಲವೆಂದು ತಿಳಿಯಬಾರದು. ಅವ್ಯವಹಿತವಾದ ಹಿಂಟಿನ ಅಧಿಕರಣದಿಂದ ಸಂಗತಿ ತೋರಿಸುವುದು ಬಹಳ ಸುಲಭ. ಅದನ್ನು ಶಿಷ್ಯರೇ ಊಹಿಸಿಕೊಳ್ಳಬಹುದೆಂದು ಆಚಾರ್ಯರು ಇಲ್ಲಿ ಹೇಳಿರಲಿಕ್ಕಿಲ್ಲ. ಅಥವಾ ಆತ್ಮಶಬ್ದಾದಿಗಳುಳ್ಳ ಆನಂದಮಯಶಬ್ದದಿಂದ ಕೂಡಿದ ವಿಷಯವಾಕ್ಯವನ್ನು ಆಚಾರ್ಯರು ಇಲ್ಲಿ ಉದಾಹರಿಸಿದ್ದರಿಂದಲೇ ನಾವು ಹಿಂದೆ ಹೇಳಿದ ಈಕ್ಷತ್ಯಧಿಕರಣದ ಸೂತ್ರಗಳಿಂದ ಆಕ್ಷೇಪಿಕೀ ಸಂಗತಿಯನ್ನು ಸೂಚಿಸಿದ್ದಾರೆಂದೂ ಊಹಿಸಬಹುದು.

### ಸಂಶಯ, ಪೂರ್ವಪಕ್ಷ, ಆನಂದಮಯಶಬ್ದಸ್ವಾರಸ್ಯ (ಪ್ರಥಮಸೂತ್ರ)

ಆನಂದಮಯಾಧಿಕರಣದ ರಚನೆಯು ಪ್ರಾರಂಭವಾಗಿದೆ. ಮಯಟ್ ಪ್ರತ್ಯಯಕ್ಕೆ ವಿಕಾರವೆಂಬರ್ಥವನ್ನು ವಿವಕ್ಷಿಸಿದರೆ ಆನಂದಮಯನು ವಿಷ್ಣು ಆಗಲ್ಲ. ಪ್ರಾಚಾರ್ಯಾರ್ಥವನ್ನು ವಿವಕ್ಷಿಸಿದರೆ ವಿಷ್ಣುವೇ ಆನಂದ-ಮಯನಾಗುತ್ತಾನೆ. ಮೊದಲು ಆನಂದಮಯನು ಬ್ರಹ್ಮನಲ್ಲವೆಂದು ಪೂರ್ವಪಕ್ಷ.

ಪ್ರತಿಯೊಂದು ಅಧಿಕರಣಗಳಲ್ಲಿಯೂ ಗ್ರಂಥಕಾರರು ಅದ್ವೈತಿಗಳ ಪೂರ್ವಪಕ್ಷಸಿದ್ಧಾಂತಗಳನ್ನು ಮೊದಲು ತೋರಿಸಿ ಅನಂತರ ಅವುಗಳನ್ನು ನಿರಾಕರಿಸುತ್ತಾರೆ. ಅನಂತರ ನಮ್ಮ ಅಧಿಕರಣದ ಪೂರ್ವಪಕ್ಷ ಸಿದ್ಧಾಂತಗಳನ್ನು ಹೇಳುತ್ತಾರೆ. ಆದರೆ ಈ ಅಧಿಕರಣದಲ್ಲಿ ಮಾತ್ರ ನೇರವಾಗಿ ನಮ್ಮ ಸಿದ್ಧಾಂತದ ಪ್ರಕಾರವೇ ಅಧಿಕರಣವನ್ನು ರಚಿಸುತ್ತಿದ್ದಾರೆ. ಕಾರಣವೇನೆಂದರೆ ನಮ್ಮ ಸಿದ್ಧಾಂತದ ಪೂರ್ವಪಕ್ಷ ಅದ್ವೈತಮತವನ್ನೇ ಆಶ್ರಯಿಸಿ ಹೊರಟಿದೆ. ಪೂರ್ವಪಕ್ಷದ ನಿರಾಕರಣೆ ಮಾಡಿದರೆ ಅದ್ವೈತಮತ ನಿರಾಕರಣೆ ಮಾಡಿದಂತೆಯೇ ಆಗುತ್ತದೆ.

ಹಿಂದಿನ ಅಧಿಕರಣಗಳಲ್ಲಿ ಬ್ರಹ್ಮನು ವಿಷ್ಣುವೆಂದು ನಿರ್ಣಯವಾಗಿದ್ದರೂ ಆನಂದಮಯವಾಕ್ಯದಲ್ಲಿ ಶ್ರುತವಾದ ಬ್ರಹ್ಮಶಬ್ದವು ರೂಢ್ಯರ್ಥವನ್ನು ಹೇಳುವಂತೆ ತೋರುತ್ತದೆ. ಅದನ್ನು ನಿರಾಕರಿಸಿ ಯೌಗಿಕಾರ್ಥದ ಸಮರ್ಥನೆಗಾಗಿ ಈ ಅಧಿಕರಣ ಸಾರ್ಥಕವಾಗಿದೆ.

ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಐದು ಪ್ರಕರಣಗಳಲ್ಲಿರುವ ಶಬ್ದಗಳನ್ನು ಈ ಅಧಿಕರಣದಲ್ಲಿ ವಿಷ್ಣುವಿನಲ್ಲಿ ಸಮನ್ವಯ ಮಾಡುತ್ತಿದ್ದಾರೆ. ಆದರೆ ಪ್ರಥಮ ಪ್ರಸಕ್ತವಾದ ಅನ್ನಮಯನನ್ನು ಸೂತ್ರದಲ್ಲಿ ಉಲ್ಲೇಖಿಸದೇ ಆನಂದಮಯನನ್ನೇ ಏಕೆ ಉಲ್ಲೇಖಿಸಿದರು? ಎಂಬ ಪ್ರಶ್ನೆ ಬರುತ್ತದೆ. ಆದರೆ ಆನಂದಮಯನ ಪ್ರಕರಣದಲ್ಲಿ ಪೂರ್ವಪಕ್ಷ ಪ್ರಾಪಕವಾದ ಹೇತು ಪ್ರಬಲವಾಗಿರುವುದರಿಂದ ಆನಂದಮಯನನ್ನೇ ಉಲ್ಲೇಖಿಸಿದ್ದಾರೆ.

## ಅಭ್ಯಾಸಾತ್ ಎಂಬುದಕ್ಕೆ ಮೂರು ಅರ್ಥ

'ಆನಂದಮಯೋಽಭ್ಯಾಸಾತ್' ಎಂಬ ಸೂತ್ರದಲ್ಲಿ 'ಅಭ್ಯಾಸಾತ್' ಎಂಬ ಹೇತುವಿಗೆ ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದ ಎಂದು ಪ್ರಸಿದ್ಧವಾದ ಅರ್ಥ. ಆದರೆ ಈ ಅರ್ಥದಲ್ಲಿರುವ ಕೆಲವು ತೊಡಕುಗಳು ಮೇಲ್ನೋಟಕ್ಕೆ ಕಾಣಿಸುತ್ತದೆ. ಅನ್ನಮಯ ಪ್ರಾಣಮಯ ಪ್ರತಿಯೊಂದು ಪ್ರಕರಣಗಳಲ್ಲಿಯೂ ಅನೇಕ ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದ್ದಲ್ಲಿ ಬ್ರಹ್ಮಶಬ್ದದ ಅಭ್ಯಾಸವನ್ನು ಹೇಳಬಹುದಿತ್ತು. ಆದರೆ ಆನಂದಮಯ ವಿಜ್ಞಾನಮಯ ಪ್ರಕರಣಗಳಲ್ಲಷ್ಟೇ ಬ್ರಹ್ಮಶಬ್ದವು ಅನೇಕ ಬಾರಿ ಕೇಳಿಸುತ್ತಿದೆ. ಈ ಪ್ರಶ್ನೆಗೆ ಮೂರು ಬಗೆಯಲ್ಲಿ ಗ್ರಂಥಕಾರರು ಉತ್ತರಿಸಿದ್ದಾರೆ.

೧) ಆನಂದಮಯ ವಿಜ್ಞಾನಮಯರಲ್ಲಿ ಬ್ರಹ್ಮತ್ವವನ್ನು ಸಾಧಿಸಲು ಬ್ರಹ್ಮಶಬ್ದದ ಅಭ್ಯಾಸವನ್ನು ಹೇತು ಮಾಡಿದರು. ಅದೇ ಬ್ರಹ್ಮಶಬ್ದ ಅನ್ನಮಯಾದಿಗಳಲ್ಲಿಯೂ ಶ್ರುತವಾದ್ದರಿಂದ ಪ್ರಾಯಪಾಠದ ವಿರೋಧ ಬರಬಾರದೆಂದು ಅನ್ನಮಯಾದಿಗಳಲ್ಲಿಯೂ ಶ್ರುತವಾದ್ದರಿಂದ ಪ್ರಾಯಪಾಠದ ವಿರೋಧ ಬರಬಾರದೆಂದು ಅನ್ನಮಯಾದಿಗಳೂ ಬ್ರಹ್ಮರಾಗುತ್ತಾರೆ. ಆದ್ದರಿಂದ ಸೂತ್ರದಲ್ಲಿ ಹೇಳಿದ ಬ್ರಹ್ಮಶಬ್ದಾಭ್ಯಾಸಾತ್ ಎಂಬುದು ಉಪಲಕ್ಷಣ; ಜೊತೆಗೆ ಬ್ರಹ್ಮಶಬ್ದಾತ್ ಎಂಬುದೂ ಹೇತುವಾಗಿದೆ. ಬ್ರಹ್ಮಶಬ್ದಾಭ್ಯಾಸವೆಂಬ ಹೇತು ಆನಂದಮಯ ವಿಜ್ಞಾನಮಯರಲ್ಲಿ ಇದೆ. ಬ್ರಹ್ಮಶಬ್ದವೆಂಬ ಹೇತು ಉಳಿದ ಮೂವರಲ್ಲಿ ಇದೆ.

೨) ಅಥವಾ ಬ್ರಹ್ಮಶಬ್ದಾಭ್ಯಾಸವೆಂಬುದು ಒಂದೇ ಹೇತು. ಅನ್ನಮಯಾದಿ ಒಂದೊಂದು ಪ್ರಕರಣದಲ್ಲಿಯೂ ಬ್ರಹ್ಮಶಬ್ದ ಅನೇಕ ಬಾರಿ ಕೇಳಿಸಬೇಕೆಂದು ಇದರ ಅರ್ಥವಲ್ಲ. ಒಟ್ಟು ಐದು ಪ್ರಕರಣದಲ್ಲಿ ಅನೇಕ ಬಾರಿ ಕೇಳಿಸಬೇಕೆಂದು ಅರ್ಥ. ಐದು ಪ್ರಕರಣಗಳಲ್ಲಿ ಒಟ್ಟು ಏಳು ಬಾರಿ ಬ್ರಹ್ಮಶಬ್ದ ಇರುವುದರಿಂದ ಬ್ರಹ್ಮಶಬ್ದಾಭ್ಯಾಸವೆಂಬ ಹೇತು ಎಲ್ಲರಲ್ಲಿಯೂ ಬರುತ್ತದೆ.

೩) ಅಥವಾ ಪ್ರತಿಯೊಂದು ಪ್ರಕರಣಗಳಲ್ಲಿಯೂ ಅನೇಕ ಬಾರಿ ಕೇಳಿಸಬೇಕೆಂಬ ಮುಖ್ಯಾರ್ಥವನ್ನೇ ಸ್ವೀಕರಿಸಬೇಕೆಂದು ಆಗ್ರಹಿಸಿದರೆ ಸೂತ್ರದಲ್ಲಿರುವ 'ಅಭ್ಯಾಸಾತ್' ಎಂಬುದಕ್ಕೆ ಆತ್ಮಶಬ್ದದ ಅಭ್ಯಾಸವಿರುವುದರಿಂದ ಎಂದು ಅರ್ಥ. ಆತ್ಮಶಬ್ದವಂತೂ ಪ್ರತಿಯೊಂದು ಪ್ರಕರಣಗಳ ಉಪಕ್ರಮ ಉಪಸಂಹಾರಗಳಲ್ಲಿ ಅನೇಕ ಬಾರಿ ಕೇಳಿಸುತ್ತಿದೆ.

## ಆತ್ಮಾ ಬ್ರಹ್ಮ ಎರಡು ಶಬ್ದಗಳ ಅಭ್ಯಾಸವೂ ಸಮಂಜಸ

ಶ್ರೀಮದಾಚಾರ್ಯರು 'ಬ್ರಹ್ಮಶಬ್ದಾಭ್ಯಾಸಾತ್' ಎಂದು ಹೇಳಿದ್ದಾರೆ. ನೀವು 'ಆತ್ಮಶಬ್ದಾಭ್ಯಾಸಾತ್' ಎಂದು ವ್ಯಾಖ್ಯಾನಿಸುತ್ತಿದ್ದೀರಿ. ಇದು ತಪ್ಪಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಬ್ರಹ್ಮವಾಚಕವಾದ ಶಬ್ದದ ಅಭ್ಯಾಸದಿಂದ ಎಂದು ಆಚಾರ್ಯರ ಮಾತಿಗೆ ಅರ್ಥೈಸಬಹುದು. ಆವಾಗ ಆತ್ಮಶಬ್ದವು ಬ್ರಹ್ಮವಾಚಕವೇ ಆಗಿರುವುದರಿಂದ

ಬ್ರಹ್ಮಶಬ್ದಾಭ್ಯಾಸವೆಂದರೆ ಆತ್ಮಶಬ್ದದ ಅಭ್ಯಾಸವೂ ಆಗುತ್ತದೆ. ಆಚಾರ್ಯರ ಮಾತಿಗೆ ವಿರೋಧ ಬರುವುದಿಲ್ಲ.

ಅಥವಾ ಬ್ರಹ್ಮಶಬ್ದದ ಅಭ್ಯಾಸವಿರುವುದರಿಂದ ಎಂದೇ ಆಚಾರ್ಯರ ಅಭಿಪ್ರಾಯ. ಹಾಗಾದರೆ ಅನ್ನಮಯಾದಿಗಳಲ್ಲಿ ಭಾಗಾಸಿದ್ಧಿ ಬರುತ್ತದಲ್ಲ? ಎಂದರೆ ಬ್ರಹ್ಮವಲ್ಲಿಗೆ ಸಮಾಖ್ಯಾಶ್ರುತಿ ಎಂದರೆ ಭೃಗುವಲ್ಲಿ. ಎರಡೂ ವಲ್ಲಿಗಳು ಒಂದೇ ವಿಷಯವನ್ನು ಪ್ರತಿಪಾದಿಸುತ್ತಿರುವುದರಿಂದ ಬ್ರಹ್ಮವಲ್ಲಿಯ ಜೊತೆ ಭೃಗುವಲ್ಲಿಯನ್ನೂ ವಿವಕ್ಷಿಸಬೇಕು. ಆವಾಗ ಬ್ರಹ್ಮವಲ್ಲಿಯ ಅನ್ನಮಯಾದಿ ಪ್ರಕರಣಗಳಲ್ಲಿ ಬ್ರಹ್ಮಶಬ್ದ ಕೇಳಿಸುತ್ತಿದೆ. ಭೃಗುವಲ್ಲಿಯ ಅನ್ನಮಯಾದಿಪ್ರಕರಣಗಳಲ್ಲಿಯೂ ಮತ್ತೊಮ್ಮೆ ಬ್ರಹ್ಮಶಬ್ದ ಕೇಳಿಸುತ್ತಿದೆ. ಹೀಗೆ ಸುಲಭವಾಗಿಯೇ ಒಂದೇ ವಿಧವಾದ ಬ್ರಹ್ಮಶಬ್ದದ ಅಭ್ಯಾಸವನ್ನು ಅನ್ನಮಯಾದಿ ಐದು ಪ್ರಕರಣಗಳಲ್ಲಿಯೂ ಹೇಳಬಹುದು.

## 'ಅಭ್ಯಾಸಾತ್' ಎಂಬ ಹೇತುವಿಗೆ ಭಾಗಾಸಿದ್ಧಿ ವ್ಯಾಪ್ಯತ್ವಾಸಿದ್ಧಿಗಳಿಲ್ಲ

ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದಾಭ್ಯಾಸವನ್ನು ಇನ್ನೂ ಚೆನ್ನಾಗಿ ಹೇಳಬೇಕೆಂದರೆ ತೈತ್ತಿರೀಯ ಶಾಖೆಯಂತೆ ಬೇರೆ ಬೇರೆ ಶಾಖೆಗಳನ್ನೂ ವಿವಕ್ಷಿಸಬೇಕು. ಆವಾಗ ಅಲ್ಲಿಯೂ ಅನೇಕ ಅನ್ನಮಾಯಾದಿಗಳ ಜೊತೆ ಬ್ರಹ್ಮಶಬ್ದವು ಅನೇಕ ಬಾರಿ ಕೇಳಿಸುತ್ತದೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಆದರೆ ಇದು ಅಷ್ಟೊಂದು ಸಮಂಜಸವಾಗಿ ತೋರುವುದಿಲ್ಲ. ತೈತ್ತಿರೀಯ ಶಾಖೆಯಲ್ಲಷ್ಟೇ ಬ್ರಹ್ಮಶಬ್ದಾಭ್ಯಾಸ ತೋರಿಸಬೇಕು. ಅಥವಾ ಬೇರೆ ಶಾಖೆಗಳಲ್ಲಿ ತೈತ್ತಿರೀಯ ಶಾಖೆಯಂತೆ ಅಭ್ಯಾಸ ತೋರಿಸಬೇಕು. ಹೊರತು ಎಲ್ಲ ಶಾಖೆಗಳನ್ನು ಸೇರಿಸಿ ಒಟ್ಟಿಗೆ ಅಭ್ಯಾಸ ತೋರಿಸುವುದು ಆಚಾರ್ಯರಿಗೆ ಸಮ್ಮತವಲ್ಲ. ಆಚಾರ್ಯರ 'ಅನ್ಯಾಸು ಚೈತದ್ರೂಪಾಸು' ಎಂಬ ಮಾತನ್ನು ಗಮನಿಸಿದಾಗ ಈ ಸೂಕ್ಷ್ಮ ವಿಚಾರ ಮನದಟ್ಟಾಗುತ್ತದೆ.

ಇಲ್ಲಿಯ ತನಕ ಭಾಗಾಸಿದ್ಧಿಯನ್ನು ಪರಿಹರಿಸಿದ್ದಾಯಿತು. ಈಗ ವ್ಯಾಪ್ಯತ್ವಾಸಿದ್ಧಿಯೆಂಬ ಹೇತುದೋಷವನ್ನು ನಿರಾಕರಿಸುತ್ತಿದ್ದಾರೆ. ಕೇವಲ ಉಪಾಸನೆಗಾಗಿ ತೈತ್ತಿರೀಯವು ಬ್ರಹ್ಮಶಬ್ದವನ್ನು ಅನೇಕ ಬಾರಿ ಹೇಳುತ್ತಿದೆ. ಹೊರತು ಆನಂದಮಯಾದಿಗಳಲ್ಲಿ ಬ್ರಹ್ಮತ್ವವಿದೆಯೆಂಬ ಅಭಿಪ್ರಾಯದಿಂದಲ್ಲವೆಂದು ಅದ್ವೈತಮತದ ಪ್ರಕಾರ ಆಕ್ಷೇಪ ಬರುತ್ತದೆ. ಆದರೆ 'ನ ಪ್ರತೀಕೇ ನಹಿ ಸಃ' ಎಂಬಂತೆ ಪ್ರತಿಮೆಯೇ ದೇವರಲ್ಲ. ಪ್ರತಿಮೆಯಲ್ಲಿ ದೇವರಿದ್ದಾನೆಂದು ಸೂತ್ರಕಾರರೇ ಅಸದುಪಾಸನೆಯನ್ನು ನಿರಾಕರಿಸಿದ್ದಾರೆ. ಮತ್ತು ಬ್ರಹ್ಮಶಬ್ದದ ಪ್ರವೃತ್ತಿನಿಮಿತ್ತವು ಪರಮಮುಖ್ಯವೃತ್ತಿಯನಿಸಿದ ವಿದ್ವದ್ರೂಢಿಯಿಂದ ವಿಷ್ಣುವಿನಲ್ಲೇ ಉಪಪನ್ನವಾಗುತ್ತದೆ. ಆದ್ದರಿಂದ ವ್ಯಾಪ್ಯತ್ವಾಸಿದ್ಧಿದೋಷ ಬರುವುದಿಲ್ಲ.

ಅನ್ನಮಯಾದಿಗಳಲ್ಲಿ ಬ್ರಹ್ಮಶಬ್ದವು ಕೇಳಿಸುತ್ತದೆಂದು ಅನ್ನಮಯಾದಿಗಳನ್ನು ಬ್ರಹ್ಮನೆಂದು ಹೇಳಿದರೆ ತಪಸ್ಸಿನಲ್ಲೂ ಅನೇಕ ಬಾರಿ ಬ್ರಹ್ಮಶಬ್ದ ಕೇಳಿಸುತ್ತಿದೆ. ಆದ್ದರಿಂದ ತಪಸ್ಸನ್ನೂ ಬ್ರಹ್ಮನೆಂದು ಹೇಳಬೇಕಲ್ಲವೇ? ಎಂಬ ಪ್ರಶ್ನೆಗೂ ಗ್ರಂಥಕಾರರು ಇಲ್ಲಿ ಉತ್ತರಿಸಿದ್ದಾರೆ. 'ತಪಸ್ಸು ಬ್ರಹ್ಮ' ಎಂಬ ಪ್ರಯೋಗವು ಶ್ರುತಿಯಲ್ಲಿರಬಹುದು. ಆದರೆ ಅದೇ ವಾಕ್ಯದ ಹಿಂದಿನ ಮತ್ತು ಮುಂದಿನ ವಾಕ್ಯಗಳನ್ನು ಗಮನಿಸಿದರೆ ತಪಸ್ಸಿನಿಂದ ಬ್ರಹ್ಮನು ಲಭಿಸುತ್ತಾನೆಂದು

ತಿಳಿಯುತ್ತದೆ. ಆದ್ದರಿಂದ ತಪಸ್ಸಿನಲ್ಲಿ ಬ್ರಹ್ಮನನ್ನು ಕಾಣಬೇಕೆಂಬ ಅಭಿಪ್ರಾಯವನ್ನು ಶ್ರುತಿಯಲ್ಲಿ ತಿಳಿಯಬೇಕು. ಇಲ್ಲಿಗೆ 'ಆನಂದಮಯೋಽಭ್ಯಾಸಾತ್' ಎಂಬ ಸೂತ್ರ ಮುಗಿಯಿತು.

## ಮಯಟ್ ಪ್ರತ್ಯಯಕ್ಕೆ ತಾದಾತ್ಮ್ಯವು ಅರ್ಥವಲ್ಲ (ದ್ವಿತೀಯ ಸೂತ್ರ)

'ಆನಂದಮಯ' ಎಂದರೆ ಪ್ರಚುರವಾದ ಆನಂದವುಳ್ಳವನು ಎಂಬರ್ಥವನ್ನು ಹೇಳುತ್ತೀರಿ. ಹಾಗಾದಲ್ಲಿ ಸ್ವಲ್ಪ ದುಃಖವೂ ಇರಬೇಕಾಗುತ್ತದೆ. ಅದಕ್ಕೋಸ್ಕರ ಆನಂದಸ್ವರೂಪ ಎಂಬರ್ಥ ಹೇಳುವುದು ಅತ್ಯಂತ ಸೂಕ್ತ. ಮಯಟ್‌ಪ್ರತ್ಯಯಕ್ಕೆ ಪ್ರಾಚುರ್ಯ ಎಂಬ ಅರ್ಥವಿದ್ದಂತೆ ತಾದಾತ್ಮ್ಯವೆಂಬ ಅರ್ಥವೂ ಇದೆ ಎಂಬ ಪ್ರಶ್ನೆ ಬರುತ್ತದೆ.

ಆದರೆ ಆನಂದಪೂರ್ಣತ್ವವನ್ನು ದೇವರಲ್ಲಿ ಸಮನ್ವಯ ಮಾಡಿದಾಗ ದೊರೆಯುವ ಲಾಭ ಆನಂದರೂಪತ್ವ ಹೇಳಿದಾಗ ದೊರೆಯುವುದಿಲ್ಲ. ಜೀವರೂ ಸಹ ಆನಂದರೂಪರಾಗಿದ್ದಾರೆ. ಅದರಂತೆ ದೇವರೂ ಆನಂದರೂಪನೆಂದು ಹೇಳುವುದರಿಂದ ಏನೂ ಲಾಭವಿಲ್ಲ. ಅದಕ್ಕಾಗಿ 'ವಿಕಾರಶಬ್ದಾನ್ನೇತಿ ಚೇನ್ನ' ಎಂಬ ಎರಡನೆಯ ಸೂತ್ರದಲ್ಲಿ ಸೂತ್ರಕಾರರು ವಿಕಾರಾರ್ಥದ ನಿರಾಕರಣೆ ಜೊತೆಗೆ ತಾದಾತ್ಮ್ಯಾರ್ಥವನ್ನೂ ನಿರಾಕರಿಸಿದ್ದಾರೆ. ಒಂದುವೇಳೆ ತಾದಾತ್ಮ್ಯಾರ್ಥ ಹೇಳಿದರೆ ಸ್ವಾರ್ಥದಲ್ಲಿ ಮಯಟ್‌ಪ್ರತ್ಯಯ ಹೇಳಿದಂತಾಗಿ ವೈಯ್ಯರ್ಥ್ಯವೂ ಬರುತ್ತದೆ. ಆದ್ದರಿಂದ ಆನಂದಮಯ ಎಂದರೆ ಪ್ರಚುರವಾದ ಆನಂದವುಳ್ಳವನು ಎಂದೇ ಅರ್ಥ. ದುಃಖದ ಲೇಶಕ್ಕೆ ಸ್ವಲ್ಪವೂ ಅವಕಾಶ ಬಾರದಂತೆ ಮುಂದೆ ಸಮರ್ಥಿಸುತ್ತೇವೆ.

## ಸೂತ್ರಕ್ರಮದಲ್ಲಿ ಸ್ವಾರಸ್ಯ

ಆನಂದಮಯಾಧಿಕರಣದಲ್ಲಿ ಒಟ್ಟು ಎಂಟು ಸೂತ್ರಗಳಿವೆ. ಈ ಎಂಟು ಸೂತ್ರಗಳ ಜೋಡಣೆಯು ಇದೇ ಕ್ರಮದಲ್ಲಿರಬೇಕೆನ್ನಲು ಬಹಳ ಸ್ವಾರಸ್ಯವಿದೆ. ಅನೇಕ ಪ್ರಯೋಜನವೂ ಇದೆಯೆಂದು ಪ್ರಕೃತ ಗ್ರಂಥಕಾರರು ವಿಮರ್ಶಿಸುತ್ತಿದ್ದಾರೆ.

ಸೂತ್ರಕಾರರು ಜೋಡಿಸಿದ ಸೂತ್ರಕ್ರಮ ಹೀಗಿದೆ -

೧) ಓಂ ಆನಂದಮಯೋಽಭ್ಯಾಸಾತ್ ಓಂ
೨) ಓಂ ವಿಕಾರಶಬ್ದಾನ್ನೇತಿ ಚೇನ್ನಪ್ರಾಚುರ್ಯಾತ್ ಓಂ
೩) ಓಂ ತದ್ಧೇತುವ್ಯಪದೇಶಾಚ್ಚ ಓಂ
೪) ಓಂ ಮಾಂತ್ರವರ್ಣಿಕಮೇವ ಚ ಗೀಯತೇ ಓಂ
೫) ಓಂ ನೇತರೋಽನುಪಪತ್ತೇಃ ಓಂ
೬) ಓಂ ಭೇದವ್ಯಪದೇಶಾಚ್ಚ ಓಂ

೭) ಓಂ ಕಾಮಾಚ್ಚ ನಾನುಮಾನಾಪೇಕ್ಷಾ ಓಂ

೮) ಓಂ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ಓಂ

ಈ ಎಂಟು ಸೂತ್ರಗಳಲ್ಲಿ 'ತದ್ಧೇತುವ್ಯಪದೇಶಾಚ್ಚ' ಎಂಬ ಸೂತ್ರವನ್ನು ಕೊನೆಯಲ್ಲಿ ಹೇಳಬೇಕಿತ್ತು. ಏಕೆಂದರೆ 'ಆನಂದಮಯೋಽಭ್ಯಾಸಾತ್' 'ಮಾಂತ್ರವರ್ಣಿಕಮೇವ ಚ ಗೀಯತೇ' 'ಅಸ್ಮಿನ್ನಸ್ಯ ಚ' ಎಂಬ ಸೂತ್ರಗಳು ಅನ್ನಮಯಾದಿ ಐವರಲ್ಲಿಯೂ ಬ್ರಹ್ಮತ್ವವನ್ನು ಸಾಧಿಸಲು ಹೊರಟಿವೆ. ಆದರೆ ತದ್ಧೇತುಸೂತ್ರವು ಕೇವಲ ಆನಂದಮಯನಲ್ಲಿ ಬ್ರಹ್ಮತ್ವವನ್ನು ಸಾಧಿಸುತ್ತಿದೆಯಲ್ಲವೇ? ಎಂಬ ಪ್ರಶ್ನೆ ಬರುತ್ತದೆ.

ಆದರೆ ಮಾಂತ್ರವರ್ಣಿಕಸೂತ್ರದಲ್ಲಿ ಮತ್ತು 'ಅಸ್ಮಿನ್ನಸ್ಯ' ಎಂಬ ಸೂತ್ರದಲ್ಲಿ ಸಮರ್ಥಿಸಿದ ವಿಚಾರಗಳಿಗೆ ತದ್ಧೇತುಸೂತ್ರವು ಸಾಧಕವಾಗಿದೆಯೆಂಬ ಸಂಶಯ ಬರುತ್ತಿತ್ತು. ಈ ಸಂಶಯ ಬರಬಾರದೆಂದು ಸೂತ್ರಕಾರರು ಈ ಎರಡು ಸೂತ್ರಗಳ ಮೊದಲೇ ತದ್ಧೇತುಸೂತ್ರವನ್ನು ಉಚ್ಚರಿಸಿದ್ದಾರೆ. ಮತ್ತು ತದ್ಧೇತುಸೂತ್ರವು ಆನಂದಮಯನಿಗೆ ವಿಷ್ಣುತ್ವವನ್ನಷ್ಟೇ ನಿಶ್ಚಯಿಸುತ್ತಿಲ್ಲ. ಮಯಟ್ ಪ್ರತ್ಯಯಕ್ಕೆ ಪ್ರಾಚುರ್ಯಾರ್ಥವನ್ನೂ ಮತ್ತೊಂದು ಕಾರಣದಿಂದ ಸಮರ್ಥಿಸುತ್ತಿದೆ. ಆದ್ದರಿಂದ ವಿಕಾರಶಬ್ದಾತ್ ಎಂಬ ಸೂತ್ರದ ಅನಂತರ ಈ ಸೂತ್ರ ಹೇಳಿದ್ದು ಅತ್ಯಂತ ಉಚಿತವಾಗಿದೆ. ಇನ್ನು ಅಸ್ಮಿನ್ನಸ್ಯ ಎಂಬ ಕೊನೆಯ ಸೂತ್ರವು ಸ್ವಪಕ್ಷಸಾಧಕವಾದ್ದರಿಂದ ಮಾಂತ್ರವರ್ಣಿಕಸೂತ್ರದ ಅನಂತರ ಹೇಳಬೇಕಿತ್ತಲ್ಲವೇ? ಎಂಬ ಪ್ರಶ್ನೆ ಬರುತ್ತದೆ. ಆದರೆ ಈ ಸೂತ್ರವು ಕೇವಲ ಸ್ವಪಕ್ಷಸಾಧಕವಾಗಿದ್ದಲ್ಲಿ ಪ್ರಶ್ನೆ ಸಮಂಜಸವಾಗುತ್ತಿತ್ತು. ಪರಪಕ್ಷನಿರಾಸಕವೂ ಆದ್ದರಿಂದ ಅಂತಿಮವಾಗಿ ಹೇಳಿದ್ದು ಅರ್ಥವತ್ತಾಗಿದೆ. 'ನೇತರಃ' 'ಭೇದವ್ಯಪದೇಶಾತ್' ಎಂಬ ಸೂತ್ರಗಳಲ್ಲಿ ಭೇದವು ಪ್ರತಿಪಾದಿಸಲ್ಪಟ್ಟಿದೆ. ಆ ಭೇದವು ಅಪಾರಮಾರ್ಥಿಕವೆಂಬ ಆಕ್ಷೇಪವನ್ನು ಪರಿಹರಿಸುವ ಮೂಲಕ ಪರಪಕ್ಷ ನಿರಾಸಕವಾಗಿದೆ.

ಹಾಗಾದರೆ ಭೇದವ್ಯಪದೇಶಸೂತ್ರದ ಅನಂತರವೇ 'ಅಸ್ಮಿನ್ನಸ್ಯ' ಎಂಬ ಸೂತ್ರ ಬರಬೇಕು. ಮಧ್ಯದಲ್ಲಿ 'ಕಾಮಾಚ್ಚ' ಎಂಬ ಸೂತ್ರವೇಕೆ? ಎಂದರೆ ಭೇದದಂತೆ ಅಭೇದವೂ ಪ್ರಾಮಾಣಿಕವೆಂಬ ಅವಾಂತರಶಂಕೆಯನ್ನು ನಿರಾಕರಿಸಲು ಕಾಮಾಚ್ಚಸೂತ್ರವು ಹೊರಟಿದೆ. ಅಭೇದವು ಅನುಮಾನಸಿದ್ಧವಾಗಿದೆ. ಭೇದವು ಶ್ರುತಿಸಿದ್ಧವಾಗಿದೆ. ಇವೆರಡಕ್ಕೆ ಪರಸ್ಪರ ವಿರೋಧವೇ ಇಲ್ಲವಲ್ಲ? ಎಂಬ ಪ್ರಶ್ನೆಯನ್ನು ಪರಿಹರಿಸಲು ಕಾಮಾಚ್ಚಸೂತ್ರದ ಅನಂತರವೇ ಅಸ್ಮಿನ್ನಸ್ಯ ಸೂತ್ರ ಹೊರಟಿದೆ. ಆದ್ದರಿಂದ ಸೂತ್ರಕಾರರು ಜೋಡಿಸಿದ ಸೂತ್ರಗಳ ಕ್ರಮವು ಸುವ್ಯವಸ್ಥಿತವಾಗಿವೆ. ಮತ್ತು ಅರ್ಥಪೂರ್ಣವಾಗಿವೆ.

ಭೇದವ್ಯಪದೇಶಸೂತ್ರವು ಜೀವನಿಗೆ ಆನಂದಮಯರಿಂದ ಭೇದವನ್ನು ಸಮರ್ಥಿಸುತ್ತದೆ. ಅದರಂತೆ ಜೀವಬ್ರಹ್ಮರ ಭೇದವನ್ನೂ ಸಮರ್ಥಿಸುತ್ತದೆ. ಜೀವಬ್ರಹ್ಮಸಾಧಕವಾಗದಿದ್ದಲ್ಲಿ ನೇತರಃ' ಎಂಬ ಒಂದೇ ಸೂತ್ರ ಸಾಕಾಗಿತ್ತು.

* * * * *

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಜಿಜ್ಞಾಸಾಧಿಕರಣ

ಬ್ರಹ್ಮಸೂತ್ರಭಾಷ್ಯ

ಸತ್ತರ್ಕದೀಪಾವಳಿ

ತತ್ವಪ್ರದೀಪ

ವಿಶೇಷ ವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಪದ್ಮನಾಭತೀರ್ಥಗುರುಭ್ಯೋ ನಮಃ ॥

॥ ಶ್ರೀಜಯತೀರ್ಥಗುರುಭ್ಯೋ ನಮಃ ॥

॥ ಶ್ರೀತ್ರಿವಿಕ್ರಮಪಂಡಿತಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಜಿಜ್ಞಾಸಾಧಿಕರಣ

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

### ಮಂಗಳಾಚರಣೆ

### ನಾರಾಯಣನಿಗೆ ನಮಸ್ಕಾರ

**नारायणं गुणैः सर्वैरुदीर्णं दोषवर्जितम् ।**
**ज्ञेयं गम्यं गुरूंश्चापि नत्वा सूत्रार्थ उच्यते ।।**

ನಾರಾಯಣನು ಸಕಲಗುಣಪರಿಪೂರ್ಣನಾಗಿದ್ದಾನೆ. ಸಕಲದೋಷಗಳಿಂದ ವಿದೂರನಾಗಿದ್ದಾನೆ. ಸಜ್ಜನರಿಂದ ತಿಳಿಯಲು ಅರ್ಹನು ಮತ್ತು ಹೊಂದಲು ಯೋಗ್ಯನೂ ಆಗಿದ್ದಾನೆ. ಇಂತಹ ಲಕ್ಷ್ಮೀಪತಿಯನ್ನು ಭಕ್ತಿಯಿಂದ ನಮಸ್ಕಾರ ಮಾಡಿ, ಮತ್ತು ಗುರುಗಳಾದ ವೇದವ್ಯಾಸದೇವರನ್ನು ನಮಸ್ಕರಿಸಿ ಬ್ರಹ್ಮಸೂತ್ರಗಳಿಗೆ ಅರ್ಥವನ್ನು ಹೇಳುತ್ತೇನೆ.

ಶ್ರೀಪದ್ಮನಾಭತೀರ್ಥಶ್ರೀಪಾದರಿಂದ ವಿರಚಿತವಾದ

# ಸತ್ತರ್ಕದೀಪಾವಳಿ

ಮಂಗಳಾಚರಣೆ

ಲಕ್ಷ್ಮೀಪತಿಯನ್ನು ಶ್ರೀಮದಾನಂದತೀರ್ಥರನ್ನು ನಮಿಸುವೆ

**निर्दोषं गुणपूर्णं च ज्ञेयं गम्यं रमापतिम् ।**
**श्रीमदानन्दतीर्थाख्यं वन्दे सर्वविदं गुरुम् ।।**

ಸಕಲಗುಣಪರಿಪೂರ್ಣನಾದ ದೋಷವಿದೂರನಾದ, ಜ್ಞೇಯನೂ ಗಮ್ಯನೂ ಆದ, ಲಕ್ಷ್ಮೀಪತಿಯನ್ನು ಮತ್ತು ಸರ್ವಜ್ಞರಾದ, ಗುರುಗಳಾದ ಶ್ರೀಮದಾನಂದತೀರ್ಥ-ಭಗವತ್ಪಾದರನ್ನು ನಮಸ್ಕರಿಸುತ್ತೇನೆ.

ಭಾಷ್ಯವು ಪ್ರಸನ್ನವಾಗಿದ್ದರೂ ಗೂಢಾರ್ಥಗರ್ಭಿತ

**प्रसन्नमपि गूढार्थं भाष्यं तत्सुमनोहरम् ।**
**व्याख्यास्ये लेशतो भक्त्या गुरुदेवप्रसादतः ।।**

ಮೇಲ್ನೋಟಕ್ಕೆ ಅರ್ಥವಾಗುವಂತಿದ್ದರೂ ಗೂಢಾರ್ಥದಿಂದ ತುಂಬಿರುವ, ಅತ್ಯಂತ ಮನೋಹರವಾದ ಭಾಷ್ಯವನ್ನು ಗುರುಗಳ ಹಾಗೂ ದೇವತೆಗಳ ಅನುಗ್ರಹದಿಂದ, ಭಕ್ತಿಯಿಂದ ಸ್ವಲ್ಪಮಾತ್ರ ವ್ಯಾಖ್ಯಾನಿಸಲು ಬಯಸುತ್ತೇನೆ.

ಭಾಷ್ಯದ ಮಂಗಳಪದ್ಯದ ವ್ಯಾಖ್ಯಾನ

**सत्तर्कदीपावळिः – ब्रह्मसूत्रव्याख्यामारभमाणो भगवानाचार्यः स्वेष्टदेवतां गुरूंश्च नत्वा श्रीमन्नारायणः सर्वगुणोदीर्णत्वादिलक्षणश्चतुरध्यायसूत्र-प्रतिपाद्यतया भाष्यत इति प्रतिजानीते – नारायणमिति ।।**

ಬ್ರಹ್ಮಸೂತ್ರವನ್ನು ವ್ಯಾಖ್ಯಾನಿಸಲು ಹೊರಟ ಶ್ರೀಮದಾಚಾರ್ಯರು ತನ್ನ ಇಷ್ಟದೇವತೆಯನ್ನು ಮತ್ತು ಗುರುಗಳನ್ನೂ ನಮಿಸಿ ಶ್ರೀಮನ್ನಾರಾಯಣನು ಸಕಲಗುಣಪರಿಪೂರ್ಣತ್ವಾದಿಲಕ್ಷಣದಿಂದ ನಾಕು ಅಧ್ಯಾಯರೂಪವಾದ ಶಾಸ್ತ್ರದಿಂದ ಪ್ರತಿಪಾದ್ಯನಾಗಿರುವನೆಂಬುದನ್ನು ಭಾಷ್ಯದಿಂದ ಸಮರ್ಥಿಸುತ್ತಿದ್ದೇವೆಂದು 'ನಾರಾಯಣಮ್' ಎಂಬ ಮಂಗಳಶ್ಲೋಕದಿಂದ ಪ್ರತಿಜ್ಞೆ ಮಾಡುತ್ತಿದ್ದಾರೆ.

* * * * * *

# ಶ್ರೀಮನ್ ಮೂಲರಾಮ ದೇವರು

## ಶ್ರೀ ರಾಘವೇಂದ್ರಸ್ವಾಮಿಗಳ ಮಠ - ಮಂತ್ರಾಲಯ



ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥

# ಚತುರ್ದಶಲೋಕಗುರುಗಳಾದ
# ಭಗವಾನ್ ಶ್ರೀ ವೇದವ್ಯಾಸದೇವರು



ವಿಜ್ಞಾನರೋಚಿಃ ಪರಿಪೂರಿತಾಂತರ್ಬಾಹ್ಯಾಂಡಕೋಶಂ ಹರಿತೋಪಲಾಭಮ್ ।
ತರ್ಕಾಽಭಯೇ ತಂ ವಿಧಿಶರ್ವಪೂರ್ವಗೀರ್ವಾಣವಿಜ್ಞಾನದಮಾನತೋಽಸ್ಮಿ ॥

# ಜಗದ್ಗುರು ಶ್ರೀಮಧ್ವಾಚಾರ್ಯರು



ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ ।
ಆನಂದತೀರ್ಥಮತುಳಂ ಭಜೇ ತಾಪತ್ರಯಾಪಹಮ್ ॥

## ಪ್ರಾಚೀನ ಟೀಕಾಕಾರರಾದ
## ಪರಮಪೂಜ್ಯ ಶ್ರೀ ಪದ್ಮನಾಭತೀರ್ಥ ಶ್ರೀಪಾದಂಗಳವರು



ಪೂರ್ಣಪ್ರಜ್ಞಕೃತಂ ಭಾಷ್ಯಮಾದೌ ತದ್-ಭಾವಪೂರ್ವಕಮ್ ।
ಯೋ ವ್ಯಾಕರೋನ್ನಮಸ್ತಸ್ಮೈ ಪದ್ಮನಾಭಾಖ್ಯಯೋಗಿನೇ ॥

**ಸತ್ತರ್ಕ ದೀಪಾವಳಿಕಾರರು**

॥ ಶ್ರೀಃ ॥

# ಶ್ರೀಮಟ್ಟೀಕಾಕೃತ್ಪಾದರೆಂದೇ ಪ್ರಸಿದ್ಧರಾದ ಪರಮಪೂಜ್ಯ ಶ್ರೀಜಯತೀರ್ಥ ಮುನಿಗಳು



ಚಿತ್ರೈಃ ಪದೈಶ್ಚ ಗಂಭೀರೈರ್ವಾಕ್ಯೈರ್ಮಾನೈರಖಂಡಿತೈಃ ।
ಗುರುಭಾವಂ ವ್ಯಂಜಯಂತೀ ಭಾತಿ ಶ್ರೀಜಯತೀರ್ಥವಾಕ್ ॥

ತತ್ವಪ್ರಕಾಶಿಕಾಕಾರರು

ಮಂತ್ರಾಲಯ ಪ್ರಭುಗಳಾದ ಕಲಿಯುಗ ಕಾಮಧೇನು ಕಲ್ಪತರುಗಳೆಂದೇ ಪ್ರಸಿದ್ಧರಾದ

## ಶ್ರೀ ರಾಘವೇಂದ್ರಗುರುಸಾರ್ವಭೌಮರು



ದುರ್ವಾದಿಧ್ವಾಂತರವಯೇ ವೈಷ್ಣವೇಂದೀವರೇಂದವೇ ।
ಶ್ರೀ ರಾಘವೇಂದ್ರಗುರವೇ ನಮೋಽತ್ಯಂತದಯಾಲವೇ ॥

ಭಾವದೀಪಕಾರರು

## ಪರಮಪೂಜ್ಯ॥ ಶ್ರೀ ಸುಜಯೀಂದ್ರತೀರ್ಥ-ಶ್ರೀಪಾದಂಗಳವರು



ಸುಯಮೀಂದ್ರಕರಾಬ್ಜೋತ್ಥಂ ಸುವಿದ್ಯಾಬೋಧಕಂ ಸದಾ ।
ಸುಮೂಲರಾಮಪೂಜಾಢ್ಯಂ ಸುಜಯೀಂದ್ರಗುರುಂ ಭಜೇ ॥

## ಪರಮಪೂಜ್ಯ॥ ಶ್ರೀ ಸುಶಮೀಂದ್ರತೀರ್ಥ-ಶ್ರೀಪಾದಂಗಳವರು



ಸುಧೀಜನಸುಮಂದಾರಂ ಸುಧೀಂದ್ರಸುತಸುಪ್ರಿಯಮ್ ।
ಸುಶಮೀಂದ್ರಗುರುಂ ವಂದೇ ಸುಜಯೀಂದ್ರಕರೋದ್ಭವಂ ॥

ಪರಮಪೂಜ್ಯ।। ಶ್ರೀ ಸುಯತೀಂದ್ರತೀರ್ಥ-ಶ್ರೀಪಾದಂಗಳವರು



ಸುಶಮೀಂದ್ರಕರಾಬ್ಜೋತ್ಥಂ ರಾಘವೇಂದ್ರಗುರುಪ್ರಿಯಂ ।
ಸುಯತೀಂದ್ರಗುರುಂ ವಂದೇ ಮೂಲರಾಮಾರ್ಚನೇ ರತಮ್ ।।

ಹಂಸನಾಮಕ ಪರಮಾತ್ಮನ ಸಾಕ್ಷಾತ್ ಪರಂಪರೆಯ
ಶ್ರೀಮಠದ ಪ್ರಸ್ತುತ ಪೀಠಾಧಿಪತಿಗಳಾಗಿ ವಿರಾಜಮಾನರಾದ
ಪರಮಪೂಜ್ಯ॥ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು



ಆಪಾದಮೌಳಿಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।
ತೇನ ವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥
ಪ್ರಸ್ತುತ ಭಾವದೀಪ ಪ್ರಕಾಶನ ಯೋಜನೆಯ ಅಧ್ಯಕ್ಷರು

# ಮೂರು ಟೀಕೆಗಳ ಜೊತೆ ಭಾವದೀಪ ನೀಡಿದ ಶ್ರೀಪಾದರಿಗೆ ಅನಂತ ನಮನಗಳು



ಶ್ರೀ ರಾಘವೇಂದ್ರಸ್ವಾಮಿಗಳ ಮಠಾಧೀಶರಾದ ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರು ತಮ್ಮ ದ್ವಿತೀಯ ಚಾತುರ್ಮಾಸ್ಯದ ಶುಭ ಸಂದರ್ಭದಲ್ಲಿ ತಮ್ಮ ಪಾದಕಾಣಿಕೆಯಿಂದಲೇ ಈ ಭಾವದೀಪ ಯೋಜನೆಯನ್ನು ಹಮ್ಮಿಕೊಂಡಿದ್ದಾರೆ. ಮತ್ತು ಮೊದಲನೆಯ ಈ ಸಂಪುಟವನ್ನು ಅನಂತ ಚತುರ್ದಶಿಯ ಶುಭಪರ್ವಕಾಲದಲ್ಲಿ ಶ್ರೀರಾಘವೇಂದ್ರ ಗುರುಸಾರ್ವಭೌಮರ ಅಂತರ್ಯಾಮಿಗಳಿಗೆ ಭಕ್ತಿಯಿಂದ ಸಮರ್ಪಿಸಿದ್ದಾರೆ. ಮತ್ತು ಶ್ರೀ ಪದ್ಮನಾಭತೀರ್ಥರು ರಚಿಸಿರುವ **'ಸತ್ತರ್ಕದೀಪಾವಳಿ'**, ಶ್ರೀತ್ರಿವಿಕ್ರಮಪಂಡಿತಾಚಾರ್ಯರು ರಚಿಸಿರುವ **'ತತ್ತ್ವಪ್ರದೀಪ'** ಹಾಗೂ ಶ್ರೀಮಟ್ಟೀಕಾಕೃತ್ಪಾದರು ರಚಿಸಿರುವ **'ತತ್ತ್ವಪ್ರಕಾಶಿಕಾ'** ಈ ಮೂರು ಟೀಕೆಗಳ ಸಂಪಾದನೆ ಹಾಗೂ ಅನುವಾದವನ್ನು ಮಾಡುವ ಮೂಲಕ ಶ್ರೀರಾಘವೇಂದ್ರಗುರುಸಾರ್ವಭೌಮರು ರಚಿಸಿರುವ **'ಭಾವದೀಪ'** ಗ್ರಂಥವನ್ನು ಆಮೂಲಾಗ್ರವಾಗಿ ಸಂಪೂರ್ಣ ವಿವರಣೆಯೊಂದಿಗೆ ಮೂರು ಟೀಕೆಗಳ ಜೊತೆ ಮುದ್ರಣ ಮಾಡಬೇಕೆಂಬ ಅತ್ಯುತ್ತಮ ಯೋಜನೆಯ ಶುಭಸಂಕಲ್ಪವನ್ನು ಮಾಡಿರುತ್ತಾರೆ. ಮೋಕ್ಷಶಾಸ್ತ್ರವೆನಿಸಿದ ಬ್ರಹ್ಮಸೂತ್ರಭಾಷ್ಯವನ್ನು ಕೂಲಂಕಷವಾಗಿ ಓದಬೇಕೆಂಬ ಹಂಬಲವಿರುವ ಬುಭುತ್ಸುಗಳಿಗೆ ಉತ್ತಮ ಪೇಯವನ್ನು ನೀಡುತ್ತಿರುವ ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ ಅಡಿದಾವರೆಗಳಲ್ಲಿ ಅನಂತ ನಮನಗಳು. ಅನಂತ ಕೃತಜ್ಞತೆಗಳು.

ಶ್ರೀ ತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

## ಮಂಗಳಾಚರಣೆ

ನಾರಾಯಣನಿಗೆ ಆನಮಿಪೆ

पूर्णज्ञानं विपुलपरमानन्दसन्दोहदेहं
भक्तप्रीत्या कृतविवरणब्रह्मसूत्रावतारम् ।
श्रीमन्नारायणपदमहं ध्वस्तनिःशेषदोषं
वन्दे नित्यं गुरुमपि गुरोरागमार्थप्रकाशम् ॥१॥

ಪೂರ್ಣಜ್ಞಾನಂ ವಿಪುಲಪರಮಾನಂದಸಂದೋಹದೇಹಂ
ಭಕ್ತಪ್ರೀತ್ಯಾ ಕೃತವಿವರಣಬ್ರಹ್ಮಸೂತ್ರಾವತಾರಮ್ ।
ಶ್ರೀಮನ್ನಾರಾಯಣಪದಮಹಂ ಧ್ವಸ್ತನಿಃಶೇಷದೋಷಂ
ವಂದೇ ನಿತ್ಯಂ ಗುರುಮಪಿ ಗುರೋರಾಗಮಾರ್ಥಪ್ರಕಾಶಮ್ ॥೧॥

ಅನುವಾದ - ಓ ಲಕ್ಷ್ಮೀನಾರಾಯಣನೇ! ಎನ್ನ ಗುರುಗಳೂ ಜಗದ್ಗುರುಗಳೂ ಆದ ಆನಂದತೀರ್ಥರಿಗೂ ಗುರು ಎನಿಸಿದವನು ನೀನು. ಪರಿಪೂರ್ಣವಾದ ಜ್ಞಾನಮೂರುತಿ, ದುಃಖಗಳ ಗೊಡವೆಯೇ ಇಲ್ಲದ ಪರಿಪೂರ್ಣವಾದ ಸುಖದ ಖನಿ ನೀನು. ಭಕುತರೆಂದರೆ ಎಲ್ಲಿಲ್ಲದ ಒಲವು ನಿನಗೆ. ಅವರಿಗಾಗಿ ಭುವಿಗೆ ಇಳಿದು ವೇದಗಳ ವಿಭಾಗಗೈದಿರುವಿ. ಬ್ರಹ್ಮಸೂತ್ರಗಳನ್ನು ವಿರಚಿಸಿರುವಿ. ವೇದಗಳಿಂದಷ್ಟೇ ವೇದ್ಯನಾದವನು ನೀನು. ಸಮಸ್ತದೋಷಗಳಿಂದ ವಿದೂರನಾದ ನಿನಗೆ ಗ್ರಂಥಾರಂಭದಲ್ಲಿ ಭಕ್ತಿಯ ಪರಾಕಾಷ್ಠೆಯಿಂದ ಶಿರಬಾಗುವೆ.

ಅನ್ವಯಾರ್ಥ -- ಪೂರ್ಣಜ್ಞಾನಂ = ಪರಿಪೂರ್ಣಜ್ಞಾನಸ್ವರೂಪನಾದ, ವಿಪುಲಪರಮಾನಂದಸಂದೋಹದೇಹಂ, ವಿಪುಲ = ಅಪರಿಮಿತವಾದ ಪರಮ = ದುಃಖದ ಸಂಪರ್ಕವಿಲ್ಲದ, ಆನಂದ = ಸುಖದ, ಸಂದೋಹ = ರಾಶಿಯೇ ದೇಹಂ = ಶರೀರವಾಗಿವುಳ್ಳ, ಭಕ್ತಪ್ರೀತ್ಯಾ = ಭಕ್ತರ ಮೇಲಿನ ಪ್ರೀತಿಯಿಂದ ಕೃತವಿವರಣಬ್ರಹ್ಮಸೂತ್ರಾವತಾರಮ್, ಕೃತ = ಮಾಡಲ್ಪಟ್ಟ, ವಿವರಣ = ವೇದವಿಭಾಗವು, ಬ್ರಹ್ಮಸೂತ್ರ = ಬ್ರಹ್ಮಸೂತ್ರವು ಇವುಗಳಿಗಾಗಿ ಅವತಾರಮ್ = ಅವತಾರವುಳ್ಳ, ಧ್ವಸ್ತನಿಶ್ಶೇಷದೋಷಂ = ಸಕಲ-ದೋಷಗಳಿಂದ ವಿದೂರನಾದ, ಆಗಮಾರ್ಥಪ್ರಕಾಶಮ್ = ಸಕಲ-ವೇದಗಳು ಮತ್ತು ತದರ್ಥನಿರ್ಣಾಯಕ ಸದಾಗಮಗಳಿಂದಲೇ ಪ್ರಕಟನಾಗುವ, (ಪ್ರತಿಪಾದ್ಯನಾದ) ಗುರೋರಪಿ = ಗುರುಗಳಾದ ಶ್ರೀಮದಾಚಾರ್ಯರಿಗೂ ಕೂಡ, ಗುರುಂ = ಗುರುವಾದ ಶ್ರೀಮನ್ನಾರಾಯಣಪದಮ್ = ಲಕ್ಷ್ಮೀನಾರಾಯಣ ಎಂಬ ಹೆಸರುಳ್ಳ (ನಿನ್ನನ್ನು), ಅಹಂ = ನಾನು, ವಂದೇ = ಭಕ್ತಿಯಿಂದ ನಮಸ್ಕಾರ ಮಾಡುವೆ.

ವಿಶೇಷ ವಿಚಾರ - ಭಾಷ್ಯಕಾರರು ಶ್ರೀಮನ್ನಾರಾಯಣನನ್ನು ನಮಸ್ಕಾರ ಮಾಡಿದುದರಿಂದ ಅದನ್ನೇ ಅನುಸರಿಸಿ ಪಂಡಿತಾಚಾರ್ಯರು ನಾರಾಯಣನನ್ನೇ ನಮಸ್ಕಾರ ಮಾಡುತ್ತಿದ್ದಾರೆ.

ಪ್ರಾರಂಭದಲ್ಲಿ 'ಪೂರ್ಣಜ್ಞಾನಂ' ಎಂಬ ಪದವನ್ನು ಉಲ್ಲೇಖ ಮಾಡುವ ಮೂಲಕ ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನದಿಂದ ಭಗವತ್‌ತತ್ವದ ಬಗ್ಗೆ ಪೂರ್ಣವಾದ ಅರಿವು ಬರುತ್ತದೆಂದು ಸೂಚನೆ ಮಾಡಿದ್ದಾರೆ.

'ನಾರಾಯಣಪದಮ್' ಎಂಬಲ್ಲಿ 'ಶ್ರೀಮತ್' ಎಂಬುದನ್ನು ವಿಶೇಷಣವಾಗಿ ಹೇಳಿರುವುದರಿಂದ ಸಕಲ ವಾಗಭಿಮಾನಿಯಾದ ಲಕುಮಿಯ ನಮಸ್ಕಾರವನ್ನು ಗ್ರಂಥಾರಂಭದಲ್ಲಿ ಆಚರಿಸಿದಂತಾಯಿತು, ಲಕ್ಷ್ಮೀದೇವಿಗೆ ಪ್ರತ್ಯೇಕವಾಗಿ ನಮಸ್ಕಾರ ಮಾಡಬಾರದ ಕಾರಣ ನಾರಾಯಣನ ಜೊತೆ ನಮಿಸಿದ್ದಾರೆ.

ರಮೆಯ ಅರಸನೇ ! ಎಂತು ಪೊಗಳಲಿ

**यस्याऽम्नायपदाक्षराणि परमं स्वार्थं लभन्ते गुणान्**
**सम्प्रोच्यैव सुबृंहितानि बलवन्न्यायेतिहासादिभिः ।**
**तं सेव्यं मुनिभिः प्रशान्तमनसा भक्त्या भवच्छित्तये**
**स्वानन्दप्रदमिन्दिरापतिमहं भूयोऽभिवन्दे हरिम् ॥२॥**

ಯಸ್ಯಾಽಮ್ನಾಯಪದಾಕ್ಷರಾಣಿ ಪರಮಂ ಸ್ವಾರ್ಥಂ ಲಭಂತೇ ಗುಣಾನ್
ಸಂಪ್ರೋಚ್ಯೈವ ಸುಬೃಂಹಿತಾನಿ ಬಲವನ್ನ್ಯಾಯೇತಿಹಾಸಾದಿಭಿಃ ।
ತಂ ಸೇವ್ಯಂ ಮುನಿಭಿಃ ಪ್ರಶಾಂತಮನಸಾ ಭಕ್ತ್ಯಾ ಭವಚ್ಛಿತ್ತಯೇ
ಸ್ವಾನಂದಪ್ರದಮಿಂದಿರಾಪತಿಮಹಂ ಭೂಯೋಽಭಿವಂದೇ ಹರಿಮ್॥೨॥

ಅನುವಾದ - ರಮೆಯ ಅರಸನೆ ! ಬಿಡದೆ ಮತ್ತೆ ಮತ್ತೆ ನಾನು ನಿನ್ನನ್ನೇ ಭಕುತಿಯಿಂದ ಭಜಿಪೆ. ವೇದದಲ್ಲಿರುವ ಪ್ರತಿಯೊಂದು ಪದಗಳು-ಅಕ್ಷರಗಳು ಯಾರಲ್ಲಿರುವ ಗುಣಗಳನ್ನು ಪರಮ ಮುಖ್ಯವೃತ್ತಿಯಿಂದ ಹೊಗಳಿ-ಹೊಗಳಿ ಪರಮಸ್ವಾರ್ಥಿಗಳಾದವೋ (ಪರವಿದ್ಯೆಗಳೆನಿಸಿದವೋ); ಅಂಥ ಗುಣವುಳ್ಳವನು ನೀನೊಬ್ಬನೇ ಬೇರೆ ಯಾರೂ ಅಲ್ಲ. ಹೀಗೆ ಅಕ್ಷರಗಳೆಲ್ಲವೂ ನಿರವಕಾಶವಾಗಿ ಬಲಿಷ್ಠವಾದ ಉಪಕ್ರಮಾದಿ ಷಡ್ವಿಧತಾತ್ಪರ್ಯಲಿಂಗಗಳ ಮತ್ತು ಇತಿಹಾಸ-ಪುರಾಣಗಳ ಬೆಂಬಲದಲ್ಲಿ ಸ್ಪಷ್ಟವಾಗಿ ನಿನ್ನನ್ನೇ ನುಡಿಯುತ್ತಿವೆ. ಸಂಸಾರದ ಬಿಡುಗಡೆಗೋಸುಗ ಪ್ರಶಾಂತಚಿತ್ತರಾದ ಮುನಿಗಳೆಲ್ಲರೂ ಭಕುತಿಯಿಂದ ನಿನ್ನನ್ನು ಆರಾಧಿಸುತಿಹರು. ನೀನು ಅವರ ಆರಾಧನೆಗೆ ಮೆಚ್ಚಿ ಸ್ವರೂಪಾನಂದವನ್ನೇ ಅವರಿಗೆ ದಯಪಾಲಿಸುವಿ. ನಿನ್ನನ್ನು ಭಕ್ತಿಶ್ರದ್ಧೆಗಳಿಂದ ನಾನು ನಮಿಪೆ.

ಅನ್ವಯಾರ್ಥ -- ಬಲವನ್ನ್ಯಾಯೇತಿಹಾಸಾದಿಭಿಃ, ಬಲವತ್ = ಬಲಿಷ್ಠವಾದ, ನ್ಯಾಯ = ಉಪಕ್ರಮಾದಿಷಡ್ವಿಧತಾತ್ಪರ್ಯಲಿಂಗಗಳಿಂದೊಳಗೊಂಡ, ಇತಿಹಾಸಾದಿಭಿಃ = ಇತಿಹಾಸ = ಮಹಾಭಾರತ. ಮೂಲರಾಮಾಯಣ, ಆದಿಭಿಃ = ಭಾಗವತಾದಿ ಪುರಾಣಗಳಿಂದ. ಸುಬೃಂಹಿತಾನಿ = ಸ್ಪಷ್ಟವಾಗಿ ಪುಷ್ಟಿ ಪಡೆದ, ಆಮ್ನಾಯಪದಾಕ್ಷರಾಣಿ ಆಮ್ನಾಯ = ವೇದದಲ್ಲಿರುವ, ಪದ = ಪದಗಳು, ಅಕ್ಷರಾಣಿ = ಅಕ್ಷರಗಳು.

ಯಸ್ಯ = ಯಾರ, ಗುಣಾನ್ = ಗುಣಗಳನ್ನು, ಸಂಪ್ರೋಚ್ಯೈವ = ಚೆನ್ನಾಗಿ ಪ್ರತಿಪಾದನೆ ಮಾಡಿದಾಗಲೇ, ಪರಮಮ್ = ಶ್ರೇಷ್ಠವಾದ, ಸ್ವಾರ್ಥಂ = ತಾವು ಹೇಳಬೇಕಾದ ಅರ್ಥವನ್ನು ಹೇಳಿದಂತಾಯಿತೆಂದು, ಲಭಂತೇ = ಆಗುತ್ತವೆ, ಭವಚ್ಛಿತ್ತಯೇ = ಸಂಸಾರವನ್ನು ತುಂಡರಿಸಲು, ಭಕ್ತ್ಯಾ = ಭಕ್ತಿಯಿಂದ, ಪ್ರಶಾಂತಮನಸಾ = ಅತ್ಯಂತ ಶಾಂತವಾದ ಮನಸ್ಸಿನಿಂದ ಕೂಡಿರುವ, ಮುನಿಭಿಃ = ಮುನಿಗಳಿಂದ, ಸೇವ್ಯಂ = ಸೇವ್ಯನಾದ, ಸ್ವಾನಂದಪ್ರದಂ = ತಮ್ಮ ತಮ್ಮ ಯೋಗ್ಯತಾನುಸಾರ ಸ್ವರೂಪವನ್ನು ಪ್ರಕಟಪಡಿಸುವ ಇಂದಿರಾಪತಿಂ = ರಮಾಪತಿಯಾದ, ಹರಿಂ = ಶ್ರೀಹರಿಯನ್ನು, ಅಹಂ = ನಾನು, ಭೂಯಃ = ಮತ್ತೆ ಮತ್ತೆ, ಅಭಿವಂದೇ= ಭಕ್ತಿಯಿಂದ ನಮಸ್ಕರಿಸುವೆ.

ಗುರುವ್ಯಾಸರೇ! ಎಂದೆಂದೂ ಇರಲಿ ನಿಮ್ಮ ದಯೆ.

**अस्यन् विशेषाद् भजतो भवौघाद्**
**व्यस्यन् गृादींश्च विशिष्ट आस ।**
**सोऽयं हरिर्व्यासपदाभिधेयः**
**सम्प्रीयतां सत्यवतीसुतो मे ॥३॥**

ಅಸ್ಯನ್ ವಿಶೇಷಾದ್ ಭಜತೋ ಭವೌಘಾದ್
ವ್ಯಸ್ಯನ್ ನೃಗಾದೀಂಶ್ಚ ವಿಶಿಷ್ಟ ಆಸ ।
ಸೋಽಯಂ ಹರಿರ್ವ್ಯಾಸಪದಾಭಿಧೇಯಃ
ಸಂಪ್ರೀಯತಾಂ ಸತ್ಯವತೀಸುತೋ ಮೇ ॥೩॥

ಅನುವಾದ - ವಿಶ್ವಗುರು ಶ್ರೀವೇದವ್ಯಾಸದೇವರೆ ! ಭಜಕರನ್ನು ಸಂಸಾರಪ್ರವಾಹದಿಂದ ಅಂತಿಮವಾಗಿ ಪಾರುಮಾಡುವವರೇ ! ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ-ವೆಂದು ವೇದವಿಭಾಗ ಮಾಡಿದವರೇ ! ಸಕಲಪದಾರ್ಥಗಳಿಂದ ಉತ್ತಮರೆ ! ಸತ್ಯವತೀಸುತರೇ ! ಸಾಕ್ಷಾತ್ ಶ್ರೀಹರಿಸ್ವರೂಪರೇ ! ನನ್ನ ವಿಷಯದಲ್ಲಿ ಸಂಪೂರ್ಣವಾಗಿ ಸಂಪ್ರೀತರಾಗಿರಿ.

ಅನ್ವಯಾರ್ಥ -- ಭಜತಃ = ಭಜನೆ ಮಾಡುವವರಿಗೆ, ಭವೌಘಾತ್ = ಸಂಸಾರದ ಪ್ರವಾಹದಿಂದ, ವಿಶೇಷಾತ್ = ಅಂತಿಮವಾಗಿ, ಅಸ್ಯನ್ = ನಾಶ ಮಾಡುವ, (ವಿ+ಆಸ-ವ್ಯಾಸ) ಚ = ಮತ್ತು, ಋಗಾದೀನ್ = ಋಜ್ ನಿಗದ ಮೊದಲಾದವುಗಳನ್ನು, ವ್ಯಸ್ಯನ್ = ವಿಭಾಗ ಮಾಡುವ, ವಿಶಿಷ್ಟಃ = ಸರ್ವೋತ್ತಮನಾಗಿ, ಆಸ = ಸಚ್ಛಾಸ್ತ್ರ ಪ್ರಸಿದ್ಧನಾಗಿರುವಿಯೋ, (ಈ ಅರ್ಥದಲ್ಲಿ ತ್ರಿಕಾಲದಲ್ಲಿಯೂ ವಿಕಾರವಿಲ್ಲವೆಂಬ ವಿಭಕ್ತಿ ಪ್ರತಿರೂಪಕ ಅವ್ಯಯವೆಂದು 'ಆಸ' ಪದಕ್ಕೆ ತಿಳಿಯಬೇಕು), ಸತ್ಯವತೀಸುತಃ = ಸತ್ಯವತಿಯ ಮಗನಾಗಿರುವ, ವ್ಯಾಸಪದಾಭಿಧೇಯಃ = 'ವ್ಯಾಸ' ಎಂಬ ಪದದಿಂದ ಪ್ರತಿಪಾದ್ಯನಾದ, ಸೋऽಯಂ = ಇಂಥ, ಹರಿಃ = ಶ್ರೀಹರಿಯು, ಮೇ = ನನ್ನ ವಿಷಯದಲ್ಲಿ, ಸಂಪ್ರೀಯತಾಮ್ = ಸಂಪೂರ್ಣವಾಗಿ ಪ್ರೀತನಾಗಲಿ.

ವಿಶೇಷ ವಿಚಾರ - 'ವ್ಯಾಸ' ಎಂಬ ಪದವನ್ನು 'ವಿ' 'ಆಸ' ಎಂದು ವಿಭಾಗ ಮಾಡಿ ಮೂರು ಅರ್ಥವನ್ನು ಹೇಳಿದ್ದಾರೆ.

ವಿದ್ಯಾಲಕುಮಿಯೇ ! ಹರಸು ಎನ್ನನು

**जिह्वासूल्लसिता सतां प्रतिपदं तत्त्वप्रतिद्योतिका**
**नृत्यन्ती परमेरितैव परमा वागीश्वरी श्रीः स्वयम् ।**
**यस्याऽस्यादुदिताऽखिलागमवपुः सत्सूत्रभूषामणिः**
**सर्वज्ञात् कवयश्च पुष्करभुवो जाता यदीयेच्छया ॥४॥**

ಜಿಹ್ವಾಸೂಲ್ಲಸಿತಾ ಸತಾಂ ಪ್ರತಿಪದಂ ತತ್ವಪ್ರತಿದ್ಯೋತಿಕಾ
ನೃತ್ಯಂತೀ ಪರಮೇರಿತೈವ ಪರಮಾ ವಾಗೀಶ್ವರೀ ಶ್ರೀಃ ಸ್ವಯಮ್ ।
ಯಸ್ಯಾऽಸ್ಯಾದುದಿತಾऽಖಿಲಾಗಮವಪುಃ ಸತ್ಸೂತ್ರಭೂಷಾಮಣಿಃ
ಸರ್ವಜ್ಞಾತ್ ಕವಯಶ್ಚ ಪುಷ್ಕರಭುವೋ ಜಾತಾ ಯದೀಯೇಚ್ಛಯಾ ॥೪॥

**ಅನುವಾದ - ಗುರುವ್ಯಾಸರೇ ! ಸರ್ವಜ್ಞಸ್ವರೂಪವಾದ ತಮ್ಮ ಮುಖಕಮಲದಿಂದ ಉದಿಸಿದಳು ಮಹಾಲಕುಮಿ. ವಾಗಭಿಮಾನಿನೀ ಭಾರತೀದೇವಿಗೂ ನಿಯಾಮಕಳಿವಳು. ಆದ್ದರಿಂದಲೇ ಸ್ವಯಂ 'ಶ್ರೀ' ಎನಿಸಿದವಳು. ಸಜ್ಜನರ ನಾಲಿಗೆಯಲ್ಲಿ ಶೋಭಿಸುತಿಹಳು. ಪ್ರತಿಯೊಂದು ಪದಗಳಿಂದಲೂ ಹೊಸ ಹೊಸ ತತ್ವವನ್ನು ತಿಳಿಸುತಾ ನರ್ತನಗೈಯುತಿಹಳು. ಸಮಸ್ತ ಆಗಮಗಳೇ ಇವಳ ಶರೀರ. ಬ್ರಹ್ಮಸೂತ್ರಗಳೇ ಇವಳ ಮಾಂಗಲ್ಯಾಭರಣಗಳು. ಸಕಲ ಜ್ಞಾನಿಗಳ ಹುಟ್ಟು ಇವಳಿಂದ. ಸರ್ವಜ್ಞಶಿಖಾಮಣಿ ಚತುರ್ಮುಖ ಹುಟ್ಟಿದ್ದೂ ಸಹ ಇವಳಿಂದಲೇ. ಇಂಥ ವಿದ್ಯಾಲಕುಮಿ ಯಾರ ಮುಖಕಮಲದಿಂದ ಹೊರಬಂದಳೋ; (ಅಂಥ ವ್ಯಾಸರು ನನ್ನಲ್ಲಿ ಸದಾ ಸಂಪ್ರೀತರಾಗಿರಲಿ.)**

ಅನ್ವಯಾರ್ಥ -- ಯಸ್ಯ = ಯಾವ ವೇದವ್ಯಾಸದೇವರ, ಸರ್ವಜ್ಞಾತ್ = ಸರ್ವಜ್ಞಸ್ವರೂಪವಾದ, ಆಸ್ಯಾತ್ = ಮುಖದಿಂದ, ಉದಿತಃ = ಜನ್ಮಪಡೆದ, ಪರಮಾ ವಾಗೀಶ್ವರೀ = ವಾಗಭಿಮಾನಿಯಾದ ಭಾರತೀಗಿಂತಲೂ ಶ್ರೇಷ್ಠಳಾದ, ಅಖಿಲಾಗಮವಪುಃ = ಸಮಸ್ತ ವೇದಗಳೇ ಶರೀರವಾಗಿವುಳ್ಳ, ಸತ್ಸೂತ್ರಭೂಷಾಮಣಿಃ = ಬ್ರಹ್ಮಸೂತ್ರಗಳೆಂಬ ಮಾಂಗಲ್ಯಾಭರಣ-ಮಣಿಯುಳ್ಳ, ಸ್ವಯಂ = ಸ್ವತಃ, ಶ್ರೀಃ = ಶ್ರೀ ಶಬ್ದವಾಚ್ಯಳಾದ ಲಕ್ಷ್ಮೀದೇವಿಯು, ಸತಾಂ = ಸಜ್ಜನರ, ಜಿಹ್ವಾಸು = ನಾಲಿಗೆಯಲ್ಲಿ, ಉಲ್ಲಸಿತಾ = ಪ್ರಕಾಶಿಸುತ್ತಿರುವವಳಾಗಿ, ಸತಾಂ = ಸಜ್ಜನರಿಗೆ, ಪ್ರತಿಪದಂ = ಪ್ರತಿಯೊಂದು ಪದಗಳಿಂದಲೂ, ತತ್ವಪ್ರತಿದ್ಯೋತಿಕಾ = ಹೊಸ ಹೊಸ ತತ್ವಗಳನ್ನು ತಿಳಿಸುತ್ತಾ, ಪರಮೇರಿತೈವ = ಪರಮಾತ್ಮನ ಪ್ರೇರಣೆಗೆ ಒಳಗಾಗಿಯೇ, ನೃತ್ಯಂತೀ = ನರ್ತನಗೈಯುತ್ತಿರುವಳೋ, ಯದೀಯೇಚ್ಛಯಾ = ಯಾವ ಲಕ್ಷ್ಮೀದೇವಿಯ ಇಚ್ಛೆಯಿಂದಲೇ, ಕವಯಃ = ಜ್ಞಾನಿವರೇಣ್ಯರು, ಪುಷ್ಕರಭುವಃ = ಪದ್ಮನಾಭನ ನಾಭಿಪದ್ಮಸಂಭವರಾದ ಬ್ರಹ್ಮಾದಿಋಜು ಯೋಗಿಗಳೂ ಕೂಡ, ಜಾತಾಃ = ಜನ್ಮವೆತ್ತಿದರೋ, ಇಂಥ ಸಕಲ ವಾಙ್ಮನಸದೇವತೆಯಾದ ಜಗನ್ಮಾತೆ ಲಕುಮಿದೇವಿಯು, (ಮೇ ಸಂಪ್ರೀಯತಾಂ = ನನ್ನ ವಿಷಯದಲ್ಲಿ ಸಂಪೂರ್ಣ ಪ್ರೀತರಾಗಲಿ.)

ವಾಯುದೇವರೆ ! ಏನೆಂದು ಬಣ್ಣಿಸಲಿ ನಿಮ್ಮ ಮಹಿಮೆಯ !

**यः सर्वजीवनविबोधविचेष्टितेशो**
**देव्याश्च वाङ्मयतनोरखिलार्चितायाः ।**
**नाथः सदा हरिमहागुणदृष्टितृप्त-**
**स्तस्मै नमो भगवते परभानिलाय ।।५।।**

ಯಃ ಸರ್ವಜೀವನವಿಬೋಧವಿಚೇಷ್ಟಿತೇಶೋ
ದೇವ್ಯಾಶ್ಚ ವಾಙ್ಮಯತನೋರಖಿಲಾರ್ಚಿತಾಯಾಃ ।
ನಾಥಃ ಸದಾ ಹರಿಮಹಾಗುಣದೃಷ್ಟಿತೃಪ್ತ-
ಸ್ತಸ್ಮೈ ನಮೋ ಭಗವತೇ ಪರಮಾನಿಲಾಯ ।।೫।।

ಅನುವಾದ - ಓ ವಾಯುದೇವರೆ ! ತಾವು ಸಕಲ ಜೀವಿಗಳಿಗೆ ಜೀವನಪ್ರದರು. ಅದರಲ್ಲಿಯೂ ಸಾಧಕಮನುಷ್ಯರಿಗೆ ಜ್ಞಾನಪ್ರದರು. ಅದರಲ್ಲಿಯೂ ಕೆಲವರಿಗೆ ಯಜ್ಞದಾನಾದಿಗಳಲ್ಲಿ ಕೆಲವರಿಗೆ ಜ್ಞಾನಪ್ರಚಾರದಲ್ಲಿ ಕೆಲವರಿಗೆ ಲೋಕಸಂರಕ್ಷಣೆಯಲ್ಲಿ ಪ್ರೇರಣೆ ಮಾಡುವವರು. ಎಲ್ಲರಿಂದಲೂ ಪೂಜ್ಯಳಾದ ವಾಙ್ಮಯಸ್ವರೂಪಳಾದ ಭಾರತಿಗೂ ತಾವು ಒಡೆಯರು. ಶ್ರೀಹರಿಯ ಹೊಸ ಹೊಸ ಗುಣಗಳ ಚಿಂತನೆಯಿಂದ ನಿತ್ಯತೃಪ್ತರು. 'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ' (ಛಾಂ.ಉ.ಭಾ. ೩-೧-೫) ಎಂಬ ಪ್ರಮಾಣೋಕ್ತವಾದ ಅಣಿಮಾದ್ಯಷ್ಟೈಶ್ವರ್ಯ, ವೈಷಯಿಕವೈರಾಗ್ಯ, ವ್ಯಾಪ್ತ್ಯೋಪಾಸನಾದಿ ಯಶಸ್ಸು, ಸಕಲ ಸದಾಗಮವಿಷಯಕ ವಿಶೇಷ ವಿಜ್ಞಾನ, ಆಖಣಾತ್ಮಸಮಮಹಿಮಾದಿವೀರ್ಯ, ಸತ್ಯಲೋಕಾಧಿಪತ್ಯಾದಿ ಸಂಪತ್ತು ಎಂಬ ಷಡ್‌ಗುಣಗಳಿಂದ ತುಂಬಿದ್ದರಿಂದ ಭಗವಚ್ಛಬ್ದವಾಚ್ಯರು. ಮತ್ತು 'ಉತ್ಪತ್ತಿಂ ಪ್ರಳಯಂ ಚೈವ ಭೂತಾನಾಮಾಗತಿಂ ಗತಿಮ್ । ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ' ಎಂಬ ವಿಷ್ಣುಪುರಾಣದ (೬-೫-೭೮) ವಚನದಂತೆ ಸರ್ವಪ್ರಾಣಗಳ ಉತ್ಪತ್ತಿ, ಪ್ರಳಯ, ಆಗತಿ, ಗತಿ, ವಿದ್ಯೆ ಹಾಗೂ ಅವಿದ್ಯೆಗಳನ್ನು ಚೆನ್ನಾಗಿ ಬಲ್ಲವರಾದ ಪ್ರಯುಕ್ತವೂ ಶ್ರೀಹರಿರಮಾದೇವಿಯರ ಅನಂತರ ವಿಶೇಷವಾಗಿ ಭಗವಚ್ಛಬ್ದವಾಚ್ಯರು. ಹೀಗೆ ಷಡ್ಗುಣಗಳ ತವರಾದ ನಿಮ್ಮಲ್ಲಿ ಭಗವಂತ ನೆಲೆಸಿಹನು. ಆದ್ದರಿಂದಲೇ ಅನಿಲರಾದ ತಮಗೆ ನಾನು ಭಕ್ತಿಯಿಂದ ಸದಾ ಆನಮಿಪೆ.

ಅನುವಾದ - ಗುರುವ್ಯಾಸರೇ ! ಸರ್ವಜ್ಞಸ್ವರೂಪವಾದ ತಮ್ಮ ಮುಖಕಮಲದಿಂದ ಉದಿಸಿದಳು ಮಹಾಲಕುಮಿ. ವಾಗಭಿಮಾನಿನೀ ಭಾರತೀದೇವಿಗೂ ನಿಯಾಮಕಳಿವಳು. ಆದ್ದರಿಂದಲೇ ಸ್ವಯಂ 'ಶ್ರೀ' ಎನಿಸಿದವಳು. ಸಜ್ಜನರ ನಾಲಿಗೆಯಲ್ಲಿ ಶೋಭಿಸುತಿಹಳು. ಪ್ರತಿಯೊಂದು ಪದಗಳಿಂದಲೂ ಹೊಸ ಹೊಸ ತತ್ವವನ್ನು ತಿಳಿಸುತಾ ನರ್ತನಗೈಯುತಿಹಳು. ಸಮಸ್ತ ಆಗಮಗಳೇ ಇವಳ ಶರೀರ. ಬ್ರಹ್ಮಸೂತ್ರಗಳೇ ಇವಳ ಮಾಂಗಲ್ಯಾಭರಣಗಳು. ಸಕಲ ಜ್ಞಾನಿಗಳ ಹುಟ್ಟು ಇವಳಿಂದ. ಸರ್ವಜ್ಞಶಿಖಾಮಣಿ ಚತುರ್ಮುಖ ಹುಟ್ಟಿದ್ದೂ ಸಹ ಇವಳಿಂದಲೇ. ಇಂಥ ವಿದ್ಯಾಲಕುಮಿ ಯಾರ ಮುಖಕಮಲದಿಂದ ಹೊರಬಂದಳೋ; (ಅಂಥ ವ್ಯಾಸರು ನನ್ನಲ್ಲಿ ಸದಾ ಸಂಪ್ರೀತರಾಗಿರಲಿ.)

ಅನ್ವಯಾರ್ಥ -- ಯಸ್ಯ = ಯಾವ ವೇದವ್ಯಾಸದೇವರ, ಸರ್ವಜ್ಞಾತ್ = ಸರ್ವಜ್ಞಸ್ವರೂಪವಾದ, ಆಸ್ಯಾತ್ = ಮುಖದಿಂದ, ಉದಿತಃ = ಜನ್ಮಪಡೆದ, ಪರಮಾ ವಾಗೀಶ್ವರೀ = ವಾಗಭಿಮಾನಿಯಾದ ಭಾರತೀಗಿಂತಲೂ ಶ್ರೇಷ್ಠಳಾದ, ಅಖಿಲಾಗಮವಪುಃ = ಸಮಸ್ತ ವೇದಗಳೇ ಶರೀರವಾಗಿವುಳ್ಳ, ಸತ್ಸೂತ್ರಭೂಷಾಮಣಿಃ = ಬ್ರಹ್ಮಸೂತ್ರಗಳೆಂಬ ಮಾಂಗಲ್ಯಾಭರಣಮಣಿಯುಳ್ಳ, ಸ್ವಯಂ = ಸ್ವತಃ, ಶ್ರೀಃ = ಶ್ರೀ ಶಬ್ದವಾಚ್ಯಳಾದ ಲಕ್ಷ್ಮೀದೇವಿಯು, ಸತಾಂ = ಸಜ್ಜನರ, ಜಿಹ್ವಾಸು = ನಾಲಿಗೆಯಲ್ಲಿ, ಉಲ್ಲಸಿತಾ = ಪ್ರಕಾಶಿಸುತ್ತಿರುವವಳಾಗಿ, ಸತಾಂ = ಸಜ್ಜನರಿಗೆ, ಪ್ರತಿಪದಂ = ಪ್ರತಿಯೊಂದು ಪದಗಳಿಂದಲೂ, ತತ್ವಪ್ರತಿದ್ಯೋತಿಕಾ = ಹೊಸ ಹೊಸ ತತ್ವಗಳನ್ನು ತಿಳಿಸುತ್ತಾ, ಪರಮೇರಿತೈವ = ಪರಮಾತ್ಮನ ಪ್ರೇರಣೆಗೆ ಒಳಗಾಗಿಯೇ, ನೃತ್ಯಂತೀ = ನರ್ತನಗೈಯುತ್ತಿರುವಳೋ, ಯದೀಯೇಚ್ಛಯಾ = ಯಾವ ಲಕ್ಷ್ಮೀದೇವಿಯು ಇಚ್ಛೆಯಿಂದಲೇ, ಕವಯಃ = ಜ್ಞಾನಿವರೇಣ್ಯರು, ಪುಷ್ಕರಭುವಃ = ಪದ್ಮನಾಭನ ನಾಭಿಪದ್ಮಸಂಭವರಾದ ಬ್ರಹ್ಮಾದಿಋಜು ಯೋಗಿಗಳೂ ಕೂಡ, ಜಾತಾಃ = ಜನ್ಮವೆತ್ತಿದರೋ, ಇಂಥ ಸಕಲ ವಾಙ್ಮನಸದೇವತೆಯಾದ ಜಗನ್ಮಾತೆ ಲಕುಮಿದೇವಿಯು, (ಮೇ ಸಂಪ್ರೀಯತಾಂ = ನನ್ನ ವಿಷಯದಲ್ಲಿ ಸಂಪೂರ್ಣ ಪ್ರೀತರಾಗಲಿ.)

ವಾಯುದೇವರೆ ! ಏನೆಂದು ಬಣ್ಣಿಸಲಿ ನಿಮ್ಮ ಮಹಿಮೆಯ !

**यः सर्वजीवनविबोधविचेष्टितेशो**
**देव्याश्च वाङ्मयतनोरखिलार्चितायाः ।**
**नाथः सदा हरिमहागुणदृष्टितृप्त-**
**स्तस्मै नमो भगवते परमानिलाय ॥५॥**

ಯಃ ಸರ್ವಜೀವನವಿಬೋಧವಿಚೇಷ್ಟಿತೇಶೋ
ದೇವ್ಯಾಶ್ಚ ವಾಙ್ಮಯತನೋರಖಿಲಾರ್ಚಿತಾಯಾಃ ।
ನಾಥಃ ಸದಾ ಹರಿಮಹಾಗುಣದೃಷ್ಟಿತೃಪ್ತ-
ಸ್ತಸ್ಮೈ ನಮೋ ಭಗವತೇ ಪರಮಾನಿಲಾಯ ॥೫॥

ಅನುವಾದ - ಓ ವಾಯುದೇವರೆ ! ತಾವು ಸಕಲ ಜೀವಿಗಳಿಗೆ ಜೀವನಪ್ರದರು. ಅದರಲ್ಲಿಯೂ ಸಾಧಕಮನುಷ್ಯರಿಗೆ ಜ್ಞಾನಪ್ರದರು. ಅದರಲ್ಲಿಯೂ ಕೆಲವರಿಗೆ ಯಜ್ಞದಾನಾದಿಗಳಲ್ಲಿ ಕೆಲವರಿಗೆ ಜ್ಞಾನಪ್ರಚಾರದಲ್ಲಿ ಕೆಲವರಿಗೆ ಲೋಕಸಂರಕ್ಷಣೆಯಲ್ಲಿ ಪ್ರೇರಣೆ ಮಾಡುವವರು. ಎಲ್ಲರಿಂದಲೂ ಪೂಜ್ಯಳಾದ ವಾಙ್ಮಯಸ್ವರೂಪಳಾದ ಭಾರತಿಗೂ ತಾವು ಒಡೆಯರು. ಶ್ರೀಹರಿಯ ಹೊಸ ಹೊಸ ಗುಣಗಳ ಚಿಂತನೆಯಿಂದ ನಿತ್ಯತೃಪ್ತರು. 'ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ । ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತೀರಣಾ' (ಛಾಂ.ಉ.ಭಾ. ೩-೧-೫) ಎಂಬ ಪ್ರಮಾಣೋಕ್ತವಾದ ಅಣಿಮಾದ್ಯಷ್ಟೈಶ್ವರ್ಯ, ವೈಷಯಿಕವೈರಾಗ್ಯ, ವ್ಯಾಪ್ತ್ಯೋಪಾಸನಾದಿ ಯಶಸ್ಸು, ಸಕಲ ಸದಾಗಮವಿಷಯಕ ವಿಶೇಷ ವಿಜ್ಞಾನ, ಆಖಣಾಶ್ಮಸಮಮಹಿಮಾದಿವೀರ್ಯ, ಸತ್ಯಲೋಕಾಧಿಪತ್ಯಾದಿ ಸಂಪತ್ತು ಎಂಬ ಷಡ್‌ಗುಣಗಳಿಂದ ತುಂಬಿದ್ದರಿಂದ ಭಗವಚ್ಛಬ್ದವಾಚ್ಯರು. ಮತ್ತು 'ಉತ್ಪತ್ತಿಂ ಪ್ರಳಯಂ ಚೈವ ಭೂತಾನಾಮಾಗತಿಂ ಗತಿಮ್ । ವೇತ್ತಿ ವಿದ್ಯಾಮವಿದ್ಯಾಂ ಚ ಸ ವಾಚ್ಯೋ ಭಗವಾನಿತಿ' ಎಂಬ ವಿಷ್ಣುಪುರಾಣದ (೬-೫-೭೮) ವಚನದಂತೆ ಸರ್ವಪ್ರಾಣಗಳ ಉತ್ಪತ್ತಿ, ಪ್ರಳಯ, ಆಗತಿ, ಗತಿ, ವಿದ್ಯೆ ಹಾಗೂ ಅವಿದ್ಯೆಗಳನ್ನು ಚೆನ್ನಾಗಿ ಬಲ್ಲವರಾದ ಪ್ರಯುಕ್ತವೂ ಶ್ರೀಹರಿರಮಾದೇವಿಯರ ಅನಂತರ ವಿಶೇಷವಾಗಿ ಭಗವಚ್ಛಬ್ದವಾಚ್ಯರು. ಹೀಗೆ ಷಡ್ಗುಣಗಳ ತವರಾದ ನಿಮ್ಮಲ್ಲಿ ಭಗವಂತ ನೆಲೆಸಿಹನು. ಆದ್ದರಿಂದಲೇ ಅನಿಲರಾದ ತಮಗೆ ನಾನು ಭಕ್ತಿಯಿಂದ ಸದಾ ಆನಮಿಪೆ.

ಅನ್ವಯಾರ್ಥ -- ಯಃ = ಯಾವ ಸರ್ವಜ್ಞಕಲ್ಪರಾದ ಮುಖ್ಯಪ್ರಾಣದೇವರು ('ಯೇತಿ ಜ್ಞಾನಂ ಸಮುದ್ದಿಷ್ಟಂ' ತಂತ್ರ ಭಾಗವತ) ಅಖಿಲಾರ್ಚಿತಾಯಾಃ = ಎಲ್ಲರಿಂದಲೂ ಪೂಜಿತಳಾದ, ವಾಙ್ಮಯತನೋಃ, ವಾಙ್ಮಯ = ಸಕಲಸಚ್ಛಾಸ್ತ್ರೋದಿತ ವಾಕ್ಯ ಸಮೂಹವೇ, ತನೋಃ = ಶರೀರವಾಗಿವುಳ್ಳ, ದೇವ್ಯಾಃ = ಭಾರತೀದೇವಿಗೆ ಕೂಡ, ನಾಥಃ = ಒಡೆಯರಾದ, ಚ = ಮತ್ತು, ಸರ್ವಜೀವನವಿಬೋಧವಿಚೇಷ್ಟಿತೇಶಃ, ಸರ್ವ = ಸಕಲ ಜೀವಿಗಳಿಗೆ, ಜೀವನ = ಜೀವನವನ್ನು, ವಿಬೋಧ = ಸಾಧಕನಿಗೆ ವಿಶೇಷವಾದ ತತ್ವಜ್ಞಾನವನ್ನು, ವಿಚೇಷ್ಟಿತ = ಸಾಧಕರ ಒಂದೊಂದು ಬಗೆಯ ವಿಶಿಷ್ಟವಾದ ಸತ್ಕಾರ್ಯಗಳನ್ನು, ಈಶಃ = ನಿಯಮಿಸುವ ಸ್ವಾಮಿಯಾದ, ಹರಿಮಹಾಗುಣದೃಷ್ಟಿತೃಪ್ತಃ = ಶ್ರೀಹರಿಯ ಶ್ರೇಷ್ಠಗುಣಗಳ ಸಾಕ್ಷಾತ್ಕಾರ ನೈರಂತರ್ಯದಿಂದಲೇ ತೃಪ್ತರಾಗುತ್ತಿರುವರೋ, ತಸ್ಮೈ = ಅಂತಹ, ಭಗವತೇ = ಷಡ್ಗುಣೈಶ್ವರ್ಯಸಂಪನ್ನರಾದ, ಪರಮಾನಿಲಾಯ = ಮಧ್ಯಮಪ್ರಾಣರೆನಿಸಿದ ವಾಯುದೇವರಿಗೆ, ಸದಾ = ನಿರಂತರವಾಗಿ ನಮಃ = ನಮಸ್ಕಾರವು.

ಅಸುರರ ದುರಾಲೋಚನೆ

**ये वै पुरा जगति शार्ङ्गभृताऽमुना च**
**देवेन भीमगदया हतबाहुवीर्याः ।**
**देवद्विषां मतिरभून्मनुजेषु तेषां**
**वाग्योधनेन भगवद्गुणदूषणाय ॥६॥**

ಯೇ ವೈ ಪುರಾ ಜಗತಿ ಶಾರ್ಙ್ಗಭೃತಾऽಮುನಾ ಚ
ದೇವೇನ ಭೀಮಗದಯಾ ಹತಬಾಹುವೀರ್ಯಾಃ ।
ದೇವದ್ವಿಷಾಂ ಮತಿರಭೂನ್ಮನುಜೇಷು ತೇಷಾಂ
ವಾಗ್ಯೋಧನೇನ ಭಗವದ್ಗುಣದೂಷಣಾಯ ॥೬॥

ಅನುವಾದ - ಹಿಂದೊಮ್ಮೆ ದೇವತೆಗಳಿಗೂ ಅಸುರರಿಗೂ ಘನಘೋರಯುದ್ಧ ನಡೆಯಿತು. ಶಾರ್ಙ್ಗಧನುರ್ಧಾರಿಯಾದ ನಾರಾಯಣನಿಂದ ಮತ್ತು ವಾಯುದೇವರ ಭಯಂಕರ ಗದೆಯಿಂದ ಅಸುರರ ಭುಜಪರಾಕ್ರಮ ಅಡಗಿತು. ಮುಂದೆ ಕೃಷ್ಣಾವತಾರದಲ್ಲಿಯೂ ಶಾರ್ಙ್ಗ-ಧನುರ್ಧಾರಿಯಾದ ಕೃಷ್ಣನಿಂದ ಮತ್ತು ಭೀಮಸೇನನ ಗದೆಯಿಂದ ಅದೇ ಅಸುರರು ಮಣ್ ಮುಕ್ಕಿದರು. ಇನ್ನೆಂದೂ ಭುಜಪರಾಕ್ರಮದಿಂದ ಯುದ್ಧದಲ್ಲಿ ಗೆಲ್ಲಲು ಸಾಧ್ಯವಿಲ್ಲವೆಂದು ನಿರ್ಣಯಿಸಿದರು. ಒಂದು ದುರಾಲೋಚನೆಯನ್ನೂ ಹೂಡಿದರು. 'ಮನುಷ್ಯರಲ್ಲಿ ಬ್ರಾಹ್ಮಣರಾಗಿ ಹುಟ್ಟೋಣ. ಭಗವಂತನಲ್ಲಿ ಗುಣಗಳೇ ಇಲ್ಲವೆಂದು ದೂಷಣೆ ಮಾಡೋಣ. ಈ ವಾಗ್ ಯುದ್ಧದಿಂದ ಗೆಲ್ಲೋಣ!'

ಅನ್ವಯಾರ್ಥ -- ಯೇ = ರುದ್ರದೇವರಿಂದ ಅವಧ್ಯತ್ವ ವರ ಪಡೆದಂತಹ, ಮೂರು ಮಹಾಪದ್ಮಸಂಖ್ಯೆಯಲ್ಲಿ (ಒಂದು ಗೆರೆಯ ಮುಂದೆ ಹತ್ತೊಂಭತ್ತು ಸೊನ್ನೆಗಳನ್ನು ಸೇರಿಸಿದಾಗ ಆಗುವ ಮೊತ್ತಕ್ಕೆ ಪದ್ಮವೆಂದು ಅಭಿಧಾನ) ಕ್ರೋಧವಶಗಣವೆಂದು ಅನ್ವರ್ಥಕನಾಮದಿಂದ ತ್ರಿಲೋಕ-ಹಿಂಸಕರಾದ ಯಾವ ದೈತ್ಯರು, ವೈ = ವಿಶ್ವವಿಖ್ಯಾತರಾಗಿರುವರೋ, ತೇ = ಅವರು, ಪುರಾ = ಹಿಂದೆ, ಜಗತಿ = ಜಗತ್ತಿನಲ್ಲಿ, ಶಾರ್ಙ್ಗಭೃತಾ = ಶಾರ್ಙ್ಗಧನುರ್ಧಾರಿಯಾದ ಶ್ರೀಹರಿಯಿಂದ, ಚ = ಮತ್ತು, ಅಮುನಾ = ಈ ಸರ್ವಪ್ರಾಣಿಗಳಿಗೂ ಪ್ರಾಣಭೂತರಾದ ಮುಖ್ಯಪ್ರಾಣದೇವರಿಂದ, ಚ = ಮತ್ತು, ದೇವೇನ = ಸತೀದ್ರೌಪದೀದೇವಿಗೆ ಕುಬೇರೋದ್ಯಾನ-ಸರೋವರದಲ್ಲಿ ಸೌಗಂಧಿಕಾ ಮತ್ತು ಪಂಚವರ್ಣಕಮಲಗಳನ್ನು ತರುವಂತಹ ಕ್ರೀಡೆಯ ನಿಮಿತ್ತದಿಂದ (ದಿವು = ಕ್ರೀಡಾದೌ) ಭೀಮಗದಯಾ = ಭೀಮಸೇನದೇವರ ಗದೆಯಿಂದ, ಹತಬಾಹುವೀರ್ಯಾಃ = ನಷ್ಟವಾದ ಬಾಹುವೀರ್ಯವುಳ್ಳವರಾದರು. ತೇಷಾಂ = ಅಂತಹ, ದೇವದ್ವಿಷಾಂ = ದೇವತೆಗಳ ದ್ವೇಷಿಗಳಾದ ಮಣಿಮಂತನೇ ಮೊದಲಾದ ಕ್ರೋಧವಶ ದೈತ್ಯರಿಗೆ, ಮನುಜೇಷು = ಅಲ್ಪ ಮನುಷ್ಯರ ವಿಷಯದಲ್ಲಿ, ವಾಗ್ ಯೋಧನೇನ = ಕುಯುಕ್ತಿಜಾಲವನ್ನೊಳಗೊಂಡ (ಶುಷ್ಕತರ್ಕದಿಂದೊಳ-ಗೊಂಡ) ವಾಗ್ಯುದ್ಧದಿಂದ, ಭಗವದ್‌ಗುಣದೂಷಣಾಯ =ಭಗವಂತನ

ಪೂರ್ಣಜ್ಞಾನ ಪೂರ್ಣಾನಂದಾದಿ ಅನಂತಸದ್ಗುಣಗಳೆಲ್ಲವನ್ನು ಅಲ್ಲಗಳೆಯುವುದಕ್ಕಾಗಿ, ಮತಿಃ = ದುರ್ಮಂತ್ರಾಲೋಚನೆಯು, ಅಭೂತ್ = ಉಂಟಾಯಿತು.

ಅಸುರನಿಗ್ರಹಕ್ಕಾಗಿ ಮಧ್ವಾವತಾರ

**संरम्भतः श्रुतिषु विष्णुपरासु गूढाद्**
**विद्वेषतः परगुणेषु महत्सु गाढात् ।**
**वेदान्तवादकपटैरतिदुष्टवाचां**
**मायाविनां निरसने स कृतावतारः ॥७॥**

ಸಂರಂಭತಃ ಶ್ರುತಿಷು ವಿಷ್ಣುಪರಾಸು ಗೂಢಾದ್
ವಿದ್ವೇಷತಃ ಪರಗುಣೇಷು ಮಹತ್ಸು ಗಾಢಾತ್ ।
ವೇದಾಂತವಾದಕಪಟೈರತಿದುಷ್ಟವಾಚಾಂ
ಮಾಯಾವಿನಾಂ ನಿರಸನೇ ಸ ಕೃತಾವತಾರಃ ॥೭॥

ಅನುವಾದ - ವಿಷ್ಣುಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗಳಲ್ಲಿ ಗೂಢವಾದ ಕೋಪದಿಂದ ವಿಷ್ಣುವಿನ ಸದ್ಗುಣಗಳಲ್ಲಿ ಗಾಢವಾದ ಸ್ವರೂಪದ್ವೇಷದಿಂದ ಮಾಯಾವಾದಿಗಳು ವೇದದ ನಿಜಾರ್ಥವನ್ನು ಹಾಳು ಮಾಡಲು ವೇದಾಂತಿಗಳಾಗಬೇಕೆಂಬ ಕಪಟ ಬುದ್ಧಿಯುಳ್ಳವ-ರಾದರು. ಬಲು ದುಷ್ಟವಾದ ಇವರ ಮಾತುಗಳನ್ನು ನಿರಾಕರಣೆ ಮಾಡಲು ವಾಯುದೇವರು ಮಧ್ವರೂಪದಿಂದ ಅವತರಿಸಿದರು.

ಅನ್ವಯಾರ್ಥ -- ವಿಷ್ಣುಪರಾಸು = ವಿಷ್ಣುಪ್ರತಿಪಾದಕವಾದ, ಶ್ರುತಿಷು = ಶ್ರುತಿಗಳಲ್ಲಿ, ಗೂಢಾತ್ = ಅವ್ಯಕ್ತವಾದ, ಸಂರಂಭತಃ = ದ್ವೇಷಯುಕ್ತ ಅಹಂಕಾರದಿಂದ, ಮಹತ್ಸು = ಉತ್ತಮವಾದ, ಪರಗುಣೇಷು = ಪರಮಾತ್ಮನ ಗುಣಗಳಲ್ಲಿ, ಗಾಢಾತ್ ವಿದ್ವೇಷತಃ = ಸ್ವರೂಪದ್ವೇಷದಿಂದ, ವೇದಾಂತವಾದಕಪಟೈಃ = ವೇದವನ್ನು ನಿರಾಕರಣೆ ಮಾಡಲು 'ವೇದಾಂತವಾದ' ಎಂಬ ಮುಖವಾಡವನ್ನು ಹಾಕಿಕೊಂಡ, ಅತಿದುಷ್ಟವಾಚಾಂ=

ಅತ್ಯಂತ ದುಷ್ಟವಾದ ಮಾತುಗಳುಳ್ಳ, ಮಾಯಾವಿನಾಂ = ಮಾಯಾವಾದಿಗಳ, ನಿರಸನೇ = ನಿರಾಸಕ್ಕಾಗಿ, ಸಃ = ಮುಖ್ಯಪ್ರಾಣದೇವರು, ಕೃತಾವತಾರಃ = ಮಧ್ವರೂಪದಿಂದ ಅವತಾರ ಮಾಡಿದರು.

ಮಧ್ವರ ಪಾದಧೂಳಿನ ಮಹಿಮೆ ವರ್ಣಿಸಲಾಧ್ಯ

**सोऽयं गुणामृतमहाब्धिरिहावतीर्ण**
**आनन्दतीर्थभगवान् परमो गुरुर्मे ।**
**यत्पादपद्मरजसा शिरसा धृतेन**
**सद्यः प्रयान्ति परिशुद्धिमशेषलोकाः ॥८॥**

ಸೋಽಯಂ ಗುಣಾಮೃತಮಹಾಬ್ಧಿರಿಹಾವತೀರ್ಣ
ಆನಂದತೀರ್ಥಭಗವಾನ್ ಪರಮೋ ಗುರುರ್ಮೇ ।
ಯತ್ಪಾದಪದ್ಮರಜಸಾ ಶಿರಸಾ ಧೃತೇನ
ಸದ್ಯಃ ಪ್ರಯಾಂತಿ ಪರಿಶುದ್ಧಿಮಶೇಷಲೋಕಾಃ ॥೮॥

ಅನುವಾದ - ಯಾರ ಪಾದಪದ್ಮಗಳಲ್ಲಿ ವಿರಾಜಿಸುವ ಧೂಳಿನ ಕಣಗಳನ್ನು ತಲೆಯಲ್ಲಿ ಮುಡಿಯುವುದರಿಂದ ಸಮಸ್ತ ಲೋಕಗಳು ಕೂಡಲೇ ಪರಿಪೂರ್ಣವಾಗಿ ಶುದ್ಧವಾಗುತ್ತವೋ, ಅವರೇ ನನ್ನ ಮುಖ್ಯಗುರುಗಳಾದ ಆನಂದತೀರ್ಥಭಗವತ್ಪಾದರು. ಗುಣಗಳೆಂಬ ಅಮೃತದಿಂದ ಸಮುದ್ರರಾದ ಇವರು ಭುವಿಯಲ್ಲಿ ಅವತರಿಸಿದರು.

ಅನ್ವಯಾರ್ಥ -- ಯತ್ಪಾದಪದ್ಮರಜಸಾ = ಯಾವ ಆನಂದತೀರ್ಥರ ಪಾದಪದ್ಮದಲ್ಲಿರುವ ಧೂಳಿನ ಕಣಗಳನ್ನು, ಶಿರಸಾ = ತಲೆಯಲ್ಲಿ, ಧೃತೇನ = ಧಾರಣೆ ಮಾಡಿದಾಗ, ಅಶೇಷಲೋಕಾಃ = ಸಮಸ್ತಲೋಕಗಳೆಲ್ಲವೂ, ಸದ್ಯಃ = ಕೂಡಲೇ, ಪರಿಶುದ್ಧಿಂ = ಪಾವಿತ್ರ್ಯವನ್ನು, ಪ್ರಯಾಂತಿ = ಹೊಂದುತ್ತವೋ, ಸೋಽಯಂ = ಅಂಥ, ಗುಣಾಮೃತಮಹಾಬ್ಧಿಃ = ಅಮೃತವಾದ ಗುಣಗಳೇ ಸಮುದ್ರವಾಗಿರುವ, ಮೇ = ನನ್ನ, ಪರಮಃ ಗುರುಃ

= ಉತ್ತಮಗುರುಗಳಾದ, ಆನಂದತೀರ್ಥಭಗವಾನ್ = ಶ್ರೀಮದಾನಂದತೀರ್ಥ-ಭಗವತ್ಪಾದಾಚಾರ್ಯರು, ಇಹ = ಈ ಭೂಲೋಕದಲ್ಲಿ, ಅವತೀರ್ಣಃ = ಅವತಾರವನ್ನು ಮಾಡಿದರು.

ಮಧ್ವರ ವ್ಯಾಖ್ಯಾನ ಬಲು ಅದ್ಭುತ

**यस्याऽद्यानां मुनीनां सततहरिगुणध्यानशिक्षायमाणा**
**वादीन्द्रामत्तनागप्रमितिबलतिरस्कारसिंहायमाना ।**
**सर्वज्ञस्य श्रुतीनामखिलजनमनोध्वान्तसूर्यायमाणा**
**व्याख्या विख्यातकीर्तेर्जयति सुमनसां कर्णपूरायमाणा ॥९॥**

ಯಸ್ಯಾऽದ್ಯಾನಾಂ ಮುನೀನಾಂ ಸತತಹರಿಗುಣಧ್ಯಾನಶಿಕ್ಷಾಯಮಾಣಾ
ವಾದೀಂದ್ರಾಮತ್ತನಾಗಪ್ರಮಿತಿಬಲತಿರಸ್ಕಾರಸಿಂಹಾಯಮಾನಾ ।
ಸರ್ವಜ್ಞಸ್ಯ ಶ್ರುತೀನಾಮಖಿಲಜನಮನೋಧ್ವಾಂತಸೂರ್ಯಾಯಮಾಣಾ
ವ್ಯಾಖ್ಯಾ ವಿಖ್ಯಾತಕೀರ್ತೇರ್ಜಯತಿ ಸುಮನಸಾಂ ಕರ್ಣಪೂರಾಯಮಾಣಾ ॥೯॥

ಅನುವಾದ - ಮೊದಲು ಹುಟ್ಟಿದ ಸನಕಾದಿಮುನಿಗಳಿಗೂ ಸಹ ಶ್ರೀಹರಿಯ ಗುಣಗಳ ಧ್ಯಾನವನ್ನು ನಿರಂತರ ಬೋಧಿಸುವುದು ಶ್ರೀಮದಾನಂದತೀರ್ಥರ ಬ್ರಹ್ಮಸೂತ್ರಾದಿವ್ಯಾಖ್ಯಾನ, ಬಹಳ ಮದಭರಿತರಾದ ದೊಡ್ಡದೊಡ್ಡ ಕುವಾದಿಗಳೆಂಬ ದಿಗ್ಗಜಗಳು ದುಷ್ಪಜ್ಞಾನದಿಂದ ಬಲಿಷ್ಠರಾಗಿರುವರೋ; ಅಂಥಹವರ ಬಲವನ್ನು ತಿರಸ್ಕರಿಸುವುದರಲ್ಲಿ ಬಲಿಷ್ಠಸಿಂಹದಂತಿದೆ. ಸಮಸ್ತ ಸಜ್ಜನರ ಮನಸ್ಸಿನಲ್ಲಿರುವ ಕತ್ತಲೆಯನ್ನು ನಿರಾಸ ಮಾಡುವುದರಲ್ಲಿ ವಿರಾಜಿಸುವ ಸೂರ್ಯನಂತಿದೆ. ಸಜ್ಜನರ ಕರ್ಣಗಳಿಗೆ ಅನರ್ಘಾಭರಣದಂತಿದೆ. ಇಂತಹ ಶ್ರುತಿವ್ಯಾಖ್ಯಾನವು ಸರ್ವೋತ್ಕೃಷ್ಟವಾಗಿದೆ. ಕುವಾದಿಗಳನ್ನು ಸಂಪೂರ್ಣವಾಗಿ ಸೋಲಿಸಿದೆ

ಅನ್ವಯಾರ್ಥ -- ಯಸ್ಯ = ಯಾವ, ಆದ್ಯಾನಾಂ ಮುನೀನಾಂ = ಮೊದಲ ಮುನಿಗಳೆನಿಸಿದ ಸನಕಾದಿಗಳಿಗೆ, ಸತತಹರಿಗುಣಧ್ಯಾನಶಿಕ್ಷಾಯಮಾಣಾ, ಸತತ = ನಿರಂತರವಾಗಿ, ಹರಿಗುಣ = ಶ್ರೀಹರಿಯ, ಗುಣ = ಗುಣಗಳ, ಧ್ಯಾನ = ಧ್ಯಾನದ, ಶಿಕ್ಷಾಯಮಾಣಾ = ಶಿಕ್ಷಣವನ್ನು ನೀಡುವಂತಹ,

ವಾದೀಂದ್ರಾಮತ್ತನಾಗಪ್ರಮಿತಿಬಲತಿರಸ್ಕಾರಸಿಂಹಾಯಮಾನಾ, ವಾದೀಂದ್ರ = ವಾದಿಗಳಲ್ಲಿ ಅಗ್ರೇಸರರೆಂಬ, ಆಮತ್ತ = ಚೆನ್ನಾಗಿ ಮದಭರಿತರಾದ, ನಾಗ = ಆನೆಗಳ, ಪ್ರಮಿತಿಬಲ = ಪ್ರಕರ್ಷ ಜ್ಞಾನವೆಂಬ ಬಲವನ್ನು, ತಿರಸ್ಕಾರ = ಧಿಕ್ಕರಿಸುವುದರಲ್ಲಿ, ಸಿಂಹಾಯಮಾನಾ = ಸಿಂಹದಂತಿರುವ, ಅಖಿಲಜನಮನೋಧ್ವಾಂತಸೂರ್ಯಾಯಮಾಣಾ, ಅಖಿಲ = ಎಲ್ಲ, ಜನ = ಜನರ, ಮನಃ= ಮನಸ್ಸಿನಲ್ಲಿರುವ, ಧ್ವಾಂತ= ಕತ್ತಲೆಗೆ, ಸೂರ್ಯಾಯಮಾಣಾಃ= ಸೂರ್ಯನಂತಿರುವ, ಸುಮನಸಾಂ = ಸಜ್ಜನರಿಗೆ, ಕರ್ಣಪೂರಾಯಮಾಣಾಃ = ಕರ್ಣಾಭರಣವಾಗಿವುಳ್ಳ, ವಿಖ್ಯಾತಕೀರ್ತೇಃ = ತ್ರಿಲೋಕ ಪ್ರಸಿದ್ಧವಾದ ಕೀರ್ತಿಯುಳ್ಳ, ಸರ್ವಜ್ಞಸ್ಯ = ಸರ್ವಜ್ಞರಾದ ಶ್ರೀಮದಾಚಾರ್ಯರ, ವ್ಯಾಖ್ಯಾ = ವ್ಯಾಖ್ಯಾನವು, ಜಯತಿ = ಸರ್ವೋತ್ಕೃಷ್ಟವಾಗಿದೆ.

### ಮಧ್ವರ ಆಚಾರ-ವಿಚಾರ

**येनैकान्तयतात्मनामृजुवरेणाऽचार आचार्यवान्**
**संन्यासेन निजा स्वयं प्रकटिता निःसङ्गता संसृतौ ।**
**श्लाघ्यः पारमहंस्य आश्रमवरो यच्छीलगङ्गाजल-**
**स्नातो व्यक्तमयोग्यसङ्गमभुवो दोषात् पुनर्मोक्षितः ॥१०॥**

ಯೇನೈಕಾಂತಯತಾತ್ಮನಾಮೃಜುವರೇಣಾಽಚಾರ ಆಚಾರ್ಯವಾನ್
ಸಂನ್ಯಾಸೇನ ನಿಜಾ ಸ್ವಯಂ ಪ್ರಕಟಿತಾ ನಿಃಸಂಗತಾ ಸಂಸೃತೌ ।
ಶ್ಲಾಘ್ಯಃ ಪಾರಮಹಂಸ್ಯ ಆಶ್ರಮವರೋ ಯಚ್ಛೀಲಗಂಗಾಜಲ-
ಸ್ನಾತೋ ವ್ಯಕ್ತಮಯೋಗ್ಯಸಂಗಮಭುವೋ ದೋಷಾತ್ ಪುನರ್ಮೋಕ್ಷಿತಃ ॥೧೦॥

ಅನುವಾದ - ಇಂದ್ರಿಯನಿಗ್ರಹದಿಂದ ಏಕಾಂತದಲ್ಲಿ ಕುಳಿತು ಜಪಗೈಯುವರ ಆಚಾರವು ಅಥವಾ ಪರಮಾತ್ಮನ ಏಕಾಂತಭಕ್ತರಾದ ಜ್ಞಾನಿಗಳ ಆಚಾರವು ಈಗ ಶ್ರೀಮದಾಚಾರ್ಯರಿಂದ ಆಚಾರ್ಯವುಳ್ಳದ್ದಾಯಿತು. ಋಜುಶ್ರೇಷ್ಠರಾದ ಶ್ರೀಮದಾಚಾರ್ಯರ ಮಾರ್ಗದರ್ಶನದಿಂದ ಏಕಾಂತಭಕ್ತರು ತಮ್ಮ ಆಚಾರವನ್ನು ತಿಳಿದರು. ಇಂಥ ಶ್ರೀಮದಾಚಾರ್ಯರು ಪ್ರಾಮಾಣಿಕ

ಸಂನ್ಯಾಸಧರ್ಮದಿಂದ ಸಂಸಾರದಲ್ಲಿ ನಿಜವಾದ ವಿರಕ್ತಿಯನ್ನು ಪ್ರಕಟಪಡಿಸಿದರು. ಹಿಂದೆ ಸಂಕರಾದಿ ಅಯೋಗ್ಯರು ಪರಮಹಂಸ ಪದವಿಯನ್ನು ಆಕ್ರಮಿಸಿದ್ದರು. ಇದರಿಂದ ಶ್ರೇಷ್ಠವಾದ ಪಾರಮಹಂಸ್ಯಾಶ್ರಮವು ದೋಷಕಲುಷಿತವಾಗಿತ್ತು. ಈಗ ಶ್ರೀಮದಾಚಾರ್ಯರ ಶೀಲವೆಂಬ ಗಂಗಾಜಲದಲ್ಲಿ ಶ್ರೇಷ್ಠವಾದ ಪಾರಮಹಂಸ್ಯಾಶ್ರಮವು ಸ್ನಾನ ಮಾಡಿತು. ಇದರಿಂದ ತನಗೆ ದುಷ್ಟರ ಸಂಪರ್ಕದಿಂದ ಉಂಟಾದ ದೋಷವು ಪರಿಹಾರವಾಗಿ ಪರಿಶುದ್ಧವಾಯಿತು.

ಅನ್ವಯಾರ್ಥ -- ಯೇನ = ಯಾವ, ಋಜುಪರೇಣ = ಋಜುಶ್ರೇಷ್ಠರಾದ ಶ್ರೀಮದಾಚಾರ್ಯರಿಂದ, ಏಕಾಂತಯತಾತ್ಮನಾಮ್ = ಪರಮಾತ್ಮನಲ್ಲೇ ನೆಟ್ಟಮನಸ್ಸುಳ್ಳ ಮುನಿಗಳ, ಆಚಾರಃ = ಆಚಾರವು, ಆಚಾರ್ಯವಾನ್ = ಆಚಾರ್ಯವುಳ್ಳದ್ದಾಯಿತು. ಸಂಸೃತೌ = ಸಂಸಾರದಲ್ಲಿ, ನಿಜಾ = ಸ್ವಾಭಾವಿಕವಾದ, ನಿಸ್ಸಂಗತಾ = ಲೇಪವಿಲ್ಲದಿರುವಿಕೆಯೆಂಬ ವಿರಕ್ತಿಯು, ಸಂನ್ಯಾಸೇನ = ಸಂನ್ಯಾಸದಿಂದ, ಸ್ವಯಂ = ತಾನಾಗಿಯೇ, ಪ್ರಕಟಿತಾ = ಪ್ರಕಟವಾಯಿತು. ಶ್ಲಾಘ್ಯಃ = ಸ್ತುತಿಸಲರ್ಹವಾದ, ಪಾರಮಹಂಸ್ಯಃ = ಪರಮಹಂಸನಾಮಕ ವಿಷ್ಣುವಿನಿಂದ ಪ್ರವೃತ್ತವಾದ, ಆಶ್ರಮವರಃ = ಶ್ರೇಷ್ಠವಾದ ಆಶ್ರಮವು, ಯಚ್ಛೀಲಗಂಗಾಜಲಸ್ನಾತಃ = ಯಾವ ಶ್ರೀಮದಾಚಾರ್ಯರ ಶೀಲವೆಂಬ ಗಂಗಾಜಲದಲ್ಲಿ ಸ್ನಾನ ಮಾಡಿತೋ ಆಗ, ಅಯೋಗ್ಯಸಂಗಮಭುವಃ = ಅಯೋಗ್ಯರ ಸಂಪರ್ಕದಿಂದ ಉಂಟಾದ, ದೋಷಾತ್ = ದೋಷದಿಂದ, ಪುನಃ = ಮತ್ತೆ, ಮೋಕ್ಷಿತಃ = ಬಿಡುಗಡೆ ಹೊಂದಿದ್ದು, ವ್ಯಕ್ತಮ್ = ಸ್ಪಷ್ಟವಾಯಿತು.

ಆಚಾರ್ಯರನ್ನು ಸ್ತುತಿಸಲು ಬಾಯಿ ತೊದಲುತ್ತದೆ, ಕಂಠ ಬಿಗಿದಪ್ಪುತ್ತದೆ.

**लेशेनोद्भासितांशां भुवि मनुजमतिं वीक्ष्य विज्ञानशक्तिं**
**शास्त्रव्याख्यां च चित्रां प्रविततयशसः प्राश्निकानां प्रसङ्गे ।**
**यस्य स्तोतुं प्रवृत्ताः प्रवरगुणमयीं प्रस्खलन्त्या स्ववाचा**
**प्राज्ञाः प्रोद्यत्प्रमोदप्रचुरभरनमत्साश्रुकण्ठा भवन्ति ॥११॥**

ಲೇಶೇನೋದ್ಭಾಸಿತಾಂಶಾಂ ಭುವಿ ಮನುಜಮತಿಂ ವೀಕ್ಷ್ಯ ವಿಜ್ಞಾನಶಕ್ತಿಂ
ಶಾಸ್ತ್ರವ್ಯಾಖ್ಯಾಂ ಚ ಚಿತ್ರಾಂ ಪ್ರವಿತತಯಶಸಃ ಪ್ರಾಶ್ನಿಕಾನಾಂ ಪ್ರಸಂಗೇ ।
ಯಸ್ಯ ಸ್ತೋತುಂ ಪ್ರವೃತ್ತಾಃ ಪ್ರವರಗುಣಮಯೀಂ ಪ್ರಸ್ಖಲಂತ್ಯಾ ಸ್ವವಾಚಾ
ಪ್ರಾಜ್ಞಾಃ ಪ್ರೋದ್ಯತ್ ಪ್ರಮೋದಪ್ರಚುರಭರನಮತ್ ಸಾಶ್ರುಕಂಠಾ ಭವಂತಿ ॥೧೧॥

ಅನುವಾದ - ಭೂಮಿಯಲ್ಲಿರುವ ಮಾನವರ ಅಲ್ಪಬುದ್ಧಿಯನ್ನು ಕಂಡು ಮರುಗಿತು ಶ್ರೀಮದಾಚಾರ್ಯರ ಮನ. ಸಜ್ಜನರ ಅನುಗ್ರಹಕ್ಕಾಗಿ ತಮ್ಮ ಶಕ್ತಿಯಲ್ಲಿ ಒಂದು ತುಣುಕನ್ನು ಪ್ರಕಟಪಡಿಸಿದರು. ಅಷ್ಟರಿಂದಲೇ ಪ್ರಚಂಡ ವಿಜ್ಞಾನಶಕ್ತಿಯುಳ್ಳ ಅದ್ಭುತವಾದ ಸಕಲಶಾಸ್ತ್ರಗಳ ವ್ಯಾಖ್ಯಾನವನ್ನು ರಚಿಸಿದರು. ಇದರಿಂಧ ದಿಕ್ಕು ವಿದಿಕ್ಕುಗಳಲ್ಲಿ ಶ್ರೀಮದಾಚಾರ್ಯರ ಕೀರ್ತಿ ಹಬ್ಬಿತು. ಸಭೆಯಲ್ಲಿ ಕುಳಿತ ಪ್ರಾಶ್ನಿಕರ ಪ್ರಶ್ನೆಗೆ ಉತ್ತರಿಸುವಾಗ ಪ್ರಾಜ್ಞರು ಶ್ರೇಷ್ಠಗುಣವುಳ್ಳ ಶ್ರೀಮದಾಚಾರ್ಯರ ಇಂಥ ವ್ಯಾಖ್ಯಾನವನ್ನು ಉಲ್ಲೇಖಿಸಿ ಪ್ರಶಂಸಿಸುತ್ತಾರೆ. ತಮ್ಮ ಮಾತಿನಿಂದ ಹೊಗಳಲು ಹೊರಟಾಗ ತೊದಲುತ್ತಾರೆ. ವ್ಯಾಖ್ಯಾನ ಮಹಿಮೆಯಿಂದ ಹೇಳಲಾಗದಷ್ಟು ಆನಂದವನ್ನು ಮನದಲ್ಲಿ ಅನುಭವಿಸಿ ಆನಂದತುಂದಿಲರಾಗುತ್ತಾರೆ. ಆನಂದಪರಾಕಾಷ್ಠೆಯಿಂದ ಗದ್ಗದಿತಕಂಠರಾಗಿ ಹೇಳಬೇಕಾದ್ದನ್ನು ಮರೆತು ಮಾತುಗಳನ್ನಾಡಲು ಅಸಮರ್ಥರಾಗುತ್ತಾರೆ. ಹೀಗೆ ಶ್ರೀಮದಾಚಾರ್ಯರ ಅಲ್ಪಶಕ್ತಿಯನ್ನೇ ಹೊಗಳಲು ಈ ಮನುಜರಿಗೆ ಸಾಧ್ಯವಿಲ್ಲ.

ಅನ್ವಯಾರ್ಥ -- ಭುವಿ = ಭೂಲೋಕದಲ್ಲಿರುವ, ಮನುಜಮತಿಂ = ಮಾನವರ ಬುದ್ಧಿಯ ಅಲ್ಪತೆಯನ್ನು, ವೀಕ್ಷ್ಯ = ನೋಡಿ, ಲೇಶೇನ = ತಮ್ಮ ಮೂಲಶಕ್ತಿಯಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ಮಾತ್ರ, ಉದ್ಭಾಸಿತಾಂಶಾಂ = ಪ್ರಕಟಪಡಿಸಿದ ಅಂಶವುಳ್ಳವರಾಗಿ, ಚಿತ್ರಾಂ = ಅದ್ಭುತವಾದ, ವಿಜ್ಞಾನಶಕ್ತಿಂ = ವಿಜ್ಞಾನಶಕ್ತಿಯಿಂದ ಕೂಡಿರುವ, ಶಾಸ್ತ್ರವ್ಯಾಖ್ಯಾಂ = ಸಮಸ್ತ ಶಾಸ್ತ್ರಗಳ ವ್ಯಾಖ್ಯಾನವನ್ನು (ರಚನೆ ಮಾಡಿದರು), ಪ್ರಾಶ್ನಿಕಾನಾಂ = ಪ್ರಶ್ನೆಯನ್ನು ಕೇಳುವ, ಪ್ರಸಂಗೇ = ಪ್ರಸಂಗದಲ್ಲಿ, ಯಸ್ಯ - ಯಾವ ಶ್ರೀಮದಾಚಾರ್ಯರ, ಪ್ರವರಗುಣಮಯೀಂ = ಶ್ರೇಷ್ಠವಾದ ಗುಣಗಳಿಂದ ಕೂಡಿರುವ ವ್ಯಾಖ್ಯಾನವನ್ನು, ಸ್ತೋತುಂ = ಸ್ತೋತ್ರಮಾಡಲು, ಸ್ವವಾಚಾ = ತಮ್ಮ ಮಾತುಗಳಿಂದ, ಪ್ರವೃತ್ತಾಃ = ಪ್ರವೃತ್ತರಾದರೋ; ಆಗ ಪ್ರಸ್ಖಲಂತ್ಯಾ =

ತೊದಲುವಿಕೆಯಿಂದ ಮತ್ತು, ಪ್ರೋದ್ಯತ್ಪ್ರಮೋದಪ್ರಚುರಭರನಮತ್ಸಾಸ್ರು-
ಕಂಠಾ = ಹುಟ್ಟುತ್ತಿರುವ ಬಹಳವಾದ ಆನಂದದ ಭಾರದಲ್ಲಿ ಬಗ್ಗಿದವರಾಗಿ
ಗದ್ಗದಿತ ಕಂಠವುಳ್ಳವರಾಗಿ, ಪ್ರಾಜ್ಞಾಃ = ಪ್ರಾಜ್ಞರು, ಭವಂತಿ = ಆದರು

ನಮಸ್ಕಾರದ ಫಲ

**तस्यास्य चारुचरणप्रणतिं प्रपन्ना**
**गोभिर्विधूततमसः सुनयामृतानाम् ।**
**उद्गारिणीभिरिह सद्गुणराजभावं**
**विप्रा व्रजन्ति विशदा विततामिरुच्चैः ॥१२॥**

ತಸ್ಯಾಸ್ಯ ಚಾರುಚರಣಪ್ರಣತಿಂ ಪ್ರಪನ್ನಾ
ಗೋಭಿರ್ವಿಧೂತತಮಸಃ ಸುನಯಾಮೃತಾನಾಮ್ ।
ಉದ್ಗಾರಿಣೀಭಿರಿಹ ಸದ್ಗುಣರಾಜಭಾವಂ
ವಿಪ್ರಾ ವ್ರಜಂತಿ ವಿಶದಾ ವಿತತಾಭಿರುಚ್ಚೈಃ ॥೧೨॥

ಅನುವಾದ - ಚಂದ್ರನು ಅಮೃತಮಯವಾದ ಕಿರಣಗಳನ್ನು ಎಲ್ಲೆಡೆ ಪಸರಿಸಿ ಕತ್ತಲೆಯನ್ನು ಪರಿಹರಿಸುತ್ತಾನೆ. ಇದರಂತೆ ಶ್ರೀಮದಾಚಾರ್ಯರ ಸುಂದರಪಾದಕಮಲಗಳಲ್ಲಿ ನಮಸ್ಕಾರ ಮಾಡಿದ ವಿಪ್ರರು ಎಲ್ಲೆಡೆ ವ್ಯಾಪಿಸಿದ ಆಚಾರ್ಯರ ಸುಯುಕ್ತಿಯುಕ್ತ ವಚನಗಳೆಂಬ ಅಮೃತಮಯ ಕಿರಣಗಳಿಂದ ತಮ್ಮಲ್ಲಿರುವ ಅಜ್ಞಾನವೆಂಬ ಕತ್ತಲೆಯನ್ನು ಪರಿಹರಿಸಿಕೊಂಡಿದ್ದಾರೆ. ಆದ್ದರಿಂದಲೇ ಸದ್ಗುಣವುಳ್ಳವರ ಮಧ್ಯದಲ್ಲಿ ಅತ್ಯಂತ ಜ್ಞಾನಿಗಳಾಗಿ ಚಂದ್ರನಂತೆ ಕಂಗೊಳಿಸುತ್ತಾರೆ. ಇದು ಶ್ರೀಮದಾಚಾರ್ಯರ ನಮಸ್ಕಾರದ ಫಲ.

ಅನ್ವಯಾರ್ಥ -- ವಿತತಾಭಿಃ = ಎಲ್ಲೆಡೆ ಹರಡಿದ, ಉಚ್ಚೈಃ = ಎತ್ತರವಾದ, ಸುನಯಾಮೃತಾನಾಮ್ = ಉತ್ಕೃಷ್ಟ ಸ್ಪಷ್ಟ ಪ್ರಮಾಣಗಣಯುಕ್ತ ಯುಕ್ತಿಗಳೆಂಬ ಅಮೃತವನ್ನು, ಉದ್ಗಾರಿಣೀಭಿಃ = ಹೊರಸೂಸುತ್ತಿರುವ, ತಸ್ಯ = ಅಂಥ, ಶ್ರೀಮದಾಚಾರ್ಯರ, ಗೋಭಿಃ = ಮಾತುಗಳೆಂಬ ಕಿರಣಗಳಿಂದ, ವಿಧೂತತಮಸಃ = ಪರಿಹರಿಸಿಕೊಳ್ಳಲ್ಪಟ್ಟ ಅಜ್ಞಾನವುಳ್ಳ,

ವಿಶದಾಃ = ನಿರ್ಮಲ ಸ್ವಭಾವದ, ವಿಪ್ರಾಃ = ಬ್ರಾಹ್ಮಣರು, ಅಸ್ಯ = ಈ ಶ್ರೀಮದಾಚಾರ್ಯರ, ಚಾರುಚರಣಪ್ರಣತಿಂ = ಸುಂದರವಾದ ಪಾದಕಮಲಗಳಲ್ಲಿ ನಮಸ್ಕಾರವನ್ನು, ಪ್ರಪನ್ನಾಃ = ಮಾಡಿದವರಾಗಿ ಸದ್ಗುಣರಾಜಭಾವಂ = ಸದ್ಗುಣನಾದ ಚಂದ್ರನ ಸಾಮ್ಯವನ್ನು, ವ್ರಜಂತಿ = ಹೊಂದುತ್ತಿರುವರು.

### ಫಲ-ಮಂತ್ರಾಕ್ಷತೆಗಳೆಲ್ಲವೂ ಅಮೃತ

**स्पृष्टं करेण विषमप्यमृताय दृष्टं**
**यस्योदयः स भगवान् यदु राति किञ्चित् ।**
**तद् भेषजं गदवतां प्रतिकॢप्तमायु-**
**र्वेदे सुसिद्धममुनेत्यविचार्यमेतत् ॥१३॥**

ಸ್ಪೃಷ್ಟಂ ಕರೇಣ ವಿಷಮಪ್ಯಮೃತಾಯ ದೃಷ್ಟಂ
ಯಸ್ಯೋದಯಃ ಸ ಭಗವಾನ್ ಯದು ರಾತಿ ಕಿಂಚಿತ್ ।
ತದ್ ಭೇಷಜಂ ಗದವತಾಂ ಪ್ರತಿಕ್ಲೃಪ್ತಮಾಯು-
ರ್ವೇದೇ ಸುಸಿದ್ಧಮಮುನೇತ್ಯವಿಚಾರ್ಯಮೇತತ್ ॥೧೩॥

ಅನುವಾದ - ಮುಖ್ಯಪ್ರಾಣದೇವರು ಕೈಯಲ್ಲಿ ಮುಟ್ಟುವುದರಿಂದಲೇ ಹಾಲಾಹಲವಿಷವೂ ಸಹ ಅಮೃತವಾಗುತ್ತದೆಂದು ಶ್ರುತಿ ಹೇಳುತ್ತಿದೆ. ಅದೇ ಮುಖ್ಯಪ್ರಾಣದೇವರು ಈಗ ಮಧ್ವರೂಪದಿಂದ ಉತ್ಕೃಷ್ಟರಾಗಿ ಬೆಳಗುತ್ತಿದ್ದಾರೆ. ಷಡ್ಗುಣಗಳಿಂದ ತುಂಬಿದ ಇವರು ರೋಗಿಗಳಿಗೆ ನೀಡುವ, ಫಲ-ಮಂತ್ರಾಕ್ಷತೆಗಳೂ ಸಹ ಅಮೃತದಂತೆ ಓಷಧಿ ಆಗುವುದನ್ನು ನಾವು ಪ್ರತ್ಯಕ್ಷದಿಂದ ನೋಡಿದ್ದೇವೆ. ಆಯುರ್ವೇದದಲ್ಲಿ ರೋಗಿಗಳಿಗೆ ಯಾವ ಯಾವ ಓಷಧಿಗಳು ಹೇಳಲ್ಪಟ್ಟಿವೆಯೋ ಅವೆಲ್ಲವನ್ನೂ ಈ ವಾಯುದೇವರೇ ಚರಕ-ಸುಶ್ರುತಾದಿಗಳಲ್ಲಿ ನಿಂತು ಹೇಳಿದ್ದಾರೆ. ಈ ವಿಷಯದಲ್ಲಿ ಸಂಶಯವಿಲ್ಲ.

ಅನ್ವಯಾರ್ಥ -- ಕರೇಣ = ವಾಯುದೇವರ ಕೈಯಿಂದ, ಸ್ಪೃಷ್ಟಂ = ಮುಟ್ಟಲ್ಪಟ್ಟ, ವಿಷಮಪಿ = ಹಾಲಹಲವಿಷವೂ ಕೂಡ, ಅಮೃತಾಯ =

ಅಮೃತವಾಗುವುದು, ದೃಷ್ಟಂ = ಕಾಣಲ್ಪಟ್ಟಿದೆ. ಯಸ್ಯ - ಯಾವ ವಾಯುದೇವರ, ಉದಯಃ = ಉತ್ಕೃಷ್ಟವಾದ ಉದಯವು ಉಂಟಾಗಿದೆಯೊ, ಸಃ = ಅಂಥ, ಭಗವಾನ್ = ಷಡ್ಗುಣೈಶ್ವರ್ಯಸಂಪನ್ನರಾದ ಶ್ರೀಮದಾಚಾರ್ಯರು, ಯದು = ಯಾವುದೇ ಪದಾರ್ಥವನ್ನು, ಕಿಂಚಿತ್ - ಸ್ವಲ್ಪವನ್ನಾದರೂ, ರಾತಿ - ಕೊಡುತ್ತಾರೋ, ತತ್ - ಆ ಪದಾರ್ಥವು, ಗದವತಾಂ - ರೋಗಿಗಳಿಗೆ, ಭೇಷಜಂ - ಔಷಧವಾಗಿದೆ. ಈ ವಿಷಯವು ಆಯುರ್ವೇದ ಶಾಸ್ತ್ರದಲ್ಲಿ, ಪ್ರತಿಕ್ಲೃಪ್ತಮ್ = ಪ್ರಮಾಣಸಿದ್ಧವಾಗಿದೆ. ಅಮುನಾ = ಈ ಶ್ರೀಮದಾಚಾರ್ಯರಿಂದ, ಸುಸಿದ್ಧಮ್ = ತ್ರಿಲೋಕಾನುಭವಸಿದ್ಧವಾದ, ಏತತ್ - ಈ ಪ್ರಮೇಯವು, ಅವಿಚಾರ್ಯಮ್ - ವಿಚಾರ ಮಾಡಲಿಕ್ಕೇ ಯೋಗ್ಯವಲ್ಲ.

## ಅವತಾರತ್ರಯದಲ್ಲಿ ಜೈತ್ರ ಶಕ್ತಿ

**योद्धॄणां राघवार्थे कृतमहितरणो योऽद्वितीयो द्वितीयो**
**विष्णोः कृष्णप्रियार्थं पुनरपि विपुलैःसंयुगैर्व्यक्तकीर्तिः ।**
**यद्वीर्यं योधवीरैः कृतनुति जगतां सप्तके सप्तके वा**
**देवेऽस्मिन् जैत्रशक्तिर्निवसति सकलेत्यत्र किं विस्मयः स्यात् ॥१४॥**

ಯೋದ್ಧೄಣಾಂ ರಾಘವಾರ್ಥೇ ಕೃತಮಹಿತರಣೋ ಯೋಽದ್ವಿತೀಯೋ ದ್ವಿತೀಯೋ
ವಿಷ್ಣೋಃ ಕೃಷ್ಣಪ್ರಿಯಾರ್ಥಂ ಪುನರಪಿ ವಿಪುಲೈಃಸಂಯುಗೈರ್ವ್ಯಕ್ತಕೀರ್ತಿಃ ।
ಯದ್‌ವೀರ್ಯಂ ಯೋಧವೀರೈಃ ಕೃತನುತಿ ಜಗತಾಂ ಸಪ್ತಕೇ ಸಪ್ತಕೇ ವಾ
ದೇವೇಽಸ್ಮಿನ್ ಜೈತ್ರಶಕ್ತಿರ್ನಿವಸತಿ ಸಕಲೇತ್ಯತ್ರ ಕಿಂ ವಿಸ್ಮಯಃ ಸ್ಯಾತ್ ॥೧೪॥

ಅನುವಾದ - ಶ್ರೀರಾಮಚಂದ್ರನ ಪ್ರೀತಿಗಾಗಿ ಕಪಿಗಳ ನಡುವೆ ಹನುಮಂತದೇವರು ಅದ್ವಿತೀಯರಾಗಿ ಯುದ್ಧ ಮಾಡಿದರು. ಇದರಿಂದ ಪ್ರತಿಯೊಬ್ಬರಿಂದಲೂ ಪೂಜ್ಯರಾದರು. ಪುನಃ ಶ್ರೀಕೃಷ್ಣನ ಪ್ರೀತಿಗಾಗಿ ಭೀಮಸೇನದೇವರು ಭಯಂಕರವಾಗಿ ಯುದ್ಧ ಮಾಡಿದರು. ಇವರ ಈ ಕೀರ್ತಿಯು ಎಲ್ಲೆಡೆ ಹಬ್ಬಿದೆ. ಕೆಳಗಿನ ಏಳು ಲೋಕಗಳಲ್ಲಿ ಮೇಲಿನ ಏಳು ಲೋಕಗಳಲ್ಲಿರುವ ಯೋಧವೀರರೆಲ್ಲರೂ ಸಹ ಇವರ ಪರಾಕ್ರಮಕ್ಕೆ ತಲೆ ಬಾಗಿರುವರು. ಹೀಗೆ ದೇವಶ್ರೇಷ್ಠರಾದ

ಆಚಾರ್ಯಮಧ್ವರಲ್ಲಿ ಸಕಲಬಗೆಯ ಜೈತ್ರ ಶಕ್ತಿಯು ವಾಸಮಾಡಿದೆಯೆಂಬುದರಲ್ಲೇನು ಆಶ್ಚರ್ಯವಿಲ್ಲ.

ಅನ್ವಯಾರ್ಥ -- ಯೋದ್ಧೃಣಾಂ = ಯುದ್ಧಾಳುಗಳ ಮಧ್ಯದಲ್ಲಿ, ಯಃ = ಯಾವ ವಾಯುದೇವರು, ಅದ್ವಿತೀಯಃ = ಅಸದೃಶರಾಗಿದ್ದಾರೋ ಮತ್ತು ಮೊದಲನೆಯ ಅವತಾರವನ್ನು ಪಡೆದಿದ್ದಾರೋ ಅವರು ಶ್ರೀರಾಮಚಂದ್ರನ ಸೇವೆಗೋಸ್ಕರ, ಕೃತಮಹಿತರಣಃ = ಪ್ರಶಂಸಾರ್ಹವಾದ ಯುದ್ಧವನ್ನು ಮಾಡಿದರು. ಪುನರಪಿ = ಮತ್ತು ಕೂಡ, ದ್ವಿತೀಯಃ = ಎರಡನೆಯ ಭೀಮಾವತಾರದಲ್ಲಿ, ಕೃಷ್ಣಪ್ರಿಯಾರ್ಥಂ = ಶ್ರೀಕೃಷ್ಣನ ಪ್ರೀತಿಗೋಸ್ಕರ, ವಿಪುಲೈಃ = ಅನೇಕ ಬಗೆಯ, ಸಂಯುಗೈಃ = ಯುದ್ಧಗಳಿಂದ, ವ್ಯಕ್ತಕೀರ್ತಿಃ = ಅಭಿವ್ಯಕ್ತವಾದ ಕೀರ್ತಿಯುಳ್ಳವರಾದರು. ಯೋಧವೀರೈಃ = ವೀರಾಗ್ರಣಿಗಳಿಂದ, ಜಗತಾಂ = ಜಗತ್ತಿನ, ಸಪ್ತಕೇ = ಮೇಲಿನ ಏಳು ಲೋಕಗಳಲ್ಲಿ, ವಾ ಸಪ್ತಕೇ = ಕೆಳಗಿನ ಏಳು ಲೋಕಗಳಲ್ಲಿಯೂ, ಅಸ್ಮಿನ್ ದೇವೇ = ಈ ವಾಯುದೇವರಲ್ಲಿ, ಸಕಲ = ಎಲ್ಲಾ ಬಗೆಯ, ಜೈತ್ರಶಕ್ತಿಃ = ಗೆಲ್ಲುವ ಶಕ್ತಿಯು, ನಿವಸತಿ = ವಾಸ ಮಾಡಿದೆ. ಇತ್ಯತ್ರ = ಈ ವಿಷಯದಲ್ಲಿ, ಕಿಂ ವಿಸ್ಮಯಃ ಸ್ಯಾತ್ = ಆಶ್ಚರ್ಯಪಡುವುದೇನಿದೆ?

ಸಂಹಿತಾ-ಉಪನಿಷತ್ತು-ಬ್ರಾಹ್ಮಣ-ಆರಣ್ಯಕಗಳಲ್ಲಿ ಸಿದ್ಧಹಸ್ತರು.

**सब्राह्मणोपनिषदो निखिलाः सुसिद्धा**
**वेदाः स्फुटं यदनधीतवतः स्वशाखाम् ।**
**यान् वै पठन्ति मुनयोऽप्यसकृद्गुरुभ्यो**
**वेत्तुं तदस्य महिमायमचिन्तनीयः ॥१५॥**

ಸಬ್ರಾಹ್ಮಣೋಪನಿಷದೋ ನಿಖಿಲಾಃ ಸುಸಿದ್ಧಾ
ವೇದಾಃ ಸ್ಫುಟಂ ಯದನಧೀತವತಃ ಸ್ವಶಾಖಾಮ್ ।
ಯಾನ್ ವೈ ಪಠಂತಿ ಮುನಯೋಽಪ್ಯಸಕೃದ್ ಗುರುಭ್ಯೋ
ವೇತ್ತುಂ ತದಸ್ಯ ಮಹಿಮಾಽಯಮಚಿಂತನೀಯಃ ॥೧೫॥

ಅನುವಾದ - ಋಷಿಮುನಿಗಳೆಲ್ಲರೂ ಬ್ರಾಹ್ಮಣ-ಆರಣ್ಯಕ-ಉಪನಿಷತ್ತು-ಸಂಹಿತಾ ಭಾಗಗಳನ್ನು ಅಧ್ಯಯನ ಮಾಡಲು ತಮ್ಮ ಗುರುಗಳ ಬಳಿ ಅನೇಕಬಾರಿ ಶಾಂತಿಪಾಠ ಹಾಕಿ ಉಪದೇಶ ಪಡೆಯುತ್ತಾರೆ. ಆದರೆ ಶ್ರೀಮದಾಚಾರ್ಯರು ಸ್ವಶಾಖಾಧ್ಯಯನವನ್ನೇ ಗುರುಗಳ ಬಳಿ ಮಾಡಿರುವುದಿಲ್ಲ. ಆದರೂ ಸಹ ಬ್ರಾಹ್ಮಣ-ಉಪನಿಷತ್ತು-ಆರಣ್ಯಕ-ಸಂಹಿತಾ ಮೊದಲಾದ ಸಕಲವೇದಗಳ ಅರ್ಥವನ್ನು ನಿಖರವಾಗಿ ಸಂಪೂರ್ಣ ತಿಳಿದಿದ್ದಾರೆ. ಹೀಗೆ ಇವರ ಒಂದೊಂದು ಮಹಿಮೆಗಳೂ ಸಹ ಊಹಿಸಲು ಅಸಾಧ್ಯವಾದವುಗಳು.

ಅನ್ವಯಾರ್ಥ -- ಸ್ವಶಾಖಾಮ್ = ತನ್ನ ಶಾಖೆಯನ್ನು ಕೂಡ, ಅನಧೀತವತಃ = ಅಧ್ಯಯನ ಮಾಡದ, ಯತ್ = ಯಾವ ಶ್ರೀಮದಾಚಾರ್ಯರಿಗೆ, ಸಬ್ರಾಹ್ಮಣೋಪನಿಷದಃ = ಬ್ರಾಹ್ಮಣ-ಉಪನಿಷತ್ ಮೊದಲಾದವುಗಳಿಂದ ಕೂಡಿರುವ, ಸುಸಿದ್ಧಾಃ = ಪ್ರಸಿದ್ಧವಾದ, ನಿಖಿಲಾಃ = ಎಲ್ಲಾ ವಿಧವಾದ, ವೇದಾಃ = ವೇದಗಳು, ಸ್ಫುಟಂ = ಸ್ಪಷ್ಟವಾಗಿ ತಿಳಿದಿವೆ. ಮುನಯೋಽಪಿ = ಮುನಿಗಳೂ ಕೂಡ, ಅಸಕೃತ್ = ಅನೇಕ ಬಾರಿ, ಗುರುಭ್ಯಃ = ಗುರುಗಳಿಂದ, ಯಾನ್ = ಯಾವ ವೇದಮಂತ್ರಗಳನ್ನು, ಪಠಂತಿ = ಪಠಿಸುತ್ತಾರೋ (ಇವುಗಳೆಲ್ಲವೂ ಶ್ರೀಮದಾಚಾರ್ಯರಿಗೆ ಕರಗತವಾಗಿದ್ದವು.)

ಜ್ಯೌತಿಷ-ಷಡಂಗ-ಪಂಚರಾತ್ರ-ಪುರಾಣಗಳನ್ನು ಪೂರ್ಣ ಅರಿತಿರುವರು.

**ज्योतिश्शास्त्रं यदेकं भवति भुवि भविष्यत्यतीते च साक्षात्**
**चक्षुः प्रत्यक्षमस्य प्रकटमपि तदाद्यङ्गषट्कं यथास्वम् ।**
**को ह्यस्मात् पञ्चरात्रेष्वपरिमितभिदास्तन्त्रसारप्रणेतु-**
**र्विद्याः पौराणिकानां बहुविधविशयच्छेत्तुरन्यः प्रवेद ॥१६॥**

ಜ್ಯೋತಿಶ್ಶಾಸ್ತ್ರಂ ಯದೇಕಂ ಭವತಿ ಭುವಿ ಭವಿಷ್ಯತ್ಯತೀತೇ ಚ ಸಾಕ್ಷಾತ್
ಚಕ್ಷುಃ ಪ್ರತ್ಯಕ್ಷಮಸ್ಯ ಪ್ರಕಟಮಪಿ ತದಾದ್ಯಂಗಷಟ್ಕಂ ಯಥಾಸ್ವಮ್ ।
ಕೋ ಹ್ಯಸ್ಮಾತ್ ಪಂಚರಾತ್ರೇಷ್ವಪರಿಮಿತಭಿದಾಸ್ತಂತ್ರಸಾರಪ್ರಣೇತು-
ರ್ವಿದ್ಯಾಃ ಪೌರಾಣಿಕಾನಾಂ ಬಹುವಿಧವಿಶಯಚ್ಛೇತ್ತುರನ್ಯಃ ಪ್ರವೇದ ॥೧೬॥

ಅನುವಾದ - ಭೂಲೋಕದಲ್ಲಿ ಹಿಂದಿನ ಮುಂದಿನ ಮತ್ತು ಈಗಿನ ವಿಷಯವನ್ನು ನೇರವಾಗಿ ನೋಡುವ ಕಣ್ಣು ಎಂದರೆ ಜ್ಯೌತಿಷ ಶಾಸ್ತ್ರ ಮಾತ್ರ. ಈ ಜ್ಯೌತಿಷ ಶಾಸ್ತ್ರವನ್ನೇ ಆಮೂಲಾಗ್ರ ಸ್ಪಷ್ಟವಾಗಿ ಕಾಣುವ ಸಾಮರ್ಥ್ಯವಿರುವುದು ಶ್ರೀಮದಾಚಾರ್ಯರಿಗೆ ಮಾತ್ರ. ಅಷ್ಟೇ ಅಲ್ಲದೆ, ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಸ್ಮೃತಿಗಳೆಂಬ ಆರು ವೇದಾಂಗಗಳೂ ಸಹ ಇವರಿಗೆ ಕರಗತ. ತಂತ್ರಸಾರಸಂಗ್ರಹವೆಂಬ ಗ್ರಂಥವನ್ನು ರಚನೆ ಮಾಡಿದ ಶ್ರೀಮದಾಚಾರ್ಯರಿಗೆ ಪಂಚರಾತ್ರದ ಅನಂತ ಪ್ರಭೇದಗಳ ಅರಿವು ಪೂರ್ಣವಾಗಿದೆ. ಪೌರಾಣಿಕರ ವಿವಿಧ ಸಂಶಯಗಳನ್ನು ಬುಡಸಹಿತ ಕಿತ್ತೊಗೆಯುವ ಇವರಿಗೆ ಪುರಾಣಗಳಿಗೆ ಸಂಬಂಧಿಸಿದ ವಿದ್ಯೆಗಳೆಲ್ಲವೂ ಸಹ ತಿಳಿದಿವೆ. ಶ್ರೀಮದಾಚಾರ್ಯರನ್ನು ಬಿಟ್ಟರೆ ಬೇರೆ ಯಾರಿಗೆ ತಾನೆ ಇಂಥ ಜ್ಞಾನವಿರಲು ಸಾಧ್ಯ !

ಅನ್ವಯಾರ್ಥ -- ಭುವಿ = ಭೂಲೋಕದಲ್ಲಿ, ಭವತಿ = ವರ್ತಮಾನ-ಕಾಲವನ್ನು, ಭವಿಷ್ಯತಿ = ಭವಿಷ್ಯತ್ ಕಾಲವನ್ನು, ಅತೀತೇ ಚ = ಅತೀತಕಾಲವನ್ನು, ಸಾಕ್ಷಾತ್ = ನೇರವಾಗಿ ನೋಡುವ, ಯತ್ = ಯಾವ, ಏಕಂ ಚಕ್ಷುಃ = ಒಂದೇ ಕಣ್ಣು ಎಂದರೆ ಅದು, ಜ್ಯೋತಿಶ್ಶಾಸ್ತ್ರಂ = ಜ್ಯೌತಿಷ ಶಾಸ್ತ್ರವು ಆಗಿರುತ್ತದೆ. ಅಸ್ಯ = ಶ್ರೀಮದಾಚಾರ್ಯರಿಗೆ, ತದಾದ್ಯಂಗಷಟ್ಕಂ = ಜ್ಯೌತಿಷಶಾಸ್ತ್ರವು ಸೇರಿದಂತೆ ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಸ್ಮೃತಿಯೆಂಬ ಆರು ವೇದಾಂಗಗಳು, ಯಥಾಸ್ವಮ್ = ಹೇಗೆ ಇದೆಯೋ ಹಾಗೆ, ಅಸ್ಯ = ಶ್ರೀಮದಾಚಾರ್ಯರಿಗೆ, ಪ್ರಕಟಂ = ಸ್ಪಷ್ಟವಾದ, ಪ್ರತ್ಯಕ್ಷಮ್ = ಪ್ರತ್ಯಕ್ಷವಿದೆ. ತಂತ್ರಸಾರಪ್ರಣೇತುಃ = ತಂತ್ರಸಾರವನ್ನು ರಚನೆಮಾಡಿದ ಶ್ರೀಮದಾಚಾರ್ಯರಿಗೆ, ಪಂಚರಾತ್ರೇಷು = ಪಂಚರಾತ್ರಗಳಲ್ಲಿ, ಅಪರಿಮಿತಾಃ = ಎಲ್ಲಾ ವಿಧವಾದ ಪ್ರಭೇದಗಳು, ಪೌರಾಣಿಕಾನಾಮ್ = ಪುರಾಣಗಳಿಗೆ ಸಂಬಂಧಪಟ್ಟ, ವಿದ್ಯಾಃ = ವಿದ್ಯೆಗಳು, ಬಹುವಿಧವಿಶಯಚ್ಛೇತ್ತುಃ = ನಾನಾವಿಧವಾದ ಸಂಶಯಗಳನ್ನು ಪರಿಹರಿಸುವ ಶ್ರೀಮದಾಚಾರ್ಯರಿಗೆ, ಪ್ರಕಟಾಃ = ಸುಸ್ಪಷ್ಟವಾಗಿವೆ, ಅಸ್ಮಾತ್ = ಇಂಥ ಶ್ರೀಮದಾಚಾರ್ಯರಿಗಿಂತ, ಅನ್ಯಃ = ಹೊರತಾಗಿ, ಕೋ ಹಿ ಪ್ರವೇದ = ಯಾರು ತಾನೆ ತಿಳಿಯುತ್ತಾರೆ.

ಕರ್ಮಸೂತ್ರ-ಗೃಹ್ಯಸೂತ್ರ- ಕಲ್ಪಸೂತ್ರಗಳನ್ನೂ ರಚಿಸಬಲ್ಲರು.

हव्यं गृह्णाति सर्वक्रतुषु मखपतिर्योऽनुयज्ञेशमीशो
मन्त्राणां देवतानां प्रतिहृदयगतोऽप्यृत्विजां प्रेरकश्च ।
सोऽयं कर्मप्रणेता हरिगुरुविहितः कर्मणां सत्प्रयोग-
न्यायानां सूत्रजातं यदिच बुधजनैरर्थ्यते किं न कुर्यात् ।।१७।।

ಹವ್ಯಂ ಗೃಹ್ಣಾತಿ ಸರ್ವಕ್ರತುಷು ಮಖಪತಿರ್ಯೋऽನುಯಜ್ಞೇಶಮೀಶೋ
ಮಂತ್ರಾಣಾಂ ದೇವತಾನಾಂ ಪ್ರತಿಹೃದಯಗತೋऽಪ್ಯೃತ್ವಿಜಾಂ ಪ್ರೇರಕಶ್ಚ ।
ಸೋऽಯಂ ಕರ್ಮಪ್ರಣೇತಾ ಹರಿಗುರುವಿಹಿತಃ ಕರ್ಮಣಾಂ ಸತ್ಪ್ರಯೋಗ-
ನ್ಯಾಯಾನಾಂ ಸೂತ್ರಜಾತಂ ಯದಿಚ ಬುಧಜನೈರರ್ಥ್ಯತೇ ಕಿಂ ನ ಕುರ್ಯಾತ್ ।।೧೭।।

ಅನುವಾದ - ಶ್ರೀಮದಾಚಾರ್ಯರಿಗೆ ಕರ್ಮಶಾಸ್ತ್ರಗಳ ಅರಿವು ಪೂರ್ಣವಾಗಿದೆ. ಏಕೆಂದರೆ ಇವರು ಅನುಯಜ್ಞೇಶರು. ನಾರಾಯಣನ ಅನಂತರದ ಯಜ್ಞೇಶರು ವಾಯುದೇವರು. ಯಾಗಗಳಲ್ಲಿ, ಮಂತ್ರಗಳಲ್ಲಿ ಮತ್ತು ದೇವತೆಗಳಲ್ಲಿ ಅಂತರ್ಯಾಮಿಯಾಗಿ ನೆಲಸಿ ಯಜ್ಞಭಾಗವನ್ನು ಸ್ವೀಕರಿಸುವವರು. ಪ್ರತಿಯೊಬ್ಬರ ಹೃದಯದಲ್ಲಿ ನೆಲಸಿ ಋತ್ವಿಜರಿಗೆ ಪ್ರೇರಣೆ ನೀಡುವವರು. ಸಕಲವಿಧಕರ್ಮಗಳಿಗೆ ನಿಯಾಮಕರಿವರು. ಶ್ರೀಹರಿಯ ಸ್ವರೂಪರಾದ ವೇದವ್ಯಾಸರು ಇವರ ಗುರುಗಳು. ವೇದವ್ಯಾಸದೇವರಿಂದ ಕರ್ಮಗಳೆಲ್ಲವೂ ವಿಹಿತವಾಗಿದೆ. ಕರ್ಮಪರವಾದ ಪೂರ್ವಮೀಮಾಂಸಾಗ್ರಂಥವನ್ನು ಅದರ ಪ್ರಯೋಗವನ್ನೂ ವಿಧಿಸುವ ಕಲ್ಪಸೂತ್ರ ಹಾಗೂ ಗೃಹ್ಯಸೂತ್ರಗಳನ್ನು ಶ್ರೀಮದಾಚಾರ್ಯರು ಸಂಪೂರ್ಣ ಅರಿತಿದ್ದಾರೆ. ಜ್ಞಾನಿಜನರು ಪ್ರಾರ್ಥನೆ ಮಾಡಿದರೆ ಪೂರ್ವಮೀಮಾಂಸಾಸೂತ್ರಗಳನ್ನು ಗೃಹ್ಯಸೂತ್ರ ಕಲ್ಪಸೂತ್ರಗಳನ್ನೂ ಖಂಡಿತವಾಗಿಯೂ ರಚನೆ ಮಾಡುತ್ತಾರೆ. ಸಜ್ಜನರು ಪ್ರಾರ್ಥನೆ ಮಾಡದ ಕಾರಣ ಇವರು ರಚನೆ ಮಾಡಿಲ್ಲ.

ಅನ್ವಯಾರ್ಥ -- ಯಃ = ಯಾವ ಶ್ರೀಮದಾಚಾರ್ಯರು, ಅನುಯಜ್ಞೇಶಂ = ಯಜ್ಞೇಶರೂಪಿಯಾದ ನಾರಾಯಣನ ಅನಂತರ, ಈಶಃ = ಸ್ವಾಮಿಯಾಗಿದ್ದಾರೆ. ಸರ್ವಕ್ರತುಷು = ಎಲ್ಲಾ ಬಗೆಯ ಕ್ರತುಗಳಲ್ಲಿ, ಹವ್ಯಂ = ಹವಿಸ್ಸನ್ನು, ಗೃಹ್ಣಾತಿ = ಸ್ವೀಕರಿಸುತ್ತಾರೆ. ಮಖಪತಿಃ = ಯಾಗಗಳಿಗೆ ಅಧಿಪತಿಗಳಾದ ಶ್ರೀಮದಾಚಾರ್ಯರು, ಮಂತ್ರಾಣಾಂ = ಮಂತ್ರಗಳ,

ದೇವತಾನಾಂ = ದೇವತೆಗಳ, ಪ್ರತಿಹೃದಯಗತಃ = ಪ್ರತಿಯೊಬ್ಬರ ಹೃದಯದಲ್ಲಿ ನೆಲಸಿದ್ದಾರೆ. ಅಪಿ = ಮತ್ತು, ಋತ್ವಿಜಾಂ = ಋತ್ವಿಜರಿಗೆ, ಪ್ರೇರಕಃ = ಪ್ರೇರಕರಾಗಿದ್ದಾರೆ. ಹರಿಗುರುವಿಹಿತಃ = ಶ್ರೀಹರಿಯೇ ವೇದವ್ಯಾಸರೂಪದಿಂದ ಗುರುಗಳಾಗಿ ವಿಧಾನ ಮಾಡಲ್ಪಟ್ಟ, ಕರ್ಮಪ್ರಣೇತಾ = ಕರ್ಮಗಳನ್ನು ನಿಯಮನ ಮಾಡುವ ಸೋऽಯಂ = ಇಂಥ ಶ್ರೀಮದಾಚಾರ್ಯರು, ಯದಿಚ = ಒಂದುವೇಳೆ ಬುಧಜನೈಃ = ಜ್ಞಾನಿಜನರಿಂದ, ಅರ್ಥ್ಯತೇ = ಪ್ರಾರ್ಥಿಸಲ್ಪಟ್ಟರೆ, ಕರ್ಮಣಾಂ ಸೂತ್ರಜಾತಂ = ಪೂರ್ವಮೀಮಾಂಸಾಸೂತ್ರಗಳನ್ನು, ಸತ್ಪ್ರಯೋಗನ್ಯಾಯಾನಾಂ ಸೂತ್ರಜಾತಂ = ಕಲ್ಪಸೂತ್ರ ಗೃಹ್ಯಸೂತ್ರ ಮೊದಲಾದವುಗಳನ್ನು, ಕಿಂ ನ ಕುರ್ಯಾತ್ = ರಚನೆ ಮಾಡಲಾರರೇನು?

ಮೂಲರಾಮಾಯಣ-ಮಹಾಭಾರತವನ್ನು ಪೂರ್ಣ ಅರಿತಿರುವರು.

रामक्रीडामनुविहरता पूर्वमापूर्णभक्त्या
तेन ज्ञाता न किमु विमलास्तत्कथाग्रन्थकोट्यः ।
सोऽयं रेजे कुरुषु विजयी सर्वतो भारताग्र्यो
जानीतेऽतः प्रविततमतिर्भारतार्थान् कृतार्थः ॥१८॥

ರಾಮಕ್ರೀಡಾಮನುವಿಹರತಾ ಪೂರ್ವಮಾಪೂರ್ಣಭಕ್ತ್ಯಾ
ತೇನ ಜ್ಞಾತಾ ನ ಕಿಮು ವಿಮಲಾಸ್ತತ್ಕಥಾಗ್ರಂಥಕೋಟ್ಯಃ ।
ಸೋऽಯಂ ರೇಜೇ ಕುರುಷು ವಿಜಯೀ ಸರ್ವತೋ ಭಾರತಾಗ್ರ್ಯೋ
ಜಾನೀತೇऽತಃ ಪ್ರವಿತತಮತಿರ್ಭಾರತಾರ್ಥಾನ್ ಕೃತಾರ್ಥಃ ॥೧೮॥

ಅನುವಾದ - ಶ್ರೀಮದಾಚಾರ್ಯರು ಹನುಮದವತಾರದಲ್ಲಿ ಬಲು ಭಕುತಿಯಿಂದ ಶ್ರೀರಾಮನ ಜೊತೆ ವಿಹರಿಸಿದ್ದಾರೆ. ರಾಮಾಯಣದ ಪ್ರತಿಯೊಂದು ಪ್ರಸಂಗಗಳಲ್ಲಿಯೂ ಪಾತ್ರ ವಹಿಸಿದ. ಇವರಿಗೆ ನೂರುಕೋಟಿ ಶ್ಲೋಕಗಳುಳ್ಳ ಮೂಲರಾಮಾಯಣದ ಸಂಪೂರ್ಣ ಅರಿವು ಇಲ್ಲದೇ ಇರುತ್ತದೇನು ! ಮತ್ತು ಇದೇ ಹನುಮಂತದೇವರು ಮುಂದೆ ಭರತಕುಲದಲ್ಲಿ ಭೀಮಸೇನರೂಪದಿಂದ ಅವತರಿಸಿದರು. ಕೃಷ್ಣನ ಜೊತೆ ಭಕ್ತಿಯಿಂದ ವಿಹರಿಸಿದರು. ಕುರುಕ್ಷೇತ್ರದಲ್ಲಿ

ವೀರಾಗ್ರಣಿಗಳಾಗಿ ಜಯಿಸಿದರು. ಇದೇ ಭೀಮಸೇನದೇವರು ಈಗ ಮಧ್ವರಾಗಿ ಅವತರಿಸಿದ್ದಾರೆ. ಮಹಾಭಾರತದ ಪ್ರತಿಯೊಂದು ಪ್ರಸಂಗದಲ್ಲಿ ಭಾಗವಹಿಸಿದ ಇವರಿಗೆ ಸಂಪೂರ್ಣ ಮಹಾಭಾರತವು ಕರಗತ ಕಂದುಕದಂತಾಗಿದೆ.

ಅನ್ವಯಾರ್ಥ -- ಪೂರ್ವಂ = ಹಿಂದೆ ಹನುಮಂತನ ಅವತಾರದಲ್ಲಿ, ಆಪೂರ್ಣಭಕ್ತ್ಯಾ = ಪರಿಪೂರ್ಣವಾದ ಭಕ್ತಿಯಿಂದ, ರಾಮಕ್ರೀಡಾಂ = ಶ್ರೀರಾಮಚಂದ್ರನ ಕ್ರೀಡೆಯನ್ನು, ಅನುವಿಹರತಾ = ಅನುಸರಿಸಿ ತಾವು ಸಹ ಕ್ರೀಡೆ ಮಾಡಿರುವರು, ತೇನ = ಇಂಥ ಆಚಾರ್ಯರಿಂದ, ವಿಮಲಾಃ = ದೋಷವಿಲ್ಲದ, ತತ್‌ಕಥಾಗ್ರಂಥಕೋಟ್ಯಃ = ನೂರುಕೋಟಿಯಷ್ಟು ವಿಸ್ತಾರವಾದ ಮೂಲರಾಮಾಯಣವನ್ನು, ಕಿಮು ನ ಜ್ಞಾತಾಃ = ತಿಳಿದಿಲ್ಲವೇನು ! ಸೋऽಯಂ = ಇಂಥ ಶ್ರೀಮದಾಚಾರ್ಯರು, ಭಾರತಾಗ್ರ್ಯಃ = ಭರತವಂಶದಲ್ಲಿ ಅಗ್ರೇಸರರಾದ ಭೀಮಸೇನ ದೇವರು, ಸರ್ವತಃ = ಎಲ್ಲರಿಂದಲೂ, ವಿಜಯೀ = ವಿಜಯಶಾಲಿಗಳಾಗಿ, ಕುರುಷು = ಕುರುಕ್ಷೇತ್ರದಲ್ಲಿ, ರೇಜೇ = ವಿರಾಜಿಸುತ್ತಾರೆ. ಅತಃ = ಆದ್ದರಿಂದ, ಕೃತಾರ್ಥಃ = ಕೃತಕೃತ್ಯರಾದ, ಪ್ರವಿತತಮತಿಃ = ಪೂರ್ಣಪ್ರಜ್ಞರು.

### ದೇವಮಾನ್ಯವಾದ ಭಾಷ್ಯ, ಮನುಷ್ಯರಿಂದಲೂ ಸೇವ್ಯ

**भाष्यन्ते ह्यपरिमिताः समस्तवेदे -**
**ष्वेतेन प्रतिपदमप्रयत्नमर्थाः ।**
**एकैकं सुकरतरं तदेषु भाष्यं**
**किं न स्यात् सुरवरसेवितेन तेन ।।१९।।**

ಭಾಷ್ಯಂತೇ ಹ್ಯಪರಿಮಿತಾಃ ಸಮಸ್ತವೇದೇ-
ಷ್ವೇತೇನ ಪ್ರತಿಪದಮಪ್ರಯತ್ನಮರ್ಥಾಃ ।
ಏಕೈಕಂ ಸುಕರತರಂ ತದೇಷು ಭಾಷ್ಯಂ
ಕಿಂ ನ ಸ್ಯಾತ್ ಸುರವರಸೇವಿತೇನ ತೇನ ।।೧೯।।

ಅನುವಾದ - ಶ್ರೀಮದಾಚಾರ್ಯರು ಪ್ರವಚನ ಕಾಲದಲ್ಲಿ ಶ್ರುತಿಗಳಿಗೆ ಅನೇಕಾರ್ಥಗಳನ್ನು ಹೇಳುತ್ತಾರೆ. ಪ್ರತಿಯೊಂದು ಪದಗಳಿಗೂ ಪ್ರಯತ್ನವಿಲ್ಲದೆ ಅನೇಕ ರೀತಿಯಲ್ಲಿ ವ್ಯಾಖ್ಯಾನ ಮಾಡುತ್ತಾರೆ. ಇವರ ಈ ವ್ಯಾಖ್ಯಾನವನ್ನು ದೇವತೆಗಳು ಮಾತ್ರ ಅರ್ಥಮಾಡಿಕೊಳ್ಳಲು ಸಮರ್ಥರು. ಆದರೂ ಅನೇಕಾರ್ಥಗಳ ನಡುವೆ ಕೆಲವೊಂದು ಸುಲಭವಾದ ಅರ್ಥಗಳನ್ನು ಹೇಳಿರುತ್ತಾರೆ. ಇದರಿಂದ ಮಂದಮತಿಗಳಾದ ಮನುಷ್ಯರೂ ಕೂಡ ಶ್ರುತಿಗಳ ಅರ್ಥವನ್ನು ತಿಳಿದು ಧನ್ಯರಾಗುತ್ತಾರೆ.

ಅನ್ವಯಾರ್ಥ -- ಏತೇನ = ಶ್ರೀಮದಾಚಾರ್ಯರಿಂದ, ಸಮಸ್ತವೇದೇಷು - ಎಲ್ಲಾ ವೇದಗಳಲ್ಲಿರುವ, ಪ್ರತಿಪದಂ = ಪ್ರತಿಯೊಂದು ಪದಗಳನ್ನು, ಅಪ್ರಯತ್ನಂ = ಪ್ರಯತ್ನವಿಲ್ಲದೇ, ಅಪರಿಮಿತಾಃ = ಅನೇಕ ಬಗೆಯ, ಅರ್ಥಾಃ = ಅರ್ಥಗಳು, ಭಾಷ್ಯಂ = ಶ್ರೀಮದಾಚಾರ್ಯರ ಭಾಷ್ಯವು, ಭಾಷ್ಯಂತೇ = ವ್ಯಾಖ್ಯಾನ ಮಾಡಲ್ಪಟ್ಟವೆ, ಏಷು = ಈ ಅರ್ಥಗಳಲ್ಲಿ ಏಕೈಕಂ = ಒಂದೊಂದು, ಸುಕರತರಂ = ಸುಲಭವಾದ ಅರ್ಥವು, ಕಿಂ ನ ಸ್ಯಾತ್ - ಹೊಂದಿರುವುದಿಲ್ಲವೇನು!

ದೇವತೆಗಳ ಸ್ವರೂಪ-ಸಾಮರ್ಥ್ಯಗಳನ್ನು ಸಂಪೂರ್ಣ ಅರಿತವರು

**प्रत्यक्षस्य स्वहृदि विशदे सत्यकामस्य कामान्**
**साक्षात्कर्तुः खलु भगवतो भ्रूनिदेशाद् द्युदेशाः ।**
**प्राप्ता देवैः प्रतिपदमसौ नित्यमासेवितस्तै-**
**स्तेषां रूपं स्थितिमपि बलं वेत्ति चित्रं किमेतत् ॥२०॥**

ಪ್ರತ್ಯಕ್ಷಸ್ಯ ಸ್ವಹೃದಿ ವಿಶದೇ ಸತ್ಯಕಾಮಸ್ಯ ಕಾಮಾನ್
ಸಾಕ್ಷಾತ್ಕರ್ತುಃ ಖಲು ಭಗವತೋ ಭ್ರೂನಿದೇಶಾದ್ ದ್ಯುದೇಶಾಃ ।
ಪ್ರಾಪ್ತಾ ದೇವೈಃ ಪ್ರತಿಪದಮಸೌ ನಿತ್ಯಮಾಸೇವಿತಸ್ತೈ-
ಸ್ತೇಷಾಂ ರೂಪಂ ಸ್ಥಿತಿಮಪಿ ಬಲಂ ವೇತ್ತಿ ಚಿತ್ರಂ ಕಿಮೇತತ್ ॥೨೦॥

ಅನುವಾದ - ಶ್ರೀಮದಾಚಾರ್ಯರು ತಮ್ಮ ಹೃದಯದಲ್ಲಿರುವ ಬಿಂಬರೂಪಿಯಾದ ನಾರಾಯಣನನ್ನು ಪ್ರತಿಕ್ಷಣದಲ್ಲಿಯೂ ನೋಡುತ್ತಲೇ ಇರುತ್ತಾರೆ. ಅವನ ಸಂಕಲ್ಪವನ್ನು ಯಥಾರ್ಥವಾಗಿ ತಿಳಿದಿರುತ್ತಾರೆ. ಆದ್ದರಿಂದ ಭಗವಂತನ ಆಜ್ಞೆಯಂತೆ ಶ್ರೀಮದಾಚಾರ್ಯರ ಹುಬ್ಬುಗಳ ಸಂಜ್ಞೆಯಿಂದಲೇ ದೇವತೆಗಳೆಲ್ಲರೂ ತಮ್ಮ ತಮ್ಮ ಪದವಿಗಳನ್ನು ಪಡದುಕೊಂಡಿದ್ದಾರೆ. ಎಲ್ಲ ದೇವತೆಗಳು ಶ್ರೀಮದಾಚಾರ್ಯರನ್ನು ನಿರಂತರವಾಗಿ ಭಕ್ತ್ಯುದ್ರೇಕದಿಂದ ಆರಾಧನೆಗೈಯುತ್ತಾರೆ. ಹೀಗಿರುವಾಗ ಇಂಥ ಶ್ರೀಮದಾಚಾರ್ಯರು ಆ ಎಲ್ಲಾ ದೇವತೆಗಳ ಸ್ವರೂಪವನ್ನು, ಸ್ಥಿತಿಯನ್ನು, ಸಾಮರ್ಥ್ಯವನ್ನು ಸಂಪೂರ್ಣವಾಗಿ ತಿಳಿದಿರುತ್ತಾರೆ. ಈ ವಿಷಯವು ಆಶ್ಚರ್ಯವೇನಲ್ಲ.

ಅನ್ವಯಾರ್ಥ -- ವಿಶದೇ = ಅತಿಶುಭ್ರವಾದ, ಸ್ವಹೃದಿ = ತಮ್ಮ ಹೃದಯದಲ್ಲಿ ನೆಲೆಸಿರುವ, ಸತ್ಯಕಾಮಸ್ಯ = ನಾರಾಯಣನ, ಪ್ರತ್ಯಕ್ಷಸ್ಯ = ನಿರಂತರವಾಗಿ ನೋಡುತ್ತಿರುವ, ಕಾಮಾನ್ = ಇಚ್ಛೆಗಳನ್ನು, ಸಾಕ್ಷಾತ್ಕರ್ತುಃ = ಬಲ್ಲವರಾದ, ಭಗವತಃ = ಆಚಾರ್ಯಮಧ್ವರ, ಭ್ರೂನಿದೇಶಾತ್ = ಹುಬ್ಬಿನ ಚಲನೆಯಿಂದಲೇ, ದೇವೈಃ = ದೇವತೆಗಳಿಂದ, ದ್ಯುದೇಶಾಃ = ಸ್ವರ್ಗಾದಿ ಉತ್ಕೃಷ್ಟ ಪ್ರದೇಶಗಳು, ಪ್ರತಿಪದಂ = ಹೆಜ್ಜೆ ಹೆಜ್ಜೆಗೂ, ಪ್ರಾಪ್ತಾಃ = ಹೊಂದಲ್ಪಟ್ಟವೆಯಷ್ಟೇ. (ಆದ್ದರಿಂದ), ಅಸೌ = ಶ್ರೀಮದಾಚಾರ್ಯರು, ತೈಃ = ದೇವತೆಗಳಿಂದ, ನಿತ್ಯಂ = ನಿರಂತರವಾಗಿ, ಪ್ರತಿಪದಂ = ಪ್ರತಿಯೊಂದು ಕ್ಷಣದಲ್ಲಿಯೂ, ಆಸೇವಿತಃ = ಚೆನ್ನಾಗಿ ಸೇವಿಸಲ್ಪಟ್ಟಿದ್ದಾರೆ (ಹೀಗಿರುವಾಗ), ಅಯಂ = ಶ್ರೀಮದಾಚಾರ್ಯರು, ತೇಷಾಂ = ದೇವತೆಗಳ, ರೂಪಂ = ಸ್ವರೂಪವನ್ನು, ಸ್ಥಿತಿಂ = ಅಸ್ತಿತ್ವವನ್ನು, ಅಪಿ = ಮತ್ತು, ಬಲಂ = ಬಲವನ್ನು, ವೇತ್ತಿ = ತಿಳಿದಿರುತ್ತಾರೆ, ಏತತ್ = ಈ ವಿಷಯವು, ಚಿತ್ರಂ ಕಿಂ = ಆಶ್ಚರ್ಯವೇನು !

ಸಂಗೀತಶಾಸ್ತ್ರದಲ್ಲಿ ಬಲು ನಿಪುಣರು

**गन्धर्वविद्यानिपुणस्य नित्यं**
**गन्धर्ववर्यैरनुगीतकीर्तेः ।**
**कलाश्च शेषा हृदये गुरोर्नः**
**करोल्लसत् कन्दुकवद् विभान्ति ॥२१॥**

ಗಂಧರ್ವವಿದ್ಯಾನಿಪುಣಸ್ಯ ನಿತ್ಯಂ
ಗಂಧರ್ವವರ್ಯೈರನುಗೀತಕೀರ್ತೇಃ ।
ಕಲಾಶ್ಚ ಶೇಷಾ ಹೃದಯೇ ಗುರೋರ್ನಃ
ಕರೋಲ್ಲಸತ್ ಕಂದುಕವದ್ ವಿಭಾಂತಿ ॥೨೧॥

ಅನುವಾದ - ಶ್ರೀಮದಾಚಾರ್ಯರು ಸಕಲ ಶಾಸ್ತ್ರಗಳನ್ನು ಬಲ್ಲವರಷ್ಟೇ ಅಲ್ಲ. ಸಂಗೀತಶಾಸ್ತ್ರದಲ್ಲಿಯೂ ಅದ್ವಿತೀಯರು ಗಾಂಧರ್ವವಿದ್ಯೆಯಲ್ಲಿ ಇವರಿಗಿರುವ ನೈಪುಣ್ಯವನ್ನು ಕಂಡು ಗಂಧರ್ವೋತ್ತಮರು ನಿರಂತರ ಸ್ತುತಿಸುತ್ತಾರೆ. ಇಷ್ಟೇ ಅಲ್ಲದೇ ನಾಟ್ಯಶಾಸ್ತ್ರ, ಶಿಲ್ಪಶಾಸ್ತ್ರ ಮುಂತಾದ ವಿದ್ಯೆಗಳೂ ಕೂಡ ಅಂಗೈಯಲ್ಲಿರುವ ಚೆಂಡಿನಂತೆ ಶ್ರೀಮದಾಚಾರ್ಯರಲ್ಲಿ ಶೋಭಿಸುತ್ತಿವೆ.

ಅನ್ವಯಾರ್ಥ -- ನಿತ್ಯಂ = ನಿರಂತರವಾಗಿ, ಗಂಧರ್ವವರ್ಯೈಃ = ಶ್ರೇಷ್ಠರಾದ ಗಂಧರ್ವರಿಂದ, ಅನುಗೀತಕೀರ್ತೇಃ = ಸುಶ್ರಾವ್ಯವಾಗಿ ಗಾನ ಮಾಡಲ್ಪಟ್ಟ, ಗಂಧರ್ವವಿದ್ಯಾನಿಪುಣಸ್ಯ = ಗಂಧರ್ವವಿದ್ಯೆಯಲ್ಲಿ ಚತುರರಾದ, ನಃ = ನಮ್ಮ, ಹೃದಯೇ = ಹೃದಯದಲ್ಲಿ ನೆಲಸಿರುವ, ಗುರೋಃ = ಶ್ರೀಮದಾಚಾರ್ಯರಿಗೆ, ಶೇಷಾಃ ಕಲಾಶ್ಚ = ನಾಟ್ಯಶಾಸ್ತ್ರ ಶಿಲ್ಪಶಾಸ್ತ್ರ ಮೊದಲಾದ ಸಕಲ ಕಲೆಗಳೂ ಕೂಡ, ಕರೋಲ್ಲಸತ್ = ಅಂಗೈಯಲ್ಲಿ ಶೋಭಿಸುವ, ಕಂದುಕವತ್ = ಚೆಂಡಿನಂತೆ, ವಿಭಾಂತಿ = ಶೋಭಿಸುತ್ತಿವೆ.

ತತ್ವದಲ್ಲಿ 'ಇದಮಿತ್ಥಂ' ಎಂಬ ದಾರ್ಢ್ಯವಿರುವುದು ಇವರಿಗೆ ಮಾತ್ರ

एवं धर्मार्थदर्शी नृपनयकुशलो न्यायवित् सुप्रमाणैः
सर्वज्ञस्तत्वमार्यः क्षितितळमगमत् केवलं सम्प्रणेतुम् ।
यस्मिन् गुह्ये स्म देवा अपि मुनिपितृभिः प्राय आलोच्य नित्यं
निष्ठां नाऽयान्ति भूयश्चिरतरभगवद्भक्तिभिः साधयन्ति ॥२२॥

ಏವಂ ಧರ್ಮಾರ್ಥದರ್ಶೀ ನೃಪನಯಕುಶಲೋ ನ್ಯಾಯವಿತ್ ಸುಪ್ರಮಾಣ್ಯೈಃ
ಸರ್ವಜ್ಞಸ್ತತ್ತ್ವಮಾರ್ಯಃ ಕ್ಷಿತಿತಳಮಗಮತ್ ಕೇವಲಂ ಸಂಪ್ರಣೇತುಮ್ ।
ಯಸ್ಮಿನ್ ಗುಹ್ಯೇ ಸ್ಮ ದೇವಾ ಅಪಿ ಮುನಿಪಿತೃಭಿಃ ಪ್ರಾಯ ಆಲೋಚ್ಯ ನಿತ್ಯಂ
ನಿಷ್ಠಾಂ ನಾಽಯಾಂತಿ ಭೂಯಶ್ಚಿರತರ ಭಗವದ್ಭಕ್ತಿಭಿಃ ಸಾಧಯಂತಿ ॥೨೨॥

ಅನುವಾದ - ಶ್ರೀಮದಾಚಾರ್ಯರು ಸಕಲಕಲಾವಲ್ಲಭರಷ್ಟೇ ಅಲ್ಲ; ಧರ್ಮಶಾಸ್ತ್ರ ಅರ್ಥಶಾಸ್ತ್ರ, ಕಾಮಶಾಸ್ತ್ರ, ಮೋಕ್ಷಶಾಸ್ತ್ರಗಳನ್ನೂ ಆಮೂಲಾಗ್ರವಾಗಿ ಬಲ್ಲವರು. ಬ್ರಹ್ಮತರ್ಕವನ್ನು ತಿಳಿದವರು ರಾಜ್ಯಶಾಸ್ತ್ರದಲ್ಲಿಯೂ ಕುಶಲಿಗಳು. ಹೀಗೆ ಎಲ್ಲವನ್ನೂ ಅರಿತಿರುವ ಕಾರಣದಿಂದ ಜೀವೋತ್ತಮರೂ ಸರ್ವಜ್ಞರೂ ಆಗಿರುವರು. ದೃಢವಾದ ತತ್ತ್ವವನ್ನು ನಮ್ಮಂಥವರಿಗೆ ಉಪದೇಶಿಸಲು ಮಾತ್ರ ಭೂಮಿಯಲ್ಲಿ ಅವತರಿಸಿದ್ದಾರೆ. ಇವರಂತೆ ತತ್ತ್ವದಲ್ಲಿ ದಾರ್ಢ್ಯವನ್ನು ಹೊಂದಲು ಯಾರಿಗೂ ಸಾಧ್ಯವಿಲ್ಲ. ಮುನಿಗಳು, ಪಿತೃಗಳು ಮೊದಲಾದವರೆಲ್ಲರೂ ಕೂಡ ಚಿರಕಾಲ ಆಲೋಚನೆ ಮಾಡಿದರೂ ಕೂಡ 'ಇದಮಿತ್ಥಂ' ಎಂದು ತತ್ತ್ವದಲ್ಲಿ ದಾರ್ಢ್ಯವನ್ನು ಹೊಂದಲಾರರು. ಭಗವಂತನಲ್ಲಿ ಭಕ್ತಿಯಿಂದ ಅನನ್ಯ ಶರಣಾಗತರಾಗಿ ಆರಾಧನೆಗೈದು ಇವರೆಲ್ಲರೂ ತತ್ತ್ವಜ್ಞಾನದಲ್ಲಿ ದಾರ್ಢ್ಯವನ್ನು ಪಡೆದುಕೊಳ್ಳುತ್ತಾರೆ. ಆದ್ದರಿಂದ ಶ್ರೀಮದಾಚಾರ್ಯರು ಒಬ್ಬರೇ ನಿಜವಾದ ತತ್ತ್ವವನ್ನು ಉಪದೇಶಿಸಲು ಸಮರ್ಥರು ಈ ಕಾರಣಕ್ಕಾಗಿಯೇ ಅವರು ಭೂಮಿಯಲ್ಲಿ ಅವತರಿಸಿರುವರು.

ಅನ್ವಯಾರ್ಥ -- ಏವಂ = ಇದೇ ರೀತಿಯಾಗಿ (ಶ್ರೀಮದಾಚಾರ್ಯರು), ಧರ್ಮಾರ್ಥದರ್ಶೀ = ಧರ್ಮಶಾಸ್ತ್ರ ಅರ್ಥಶಾಸ್ತ್ರಗಳಲ್ಲಿಯೂ ಪ್ರವೀಣರು, ನೃಪನಯಕುಶಲಃ = ರಾಜ್ಯಶಾಸ್ತ್ರದಲ್ಲಿಯೂ ಕುಶಲರು, ನ್ಯಾಯವಿತ್ = ನ್ಯಾಯಶಾಸ್ತ್ರವನ್ನು ಅರಿತವರು, ಯಸ್ಮಿನ್ - ಯಾವ, ಗುಹ್ಯೇ = ಗೂಢವಾದ ತತ್ತ್ವವಿಷಯದಲ್ಲಿ, ಮುನಿಪಿತೃಭಿಃ ಅಪಿ = ಮುನಿಗಳೂ ಹಾಗೂ ಪಿತೃಗಳಿಂದಲೂ, ನಿತ್ಯಂ = ನಿರಂತರವಾಗಿ, ಆಲೋಚ್ಯ = ಆಲೋಚನೆ ಮಾಡಿ, ಪ್ರಾಯಃ = ಸಾಮಾನ್ಯವಾಗಿ, ನಿಷ್ಠಾಂ = 'ಇದಮಿತ್ಥಂ' ಎಂಬ ದಾರ್ಢ್ಯವನ್ನು, ನ ಆಯಾಂತಿ ಸ್ಮ = ಹೊಂದುವುದಿಲ್ಲವೋ, ಭೂಯಃ = ಮತ್ತೆ ಮತ್ತೆ, ಚಿರತರಭಗವದ್‌ಭಕ್ತಿಭಿಃ = ದೀರ್ಘಕಾಲದ ಭಗವದ್‌ಭಕ್ತಿಯಿಂದ, ಸಾಧಯಂತೀ = ತತ್ತ್ವದಲ್ಲಿ ದಾರ್ಢ್ಯವನ್ನು ಹೊಂದುತ್ತಾರೋ ಅಂಥ, ತತ್ತ್ವಂ = ತತ್ತ್ವವನ್ನು, ಸಂಪ್ರಣೇತುಂ ಕೇವಲಂ =

ದೃಢವಾಗಿ ನಿರೂಪಣೆ ಮಾಡಲು ಮಾತ್ರ, ಸರ್ವಜ್ಞಃ = ಎಲ್ಲವನ್ನೂ ಬಲ್ಲ. ಆರ್ಯಃ = ಜೀವೋತ್ತಮರಾದ ವಾಯುದೇವರು, ಕ್ಷಿತಿತಳಂ = ಭೂತಳಕ್ಕೆ, ಅಗಮತ್ = ಬಂದರು.

### ಅವತಾರತ್ರಯಗಳು ವೇದಪ್ರತಿಪಾದ್ಯ

**त्रेधाऽवतारमवनाय सतां बळित्थे-**
**त्याद्या श्रुतिर्भगवती गुरुमेनमाह ।**
**मुख्यानिलोऽतिबलवान् मतिरीशधेना-**
**नेतेति पृक्ष इति मध्व इति क्रमेण ॥२३॥**

ತ್ರೇಧಾಽವತಾರಮವನಾಯ ಸತಾಂ ಬಳಿತ್ಥೇ-
ತ್ಯಾದ್ಯಾ ಶ್ರುತಿರ್ಭಗವತೀ ಗುರುಮೇನಮಾಹ ।
ಮುಖ್ಯಾನಿಲೋಽತಿಬಲವಾನ್ ಮತಿರೀಶಧೇನಾ-
ನೇತೇತಿ ಪೃಕ್ಷ ಇತಿ ಮಧ್ವ ಇತಿ ಕ್ರಮೇಣ ॥೨೩॥

ಅನುವಾದ - ವಾಯುದೇವರು ಸಜ್ಜನರ ರಕ್ಷಣೆಗೋಸ್ಕರ ಮೂರು ಅವತಾರಗಳನ್ನು ಮಾಡಿದ್ದಾರೆಂದು ಪ್ರಾಣಾಗ್ನಿಸೂಕ್ತವು ಕೊಂಡಾಡುತ್ತಿದೆ. ಮುಖ್ಯಪ್ರಾಣದೇವರು ಅತ್ಯಂತ ಬಲಿಷ್ಠರಾಗಿದ್ದಾರೆಂದು 'ಬಟ್' ಎಂಬ ಪದವು ಹೇಳುತ್ತಿದೆ. ಹನುಮಂತದೇವರು ಶ್ರೀರಾಮನ ಸಂದೇಶವನ್ನು ಸೀತಾದೇವಿಗೆ ತಲುಪಿಸಿದನೆಂದು 'ಮತಿರ್ ಋತಸ್ಯ ಧೇನಾ ಅನಯಂತ ಸಸ್ರುತಃ' ಎಂಬುದಾಗಿ ಹೇಳುತ್ತಿದೆ. 'ಬಟ್' ಎಂಬುದರಿಂದ ಮೂಲರೂಪವನ್ನು 'ಮತಿಃ' ಎಂಬುದರಿಂದ ಮೊದಲನೆಯ ಅವತಾರವನ್ನು ಶ್ರುತಿಯು ಹೇಳುತ್ತಿದೆ. 'ಪೃಕ್ಷೋ ವಪುಃ ಪಿತುಮಾನ್' ಕೌರವರನ್ನು ನಾಶಮಾಡಿರುವ ಕಾರಣ ಭೀಮಸೇನನು 'ಪೃಕ್ಷ' ಎನಿಸಿದ್ದಾನೆಂದು ಎರಡನೆಯ ಅವತಾರವನ್ನು ವರ್ಣಿಸಿದೆ. 'ಯದೀಮನುಪ್ರದೀವೋ ಮಧ್ವಃ' ಎಂಬುದಾಗಿ ಮೂರನೆಯ ಮಧ್ವಾವತಾರವನ್ನು ಮಧ್ವಶಬ್ದದಿಂದ ಸ್ಪಷ್ಟವಾಗಿಯೇ ಹೇಳಿದೆ.

ಅನ್ವಯಾರ್ಥ -- ಸತಾಂ = ಸಜ್ಜನರ, ಅವನಾಯ = ರಕ್ಷಣೆಗಾಗಿ, ತ್ರೇಧಾ = ಮೂರುಬಾರಿ, ಅವತಾರಂ = ಅವತಾರವನ್ನು ಮಾಡಿರುವ, ಏನಂ = ಈ,

ಗುರುಂ = ಗುರುಗಳನ್ನು, ಬಳಿತ್ಥಾ ಇತ್ಯಾದ್ಯಾಃ = 'ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ' ಇತ್ಯಾದಿಯಾದ ಶ್ರುತಿಯು, ಮುಖ್ಯಾನಿಲಃ = ಮುಖ್ಯಪ್ರಾಣನು, ಅತಿಬಲವಾನ್ = ಅತ್ಯಂತ ಬಲಿಷ್ಠನೆಂದು 'ಬಟ್' ಎಂಬ ಪದ ಹೇಳುತ್ತಿದೆ. ಮತಿಃ = ಬುದ್ಧಿವಂತನಾದ ಹನುಮಂತನು ಈಶಧೇನಾನೇತಾ, ಈಶ = ಶ್ರೀರಾಮನ, ಧೇನಾ = ಸಂದೇಶವನ್ನು, ನೇತಾ = ಸೀತಾದೇವಿಗೆ, ಕೊಂಡೈದನು ಇತಿ = ಎಂದು 'ಮತೀಯುತಸ್ಯ ಧೇನಾ ಅನಯಂತ ಸಸ್ರುತಃ' ಎಂಬ ಶ್ರುತಿಯು ಹೇಳುತ್ತಿದೆ. ಪೃಕ್ಷಃ ಇತಿ = ಕೌರವರನ್ನು ನಾಶಮಾಡುವ ಕಾರಣದಿಂದ ಭೀಮನು ಪೃಕ್ಷನೆನಿಸಿ-ದ್ದಾನೆಂದು 'ಪೃಕ್ಷೋ ವಪು ಪಿತುಮಾನ್' ಎಂಬ ಶ್ರುತಿಯು ಹೇಳುತ್ತಿದೆ. ಮಧ್ವಃ ಇತಿ = 'ಯದೀಮನು ಪ್ರದಿವೋ ಮಧ್ವಃ' ಎಂಬುದಾಗಿ ಮೂರನೆಯ ಅವತಾರವನ್ನು ಮಧ್ವಶಬ್ದದಿಂದಲೇ ಹೇಳುತ್ತಿದೆ. ಇತಿ = ಹೀಗೆ ಕ್ರಮೇಣ = ಕ್ರಮವಾಗಿ ಮುಖ್ಯಪ್ರಾಣನ ಮೂರು ಅವತಾರಗಳನ್ನು ಭಗವತೀ = ಭಗವತ್‌ಶಬ್ದವಾಚ್ಯರನ್ನು ಪ್ರತಿಪಾದನೆ ಮಾಡುವ, ಶ್ರುತಿಃ = ಶ್ರುತಿಯು, ಆಹ = ಹೇಳುತ್ತಿದೆ.

ಶ್ರೀಮದಾಚಾರ್ಯರ ಅಪ್ಪಣೆಯಂತೆ ಟೀಕೆ ಬರೆಯುತಿಹೆನು

**प्रणम्य सम्यक्प्रणतेष्टदं तं व्याख्यां करोम्यद्य यथावबोधम् ।**
**तस्याज्ञयैवानुगृहीतबुद्धिः सत्सूत्रभाष्यस्य कृतस्य तेन ॥२४॥**

ಪ್ರಣಮ್ಯ ಸಮ್ಯಕ್‌ಪ್ರಣತೇಷ್ಟದಂ ತಂ ವ್ಯಾಖ್ಯಾಂ ಕರೋಮ್ಯದ್ಯ ಯಥಾವಬೋಧಮ್ ।
ತಸ್ಯಾಜ್ಞಯೈವಾನುಗೃಹೀತಬುದ್ಧಿಃ ಸತ್‌ಸೂತ್ರಭಾಷ್ಯಸ್ಯ ಕೃತಸ್ಯ ತೇನ ॥೨೪॥

ಅನುವಾದ - ಶ್ರೀಮದಾಚಾರ್ಯರು ಅತ್ಯಂತ ನಿರ್ದುಷ್ಟವಾದ ಬ್ರಹ್ಮಸೂತ್ರಭಾಷ್ಯವನ್ನು ರಚನೆ ಮಾಡಿರುವರು. ''ನಾನು ರಚಿಸಲ್ಪಟ್ಟ ಭಾಷ್ಯಕ್ಕೆ ಟೀಕೆಯನ್ನು ನೀನು ಬರೆಯಬೇಕು'' ಎಂಬುದಾಗಿ ನನಗೆ ಅಪ್ಪಣೆ ಮಾಡಿದ್ದಾರೆ. ಟೀಕೆ ಬರೆಯುವ ಸಾಮರ್ಥ್ಯ ನನ್ನದಲ್ಲ. ಆದರೆ ಶ್ರೀಮದಾಚಾರ್ಯರ ಅನುಗ್ರಹಕ್ಕೆ ಮುಖ್ಯಪಾತ್ರಳಾದ ಭಾರತೀದೇವಿಯು ನನ್ನಲ್ಲಿ ನಿಂತು ಈ ವ್ಯಾಖ್ಯಾನವನ್ನು

ಬರೆಸುವಳು. ಭಕ್ತಿಯಿಂದ ನಮಿಸುವವರಿಗೆ ಇಷ್ಟಾರ್ಥಗಳನ್ನು ಕರುಣಿಸುವ ಶ್ರೀಮದಾಚಾರ್ಯರಿಗೆ ಸಾಷ್ಟಾಂಗ ನಮಿಸಿ ನನಗೆ ತಿಳಿದಷ್ಟು ವ್ಯಾಖ್ಯಾನವನ್ನು ಮಾಡಲು ಈಗ ಪ್ರಾರಂಭಿಸುತ್ತೇನೆ.

ಅನ್ವಯಾರ್ಥ -- ತೇನ = ಆ ಶ್ರೀಮದಾಚಾರ್ಯರಿಂದ, ಕೃತಸ್ಯ = ಮಾಡಲ್ಪಟ್ಟ, ಸತ್‌ಸೂತ್ರಭಾಷ್ಯಸ್ಯ = ನಿರ್ದುಷ್ಟವಾದ ಭಾಷ್ಯಕ್ಕೆ, ತಸ್ಯ = ಶ್ರೀಮದಾಚಾರ್ಯರ, ಆಜ್ಞಯೈವ = ಅಪ್ಪಣೆಯಿಂದಲೇ, ಅನುಗೃಹೀತ-ಬುದ್ಧಿಃ = ಶ್ರೀಮದಾಚಾರ್ಯರಿಂದ ಅನುಗೃಹೀತಳಾದ ವಾಗ್‌ದೇವಿಯ ಸನ್ನಿಧಾನದಿಂದ, ಸಮ್ಯಕ್ಪ್ರಣತೇಷ್ಟದಂ = ಭಕ್ತಿಯಿಂದ ನಮಿಸಿದವರಿಗೆ ಇಷ್ಟಾರ್ಥಗಳನ್ನು ಪೂರೈಸುವ, ತಂ = ಅಂಥ ಶ್ರೀಮದಾಚಾರ್ಯರನ್ನು, ಪ್ರಣಮ್ಯ = ನಮಸ್ಕಾರಮಾಡಿ, ಅದ್ಯ = ಈಗ, ಯಥಾವಬೋಧಂ = ನನಗೆ ತಿಳಿದಷ್ಟು, ವ್ಯಾಖ್ಯಾಂ = ವ್ಯಾಖ್ಯಾನವನ್ನು, ಕರೋಮಿ = ಮಾಡುತ್ತೇನೆ.

ಸಾವಿರಾರು ಅರ್ಥವುಳ್ಳ ಭಾಷ್ಯಕ್ಕೆ ನನ್ನ ಟೀಕೆ ಒಂದರ್ಥವನ್ನೂ ಪೂರ್ಣ ಹೇಳದು

**आज्ञस्यैनैकमप्यर्थं लेशतो वक्तुमुत्सहे ।**
**सहस्रार्थस्य भाष्यस्य प्रसन्नाः सन्तु सद्गुणाः ॥२५॥**

ಆಜ್ಞಸ್ಯೇನೈಕಮಪ್ಯರ್ಥಂ ಲೇಶತೋ ವಕ್ತುಮುತ್ಸಹೇ ।
ಸಹಸ್ರಾರ್ಥಸ್ಯ ಭಾಷ್ಯಸ್ಯ ಪ್ರಸನ್ನಾಃ ಸಂತು ಸದ್ಗುಣಾಃ ॥೨೫॥

ಅನುವಾದ - ಶ್ರೀಮದಾಚಾರ್ಯರ ಭಾಷ್ಯದ ಪ್ರತಿಯೊಂದು ಮಾತುಗಳಿಗೂ ಸಾವಿರಾರು ಅರ್ಥಗಳಿವೆ. ಅವುಗಳಲ್ಲಿ ಎಲ್ಲವೂ ನನಗೆ ತಿಳಿದಿಲ್ಲ. ತಿಳಿದಿರುವ ಅನೇಕಾರ್ಥಗಳಲ್ಲಿಯೂ ಒಂದನ್ನು ಮಾತ್ರ ಹೇಳಬಲ್ಲೆ. ಆ ಒಂದು ಅರ್ಥವನ್ನು ಕೂಡ ಸಂಪೂರ್ಣವಾಗಿ ಹೇಳಲಾರೆ. ಎಲ್ಲವನ್ನೂ ಹೇಳುವ ಅಧಿಕಾರ ನನಗಿಲ್ಲ. ಗೋಪ್ಯವಿಷಯಗಳನ್ನು ಮುಚ್ಚಿಡಲೇಬೇಕು. ಮತ್ತು ತಿಳಿದಿರುವುದನ್ನೆಲ್ಲ ಹೇಳಲು ಹೊರಟರೆ ಗ್ರಂಥಗೌರವವಾಗುತ್ತದೆ. ಆದ್ದರಿಂದ ಶ್ರೀಮದಾಚಾರ್ಯರ ಭಾಷ್ಯದ ಮಾತುಗಳಿಗೆ ಕೆಲವು ಅರ್ಥಗಳನ್ನಷ್ಟೇ ವಿವರಿಸಲು ಹೊರಟ ನನ್ನ ವಿಷಯದಲ್ಲಿ ಸಜ್ಜನರೆಲ್ಲರೂ ಪ್ರಸನ್ನರಾಗಲಿ.

ಅನ್ವಯಾರ್ಥ -- ಸಹಸ್ರಾರ್ಥಸ್ಯ = ಸಾವಿರಾರು ಅರ್ಥಗಳಿಂದ ಗರ್ಭಿತವಾದ, ಭಾಷ್ಯಸ್ಯ = ಶ್ರೀಮದಾಚಾರ್ಯರ ಭಾಷ್ಯಕ್ಕೆ, ಆಂಜಸ್ಯೇನ = ನಿಖರವಾಗಿ, ಏಕಮಪ್ಯರ್ಥಂ = ಒಂದು ಅರ್ಥದಲ್ಲಿಯೂ, ಲೇಶತಃ = ಸ್ವಲ್ಪಮಾತ್ರ, ವಕ್ತುಂ = ಹೇಳಲು, ಉತ್ಸಹೇ = ಕಾತುರನಾಗಿರುವೆನು, ಸದ್ಗುಣಾಃ = ಸಜ್ಜನರು, ಪ್ರಸನ್ನಾಃ ಸಂತು = ನನ್ನ ವಿಷಯದಲ್ಲಿ ಪ್ರಸನ್ನರಾಗಲಿ.

ಭಾಷ್ಯದ ಪ್ರಾರಂಭದಲ್ಲಿ ಇಷ್ಟದೇವತೆಗೆ ಹಾಗೂ ಗುರುವಿಗೆ ನಮಸ್ಕಾರ

**नारायणं गुणैःसर्वैरुदीर्णं दोषवर्जितम् ।**
**ज्ञेयं गम्यं गुरूंश्चापि नत्वा सूत्रार्थ उच्यते ।।**
**इत्यनेन श्लोकेनेष्टदेवतागुरुनमस्कारं करोति ।**

ನಾರಾಯಣಂ ಗುಣ್ಯೆಃ ಸರ್ವ್ಯೆರುದೀರ್ಣಂ ದೋಷವರ್ಜಿತಮ್ ।
ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥

ಎಲ್ಲಾ ಗುಣಗಳಿಂದ ತುಂಬಿದ, ದೋಷದ ಲೇಶವೂ ಇಲ್ಲದ, ಸಾಧಕರಿಗೆ ತಿಳಿಯಲು ಮತ್ತು ಹೊಂದಲು ಯೋಗ್ಯನಾದ ನಾರಾಯಣನನ್ನು ಗುರುಗಳಾದ ವ್ಯಾಸರನ್ನೂ ನಮಿಸಿ ಸೂತ್ರಗಳ ಅರ್ಥ ವಿವರಿಸುವೆ. ಶ್ರೀಮದಾಚಾರ್ಯರು ಹೀಗೆ ಮಂಗಳಾಚರಣೆಯನ್ನು ಮಾಡಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಭಾಷ್ಯವನ್ನು ರಚನೆ ಮಾಡಲು ಪ್ರಾರಂಭಿಸಿದ್ದಾರೆ. ಮೊದಲು ತಮಗೆ ಇಷ್ಟನಾದ ದೇವನನ್ನು ಹಾಗೂ ಇಷ್ಟವಾದ ಗುರುವನ್ನು ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡುತ್ತಿದ್ದಾರೆ. (ಆಚಾರ್ಯರಿಗೆ ಇಷ್ಟದೇವನೇ ಗುರುವಾಗಿದ್ದಾನೆ. ಆದರೂ ಎರಡು ರೂಪಗಳಿಗೆ ನಮಿಸಿದ್ದಾರೆ)

ನಾರಾಯಣನ ನಮಸ್ಕಾರಕ್ಕೆ ಪ್ರಧಾನವಾಗಿ ಮೂರು ಉದ್ದೇಶಗಳು

**तत्वप्रदीपः – मङ्गलाचरणार्थं, शिष्टाचारपरिपलानायाविघ्नेन ग्रन्थपरिसमाप्त्यै, देवतागुरुभक्त्योर्विद्यान्तरङ्गत्वख्यापनाय' च वस्तुनिर्देशं च करोति ।**

ಯಾವುದೇ ಗ್ರಂಥದ ಪ್ರಾರಂಭದಲ್ಲಿ ಅವಶ್ಯವಾಗಿ ಮಂಗಳವನ್ನು ಆಚರಿಸಬೇಕು. ಅದಕ್ಕಾಗಿ ಶ್ರೀಮದಾಚಾರ್ಯರು ನಮಸ್ಕಾರ ರೂಪವಾದ ಮಂಗಳವನ್ನು ಆಚರಿಸಿದ್ದಾರೆ. ಈ ಮಂಗಳಾಚರಣೆಯು ಶಿಷ್ಟಾಚಾರ ಪರಂಪರೆಯಿಂದ ೧. ಅನೂಚಾನವಾಗಿ ನಡೆದುಕೊಂಡು ಬಂದಿದೆ. ಅದರ ರಕ್ಷಣೆಗಾಗಿ ಹಾಗೂ ೨. ನಿರ್ವಿಘ್ನವಾಗಿ ಗ್ರಂಥಪರಿಸಮಾಪ್ತಿಗಾಗಿ ಶ್ರೀಮದಾಚಾರ್ಯರು ಮಂಗಳವನ್ನು ಆಚರಣೆ ಮಾಡಿದ್ದಾರೆ. ೩. ದೇವರಲ್ಲಿ ಮತ್ತು ಗುರುಗಳಲ್ಲಿ ಮಾಡುವ ಭಕ್ತಿಯು ವಿದ್ಯೆಯ ಪ್ರಾಪ್ತಿಗೆ ಸಾಧನವಾಗಿದೆ. ಈ ಮೂರು ಉದ್ದೇಶದಿಂದ ನಾರಾಯಣ ಎಂಬ ವಸ್ತುವನ್ನು ನಿರ್ದೇಶ ಮಾಡುವ ಮೂಲಕ ಮಂಗಳವನ್ನು ಗ್ರಂಥಕಾರರು ಆಚರಿಸುತ್ತಿದ್ದಾರೆ.

ಗ್ರಂಥಾರಂಭದಲ್ಲಿ ಅನುಬಂಧಚತುಷ್ಟಯ

**तत्वप्रदीपः – अनेन चाधिकारिविषयप्रयोजनसम्बन्धाञ्छास्त्रस्यारम्भ एवापेक्षितान् दर्शयति ।**

ಹೀಗೆ ಮಂಗಳಾಚರಣೆಯನ್ನು ಮಾಡುವ ಮೂಲಕ ಗ್ರಂಥದ ಆರಂಭದಲ್ಲಿ ಅಪೇಕ್ಷಿತವಾದ ಅಧಿಕಾರಿ, ವಿಷಯ, ಪ್ರಯೋಜನ, ಸಂಬಂಧಗಳನ್ನು ತೋರಿಸುತ್ತಿದ್ದಾರೆ.

'ನತ್ವಾ' ಎಂಬುದು ಅಧಿಕಾರ ಸೂಚಕ

**तत्वप्रदीपः – अधिकारस्य साधनान्तर्भूतत्वात् 'अध्ययनमात्रवतः' इत्यादिना साधनाध्याये प्रतिपादितोऽधिकार्यत्राप्यथशब्दाक्षिप्त एव भाष्यकारेण 'नारायणं नत्वा' इति सूचितः अध्ययनवान् भक्तिमांश्चेति ।**

ಈ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಓದಲು ಯಾರು ಅಧಿಕಾರಿಯಾಗುತ್ತಾನೆ ? ಎಂಬ ಪ್ರಶ್ನೆ ಬಂದರೆ ಅಧಿಕಾರವು ಸಾಧನೆಯಲ್ಲಿ ಸೇರಿರುವುದರಿಂದ 'ಅಧ್ಯಯನಮಾತ್ರವತಃ' ಎಂಬ ಸಾಧನಾಧ್ಯಾಯದಲ್ಲಿರುವ ಸೂತ್ರದಲ್ಲಿ ತಿಳಿಸಿದ್ದಾರೆ. ಅಂಥ ಅಧಿಕಾರವು ಪ್ರಥಮಸೂತ್ರದಲ್ಲಿ 'ಅಥ' ಎಂಬ ಪದದಿಂದ ಆಕ್ಷೇಪಾತ್ ಸಿದ್ಧವಾಗುತ್ತದೆ. ಈ ಅಥಶಬ್ದದಿಂದ ಆಕ್ಷಿಪ್ತವಾದ ಅಧಿಕಾರವನ್ನು ಭಾಷ್ಯಕಾರರು 'ನಾರಾಯಣಂ ನತ್ವಾ' ಎಂಬ ಪದದಿಂದ ಪ್ರಾರಂಭದಲ್ಲಿ ಸೂಚನೆ ಮಾಡಿದ್ದಾರೆ.

ನಮಸ್ಕಾರಕ್ಕೆ ಜ್ಞಾನ-ಭಕ್ತಿಗಳು ಬೇಕು

**तत्वप्रदीपः – नमस्कारस्य भक्तिपूर्वकत्वात् । भक्तेश्च विष्णुनिष्ठाया अध्ययनवत एव प्रायेण सम्भवात् ।**

ಅದು ಹೀಗೆ - 'ನಾರಾಯಣಂ ನತ್ವಾ' ಎಂಬುದಕ್ಕೆ ನಾರಾಯಣನನ್ನು ಭಕ್ತಿಪೂರ್ವಕವಾಗಿ ನಮಸ್ಕಾರ ಮಾಡಿ ಎಂದರ್ಥ. ನಮಸ್ಕಾರ ಮಾಡಬೇಕಾದರೆ ಭಕ್ತಿಯು ಇರಲೇ ಬೇಕು. ಆದ್ದರಿಂದ ಈ ಶಾಸ್ತ್ರವನ್ನು ಓದುವ ಅಧಿಕಾರಿಯಲ್ಲಿ ಭಕ್ತಿಯಿರಬೇಕೆಂಬ ಗುಣವನ್ನು ಸೂಚಿಸಿದಂತಾಯಿತು. ಮತ್ತು ವಿಷ್ಣುವಿನಲ್ಲಿ ಭಕ್ತಿಯು ಹುಟ್ಟಬೇಕೆಂದರೆ ಪ್ರಾಯಃ ವೇದಾಧ್ಯಯನವನ್ನು ಮಾಡಿರಲೇ ಬೇಕು. ಆದ್ದರಿಂದ ಯಾವ ವ್ಯಕ್ತಿಯು ವೇದಾದಿಶಾಸ್ತ್ರಗಳನ್ನು ಅಧ್ಯಯನ ಮಾಡಿ ಭಗವದ್‌ಭಕ್ತಿ ಮೊದಲಾದ ಗುಣಗಳನ್ನು ಹೊಂದಿರುತ್ತಾನೋ ಅವನು ಈ ಶಾಸ್ತ್ರವನ್ನು ಅಧ್ಯಯನ ಮಾಡಲು ಅಧಿಕಾರಿಯಾಗುತ್ತಾನೆ ಎಂಬುದನ್ನು ಶ್ರೀಮದಾಚಾರ್ಯರು 'ನಾರಾಯಣಂ ನತ್ವಾ' ಎಂಬುದರಿಂದ ತಿಳಿಸಿದ್ದಾರೆ.

ನಾರಾಯಣಪದವು ವಿಷಯಸೂಚಕ, ಗಮ್ಯಪದವು ಪ್ರಯೋಜನ ಸೂಚಕ

**तत्वप्रदीपः – नारायणो विषयः । नारायणप्राप्तिरूपो निर्दुःखानन्दलक्षणो मोक्षः प्रयोजनमुक्तं 'गम्यम्' इति । सम्बन्धो दातृदेयलक्षणादिकः ।**

'ನಾರಾಯಣಂ' ಎಂಬ ಪದದಿಂದ ಈ ಗ್ರಂಥಕ್ಕೆ ನಾರಾಯಣನು ವಿಷಯನಾಗಿದ್ದಾನೆಂದು ತಿಳಿಸಿದ್ದಾರೆ 'ಗಮ್ಯಮ್' ಎಂಬ ಪದದಿಂದ ಪ್ರಯೋಜನವನ್ನು ತಿಳಿಸಿದ್ದಾರೆ. ಅದು ಹೀಗೆ - ನಾರಾಯಣನು ಮುಕ್ತರಿಂದ ಗಮ್ಯನಾಗಿದ್ದಾನೆ. ಮೋಕ್ಷವೆಂದರೆ ದುಃಖದ ಲವಲೇಶವೂ ಇಲ್ಲದ ಸುಖಮಾತ್ರಸ್ವರೂಪವಾದದ್ದು. ಇದೇ ನಾರಾಯಣನ ಪ್ರಾಪ್ತಿ ಎನಿಸುತ್ತದೆ. ಯಾವ ವ್ಯಕ್ತಿಯು ಈ ಬ್ರಹ್ಮಮೀಮಾಂಸಾಶಾಸ್ತ್ರದ ಅಧ್ಯಯನದಲ್ಲಿ ತೊಡಗುತ್ತಾನೋ ಅವನಿಗೆ ನಾರಾಯಣಪ್ರಾಪ್ತಿ ಎಂಬ ನಿರ್ದುಃಖಾನಂದರೂಪವಾದ ಮೋಕ್ಷವು ದೊರೆಯುತ್ತದೆ ಎಂಬ ಪ್ರಯೋಜನವನ್ನು 'ಗಮ್ಯಮ್' ಎಂಬ ಪದದಿಂದ ತಿಳಿಸಿದ್ದಾರೆ. ಇದೇ ಪದದಿಂದ ಸಂಬಂಧವನ್ನು ಕೂಡ ತಿಳಿಸಿದ್ದಾರೆ. ನಾರಾಯಣನು ಮೋಕ್ಷವನ್ನು ನೀಡುತ್ತಾನೆ. ಅಧಿಕಾರಿಯು ಮೋಕ್ಷವನ್ನು ಪಡೆಯುತ್ತಾನೆ. ಆದ್ದರಿಂದ

'ದಾತೃದೇಯ' ಎಂಬ ಸಂಬಂಧವು ಸೂಚಿತವಾಯಿತು. ಹೀಗೆ ದಾತೃದೇಯಭಾವ ಸಂಬಂಧ ಮೊದಲಾದವುಗಳನ್ನು ತಿಳಿದುಕೊಳ್ಳಬೇಕು.

### ಮಾಯಾವಾದಿಗಳ ಮತದಲ್ಲಿ ಅನುಬಂಧಚತುಷ್ಟಯವಿಲ್ಲವೆಂಬುದನ್ನೂ ಸಹ ಮಂಗಳ ಪದ್ಯವೇ ತಿಳಿಸುತ್ತಿದೆ

**तत्वप्रदीपः – तद्भावमोक्षपक्षे दातृदेयग्रहीत्रभावान्न सम्बन्धः सम्भवः । प्रतिपाद्यप्रतिपादकलक्षणः सम्बन्ध इति चेन्न । अविषयत्वेनाप्रतिपाद्यत्वात्**

ಮಾಯಾವಾದಿಗಳು ಬ್ರಹ್ಮಭಾವವನ್ನು ಹೊಂದುವುದೇ ಮೋಕ್ಷ ಎನ್ನುತ್ತಾರೆ. ಇವರ ಪಕ್ಷದಲ್ಲಿ ಬ್ರಹ್ಮನು ಮೋಕ್ಷವನ್ನು ಕೊಡಲು ಸಮರ್ಥನಾಗುವುದಿಲ್ಲ. (ಮಾಯಾವಾದಿಗಳ ಮತದಲ್ಲಿ ಅನುಬಂಧಚತುಷ್ಟಯವಿಲ್ಲವೆಂಬುದನ್ನು ಶ್ರೀಮದಾಚಾರ್ಯರು ಮಂಗಳಪದ್ಯದಿಂದ ತಿಳಿಸಿದ್ದಾರೆ) ಅಧಿಕಾರಿಯು ಮೋಕ್ಷವನ್ನು ಸ್ವೀಕರಿಸಲು ಸಮರ್ಥನಾಗುವುದಿಲ್ಲ. ಆದ್ದರಿಂದ ದಾತೃದೇಯ-ರೂಪವಾದ ಸಂಬಂಧವೇ ಮಾಯಾವಾದಿಗಳ ಪಕ್ಷದಲ್ಲಿ ಯುಕ್ತವಾಗುವುದಿಲ್ಲ. ಇನ್ನು ಪ್ರತಿಪಾದ್ಯ-ಪ್ರತಿಪಾದಕರೂಪವಾದ ಸಂಬಂಧವಿದೆ ಎಂದು ಮಾಯಾವಾದಿಗಳು ಹೇಳಬೇಕು. ಇದೂ ಸಹ ಯುಕ್ತವಾಗುವುದಿಲ್ಲ. ಏಕೆಂದರೆ ಬ್ರಹ್ಮನು ನಿರ್ವಿಷಯನಾಗಿರುವುದರಿಂದ ಶಾಸ್ತ್ರಕ್ಕೆ ವಿಷಯನೇ ಆಗಲಾರ. ಆದ್ದರಿಂದ ಶಾಸ್ತ್ರದಿಂದ ಪ್ರತಿಪಾದ್ಯನೂ ಆಗುವುದಿಲ್ಲ. ಹೀಗೆ ಪ್ರತಿಪಾದ್ಯ-ಪ್ರತಿಪಾದಕಭಾವರೂಪವಾದ ಸಂಬಂಧವನ್ನು ಕೂಡ ಮಾಯಾವಾದಿಗಳಿಗೆ ಸಮರ್ಥಿಸಲು ಸಾಧ್ಯವಿಲ್ಲ.

### ನಿರ್ವಿಷಯನಾದ ಬ್ರಹ್ಮ ಶಾಸ್ತ್ರವೇದ್ಯನಾಗಲಾರ

**तत्वप्रदीपः – ब्रह्मणोऽविषयत्वमनपनोद्यैव प्रतिपादयति शास्त्रमिति च विरुद्धम् । वन्ध्यात्वमनपनोद्यैव मातुर्जातः पुत्र इतिवत् ।**

ಮಾಯಾವಾದಿಗಳು - ಬ್ರಹ್ಮನು ನಿರ್ವಿಷಯನಾದ್ದರಿಂದ ಶಾಸ್ತ್ರಕ್ಕೆ ವಿಷಯನಾಗು-ವುದಿಲ್ಲವೆಂಬುದು ಸರಿ. ಇದಕ್ಕೆ ಚ್ಯುತಿ ಬಾರದಂತೆ ಶಾಸ್ತ್ರದಿಂದ ಬ್ರಹ್ಮನು ಪ್ರತಿಪಾದ್ಯನಾಗುತ್ತಾನೆ. ಆದ್ದರಿಂದ ವಿಷಯವಿಲ್ಲವೆಂಬ ಆಕ್ಷೇಪವು ನಮ್ಮನ್ನು ತಟ್ಟುವುದಿಲ್ಲ.

ತತ್ವವಾದಿಗಳು - ಮಾಯಾವಾದಿಗಳ ಈ ಮಾತು ಸ್ವವ್ಯಾಹತಿಗೆ ಉತ್ತಮ ನಿದರ್ಶನವಾಗಿದೆ. 'ಬಂಜೆತನಕ್ಕೆ ಚ್ಯುತಿ ಬಾರದಂತೆ ತಾಯಿಯಲ್ಲಿ ಮಗನು ಹುಟ್ಟಿದನು' ಎಂಬ ಮಾತಿನಂತೆ ಮಾಯಾವಾದಿಗಳು ನಿರ್ವಿಷಯನಾಗಿದ್ದರೂ ಶಾಸ್ತ್ರದಿಂದ ಬ್ರಹ್ಮನು ಪ್ರತಿಪಾದ್ಯನಾಗುತ್ತಾನೆಂದು ಹೇಳುತ್ತಿದ್ದಾರೆ.

### ಸರ್ವಶಬ್ದವಾಚ್ಯನಿಗೆ ಲಕ್ಷಣಾ ಕೂಡದು

**ತत्वप्रदीपः – न चाविषयस्य लक्ष्यत्वम् । वाच्यस्यैव लक्ष्यत्वादिति वक्ष्यत्याचार्यः ।**

ಮಾಯಾವಾದಿಗಳು - ಬ್ರಹ್ಮನು ನಿರ್ವಿಷಯನಾಗಿದ್ದಾನೆಂದರೆ ಶಕ್ತಿವೃತ್ತಿಯಿಂದ ಶಾಸ್ತ್ರಪ್ರತಿಪಾದ್ಯನಲ್ಲ ಎಂದರ್ಥ. ಶಕ್ತಿವೃತ್ತಿಯಿಂದ ಪ್ರತಿಪಾದ್ಯನಾಗದಿದ್ದರೂ ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯನಾಗುತ್ತಾನೆ. ಹೀಗೆ ಹೇಳಿದರೆ ಏನು ತಪ್ಪು ?

ತತ್ವವಾದಿಗಳು - ನೀವು ಲಕ್ಷಣಾವೃತ್ತಿಯನ್ನು ಒಪ್ಪಬೇಕೆಂದರೆ ಶಕ್ತಿವೃತ್ತಿಯನ್ನು ಒಪ್ಪುವುದು ಅನಿವಾರ್ಯ. ಈ ಅಂಶವನ್ನು ಈಕ್ಷತ್ಯಧಿಕರಣದಲ್ಲಿ ಶ್ರೀಮದಾಚಾರ್ಯರು ಸಮರ್ಥಿಸು-ವವರಿದ್ದಾರೆ.

### ತಿಳಿಯಲೇ ಬೇಕಾದ ವಸ್ತುವಿಗೆ ಶಾಸ್ತ್ರಗಳು ಬೇಕು

**तत्वप्रदीपः – न च शारीरः शास्त्रस्य विषयः । प्रमाणान्तर-सिद्धत्वाद्धेयत्वाच्च । शारीरत्वमेव हेयं न तद्गतचैतन्यमिति चेन्न । तद्गतत्वस्यापि हेयत्वात् । चैतन्यं त्वविषय इत्युक्तम् ।**

ಮಾಯಾವಾದಿಗಳು - ಬ್ರಹ್ಮನು ಶಾಸ್ತ್ರಕ್ಕೆ ವಿಷಯನಾಗುವುದು ಬೇಡ; ಶಾರೀರನಾದ ಜೀವನು ಶಾಸ್ತ್ರಕ್ಕೆ ವಿಷಯನಾಗುತ್ತಾನೆ.

ತತ್ವವಾದಿಗಳು - ಇದೂ ಸಹ ಅಸಾಧುವಾಗಿದೆ. ಶಾರೀರನಾದ ಜೀವನು 'ಅಹಂ' ಎಂಬ ಅನುಭವಪ್ರಮಾಣದಿಂದಲೇ ಸಿದ್ಧನಾಗಿರುವಾಗ ಅದಕ್ಕೋಸ್ಕರ ಶಾಸ್ತ್ರಗಳು ಹೊರಡುವುದು ವ್ಯರ್ಥ. ಮತ್ತು ಶಾರೀರನಾದ ಜೀವನ ಬಗ್ಗೆ ತಿಳಿಯುವುದು ಹೇಯವಾಗಿದೆ. (ವ್ಯರ್ಥವಾಗಿದೆ)

ಮಾಯಾವಾದಿಗಳು - ಶಾರೀರನಾದ ಜೀವನು ಹೇಯನಾಗಿದ್ದಾನೆ. ಆದರೆ ತದ್‌ಗತವಾದ ಚೈತನ್ಯವು ಶಾಸ್ತ್ರಪ್ರತಿಪಾದ್ಯವೆಂದು ಹೇಳುತ್ತೇವೆ.

ತತ್ವವಾದಿಗಳು - ಶಾರೀರನಾದ ಚೈತನ್ಯವೂ ಕೂಡ ಹೇಯವೇ ಆಗಿದೆ. ಮತ್ತು ಆ ಚೈತನ್ಯವು ವಿಷಯವಾಗುವುದಿಲ್ಲವೆಂದು ಸ್ವತಃ ಮಾಯಾವಾದಿಗಳಾದ ನೀವು ಹೇಳಿದ್ದೀರಿ.

### ಅಸ್ತಿತ್ವ ಪಡೆಯದ ಐಕ್ಯಕ್ಕಾಗಿ ಶಾಸ್ತ್ರವೇಕೆ ?

**तत्वप्रदीपः – ''आत्मैकत्वविद्याप्रतिपत्तये'' इति तदुक्तत्वादैक्यं शास्त्रस्य विषय इति चेत् तदप्यसारम् । जीवब्रह्मैक्यस्यानिरूप्यत्वात् ।**

'ಆತ್ಮೈಕತ್ವವಿದ್ಯಾಪ್ರತಿಪತ್ತಯೇ' 'ಆತ್ಮೈಕ್ಯಜ್ಞಾನಕ್ಕೋಸ್ಕರ ಶಾಸ್ತ್ರಗಳು ಹೊರಡುತ್ತವೆ' ಎಂದು ನಾವು ಹೇಳುವುದರಿಂದ ಐಕ್ಯವು ಶಾಸ್ತ್ರಕ್ಕೆ ವಿಷಯವಾಗುತ್ತದೆ. ಬ್ರಹ್ಮನು ಶಾಸ್ತ್ರಕ್ಕೆ ವಿಷಯನಾಗದಿದ್ದರೂ ಐಕ್ಯವು ವಿಷಯವಾಗುವುದರಿಂದ ಶಾಸ್ತ್ರಕ್ಕೆ ವಿಷಯವೇ ಇಲ್ಲವೆಂಬ ದೋಷಕ್ಕೆ ಅವಕಾಶವಿಲ್ಲ.

ತತ್ವವಾದಿಗಳು - ಮಾಯಾವಾದಿಗಳ ಈ ವಿಚಾರದಲ್ಲಿ ಹುರುಳೇ ಇಲ್ಲ. ಏಕೆಂದರೆ 'ಜೀವ ಬ್ರಹ್ಮೈಕ್ಯ' ಎಂಬುದನ್ನು ನಿರೂಪಣೆ ಮಾಡಲು ಅವರಿಂದ ಸಾಧ್ಯವೇ ಇಲ್ಲ.

### ಐಕ್ಯದ ಅರಿವಿಲ್ಲದ ಐಕ್ಯವಾದಿಗಳಿವರು

**तत्वप्रदीपः – तत् किं तद्वतो भिन्नमुताभिन्नम् ? भिन्नं चेत् सत्यं मिथ्या वा । सत्यत्वेऽद्वैतहानिः । मिथ्यात्वे भेदस्य सत्यता स्यात् । अभिन्नं चेत् जीवत्वे ब्रह्मत्वेऽपि स्वयं प्रकाशत्वेन नित्यसिद्धमिति नोपदेष्टव्यम् ।**

ಐಕ್ಯವು ಜೀವ ಹಾಗೂ ಬ್ರಹ್ಮರಿಗಿಂತ ಭಿನ್ನವಾಗಿದೆಯೋ ಅಥವಾ ಅಭಿನ್ನವಾಗಿದೆಯೋ ? ಭಿನ್ನವೆಂದು ಹೇಳಿದರೆ ಸತ್ಯವೋ, ಮಿಥ್ಯಾವೋ ? ಸತ್ಯವೆಂದರೆ ಬ್ರಹ್ಮ ಮಾತ್ರ ಸತ್ಯವೆಂಬ ಅದ್ವೈತಕ್ಕೆ ಹಾನಿ ಬರುತ್ತದೆ. ಮಿಥ್ಯಾಭೂತವೆಂದರೆ ಐಕ್ಯವು ಸುಳ್ಳಾದ್ದರಿಂದ ಭೇದವು ಸತ್ಯವಾಗುತ್ತದೆ. ಜೀವಬ್ರಹ್ಮರಿಗಿಂತ ಅಭಿನ್ನವೆಂದರೆ ಜೀವ ಹಾಗೂ ಬ್ರಹ್ಮರು ಸ್ವಯಂಪ್ರಕಾಶರಾದ್ದರಿಂದ ನಿತ್ಯಸಿದ್ಧರಾಗಿದ್ದಾರೆ. ಬ್ರಹ್ಮ ಸ್ವರೂಪವಾದ ಐಕ್ಯವೂ ಕೂಡ ನಿತ್ಯಸಿದ್ಧವೇ ಆಗುತ್ತದೆ. ಇದನ್ನು ಉಪದೇಶಿಸಲು ಶಾಸ್ತ್ರಗಳು ಹೊರಡುವುದು ಅನಾವಶ್ಯಕ.

ಅಜ್ಞಾನಾಸಂಭವಾದೇವ ತನ್‌ಮತಮಖಿಲಮಪಾಕೃತಮ್

**तत्वप्रदीपः – अज्ञानं तु तत्पक्षे स्वयं प्रकाशस्य कस्मिंश्च न सम्भवतीति भावः ।**

ಅಜ್ಞಾನವಿರುವುದರಿಂದ ಐಕ್ಯವು ಜೀವ ಹಾಗೂ ಬ್ರಹ್ಮ ಸ್ವರೂಪವಾದರೂ ಶಾಸ್ತ್ರಪ್ರತಿಪಾದ್ಯವಾಗಬಹುದೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಏಕೆಂದರೆ ಮಾಯಾವಾದಿಗಳ ಪಕ್ಷದಲ್ಲಿ ಅಜ್ಞಾನವನ್ನು ಕೂಡಿಸಲು ಸಾಧ್ಯವೇ ಇಲ್ಲ. ಸ್ವಯಂ ಪ್ರಕಾಶನಾದ ಬ್ರಹ್ಮನಲ್ಲಿಯೂ ಅಜ್ಞಾನವನ್ನು ಅವರಿಂದ ಹೇಳಲಾಗದು. ಸ್ವಯಂ ಪ್ರಕಾಶನಾದ ಜೀವನಲ್ಲಿಯೂ ಅಜ್ಞಾನವನ್ನು ಅವರಿಂದ ಕೂಡಿಸಲು ಸಾಧ್ಯವಿಲ್ಲ.

ಅಜ್ಞಾನದ ಅರಿವೂ ಇಲ್ಲದಷ್ಟು ಅಜ್ಞಾನಿಗಳಿವರು

**तत्वप्रदीपः – अत एवाधिकारी दूरतो निरस्तः । ब्रह्मात्मैक्यापरोक्षलक्षणं मोक्षफलमपि प्रत्याख्यातम् । ऐक्याभावादज्ञानाभावाच्च ।**

ಹೀಗೆ ಮಾಯಾವಾದಿಗಳ ಮತದಲ್ಲಿ ಸಂಬಂಧ ಹಾಗೂ ವಿಷಯಗಳನ್ನು ನಿರಾಕರಣೆ ಮಾಡಿದ್ದರಿಂದ ಅಧಿಕಾರಿಯನ್ನು ನಿರಾಕರಣೆ ಮಾಡಿದಂತಾಯಿತು. ಮತ್ತು ಬ್ರಹ್ಮಾತ್ಮೈಕ್ಯದ ಅಪರೋಕ್ಷರೂಪವಾದ ಮೋಕ್ಷವೆಂಬ ಫಲವನ್ನು ಕೂಡ ನಿರಾಕರಣೆ ಮಾಡಿದಂತಾಯಿತು. ಏಕೆಂದರೆ ಐಕ್ಯವನ್ನು ಮತ್ತು ಅಜ್ಞಾನವನ್ನು ಮಾಯಾವಾದಿಗಳಿಂದ ಸಮರ್ಥಿಸಲು ಸಾಧ್ಯವಿಲ್ಲ.

ಶ್ರೇಯಸ್ಕಾಮರೆ ! ಮಾಯಾವಾದವನ್ನು ಎಂದೂ ಹೊಗಳಬೇಡಿ

**तत्वप्रदीपः – एवमधिकारिविषयप्रयोजनाद्यभावान्न तत्पक्षः श्रेयोऽर्थिभिः श्लाघनीयः ।**

ಹೀಗೆ ಅಧಿಕಾರಿ ವಿಷಯ ಪ್ರಯೋಜಗಳಿಲ್ಲದ ಕಾರಣ ಶ್ರೇಯಸ್ಸನ್ನು ಅಪೇಕ್ಷಿಸುವ ಸಾಧಕರು ಮಾಯಾವಾದಿಗಳ ಪಕ್ಷವನ್ನು ಪ್ರಶಂಸೆ ಮಾಡಬಾರದು.

ಶ್ರೀಮದಾಚಾರ್ಯರ ಪಕ್ಷವೇ ಅತ್ಯಂತ ಶ್ರೇಯಸ್ಕರ

**तत्वप्रदीपः – नारायणस्य सर्वोत्तमतया सर्वश्रुतिवाच्यत्वात् भिन्नानां च जीवानां स्वयं प्रकाशत्वेऽपि सविशेषत्वेन तत्राज्ञानसम्भवात् स्वयोग्यतानुरोधेनाधिकारादिसम्भवादत्रायमेव पक्षः श्रेयान् ।**

ನಾರಾಯಣನೇ ಸರ್ವೋತ್ತಮನಾಗಿದ್ದಾನೆಂದು ಸಕಲ ಶ್ರುತಿಸ್ಮೃತಿಗಳು ಘೋಷಣೆ ಮಾಡುತ್ತವೆ. ನಾರಾಯಣನಿಗಿಂತ ಭಿನ್ನರಾದ ಸಕಲ ಜೀವರು ಸ್ವಯಂ ಪ್ರಕಾಶರಾದರೂ ವಿಶೇಷವನ್ನು ಒಪ್ಪುವುದರಿಂದ ಅವರಲ್ಲಿ ಅಜ್ಞಾನವು ಯುಕ್ತವಾಗುತ್ತದೆ. ಅಜ್ಞಾನವು ಯುಕ್ತವಾಗುವುದರಿಂದ ಅಜ್ಞಾನಿಯು ಅಧಿಕಾರಿಯಾಗುತ್ತಾನೆ. ಅವರವರ ಯೋಗ್ಯತೆಗೆ ಅನುಗುಣವಾದ ತಾರತಮ್ಯಕ್ಕೆ ಅನುಸಾರಿಯಾಗಿ ಅಧಿಕಾರಿಗಳು ಇರುತ್ತಾರೆ. ಆದ್ದರಿಂದ ಶ್ರೀಮದಾಚಾರ್ಯರ ಪಕ್ಷವೇ ಶ್ರೇಯಸ್ಕರವಾಗಿದೆ.

ಮಂಗಳಪದ್ಯ ಶಾಸ್ತ್ರದ ಸಂಕ್ಷೇಪಕಥನರೂಪವೂ ಹೌದು

**तत्वप्रदीपः – समन्वयाविरोधसाधनफलानि चाध्यायचतुष्टयेन प्रतिपादनीयान्यनेन श्लोकेन सूचयति ।**

ಸಮನ್ವಯಾಧ್ಯಾಯ, ಅವಿರೋಧಾಧ್ಯಾಯ, ಸಾಧನಾಧ್ಯಾಯ, ಫಲಾಧ್ಯಾಯಗಳು ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಇರುತ್ತವೆ. ಈ ನಾಕು ಅಧ್ಯಾಯಗಳು ಪ್ರತಿಪಾದನೆ ಮಾಡುವ ವಿಷಯವನ್ನು ಶ್ರೀಮದಾಚಾರ್ಯರು ಮಂಗಳ ಶ್ಲೋಕದಿಂದಲೇ ಸೂಚನೆ ಮಾಡುತ್ತಿದ್ದಾರೆ.

ಪ್ರಥಮಾಧ್ಯಾಯದಲ್ಲಿ ಏನಿದೆ ?

**तत्वप्रदीपः – श्रुतीनां ब्रह्मवाचकत्वेन सम्यगन्वयः समन्वयः । स च वाक्यपदादीनां प्रत्येकमस्ति । तेन चानन्तगुणं ब्रह्म प्रतिपाद्यते ।**

ಪ್ರಥಮಾಧ್ಯಾಯವು ಸಮನ್ವಯಾಧ್ಯಾಯ ಎಂದು ಕರೆಸಿಕೊಳ್ಳುತ್ತದೆ. ಸಮನ್ವಯ ಎಂದರೆ ಶ್ರುತಿಗಳು ಬ್ರಹ್ಮವಾಚಕಗಳಾಗಿ ಸಮೀಚೀನವಾದ ಅನ್ವಯವನ್ನು ಹೊಂದುತ್ತವೆ ಎಂದರ್ಥ. ಈ

ಸಮನ್ವಯವು ವಾಕ್ಯ, ಪದ, ಅಕ್ಷರಾದಿ ಕ್ರಮದಿಂದ ಪ್ರತ್ಯೇಕ ಪ್ರತ್ಯೇಕವಾಗಿವೆ. ಇವುಗಳ ಸಮನ್ವಯದಿಂದ ನಾರಾಯಣನು ಅನಂತಗುಣ ಪರಿಪೂರ್ಣನಾಗಿದ್ದಾನೆಂದು ಶಾಸ್ತ್ರಪ್ರತಿಪಾದ್ಯ-ನಾಗಿದ್ದಾನೆ.

ವಿಶೇಷ ವಿಚಾರ - ಸಮನ್ವಯವು ಬಹುಬಗೆಯಲ್ಲಿದೆ. ೧. ಸಮಸ್ತವೇದ ಸಮನ್ವಯ ೨. ಪ್ರಕರಣಸಮನ್ವಯ ೩. ವಾಕ್ಯಸಮನ್ವಯ. ೪. ಪದಸಮನ್ವಯ. ೫. ಅಕ್ಷರಸಮನ್ವಯ ಇತ್ಯಾದಿಯಾಗಿ. ಸಮಗ್ರ ಪ್ರಕರಣದಲ್ಲಿರುವ ವಾಕ್ಯಗಳು ಇಂದ್ರಾದಿದೇವತೆಗಳನ್ನು ಪ್ರತಿಪಾದನೆ ಮಾಡುತ್ತದೆ. ಪ್ರಕರಣವು ಸಂಪೂರ್ಣವಾಗಿ ವಿಷ್ಣುಪರವಾಗಿರುತ್ತದೆ. ವಾಕ್ಯವು ವಿಷ್ಣುವನ್ನು ಪ್ರತಿಪಾದನೆ ಮಾಡುವಾಗ ಅದರಲ್ಲಿರುವ ಪದಗಳು ಬೇರೆ ವಿಷಯವನ್ನು ಪ್ರತಿಪಾದನೆ ಮಾಡುತ್ತವೆ. ಪದಗಳು ವಿಷ್ಣುವನ್ನು ಪ್ರತಿಪಾದನೆ ಮಾಡುವಾಗ ಅಕ್ಷರಗಳು ಬೇರೆ ವಿಷಯವನ್ನು ಪ್ರತಿಪಾದನೆ ಮಾಡತ್ತವೆ. ಅಕ್ಷರಗಳು ವಿಷ್ಣುವನ್ನು ಪ್ರತಿಪಾದನೆ ಮಾಡುವಾಗ ಸಮಗ್ರ ಶಬ್ದಪ್ರಪಂಚವು ವಿಷ್ಣುಪರವೆಂದು ಸಿದ್ಧವಾಗುತ್ತದೆ. ಹೀಗೆ ಸಮನ್ವಯವು ಬಹುಬಗೆಯಲ್ಲಿ ಇರುತ್ತದೆ. ಈ ಎಲ್ಲಾ ಬಗೆಯ ಸಮನ್ವಯವನ್ನು ಪ್ರಥಮಾಧ್ಯಾಯದಲ್ಲಿ ಮಾಡಿದ್ದಾರೆಂದು ತಿಳಿಯಬೇಕು. ಹೀಗೆ ಸಮನ್ವಯ ಮಾಡಿದಾಗ ಮಾತ್ರ ಪರಮಾತ್ಮನು ಅನಂತಗುಣಪರಿಪೂರ್ಣ-ನಾಗುತ್ತಾನೆಂದು ಸಿದ್ಧವಾಗುತ್ತದೆ.

ದ್ವಿತೀಯಾಧ್ಯಾಯದಲ್ಲಿ ಏನಿದೆ ?

**तत्वप्रदीपः – तत्र च प्रमाणाविरोधं साधयति द्वितीयाध्यये । एवं वस्तुनिर्णयार्थमध्यायद्वयम् ।**

ಪ್ರಥಮಾಧ್ಯಾಯದಲ್ಲಿ ಮಾಡಿದ ಸಮಗ್ರ ಶಾಸ್ತ್ರಸಮನ್ವಯಕ್ಕೆ ಯಾವುದೇ ಪ್ರಮಾಣಗಳ ವಿರೋಧವಿಲ್ಲವೆಂಬ ಸಾಧನೆಗಾಗಿ ಎರಡನೆಯ ಅಧ್ಯಾಯ ಹೊರಟಿದೆ. ವಿರೋಧವನ್ನು ಪರಿಹರಿಸುವ ಕಾರಣ ಇದಕ್ಕೆ 'ಅವಿರೋಧಾಧ್ಯಾಯ' ಎಂದು ಹೆಸರು.

ಹೀಗೆ ಪ್ರಥಮಾಧ್ಯಾಯವು ಗುಣಪೂರ್ಣನಾದ ಬ್ರಹ್ಮ ಎಂಬ ವಸ್ತುವನ್ನು ಪ್ರತಿಪಾದನೆ ಮಾಡುತ್ತದೆ. ಅದರ ನಿರ್ಣಯವನ್ನು ಎರಡನೆಯ ಅಧ್ಯಾಯ ಮಾಡುತ್ತದೆ. ಹೀಗೆ ವಸ್ತುನಿರ್ಣಯಕ್ಕೋಸ್ಕರ ಮೊದಲಿನ ಎರಡು ಅಧ್ಯಾಯಗಳು ಹೊರಟಿವೆ.

ತೃತೀಯಾಧ್ಯಾಯದಲ್ಲಿ ಏನಿದೆ ?

**तत्वप्रदीपः – तत्र पुरुषेण किं कर्तव्यमित्याकाङ्क्षायां दृढनिर्णीतपूर्णगुण-ब्रह्मप्राप्तिसाधनमधिकारिणो विधीयते तृतीये ।**

ವಸ್ತು ನಿರ್ಣಯವಾದ ಮೇಲೆ ಸಾಧಕನಾದ ಅಧಿಕಾರಿಯು ಏನು ಮಾಡಬೇಕು ? ಎಂಬ ಆಕಾಂಕ್ಷೆಯನ್ನು ಹೊಂದುತ್ತಾನೆ. ಗುಣಪೂರ್ಣನಾದ ಬ್ರಹ್ಮನ ಬಗ್ಗೆ ದೃಢವಾದ ತತ್ತ್ವ ನಿಶ್ಚಯವನ್ನು ಹೊಂದಿದ ಅಧಿಕಾರಿಯು ಯಾವ ಸಾಧನೆಯನ್ನು ಅನುಷ್ಠಾನ ಮಾಡಬೇಕೋ ಆ ಸಾಧನ ಸಂಪತ್ತುಗಳ ಬಗ್ಗೆ ನಿರೂಪಣೆ ಮಾಡಲು ಮೂರನೆಯ ಅಧ್ಯಾಯವು ಹೊರಟಿದೆ. ಆದ್ದರಿಂದ ಇದಕ್ಕೆ 'ಸಾಧನಾಧ್ಯಾಯ' ಎಂದು ಹೆಸರು.

ಚತುರ್ಥಾಧ್ಯಾಯದಲ್ಲಿ ಏನಿದೆ ?

**तत्वप्रदीपः – चतुर्थे तु तद्दर्शनात् तस्य संसारमोक्ष आनन्दभोगश्च फलम् ।**

ಬ್ರಹ್ಮನ ಬಗ್ಗೆ ಸಂಪೂರ್ಣವಾಗಿ ದೃಢವಾದ ತತ್ತ್ವಜ್ಞಾನವನ್ನು ಪಡೆದು ಸಾಧನಾನುಷ್ಠಾನವನ್ನು ಮಾಡಿದ ಅಧಿಕಾರಿಗೆ ಬ್ರಹ್ಮನ ದರ್ಶನವಾಗುತ್ತದೆ. ಸಂಸಾರದಿಂದ ಮುಕ್ತನಾಗಿ ಅಮಿತವಾದ ಆನಂದಭೋಗವನ್ನು ಅನುಭವಿಸುತ್ತಾನೆ. ಈ ವಿಷಯವನ್ನು ತಿಳಿಸಲು ನಾಕನೆಯ ಅಧ್ಯಾಯ ಮೊರಟಿದೆ. ಆದ್ದರಿಂದ ಇದಕ್ಕೆ 'ಫಲಾಧ್ಯಾಯ' ಎಂದು ಹೆಸರು.

ಸಾಧಕನಿಗೆ ಸಂದೇಶ-ಮಂಗಳಪದ್ಯ

**तत्वप्रदीपः – तत्र सर्वगुणसम्पन्नो नारायणो निर्दोषः समाधिकरहितोऽत एवावश्यं द्रष्टव्यः । दृष्ट्वा च तं परमसुखं विन्दते पुरुष इत्यभिप्रायः ।**

ಸಕಲಗುಣಪರಿಪೂರ್ಣನಾಗಿರುವ ನಾರಾಯಣನು ನಿರ್ದುಷ್ಟನಾಗಿದ್ದಾನೆ. ತನಗೆ ಸಮಾನವಾದ ಅಥವಾ ಅಧಿಕನಾದ ಮತ್ತೊಬ್ಬ ವ್ಯಕ್ತಿಯಿಂದ ರಹಿತನಾಗಿದ್ದಾನೆ. ಆದ್ದರಿಂದ ಈ ನಾರಾಯಣನ ಬಗ್ಗೆ ಅವಶ್ಯವಾಗಿ ತಿಳಿಯಬೇಕು. ಮತ್ತು ಅವನ ದರ್ಶನವನ್ನು ಪಡೆಯಬೇಕು. ಯಾವ ಸಾಧಕನು ನಾರಾಯಣನ ದರ್ಶನವನ್ನು ಪಡೆಯುತ್ತಾನೋ ಅವನು ಪರಮಸುಖವನ್ನು ಖಂಡಿತವಾಗಿಯೂ

ಪಡೆಯುತ್ತಾನೆ. ಇಷ್ಟು ಅಭಿಪ್ರಾಯವನ್ನು ಮಂಗಳ ಶ್ಲೋಕದಿಂದ ಶ್ರೀಮದಾಚಾರ್ಯರು ತಿಳಿಸಿದ್ದಾರೆ.

'ನಾರಾಯಣ'ನೇ ಸಕಲಶಾಸ್ತ್ರಪ್ರತಿಪಾದ್ಯ

**तत्वप्रदीपः – नारायणपदेन चैतत्समन्वयाद्यर्थचतुष्टयं विशेषणपद-चतुष्टयोपदिष्टमभिप्रैति ।**

ನಾರಾಯಣ ಶಬ್ದವನ್ನು ನಿಷ್ಪತ್ತಿ ಮಾಡಿದಾಗ ನಾಕು ಅಧ್ಯಾಯಗಳ ಅರ್ಥಗಳು ತೆರೆದುಕೊಳ್ಳುತ್ತವೆ. ಅದು ಹೀಗೆ - 'ಅರ'ಶಬ್ದಕ್ಕೆ ದೋಷವೆಂದರ್ಥ. ದೋಷಗಳಿಗೆ ವಿರುದ್ಧವಾದ ಗುಣಗಳು 'ನಾರಾ' ಎಂದು ಕರೆಸಿಕೊಳ್ಳುತ್ತವೆ. ಆ ಗುಣಗಳಿಗೆ ಆಶ್ರಯನಾದ್ದರಿಂದ ನಾರಾಯಣ ಎಂದು ಕರೆಸಿಕೊಳ್ಳುತ್ತಾನೆ. ಹೀಗೆ ನಾರಾಯಣ ಎಂಬ ಶಬ್ದವು ಸಕಲಗುಣಪರಿಪೂರ್ಣ ಎಂಬರ್ಥವನ್ನು ಹೇಳುವ ಮೂಲಕ ಪ್ರಥಮಾಧ್ಯಾಯದ ಅರ್ಥವನ್ನು ಹೇಳಿದೆ. ಅಥವಾ ಗುಣಗಳ ಜೊತೆ ಶಾಸ್ತ್ರಪ್ರತಿಪಾದ್ಯನಾಗಿರುವುದರಿಂದ ನಾರಾಯಣ ಎಂದು ಕರೆಸಿಕೊಳ್ಳುತ್ತಾನೆ. ಆದ್ದರಿಂದ ನಾರಾಯಣ ಶಬ್ದದಿಂದ ಗುಣೋದೀರ್ಣತ್ವವನ್ನು ಹೇಳಿದ್ದಾರೆ ಉದೀರ್ಣ ಶಬ್ದಕ್ಕೆ ಪರಿಪೂರ್ಣ ಎಂದರ್ಥ. ಉತ್ಕೃಷ್ಟನಾಗಿದ್ದಾನೆ ಎಂಬರ್ಥದಲ್ಲಿ ಶಬ್ದವು ನಿಷ್ಪನ್ನವಾಗಿದೆ.

ವಿಶೇಷ ವಿಚಾರ - ಭಾಷ್ಯಕಾರರು 'ಗುಣೈಸ್ಸರ್ವೈರುದೀರ್ಣಂ' ಎಂಬುದರಿಂದ ಪ್ರಥಮಾಧ್ಯಾಯದ ಸಾರವನ್ನು 'ದೋಷವರ್ಜಿತಮ್' ಎಂಬುದರಿಂದ ಎರಡನೆಯ ಅಧ್ಯಾಯದ ಸಾರವನ್ನು 'ಜ್ಞೇಯಂ' ಎಂಬುದರಿಂದ, ಮೂರನೆಯ ಅಧ್ಯಾಯದ ಸಾರವನ್ನು 'ಗಮ್ಯಂ' ಎಂಬುದರಿಂದ ನಾಕನೆಯ ಅಧ್ಯಾಯದ ಸಾರವನ್ನು ಮಂಗಳ ಶ್ಲೋಕದಲ್ಲಿ ಹೇಳಿದರು. ಈ ನಾಕು ಅಧ್ಯಾಯಗಳ ಸಾರವನ್ನು ಹೇಳುವ ನಾಕು ವಿಶೇಷಣಗಳ ಅರ್ಥವನ್ನೇ 'ನಾರಾಯಣ' ಎಂಬ ಒಂದೇ ಪದವು ಹೇಳುತ್ತಿದೆ ಎಂದು ಬಲು ಸುಂದರವಾಗಿ ಪಂಡಿತಾಚಾರ್ಯರು ವ್ಯಾಖ್ಯಾನ ಮಾಡುತ್ತಿದ್ದಾರೆ. ಹೀಗೆ ವ್ಯಾಖ್ಯಾನ ಮಾಡುವುದರಿಂದ ಬ್ರಹ್ಮಸೂತ್ರಗಳಿಂದ ಪ್ರತಿಪಾದ್ಯನಾದವನು ನಾರಾಯಣನೇ ಹೊರತು ಇತರರಲ್ಲ ಎಂಬುದು ಸ್ಪಷ್ಟವಾಗುತ್ತದೆ.

'ನಾರಾಯಣ' ಎಂದರೆ ಸಕಲಗುಣಗಳ ಗಣಿ

**तत्वप्रदीपः – अराणां दोषाणां विरुद्धत्वान्नारा गुणाः, तेषामयनत्वात्तैः सहेयत इति वा नारायणः । अतो नारायणशब्देन गुणोदीर्णत्वं वक्ति । उदीर्ण उदार उत्कृष्टः पूर्ण इत्यर्थः ।**

'ಅರವಿರುದ್ಧಾಃ ನಾರಾಃ ತೇಷಾಂ ಅಯನಃ ನಾರಾಯಣಃ' ಎಂಬ ನಿಷ್ಪತ್ತಿಯನ್ನು ಮಾಡಿದಾಗ ಗುಣಗಳಿಗೆ ಆಶ್ರಯನೆಂಬ ಅರ್ಥವು ತಿಳಿಯುತ್ತದೆ. (ಈ ನಿಷ್ಪತ್ತಿಯು ಪ್ರಸಿದ್ಧವಾದದ್ದು. ಆದರೆ ಪಂಡಿತಾಚಾರ್ಯರು ಮತ್ತೊಂದು ವಿಶಿಷ್ಟವಾದ ನಿಷ್ಪತ್ತಿಯನ್ನು ಮಾಡಿದ್ದಾರೆ.) 'ನಾರೈಃ ಸಃ ಈಯತೇತಿ ನಾರಾಯಣಃ' 'ಪರಮಾತ್ಮನು ಶಾಸ್ತ್ರಗಳಿಂದ ಗುಣಗಳ ಜೊತೆಗೇ ಪ್ರತಿಪಾದ್ಯನಾಗಿದ್ದಾನೆ' ನಿರ್ಗುಣನಾಗಿ ಪ್ರತಿಪಾದ್ಯನಾಗಿಲ್ಲ ಎಂದಭಿಪ್ರಾಯ. ಆದ್ದರಿಂದ ಭಾಷ್ಯಕಾರರು ನಾರಾಯಣ ಶಬ್ದದಿಂದ ಗುಣೋದೀರ್ಣತ್ವವನ್ನು ಹೇಳಿರುತ್ತಾರೆ. 'ಉದೀರ್ಣ' ಎಂಬ ಪದಕ್ಕೆ ಉದಾರ, ಉತ್ಕೃಷ್ಟ, ಪೂರ್ಣ ಎಂದರ್ಥ.

'ನಾರಾಯಣ' ಎಂದರೆ ದೋಷಗಂಧ ವಿಧುರ

**तत्वप्रदीपः – अराणामयनं न भवतीति योजनायां दोषवर्जितत्वम् ।**

'ದೋಷವರ್ಜಿತಂ' ಎಂಬ ಪದದ ಅರ್ಥವನ್ನೂ ಸಹ ನಾರಾಯಣಪದ ಹೇಳುತ್ತಿದೆ. ದೋಷಗಳಿಗೆ ಆಶ್ರಯನಾದವನು ಅರಾಯಣ. ಪರಮಾತ್ಮನು ದೋಷಗಳಿಗೆ ಆಶ್ರಯನಲ್ಲದ ಕಾರಣ ನಾರಾಯಣ ಎಂದು ಕರೆಸಿಕೊಳ್ಳುತ್ತಾನೆ. 'ಅರಾಣಾಂ ಅಯನಃ ಅರಾಯಣಃ, ಅರಾಯಣಃ ನ ಭವತೀತಿ'' = 'ನಾರಾಯಣಃ' ಎಂಬ ನಿಷ್ಪತ್ತಿಯನ್ನು ತಿಳಿಯಬೇಕು.

'ನಾರಾಯಣ' ಎಂದರೆ ತತ್ವಜ್ಞಾನದ ತವರು

**तत्वप्रदीपः – नारं चेतनविशेषसम्बन्धित्वाज्ज्ञानं, तेन नारेण ईयत इति च नारायणत्वम् । ज्ञानविषयत्वमेव च ज्ञेयत्वम् ।**

'ಜ್ಞೇಯಂ' ಎಂಬ ಮೂರನೆಯ ಅಧ್ಯಾಯದ ಸಾರವನ್ನು 'ನಾರಾಯಣಃ' ಎಂಬ ಪದವು ಹೇಳುತ್ತದೆ. ಅದು ಹೀಗೆ - ನರರಿಗೆ ಸಂಬಂಧಪಟ್ಟ ಜ್ಞಾನವು 'ನಾರ' ಎಂದು ಕರೆಸಿಕೊಳ್ಳುತ್ತದೆ. ಮೋಕ್ಷಸಾಧನವಾದ ಜ್ಞಾನದಿಂದ ಹೊಂದಲು ಅರ್ಹನಾಗಿರುವ ಕಾರಣ ಪರಮಾತ್ಮನು 'ನಾರಾಯಣ' ಎಂದು ಕರೆಸಿಕೊಳ್ಳುತ್ತಾನೆ. ಜ್ಞಾನಕ್ಕೆ ವಿಷಯವಾದದ್ದೇ 'ಜ್ಞೇಯ' ಎನ್ನುತ್ತಾರೆ. 'ನರಸಂಬಂಧಿತ್ವಾತ್ ನಾರಾಃ ನಾರೇಣ ಈಯತೇ ಇತಿ ನಾರಾಯಣಃ' ಎಂಬ ನಿಷ್ಪತ್ತಿಯನ್ನು ತಿಳಿಯಬೇಕು.

ನಾರಾಯಣ ಎಂದರೆ ಸಾಧಕರ ಸುಖದ ತಾಣ

**तत्वप्रदीपः – न रीयन्त इति नरा मुक्ताः, तेषां समुदायो नारः, तेनेयत इति च नारायणत्वम् । तदेव गम्यत्वं च । एवम्भूतः समुद्रशायी नारायणः ।**

ನಾಕನೆಯ ಅಧ್ಯಾಯದ ಸಾರವನ್ನು ಹೇಳುವ 'ಗಮ್ಯಮ್' ಎಂಬ ಪದದ ಅರ್ಥವನ್ನು ನಾರಾಯಣ ಶಬ್ದವು ಹೀಗೆ ಹೇಳುತ್ತಿದೆ - ನಾಶವಿಲ್ಲದ ಮುಕ್ತರು ನರರು ಎಂದು ಕರೆಸಿಕೊಳ್ಳುತ್ತಾರೆ. ಮುಕ್ತರ ಸಮುದಾಯಕ್ಕೆ 'ನಾರಾಃ' ಎನ್ನುತ್ತಾರೆ. ಅವರಿಂದ ಗಮ್ಯನಾಗಿರುವ ಕಾರಣ ಪರಮಾತ್ಮನು ನಾರಾಯಣನಾಗಿದ್ದಾನೆ. 'ನ ರೀಯಂತೇ ಇತಿ ನರಾಃ ನರಾಣಾಂ ಸಮುದಾಯಃ ನಾರಃ ನಾರೇಣ ಈಯತೇ ಇತಿ ನಾರಾಯಣಃ' ಎಂಬ ನಿಷ್ಪತ್ತಿಯನ್ನು ತಿಳಿಯಬೇಕು.

ಸಕಲಗುಣಪರಿಪೂರ್ಣನಾದ ದೋಷವಿದೂರನಾದ ಜ್ಞಾನಿಜನರಿಂದ ಜ್ಞೇಯನಾದ ಮುಕ್ತರಿಂದ ಗಮ್ಯನಾದ ವ್ಯಕ್ತಿಯು ಬೇರೆ ಯಾರೂ ಅಲ್ಲ ಸಮುದ್ರಶಾಯಿಯಾದ ನಾರಾಯಣನೇ ಆಗಿದ್ದಾನೆ. ಇದನ್ನು ಸಹ ನಾರಾಯಣ ಎಂಬ ಶಬ್ದವೇ ಹೇಳುತ್ತಿದೆ. 'ನಾರ' ಎಂಬ ಶಬ್ದಕ್ಕೆ 'ನೀರು 'ಎಂದರ್ಥ. ನೀರೇ ಆಶ್ರಯವಾಗಿ ಉಳ್ಳವನು (ಸಮುದ್ರಶಾಯಿಯಾದವನು) ನಾರಾಯಣನಾಗಿದ್ದಾನೆ.

ವಾಸುದೇವನು ಪ್ರಥಮಾಧ್ಯಾಯ ಪ್ರತಿಪಾದ್ಯ

**तत्वप्रदीपः – अथ वासुदेवाख्यो गुणोदीर्णशब्दोक्तः सर्ववसनोत्कर्ष-क्रीडाज्ञानादिगुणैरुचत्वात् ।**

ಅಥವಾ 'ನಾರಾಯಣಂ ಗುಣೈಸ್ಸರ್ವೈಃ' ಎಂಬ ಮಂಗಳ ಶ್ಲೋಕವು ಗ್ರಂಥಪ್ರತಿಪಾದ್ಯವಾದ ಭಗವಂತನ ಪಂಚರೂಪಗಳನ್ನು ಸ್ತುತಿ ಮಾಡುತ್ತಿದೆ. ಅದು ಹೀಗೆ - 'ಗುಣೈಸ್ಸರ್ವೈರುದೀರ್ಣಂ' ಎಂಬುದು ವಾಸುದೇವರೂಪಿ ಪರಮಾತ್ಮನನ್ನು ಹೇಳುತ್ತಿದೆ. ಎಲ್ಲೆಡೆ ಇರುವಿಕೆ, ಶ್ರೇಷ್ಠನಾಗಿ ಇರುವಿಕೆ ಕ್ರೀಡೆ, ಜ್ಞಾನ ಮೊದಲಾದ ಗುಣಗಳಿಂದ ಸರ್ವೋತ್ಕೃಷ್ಟನಾದ್ದರಿಂದ ವಾಸುದೇವ-ರೂಪಿಯಾದ ಪರಮಾತ್ಮನು 'ಗುಣೈಸ್ಸರ್ವೈರುದೀರ್ಣಂ' ಎಂಬುದರಿಂದ ಪ್ರತಿಪಾದ್ಯನಾಗಿದ್ದಾನೆ.

> ವಿಶೇಷ ವಿಚಾರ - 'ವಾಸುದೇವ' ಎಂಬ ಪದದ ನಿಷ್ಪತ್ತಿ ಮಾಡಿದಾಗ ಗುಣಪರಿಪೂರ್ಣತ್ವವೆಂಬ ಅರ್ಥವು ತಿಳಿಯುತ್ತದೆ. 'ಸರ್ವತ್ರ ವಸತೀತಿ ವಾಸಃ' ಎಂಬ ನಿಷ್ಪತ್ತಿಯಿಂದ ಎಲ್ಲೆಡೆ ವ್ಯಾಪ್ತನಾಗಿದ್ದಾನೆಂದು 'ವಾಸು' ಎಂಬ ಪದವು ಹೇಳುತ್ತಿದೆ. 'ದೇವ' ಎಂಬ ಪದವು 'ದಿವು' ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ದಿವು ಧಾತುವಿಗೆ ಕ್ರೀಡೆ, ಸರ್ವೋತ್ಕರ್ಷ, ವಿಜಿಗೀಷ ಮೊದಲಾದ ಅನೇಕ ಅರ್ಥಗಳಿವೆ. ಆದ್ದರಿಂದ ಉತ್ಕರ್ಷ, ಕ್ರೀಡಾ, ಜ್ಞಾನ ಮೊದಲಾದ ಗುಣಗಳಿಂದ ಕೂಡಿದ್ದಾನೆಂಬ ಅರ್ಥವನ್ನು ಸೂಚಿಸುತ್ತದೆ. ಅಥವಾ 'ವಸಂತಿ ಸರ್ವೇ ಗುಣಾಃ ಇತಿ ವಾಸುದೇವಃ' ಎಂಬ ನಿಷ್ಪತ್ತಿಯಿಂದ ನೇರವಾಗಿಯೇ ಸಕಲಗುಣಪರಿಪೂರ್ಣತ್ವವು ತಿಳಿಯುತ್ತದೆ.

ಸಂಕರ್ಷಣನು ದ್ವಿತೀಯಾಧ್ಯಾಯ ಪ್ರತಿಪಾದ್ಯ

**तत्वप्रदीपः – सम्यक् दोषकर्षणात् सङ्कर्षणो दोषवर्जित इत्युक्तः ।**

'ದೋಷವರ್ಜಿತಂ' ಎಂಬ ಪದವು ಸಂಕರ್ಷಣರೂಪಿ ಪರಮಾತ್ಮನನ್ನು ಪ್ರತಿಪಾದನೆ ಮಾಡುತ್ತಿದೆ. 'ಸಮ್ಯಕ್ ದೋಷಾನ್ ಕರ್ಷತೀತಿ ಸಂಕರ್ಷಣಃ' ಎಂಬ ನಿಷ್ಪತ್ತಿಯಂತೆ ಎಲ್ಲಾ ದೋಷಗಳನ್ನು ನಾಶ ಮಾಡುವವನಾದ್ದರಿಂದ 'ಸಂಕರ್ಷಣ' ಎಂದು ಕರೆಸಿಕೊಳ್ಳುತ್ತಾನೆ.

ಪ್ರದ್ಯುಮ್ನನು ತೃತೀಯಾಧ್ಯಾಯ ಪ್ರತಿಪಾದ್ಯ

**तत्वप्रदीपः – प्रकृष्टद्युतिमेयत्वात् प्रद्युम्नो ज्ञेयः ।**

ಪ್ರದ್ಯುಮ್ನನು 'ಜ್ಞೇಯಂ' ಎಂಬ ಪದದಿಂದ ಪ್ರತಿಪಾದ್ಯನಾಗಿದ್ದಾನೆ. 'ಪ್ರಕೃಷ್ಟಯಾ ದ್ಯುತ್ಯಾ ಮೀಯತೇ ಇತಿ ಪ್ರದ್ಯುಮ್ನಃ' ಎಂಬ ನಿಷ್ಪತ್ತಿಯಂತೆ ಶಾಸ್ತ್ರಗಳಿಂದ ಉತ್ಕೃಷ್ಟವಾಗಿ ತಿಳಿಯಲ್ಪಡುವ ಕಾರಣ 'ಪ್ರದ್ಯುಮ್ನ' ಎಂದು ಕರೆಯುತ್ತಾರೆ. ಹೀಗೆ ಪ್ರದ್ಯುಮ್ನನು 'ಜ್ಞೇಯ' ಎಂಬ ಪದದಿಂದ ಪ್ರತಿಪಾದ್ಯನಾಗಿದ್ದಾನೆ.

ಅನಿರುದ್ಧನು ಚತುರ್ಥಾಧ್ಯಾಯ ಪ್ರತಿಪಾದ್ಯ

**तत्वप्रदीपः – ज्ञानिनः प्रति प्राप्तिनिरोधरहितत्वादनिरुद्धो गम्यशब्दार्थः। एवं पञ्चमूर्तित्वमपि सूचयति । तथा प्रतिपिपादयिषितत्वादस्मिञ्छास्त्रे ।**

'ಗಮ್ಯ' ಎಂಬ ಪದದಿಂದ ಅನಿರುದ್ಧನು ಪ್ರತಿಪಾದ್ಯನಾಗಿದ್ದಾನೆ. 'ನ ನಿರುದ್ಧಃ ಇತಿ ಅನಿರುದ್ಧಃ' ಎಂಬ ನಿಷ್ಪತ್ತಿಯಂತೆ ಜ್ಞಾನಿಗಳ ಮೋಕ್ಷಕ್ಕೆ ಅಡ್ಡಿಯಾದ ವಿಘ್ನವನ್ನು ಪರಿಹರಿಸುವುದರಿಂದ ಅನಿರುದ್ಧನಾಗಿರುವನು. ಹೀಗೆ ಜ್ಞಾನಿಗಳಿಂದ ಗಮ್ಯನಾಗಿರುವ ಕಾರಣ ಅನಿರುದ್ಧನು 'ಗಮ್ಯ' ಎಂಬ ಪದದಿಂದ ಪ್ರತಿಪಾದ್ಯನಾಗಿದ್ದಾನೆ. 'ನಾರಾಯಣ' ಎಂಬ ಪದದಿಂದ ನಾರಾಯಣರೂಪಿಯಾದ ಪರಮಾತ್ಮನು ಪ್ರತಿಪಾದ್ಯನಾಗಿದ್ದಾನೆ. ಹೀಗೆ ಶಾಸ್ತ್ರಪ್ರತಿಪಾದ್ಯವಾದ ಪಂಚ ಮೂರ್ತಿಗಳನ್ನು ಮಂಗಳಾಚಾರಣೆಯ ಶ್ಲೋಕದಲ್ಲಿ ಸ್ಮರಣೆ ಮಾಡಿ ನಮಸ್ಕಾರವನ್ನು ಮಾಡಿರುತ್ತಾರೆ.

ಭಗವಂತನಿಗೆ ಅನೇಕ ರೂಪಗಳಿರುವಾಗ ಐದು ರೂಪಗಳನ್ನೇ ವಿವಕ್ಷಿಸಲು ಕಾರಣವೇನು ? ಎಂದರೆ ಈ ಶಾಸ್ತ್ರವು ಭಗವಂತನ ಪಂಚಮೂರ್ತಿಗಳನ್ನು ಪ್ರತಿಪಾದನೆ ಮಾಡುವ ಉದ್ದೇಶದಿಂದಲೇ ಹೊರಟಿದೆ.

ವಿಶೇಷ ವಿಚಾರ - ವಾಸುದೇವನು ಪ್ರಥಮಾಧ್ಯಾಯದಿಂದ ಪ್ರತಿಪಾದ್ಯನು, ಸಂಕರ್ಷಣನು ದ್ವಿತೀಯಾಧ್ಯಾಯದಿಂದ ಪ್ರತಿಪಾದ್ಯನು, ಪ್ರದ್ಯುಮ್ನನು ತೃತೀಯಾಧ್ಯಾಯದಿಂದ ಪ್ರತಿಪಾದ್ಯನು, ಅನಿರುದ್ಧನು ಚತುರ್ಥಾಧ್ಯಾಯದಿಂದ ಪ್ರತಿಪಾದ್ಯನು. ನಾರಾಯಣನು ನಾಕೂ ಅಧ್ಯಾಯಗಳಿಂದ ಪ್ರತಿಪಾದ್ಯನೆಂದು ಮತ್ತೊಂದು ಅಂಶವನ್ನು ಗಮನಿಸಬೇಕು. ಇದರಂತೆ ಪ್ರಥಮಪಾದದಿಂದ ವಾಸುದೇವ, ದ್ವಿತೀಯಪಾದದಿಂದ ಸಂಕರ್ಷಣ, ತೃತೀಯಪಾದದಿಂದ ಪ್ರದ್ಯುಮ್ನ, ಚತುರ್ಥಪಾದದಿಂದ ಅನಿರುದ್ಧನು ಪ್ರತಿಪಾದ್ಯನು. ನಾರಾಯಣನು ಸಮಗ್ರ ಸಮನ್ವಯಾಧ್ಯಾಯದಿಂದ ಪ್ರತಿಪಾದ್ಯನು. ಹೀಗೆ ಪ್ರತಿಯೊಂದು ಅಧ್ಯಾಯಗಳಲ್ಲಿಯೂ ತಿಳಿಯಬೇಕು. ಅಷ್ಟೇ ಅಲ್ಲದೇ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಕು ಮೂರ್ತಿಗಳು ಅಥವಾ ನಾರಾಯಣನನ್ನು ಸೇರಿಸಿದಾಗ ಒಟ್ಟು ಐದು ಮೂರ್ತಿಗಳು ನಾಕು ಅಧ್ಯಾಯಗಳಲ್ಲಿರುವ ಪ್ರತಿಯೊಂದು ಸೂತ್ರಗಳಿಂದಲೂ ಕೂಡ ಪ್ರತಿಪಾದ್ಯವಾಗಿವೆ ಎಂಬ ವಿಚಾರವನ್ನು ಸ್ಮೃತ್ಯಧಿಕರಣದ ಪ್ರಾರಂಭದಲ್ಲಿ ಶ್ರೀಮದಾಚಾರ್ಯರು ಹೇಳಿರುತ್ತಾರೆ.

ಗುರುವ್ಯಾಸರು ಸಹ ನಾರಾಯಣ

**तत्वप्रदीपः – तमेतं गुरूंश्च ज्ञानाश्रयत्वेन नारायणशब्दवाच्यत्वान्नत्वा सूत्रार्थ उच्यते । बहुवचनं बहुमानार्थम् ।**

ನಾರಾಯಣನನ್ನು ನಮಿಸಿ ತಮ್ಮ ಗುರುಗಳನ್ನೂ ಕೂಡ ನಮಿಸುತ್ತಿದ್ದಾರೆ. ಯಾರು ಗುರುಗಳು ಎಂದು ಏಕೆ ಹೇಳಿಲ್ಲ ? ಎಂಬ ಪ್ರಶ್ನೆಗೂ 'ನಾರಾಯಣ' ಎಂಬ ಪದವೇ ಉತ್ತರಿಸುತ್ತಿದೆ. ವೇದವ್ಯಾಸದೇವರು ಭಾಷ್ಯಕಾರರಾದ ಶ್ರೀಮದಾಚಾರ್ಯರ ಗುರುಗಳು. ಇವರೂ ಸಹ ನಾರಾಯಣ ಎಂಬ ಪದದಿಂದ ಪ್ರತಿಪಾದ್ಯರಾಗಿದ್ದಾರೆ. ಜ್ಞಾನಕ್ಕೆ ಆಶ್ರಯರಾದ ಕಾರಣ ವೇದವ್ಯಾಸರು 'ನಾರಾಯಣ' ಎಂದು ಕರೆಸಿಕೊಳ್ಳುತ್ತಾರೆ. ಇವರನ್ನು ನಮಸ್ಕರಿಸಿ ಸೂತ್ರದ ಅರ್ಥವನ್ನು ಹೇಳಲು ಪ್ರಾರಂಭಿಸುತ್ತೇವೆಂಬುದು ಮಂಗಳಪದ್ಯದ ಅಭಿಪ್ರಾಯ. 'ಗುರೂನ್' ಎಂಬುದಾಗಿ ಬಹುವಚನವನ್ನು ಪ್ರಯೋಗಿಸಿರುವುದರಿಂದ ವೇದವ್ಯಾಸರೂಪವಷ್ಟೇ ಅಲ್ಲದೆ ಹಯಗ್ರೀವ, ವರಾಹ ಮೊದಲಾದ ರೂಪಗಳನ್ನೂ ವಿವಕ್ಷಿಸಬೇಕೆಂದು ತಿಳಿಯುತ್ತದೆ. ಅಥವಾ ಗುರುಗಳನ್ನು ಬಹುವಚನದಲ್ಲಿ ಕರೆಯಬೇಕಾದ ಕಾರಣ 'ಗುರೂನ್' ಎಂಬುದಾಗಿ ಬಹುವಚನವನ್ನು ಪ್ರಯೋಗಿಸಿದ್ದಾರೆ.

ವಿವಕ್ಷಾಭೇದದಿಂದ ಪ್ರತ್ಯೇಕ ನಮಸ್ಕಾರ

**तत्वप्रदीपः – चशब्दः पृथङ् नमस्कारार्थः । 'अपि' शब्दात् सूत्रकारमपि ।**

'ಗುರೂಂಶ್ಚ' ಎಂಬಲ್ಲಿರುವ 'ಚ' ಶಬ್ದವು ನಮನ ಕ್ರಿಯೆಯನ್ನು ಸಮುಚ್ಚಯ ಮಾಡುತ್ತಿರುವುದರಿಂದ ದೇವತೆಗಿಂತ ಪ್ರತ್ಯೇಕವಾಗಿ ಗುರುಗಳನ್ನು ನಮಿಸುತ್ತಿದ್ದೇನೆಂಬ ಅಭಿಪ್ರಾಯದಲ್ಲಿದೆ. 'ಅಪಿ' ಶಬ್ದವು ಸೂತ್ರಕಾರರನ್ನು ಕೂಡ ನಮಿಸುತ್ತೇನೆಂದು ಹೇಳುತ್ತಿದೆ. ಗ್ರಂಥದ ಪ್ರಾರಂಭದಲ್ಲಿ ದೇವತೆಯನ್ನು ಗ್ರಂಥಪ್ರತಿಪಾದ್ಯನನ್ನು ಮತ್ತು ಗುರುವನ್ನು ನಮಸ್ಕರಿಸಬೇಕು. ಪ್ರಕೃತ ಶ್ರೀಮದಾಚಾರ್ಯರಿಗೆ ಗ್ರಂಥಪ್ರತಿಪಾದ್ಯದೇವತೆ ಹಾಗೂ ಗುರು ಒಬ್ಬನೇ ಆಗಿದ್ದಾನೆಂದು ತಿಳಿಯಬೇಕು. 'ಅಪಿ' ಶಬ್ದವು ಸೂತ್ರಕಾರರನ್ನು ಕೂಡ ನಮಿಸುತ್ತೇನೆಂದು ತಿಳಿಸುತ್ತಿದೆ.

## ಭಾಷ್ಯಕಾರರ ಗುರು-ದೇವತೆಗಳಲ್ಲಿ ಭೇದವಿಲ್ಲ

**तत्वप्रदीपः – यद्यपि शास्त्रप्रतिपाद्या परदेवतैव भाष्यकारस्य गुरुः, स एव सूत्रकर्ताऽपि, तथाऽपि देवताभक्त्या, स्वगुरुभक्त्या, शास्त्रगुरुभक्त्या च तमेव नारायणं पृथङ् नमस्करोतीति गम्यते**

ವಾಸ್ತವಿಕವಾಗಿ ಭಾಷ್ಯಕಾರರಿಗೆ ಶಾಸ್ತ್ರಪ್ರತಿಪಾದ್ಯನಾದ ಪರದೇವತೆಯೇ 'ಗುರು' ಆಗಿದ್ದಾನೆ. ಅವನೇ ಸೂತ್ರಕಾರನೂ ಆಗಿದ್ದಾನೆ. ಆದರೂ ಸಹ ದೇವತಾಭಕ್ತಿಯಿಂದ, ಸ್ವಗುರುಭಕ್ತಿಯಿಂದ, ಶಾಸ್ತ್ರಗುರುಭಕ್ತಿಯಿಂದ ಒಬ್ಬನೇ ನಾರಾಯಣನನ್ನು ಭಾಷ್ಯಕಾರರು ಪ್ರತ್ಯೇಕ ಪ್ರತ್ಯೇಕವಾಗಿ ನಮಸ್ಕಾರ ಮಾಡುತ್ತಿದ್ದಾರೆ.

ವಿಶೇಷ ವಿಚಾರ - ಗ್ರಂಥದ ಪ್ರಾರಂಭದಲ್ಲಿ ಗುರುಗಳಿಗೆ, ದೇವತೆಗೆ, ಗ್ರಂಥಪ್ರತಿಪಾದ್ಯನಿಗೆ ಅವಶ್ಯವಾಗಿ ನಮಿಸಬೇಕು. ನಮಗೆ ದೇವತೆಯೇ ಬೇರೆ, ಗುರುವೇ ಬೇರೆ, ಗ್ರಂಥಪ್ರತಿಪಾದ್ಯನೇ ಬೇರೆ, ಆಗಿರುವುದುಂಟು. ಆದರೆ ಭಾಷ್ಯಕಾರರಿಗೆ ಯಾರು ದೇವತೆಯೋ ಅವನೇ ಗುರುವಾಗಿದ್ದಾನೆ. ಅವನೇ ಶಾಸ್ತ್ರಪ್ರತಿಪಾದ್ಯನಾಗಿದ್ದಾನೆ. ಅಂಥ ನಾರಾಯಣನಿಗೆ ಭಕ್ತಿಪೂರ್ವಕವಾಗಿ ನಮಿಸಿದ್ದಾರೆ.

## ಪ್ರಶಂಸೆಗೆ ಗುರುಗಳ ಹೆಸರು ಹೇಳಬಹುದು

**तत्वप्रदीपः – नारायणपदेनैव गुरुनाम चोवाच । आ समन्तात् विशिष्टः स एव हि व्यासोऽपि । नराणामुत्तमगतित्वेन विशिष्टत्वात् ।**

ಭಾಷ್ಯಕಾರರು ಮಂಗಳ ಶ್ಲೋಕದಲ್ಲಿ 'ನಾರಾಯಣ' ಎಂಬ ಪದವನ್ನು ಉಲ್ಲೇಖ ಮಾಡುವ ಮೂಲಕವೇ ತನ್ನ ಗುರುಗಳ ಹೆಸರನ್ನು ಕೂಡ ಹೇಳಿದ್ದಾರೆ. ವೇದವ್ಯಾಸದೇವರು ಗುರುಗಳಾಗಿದ್ದಾರೆ. 'ನಾರಾಯಣ' ಎಂಬ ಪದವು ವ್ಯಾಸ ಪದದ ಅರ್ಥವನ್ನೇ ಹೇಳುತ್ತಿದೆ. 'ಆ ಸಮಂತಾತ್ ವಿಶಿಷ್ಟಃ ವ್ಯಾಸಃ' ಸಕಲರಿಗಿಂತ ಶ್ರೇಷ್ಠರಾದವರು ವ್ಯಾಸರು. ನರರಿಗೆ ಉತ್ತಮಗತಿಪ್ರದನಾಗಿ ವಿಶಿಷ್ಟನಾದವನು. ಹೀಗೆ 'ವ್ಯಾಸ' ಎಂಬ ಪದವು ಯಾವ ವೈಶಿಷ್ಟ್ಯವನ್ನು ಹೇಳುತ್ತಿದೆಯೋ ಅದನ್ನೇ ನಾರಾಯಣ ಎಂಬ ಪದವೂ ಕೂಡ ಹೇಳುತ್ತಿರುವುದರಿಂದ 'ನಾರಾಯಣ' ಪದದಿಂದ 'ವೇದವ್ಯಾಸದೇವರು' ಪ್ರತಿಪಾದ್ಯರಾಗಿದ್ದಾರೆ.

ವಿಶೇಷವಿಚಾರ- ಗ್ರಂಥದಪ್ರಾರಂಭದಲ್ಲಿ ವಿಶಿಷ್ಟನಾದವನನ್ನು ಇಷ್ಟನಾದವನನ್ನು ಅಧಿಕೃತನಾದವನನ್ನು ಅವಶ್ಯವಾಗಿ ನಮಸ್ಕಾರ ಮಾಡಲೇಬೇಕು. ಭಾಷ್ಯಕಾರರು 'ನಾರಾಯಣ' ಎಂಬ ಪದದಿಂದ ವಿಶಿಷ್ಟನಿಗೆ ನಮಿಸಿದ್ದಾರೆ. 'ನತ್ವಾ' ಎಂಬ ಪದ ಪ್ರಯೋಗದಿಂದ ಭಕ್ತಿಪೂರ್ವಕವಾಗಿ ನಮಸ್ಕಾರವನ್ನು ತಿಳಿಸಿದ್ದಾರೆ. ಇದರಿಂದ ಇಷ್ಟನನ್ನು ನಮಿಸಿದಂತಾಯಿತು. 'ಸೂತ್ರಾರ್ಥಃ' ಎಂಬ ಪದದಿಂದ ನಾರಾಯಣನು ಸಕಲ ಸೂತ್ರಗಳ ಅರ್ಥನಾಗಿದ್ದಾನೆಂದು ತಿಳಿಸಿದ್ದಾರೆ. ಆದ್ದರಿಂದ ಅಧಿಕೃತನಾದವನನ್ನು ನಮಿಸಿದಂತಾಯಿತು.

'ಗುರೋರ್ನಾಮ ನ ಗೃಹ್ಣೀಯಾತ್ ಶಿಷ್ಯೋ ಭಾರ್ಯಾ ಪತೇರಪಿ' 'ಶಿಷ್ಯನಾದವನು ಗುರುವಿನ ಹೆಸರನ್ನು ಉಚ್ಚಾರ ಮಾಡಬಾರದು, ಹೆಂಡತಿಯು ಗಂಡನ ಹೆಸರನ್ನು ಉಚ್ಚಾರ ಮಾಡಬಾರದು' ಎಂಬುದಾಗಿ ಪ್ರಮಾಣಶ್ಲೋಕವಿದೆ. ಆದರೆ ಇಲ್ಲಿ ಪಂಡಿತಾಚಾರ್ಯರು 'ನಾರಾಯಣಪದೇನೈವ ಗುರುನಾಮ ಚ ಉವಾಚ' 'ನಾರಾಯಣ' ಪದದಿಂದಲೇ ಗುರುಗಳ ಹೆಸರನ್ನು ಉಚ್ಚರಿಸಿದ್ದಾರೆಂದು ಹೇಳಿದ್ದಾರೆ. ಇದು ಹೇಗೆ? ಎಂಬ ಪ್ರಶ್ನೆ ಬರುತ್ತದೆ. ಆದರೆ 'ಗುರೋರ್ನಾಮ' ಇತ್ಯಾದಿ ಪ್ರಮಾಣಶ್ಲೋಕಕ್ಕೆ ಗುರುಗಳ ಹೆಸರನ್ನೇ ಉಚ್ಚರಿಸಬಾರದೆಂದರ್ಥವಲ್ಲ. ತಿರಸ್ಕಾರ ಭಾವನೆಯಿಂದ ಗುರುಗಳ ಹೆಸರನ್ನು ಉಚ್ಚರಿಸಬಾರದು ಎಂದಭಿಪ್ರಾಯ. ಭಕ್ತಿ ಪೂರ್ವಕವಾಗಿ ಗುರುಗಳ ಹೆಸರನ್ನು ಉಚ್ಚರಿಸುವುದು ತಪ್ಪಲ್ಲ. ಅಥವಾ ಗುರುಗಳ ಅಸಾಧಾರಣ ಹೆಸರನ್ನು ಹೇಳಬಾರದು. ಪ್ರಶಂಸಾವಾಚಕವಾದ ಹೆಸರುಗಳನ್ನು ಹೇಳಬಹುದು. ಆದಕ್ಕಾಗಿ ಇಲ್ಲಿ 'ವ್ಯಾಸ' ಎಂಬ ಹೆಸರನ್ನು ಹೇಳದೆ 'ನಾರಾಯಣ' ಎಂದು ಹೇಳಿದ್ದಾರೆ.

ಸಾಷ್ಟಾಂಗ ನಮಸ್ಕಾರ ಮಾಡಿ ಗ್ರಂಥಾರಂಭ ಮಾಡಬೇಕು

**तत्वप्रदीपः – नारायणस्य नमस्कारोऽप्यष्टाङ्गः कृतो नत्वेत्युच्यते, तथा कार्यत्वज्ञापनार्थम् । तं नत्वा स एव सूत्रार्थ उच्यत इत्यर्थः ।**

ಮಂಗಳಶ್ಲೋಕದಲ್ಲಿ 'ನತ್ವಾ' ಎಂಬ ಕ್ರಿಯಾಪದವನ್ನು ಪ್ರಯೋಗಿಸಿದ್ದಾರೆ, ನಾರಾಯಣ ನಮಸ್ಕಾರವು ಅಷ್ಟಾಂಗಸಹಿತವಾಗಿದೆ ಎಂದು ಇದರಿಂದ ತಿಳಿಯುತ್ತದೆ. ಅಷ್ಟಾಂಗ ನಮಸ್ಕಾರ ಮಾಡಿ ಗ್ರಂಥಾರಂಭ ಮಾಡಬೇಕೆಂದು ಶಿಷ್ಯರಿಗೆ ತಿಳಿಸಿದ್ದಾರೆ. ನಮಸ್ಕಾರ ಮಾಡಿದ ಮೇಲೆ ಮುಂದೇನು ? ಎಂದರೆ ಸೂತ್ರಾರ್ಥವನ್ನು ಹೇಳುತ್ತೇವೆ ಎಂಬುದಾಗಿ ಹೇಳಿದ್ದಾರೆ.

ವಿಶೇಷ ವಿಚಾರ - 'ಣಮು ಪ್ರಹ್ವತ್ವೇ ಶಬ್ದೇ ಚ' ಎಂಬ ಧಾತುವಿನಿಂದ 'ನತ್ವಾ' ಎಂಬ 'ತ್ವಾ' ಪ್ರತ್ಯಯಾಂತವಾದ ಅವ್ಯಯವು ನಿಷ್ಪನ್ನವಾಗಿದೆ. ಣಮುಧಾತುವಿಗೆ 'ಪ್ರಹ್ವೀಭಾವ' ಹಾಗೂ 'ಸ್ತವನ' ಎಂಬೆರಡು ಅರ್ಥಗಳು ಇರುತ್ತವೆ. 'ಪ್ರಹ್ವೀಭಾವನ' ಎಂದರೆ 'ಸಾಷ್ಟಾಂಗ ನಮಸ್ಕಾರ' ಎಂದರ್ಥ.

ಉರಸಾ ಶಿರಸಾ ದೃಷ್ಟ್ಯಾ ಮನಸಾ ವಚಸಾ ತಥಾ ।
ಪದ್ಭ್ಯಾಂ ಕರಾಭ್ಯಾಂ ಜಾನುಭ್ಯಾಂ ಪ್ರಣಾಮೋಽಷ್ಟಾಂಗ ಈರಿತಃ ॥

ಎದೆ, ತಲೆ, ದೃಷ್ಟಿ, ಮನಸ್ಸು, ಮಾತು, ಕಾಲು, ಕೈ, ಮೊಣಕಾಲು, ಈ ಎಂಟು ಅಂಗಗಳಿಂದ ಬಾಗುವುದೇ 'ನಮನ' ಎಂದು ಕರೆಸಿಕೊಳ್ಳುತ್ತದೆ. ಭಾಷ್ಯಕಾರರು ಈ ಕ್ರಮದಲ್ಲಿ ನಮಿಸಿದ್ದಾರೆಂದು ತಿಳಿಯಬೇಕು. ಇದರಿಂದಲೇ ಕಾಯಿಕವಾದ ವಾಚನಿಕವಾದ ಮತ್ತು ಮಾನಸಿಕವಾದ ಮೂರು ಬಗೆಯ ನಮನವನ್ನು ಆಚಾರ್ಯರು ಮಾಡಿದ್ದಾರೆಂದು ತಿಳಿಯುತ್ತದೆ. ದೀರ್ಘದಂಡಪ್ರಣಾಮವನ್ನು ಮಾಡುವುದು ಕಾಯಿಕನಮನ. ಅನೇಕ ಗುಣಗಳಿಂದ ಪ್ರಶಂಸೆ ಮಾಡುವುದು ವಾಚನಿಕ ನಮನ. ಮನಸ್ಸಿನಿಂದ ಧ್ಯಾನ ಮಾಡುವುದು ಮಾನಸಿಕವಾದ ನಮನ. ಈ ಮೂರು ಬಗೆಯ ನಮನವನ್ನು ಕೂಡ ಭಾಷ್ಯಕಾರರು ಮಾಡಿದ್ದಾರೆ ಎಂಬುದು 'ನತ್ವಾ' ಎಂಬ ಪದದಿಂದಲೇ ತಿಳಿಯುತ್ತದೆ.

'ತ್ವಾ' ಪ್ರತ್ಯಯವು ಒಂದು ಕ್ರಿಯೆಯ ಸಮಾಪ್ತಿಯನ್ನು ಮತ್ತೊಂದು ಕ್ರಿಯೆಯ ಪ್ರಾರಂಭವನ್ನು ಸೂಚನೆ ಮಾಡುತ್ತದೆ. 'ನಮನ' ಎಂಬ ಕ್ರಿಯೆಯನ್ನು ಮಾಡಿ ಸೂತ್ರಾರ್ಥದ ವರ್ಣನೆ ಎಂಬ ಮತ್ತೊಂದು ಕ್ರಿಯೆಯನ್ನು ಪ್ರಾರಂಭಿಸಿದ್ದಾರೆಂದರ್ಥ.

### ಈ ಶಾಸ್ತ್ರ ಓಂಕಾರದ ವ್ಯಾಖ್ಯಾನ

**तत्वप्रदीपः – अयं हि तावत् प्रणवार्थः । अकारोऽन्याभावविरुद्धवाची कारणत्वेन सर्वजगतोऽन्यत्वम्, सर्वदोषाभावं, सर्वगुणसम्पन्नत्वेन जगद्विरुद्धलक्षणत्वं च ब्रह्मणो वदति ।**

ನಾಕು ಅಧ್ಯಾಯಗಳಲ್ಲಿ ಹೇಳುವ ವಿಷಯ 'ಓಂ' ಕಾರದ ಅರ್ಥವೇ ಆಗಿದೆ. ಅದು ಹೀಗೆ - 'ಓಂ' ಎಂಬಲ್ಲಿ 'ಅಕಾರ' 'ಉಕಾರ' 'ಮಕಾರ'ಗಳಿವೆ. 'ಅ'ಕಾರಕ್ಕೆ ೧. ವಿರುದ್ಧ, ೨. ಅಭಾವ, ೩. ವಿಲಕ್ಷಣ ಎಂಬ ಮೂರು ಅರ್ಥಗಳಿವೆ. 'ವಿರುದ್ಧ' ಎಂಬರ್ಥವನ್ನು ವಿವಕ್ಷಿಸಿದಾಗ

ಭಿನ್ನನಾಗಿದ್ದಾನೆಂದು ತಿಳಿಯುತ್ತದೆ. 'ಸಕಲಜಗತ್‌ಕಾರಣತ್ವ' ಎಂಬ ಧರ್ಮ ಬ್ರಹ್ಮನಲ್ಲಿ ಮಾತ್ರ ಇರುವುದರಿಂದ ಸಕಲ ಜಗತ್ತಿಗಿಂತ ಭಿನ್ನನಾಗಿದ್ದಾನೆ. ಅಕಾರಕ್ಕೆ 'ಅಭಾವ' ಎಂಬ ಎರಡನೆಯ ಅರ್ಥವನ್ನು ವಿವಕ್ಷಿಸಿದಾಗ ಯಾವುದೇ ದೋಷಗಳು ಬ್ರಹ್ಮನಲ್ಲಿ ಇಲ್ಲವೆಂದು ತಿಳಿಯುತ್ತದೆ. ಸಕಲ-ಗುಣಪರಿಪೂರ್ಣನಾಗಿರುವುದರಿಂದ ಸಮಸ್ತ ಜಗತ್ತಿಗಿಂತ ವಿಲಕ್ಷಣವಾಗಿದ್ದಾನೆ. ಹೀಗೆ ಅಕಾರವು ಸರ್ವಜಗತ್ತಿಗಿಂತ ಭೇದವನ್ನು, ಸರ್ವದೋಷಾಭಾವವನ್ನು, ಗುಣಪರಿಪೂರ್ಣತ್ವೇನ ವೈಲಕ್ಷಣ್ಯವನ್ನು ಹೇಳುತ್ತಿದೆ.

### ಅಕಾರ ಉಕಾರ ಮಕಾರಗಳು ನಾಕು ಅಧ್ಯಾಯಗಳ ಸಾರ

**तत्वप्रदीपः – तथाच भगवती श्रुतिः ''अ इति ब्रह्म'' इति सर्वतो विलक्षणमकारार्थं ब्रह्म ब्रवीति । उकारमकाराभ्यामुत्कृष्टतया मितत्वमुच्यते ।**

'ಅ ಇತಿ ಬ್ರಹ್ಮ' ಎಂಬ ಭಗವತಿ ಶ್ರುತಿಯು ಸಮಸ್ತ ಜಗತ್ತಿಗಿಂತ ವಿಲಕ್ಷಣನಾದ ಅಕಾರದ ಅರ್ಥನಾದ ಬ್ರಹ್ಮನನ್ನು ಹೇಳುತ್ತಿದೆ.

'ಉ'ಕಾರವು 'ಉತ್ಕೃಷ್ಟ' ಎಂಬ ಅರ್ಥವನ್ನು, 'ಮ'ಕಾರವು ತಿಳುವಳಿಕೆಯನ್ನು ಹೇಳುತ್ತಿದೆ. ಆದ್ದರಿಂದ ಪರಮಾತ್ಮನು ಉತ್ಕೃಷ್ಟನಾಗಿದ್ದಾನೆ ಮತ್ತು ಜ್ಞಾನಸ್ವರೂಪನಾಗಿದ್ದಾನೆಂಬ ಅರ್ಥವನ್ನು ಉಕಾರ ಮಕಾರಗಳಿಂದ ತಿಳಿದಂತಾಯಿತು. ಹೀಗೆ ಪ್ರಣವವು ನಾಕು ಅಧ್ಯಾಯಗಳ ಸಾರವನ್ನು ಹೇಳುತ್ತದೆ.

ವಿವರಣೆ - ಅಕಾರಕ್ಕೆ ಅನೇಕ ಅರ್ಥಗಳಿವೆ, ಇಲ್ಲಿ ವಿರುದ್ಧ, ಅಭಾವ, ವಿಲಕ್ಷಣ ಎಂಬ ಮೂರು ಅರ್ಥಗಳನ್ನು ವಿವಕ್ಷಿಸಿದ್ದಾರೆ. ಜಗತ್ತಿಗಿಂತ ಪರಮಾತ್ಮನು ಭಿನ್ನನಾಗಿದ್ದಾನೆ ಎಂದರೆ ಸಮಸ್ತ ಜಗತ್ತಿಗೆ ಕಾರಣನಾಗಿರುವುದರಿಂದ ಎಂದು ಉತ್ತರಿಸಬೇಕು. ಇದರಿಂದ ಜಗತ್ಕಾರಣತ್ವವನ್ನು ಹೇಳಿದಂತಾಯಿತು. ಅಭಾವ ಎಂಬರ್ಥವನ್ನು ವಿವಕ್ಷಿಸಿದಾಗ ಸಕಲ ದೋಷಗಳಿಂದ ರಹಿತನಾಗಿದ್ದಾನೆಂಬ ಎರಡನೆಯ ಅಧ್ಯಾಯದ ಅರ್ಥವನ್ನು ಹೇಳಿದಂತಾಯಿತು. ವಿಲಕ್ಷಣ ಎಂಬ ಅರ್ಥವನ್ನು ವಿವಕ್ಷಿಸಿದಾಗ ಸಕಲಗುಣ-ಪರಿಪೂರ್ಣನಾಗಿರುವುದರಿಂದ ಜಗದ್ವಿಲಕ್ಷಣನಾಗಿದ್ದಾನೆಂಬ ಮೊದಲನೆಯ ಅಧ್ಯಾಯದ ಅರ್ಥವನ್ನು ಹೇಳಿದಂತಾಯಿತು. ಹೀಗೆ ಜಗಜ್ಜನ್ಮಾದಿಕಾರಣನಾದ ಬಹ್ಮನು ಸಕಲದೋಷ ರಹಿತನು ಸಮಸ್ತಗುಣಪರಿಪೂರ್ಣನು ಆಗಿದ್ದಾನೆಂಬ ಅರ್ಥವನ್ನು ಅಕಾರವು

ಹೇಳುತ್ತಿದೆ. ಉಕಾರ ಹಾಗೂ ಮಕಾರಗಳು ಮೂರು ಹಾಗೂ ನಾಕನೆಯ ಅಧ್ಯಾಯದ ಅರ್ಥವನ್ನು ಹೇಳುತ್ತಿವೆ. ಉತ್ಕೃಷ್ಟನಾಗಿ ತಿಳಿಯಲ್ಪಡುತ್ತಾನೆ ಹಾಗೂ ಉತ್ಕೃಷ್ಟನಾಗಿ ಹೊಂದಲು ಯೋಗ್ಯನಾಗಿದ್ದಾನೆಂಬರ್ಥವನ್ನು ಉಕಾರ ಮಕಾರಗಳು ಹೇಳುತ್ತಿವೆ. ಹೀಗೆ ಗುಣೋದೀರ್ಣತ್ವ, ದೋಷವರ್ಜಿತತ್ವ, ಜ್ಞೇಯತ್ವ, ಗಮ್ಯತ್ವಗಳು ಪ್ರಣವದ ಅರ್ಥವೆಂದು ತಿಳಿಯಬೇಕು.

ಪ್ರಣವದ ವಿಶಾಲ ವಾಙ್ಮಯಪ್ರಪಂಚ

**तत्वप्रदीपः – व्याहृतीनामपि भूमत्वात् भवनशीलत्वेन वर्तमानत्वात् सुत्वेन वृत्तेः स्वातन्त्र्याच्चायमेव वाच्यः । त्रिपदया च गायत्र्या त्रिवर्गात्मकेन पुरुषसूक्तेन च । सोऽयं विष्णुर्वेदैरेक एवोद्गीतस्तदर्थनिर्णायकैः सूत्रैः प्रतिपाद्यते ।**

ಪ್ರಣವದ ಅರ್ಥವನ್ನೇ ವ್ಯಾಹೃತಿಗಳು ಹೇಳುತ್ತಿವೆ. ಗುಣಪರಿಪೂರ್ಣನಾದ್ದರಿಂದ 'ಭೂಃ' ಎಂದು, ಜಗತ್ತಿನ ಉತ್ಪತ್ತಿಗೆ ಕಾರಣನಾದ್ದರಿಂದ 'ಭುವಃ' ಎಂದು, ಸುಖಸ್ವರೂಪನಾದ್ದರಿಂದ ಮತ್ತು ಸ್ವತಂತ್ರನಾದ್ದರಿಂದ 'ಸ್ವಃ' ಎಂದು ಕರೆಸಿಕೊಳ್ಳುವನು. ವ್ಯಾಹೃತಿಯ ವ್ಯಾಖ್ಯಾನವೆನಿಸಿದ ತ್ರಿಪದಗಾಯತ್ರಿಯಿಂದಲೂ ತ್ರಿಪದಗಾಯತ್ರಿಯ ವ್ಯಾಖ್ಯಾನವಾದ ಪುರುಷಸೂಕ್ತದಿಂದಲೂ ಅದೇ ಬ್ರಹ್ಮನು ಪ್ರತಿಪಾದ್ಯನಾಗಿದ್ದಾನೆ. ಅವನೇ ಸಮಸ್ತ ವೇದಗಳಿಂದಲೂ ಪ್ರತಿಪಾದ್ಯನು. ವೇದಾರ್ಥ-ನಿರ್ಣಾಯಕವಾದ ಬ್ರಹ್ಮಸೂತ್ರಗಳಿಂದಲೂ ಪ್ರತಿಪಾದ್ಯನಾಗಿದ್ದಾನೆ.

ವಿಶೇಷ ವಿಚಾರ - ಪ್ರಣವವು ಯಾವ ಗುಣಪೂರ್ಣತ್ವವನ್ನು ದೋಷ-ವಿದೂರತ್ವವನ್ನು, ಜ್ಞೇಯತ್ವಗಮ್ಯತ್ವವನ್ನು ಹೇಳುತ್ತದೋ 'ಭೂಃ ಭುವಃ ಸ್ವಃ' ಎಂಬ ವ್ಯಾಹೃತಿಯ ಅಕ್ಷರಗಳೂ ಸಹ ಅದನ್ನೇ ವಿವರಿಸುತ್ತವೆ. ಆದ್ದರಿಂದ ಪ್ರಣವದ ವ್ಯಾಖ್ಯಾನವೇ ವ್ಯಾಹೃತಿ ಎಂದು ತಿಳಿಯಬೇಕು.

ಜಗತ್ತಿನ ಉತ್ಪತ್ತಿಗೆ ಕಾರಣವಾದ್ದರಿಂದ 'ಭುವಃ' ಎಂದು ಕರೆಸಿಕೊಳ್ಳುತ್ತಾನೆ. ಣ್ಯರ್ಥದಲ್ಲಿ ಸೇರಿರುವ 'ಭೂ' ಧಾತುವಿಗೆ ಕಪ್‌ಪ್ರತ್ಯಯ ಬಂದು 'ಭುವಃ' ಎಂಬ ರೂಪವು ನಿಷ್ಪನ್ನವಾಗಿದೆ. 'ಸ್ವಃ' ಎಂಬ ಶಬ್ದವು ಸುಖ ಸ್ವರೂಪವನ್ನು ಹೇಳುತ್ತಿದೆ. ನಿರಂತರ ಸುಖಶೀಲನಾದ್ದರಿಂದಲೇ ಸ್ವತಂತ್ರನಾಗಿದ್ದಾನೆ. ಮೂರು ವ್ಯಾಹೃತಿಗಳನ್ನು ಪುರುಷಸೂಕ್ತದ ಮೂರು ವರ್ಗಗಳು ವ್ಯಾಖ್ಯಾನ ಮಾಡುತ್ತವೆ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ವಿಷ್ಣುವನ್ನು 'ಓಂ'ಕಾರವು ಪ್ರತಿಪಾದನೆ ಮಾಡುತ್ತದೆ. ಅಂಥ ಪ್ರಣವವನ್ನು ವ್ಯಾಹೃತಿಯು ಪ್ರತಿಪಾದನೆ ಮಾಡುತ್ತದೆ. ವ್ಯಾಹೃತಿಯನ್ನು ಗಾಯತ್ರಿಯ ಮೂರು ಪಾದಗಳು ಪ್ರತಿಪಾದಿಸುತ್ತವೆ. ಅದನ್ನು ಪುರುಷ ಸೂಕ್ತದ ಮೂರುವರ್ಗವು ಪ್ರತಿಪಾದನೆ ಮಾಡುತ್ತದೆ. ಪುರುಷಸೂಕ್ತದ ಮೂರು ವರ್ಗವನ್ನೇ ಮೂರು ವೇದಗಳು ಪ್ರತಿಪಾದನೆ ಮಾಡುತ್ತವೆ. ಮೂರು ವೇದಗಳನ್ನೇ ಸಕಲ ಇತಿಹಾಸ ಪುರಾಣಗಳು ವ್ಯಾಖ್ಯಾನ ಮಾಡುತ್ತವೆ. ಈ ಎಲ್ಲಾ ಶಬ್ದರಾಶಿಗಳನ್ನು ಬ್ರಹ್ಮಸೂತ್ರವು ಪ್ರತಿಪಾದನೆ ಮಾಡುತ್ತದೆ. ಇಂಥ ಬ್ರಹ್ಮಸೂತ್ರದಿಂದ ಮುಖ್ಯವಾಗಿ ವಿಷ್ಣುವೇ ಪ್ರತಿಪಾದ್ಯನಾಗಿದ್ದಾನೆ.

### 'ಸೂತ್ರಾರ್ಥ ಉಚ್ಯತೇ' ಎಂಬುದರ ವ್ಯಾಖ್ಯಾನ

**तत्वप्रदीपः – अतः सूत्रार्थ उच्यत इति समस्तवेदोपबृंहकेतिहास-पुराणादिशब्दराश्यर्थभूतः सूत्रार्थो भाष्यत इति प्रतिज्ञा क्रियते ।**

'ಸೂತ್ರಾರ್ಥ ಉಚ್ಯತೇ' ಎಂಬುದಕ್ಕೆ - 'ಸಮಸ್ತ ವೇದಗಳ ಅರ್ಥವನ್ನು ನಿರ್ಣಯಿಸುವ ಇತಿಹಾಸ ಪುರಾಣಾದಿಗಳ ಶಬ್ದರಾಶಿಯ ಅರ್ಥಭೂತವಾದ ಸೂತ್ರಾರ್ಥವನ್ನು ವ್ಯಾಖ್ಯಾನ ಮಾಡುತ್ತೇನೆ' ಎಂದರ್ಥ. ಭಾಷ್ಯಕಾರರು ಹೀಗೆ ಪ್ರತಿಜ್ಞೆಯನ್ನು ಮಾಡಿ ಗ್ರಂಥವನ್ನು ಪ್ರಾರಂಭಿಸುತ್ತಾರೆ.

## ಬ್ರಹ್ಮಸೂತ್ರಭಾಷ್ಯ

### ಬ್ರಹ್ಮಮೀಮಾಂಸಾಶಾಸ್ತ್ರ ರಚನೆಯ ಹಿನ್ನೆಲೆ

**ब्रह्मसूत्रभाष्यम् –**

**द्वापरे सर्वत्र ज्ञान आकुलीभूते तन्निर्णयाय ब्रह्मरुद्रेन्द्रादिभिरर्थितो भगवान्नारायणो व्यासत्वेनावततार ।**

**अथेष्टानिष्टप्राप्तिपरिहारेच्छूनां तद्योगमविजानतां तज्ज्ञापनार्थं वेदमुत्सन्नं व्यञ्जयंश्चतुर्धा व्यभजत् । चतुर्विंशतिधैकशतधा सहस्रधा द्वादशधा च ।**

**तदर्थनिर्णयाय ब्रह्मसूत्राणि चकार ।**

ಇಪ್ಪತ್ತೆಂಟನೆಯ ದ್ವಾಪರಯುಗದ ಕೊನೆಯಲ್ಲಿ ಸಕಲಸಜ್ಜನರ ತತ್ವಜ್ಞಾನವು ಸಂಶಯಾಸ್ಪದವಾದಾಗ ತತ್ವಜ್ಞಾನದ ನಿರ್ಣಯಕ್ಕೋಸ್ಕರ ಬ್ರಹ್ಮ, ರುದ್ರ, ಇಂದ್ರ, ಮೊದಲಾದ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಷಡ್ಗುಣೈಶ್ವರ್ಯಸಂಪನ್ನನಾದ ನಾರಾಯಣನು ವೇದವ್ಯಾಸರೂಪದಿಂದ ಅವತರಿಸಿದನು.

ಅವತಾರ ಮಾಡಿದ ಕೂಡಲೇ, ಇಷ್ಟಪ್ರಾಪ್ತಿ ಹಾಗೂ ಅನಿಷ್ಟಪರಿಹಾರದ ಅಪೇಕ್ಷೆ ಇದ್ದರೂ ಅದರ ಉಪಾಯವನ್ನು ತಿಳಿಯದೆ ದುಃಖಪಡುತ್ತಿರುವ ಸಜ್ಜನರಿಗೆ, ಇಷ್ಟಪ್ರಾಪ್ತಿ ಹಾಗೂ ಅನಿಷ್ಟಪರಿಹಾರದ ಉಪಾಯವನ್ನು ತಿಳಿಸುವುದಕ್ಕಾಗಿ; ಅಪಪಾಠಾದಿಗಳಿಂದ ತಿರೋಹಿತವಾದ ವೇದವನ್ನು ಶುದ್ಧವಾಗಿ ಉಪದೇಶಿಸುತ್ತಾ, ನಾಕು ಭಾಗಗಳಾಗಿ ವಿಂಗಡಿಸಿದನು. ಋಗ್ವೇದವನ್ನು ಇಪ್ಪತ್ನಾಕು ಶಾಖೆಗಳನ್ನಾಗಿ, ಯಜುರ್ವೇದವನ್ನು ನೂರೊಂದು ಶಾಖೆಗಳನ್ನಾಗಿ, ಸಾಮವೇದವನ್ನು ಸಾವಿರ ಶಾಖೆಗಳನ್ನಾಗಿ, ಅಥರ್ವವೇದವನ್ನು ಹನ್ನೆರಡು ಶಾಖೆಗಳನ್ನಾಗಿ ವಿಂಗಡಿಸಿದನು.

ಈ ವೇದಗಳ ಅರ್ಥವನ್ನು ನಿರ್ಣಯಿಸುವುದಕ್ಕಾಗಿಯೇ ಬ್ರಹ್ಮಸೂತ್ರಗಳನ್ನು ರಚಿಸಿದನು.

### ಸೂತ್ರಾಗತಿ ವಿಚಾರಕ್ಕೆ ಸ್ಕಾಂದದ ಸಮ್ಮತಿ

**ब्रह्मसूत्रभाष्यम् — तच्चोक्तं स्कान्दे —**

**नारायणाद् विनिष्पन्नं ज्ञानं कृतयुगे स्थितम् ।**
**किञ्चित् तदन्यथा जातं त्रेतायां द्वापरेऽखिलम् ।।**
**गौतमस्य ऋषेः शापाज्ज्ञाने त्वज्ञानतां गते ।**
**सङ्कीर्णबुद्धयो देवा ब्रह्मरुद्रपुरस्सराः ।।**
**शरण्यं शरणं जग्मुर्नारायणमनामयम् ।**
**तैर्विज्ञापितकार्यस्तु भगवान् पुरुषोत्तमः ।।**
**अवतीर्णो महायोगी सत्यवत्यां पराशरात् ।**
**उत्सन्नान् भगवान् वेदानुज्जहार हरिः स्वयम् ।।**
**चतुर्धा व्यभजत् तांश्च चतुर्विंशतिधा पुनः ।**

शतधा चैकधा चैव तथैव च सहस्रधा ।।
कृष्णो द्वादशधा चैव पुनस्तस्यार्थवित्तये ।
चकार ब्रह्मसूत्राणि येषां सूत्रत्वमञ्जसा ।।

ಅನುವಾದ - ಇಲ್ಲಿಯ ತನಕ ನಿರೂಪಿಸಿದ ಪ್ರಮೇಯವು ಸ್ಕಾಂದಪುರಾಣದಲ್ಲಿ ಹೇಳಲ್ಪಟ್ಟಿದೆ.

"ಶ್ರೀಮನ್ನಾರಾಯಣನ ದೆಸೆಯಿಂದ ಪ್ರಸಾರವಾದ ತತ್ವಜ್ಞಾನವು ಕೃತಯುಗದಲ್ಲಿ ಯಥಾಸ್ಥಿತವಾಗಿ ಇತ್ತು. ತ್ರೇತಾಯುಗದಲ್ಲಿ ಕೆಲವರ ಸಂದೇಹ ಮತ್ತು ಭ್ರಾಂತಿಗಳಿಗೆ ವಿಷಯವಾಯಿತು. ದ್ವಾಪರಯುಗದಲ್ಲಿ ಗೌತಮಋಷಿಗಳ ಶಾಪದಿಂದ ಅದೇ ತತ್ವಜ್ಞಾನವು ಸಂಪೂರ್ಣವಾಗಿ ನಷ್ಟವಾಯಿತು. ಹೀಗೆ ಸಕಲಸಜ್ಜನರ ತತ್ವಜ್ಞಾನವು ನಷ್ಟವಾದಾಗ ಸಜ್ಜನರಲ್ಲಿ ಅನುಕಂಪಗೊಂಡ ಬ್ರಹ್ಮರುದ್ರಾದಿದೇವತೆಗಳು ನಿರ್ದುಷ್ಟನಾದ ನಾರಾಯಣನನ್ನು ಮೊರೆಹೊಂದಿದರು. ಅವರ ಪ್ರಾರ್ಥನೆಯಂತೆ ನಾರಾಯಣನು ಪರಾಶರಋಷಿಗಳಿಂದ ಸತ್ಯವತಿದೇವಿಯಲ್ಲಿ ಮಹಾಮುನಿಯಾಗಿ ಅವತರಿಸಿದನು. ಮಹಾಮುನಿಗಳಾದ ಈ ವೇದವ್ಯಾಸದೇವರು ಅಪಪಾತಾದಿಗಳಿಂದ ತಿರೋಹಿತವಾದ ವೇದಗಳನ್ನು ಮತ್ತೊಬ್ಬರ ಅಪೇಕ್ಷೆ ಇಲ್ಲದೆ ಪರಿಶುದ್ಧವಾಗಿ ಉಪದೇಶಿಸಿದರು. ಮತ್ತು ವೇದಗಳನ್ನು ನಾಕು ಬಗೆಯಲ್ಲಿ ವಿಂಗಡಿಸಿದರು. ಆ ನಾಕು ವೇದಗಳನ್ನು ಪುನಃ ಕ್ರಮವಾಗಿ ಇಪ್ಪತ್ತಾಕು, ನೂರೊಂದು, ಸಾವಿರ, ಹನ್ನೆರಡು ಶಾಖೆಗಳನ್ನಾಗಿ ವಿಭಾಗ ಮಾಡಿದರು. ಈ ವೇದಗಳ ಅರ್ಥನಿರ್ಣಯಕ್ಕೋಸ್ಕರವೇ ಬ್ರಹ್ಮಸೂತ್ರಗಳನ್ನು ರಚಿಸಿದರು. ಈ ಸೂತ್ರಗಳೇ ನಿಜವಾದ ಸೂತ್ರಗಳು.

'ಸೂತ್ರ' ಎಂದರೆ ಬ್ರಹ್ಮಸೂತ್ರವೇ

ब्रह्मसूत्रभाष्यम् –
अल्पाक्षरमसन्दिग्धं सारवद् विश्वतोमुखम् ।
अस्तोभमनवद्यं च सूत्रं सूत्रविदो विदुः ।।

ಅನುವಾದ - ಅನಿವಾರ್ಯಶಬ್ದಗಳಿಂದ ಸಂದೇಹವಿಲ್ಲದಂತೆ ವಿಶಿಷ್ಟವಾದ ಅರ್ಥವನ್ನು ಪ್ರತಿಪಾದಿಸುವ ವೇದದ ಎಲ್ಲಾ ಶಾಖೆಗಳ ಅರ್ಥವನ್ನು ನಿರ್ಣಯಿಸುವ ವ್ಯರ್ಥಾಕ್ಷರಗಳಿಲ್ಲದ, ಶಬ್ದ

ಹಾಗೂ ಅರ್ಥಗಳಲ್ಲಿ ದೋಷವಿಲ್ಲದ್ದನ್ನೇ ಸೂತ್ರವೆಂದು ಸೂತ್ರಸ್ವರೂಪವನ್ನು ತಿಳಿದ ಪಂಡಿತರು ಹೇಳುತ್ತಾರೆ.

भाष्यम् — निर्विशेषितसूत्रत्वं ब्रह्मसूत्रस्य चाप्यतः ।
यथा व्यासत्वमेकस्य कृष्णस्यान्ये विशेषणात् ।।

ಯಾವುದೇ ವಿಶೇಷಣವಿಲ್ಲದ 'ಸೂತ್ರ' ಎಂಬ ಹೆಸರು ಬ್ರಹ್ಮಸೂತ್ರಗಳಿಗಷ್ಟೇ ಯುಕ್ತವಾಗುತ್ತದೆ. ಏಕೆಂದರೆ ಉಪಪದವಿಲ್ಲದ ವ್ಯಾಸ ಎಂಬ ಹೆಸರು ಕೃಷ್ಣದ್ವೈಪಾಯನರನ್ನೇ ಹೇಳುತ್ತದೆ. ಅಶ್ವತ್ಥಾಮ ಮೊದಲಾದವರು ವೇದವಿಭಾಗವನ್ನು ಮಾಡುವವರಾದ್ದರಿಂದ ವ್ಯಾಸರೆಂದು ಕರೆಸಿಕೊಳ್ಳುವವರಾದರೂ ಅವರನ್ನು 'ದ್ರೌಣಿವ್ಯಾಸ' ಎಂದೇ ಕರೆಯುತ್ತಾರೆ.

भाष्यम् — सविशेषणसूत्राणि ह्यपराणि विदो विदुः ।
मुख्यस्य निर्विशेषेण शब्दोऽन्येषां विशेषतः ।।

ಇದರಂತೆ ಬ್ರಹ್ಮಸೂತ್ರಗಳಿಂದ ಭಿನ್ನವಾದ ಸೂತ್ರಗಳಿಗೆ ಧರ್ಮಸೂತ್ರ, ಗೌತಮಸೂತ್ರ, ಜೈಮಿನಿಸೂತ್ರ ಇತ್ಯಾದಿಯಾಗಿ ವಿಶೇಷಣಸಹಿತವಾಗಿ ಸೂತ್ರಪದವನ್ನು ಪ್ರಯೋಗಿಸಬೇಕು. ಆದ್ದರಿಂದ ಮುಖ್ಯವಾದದ್ದು ನಿರುಪಪದನಾಮದಿಂದ ಪ್ರತಿಪಾದಿತವಾಗುತ್ತದೆ. ಅಮುಖ್ಯವಾದದ್ದು ವಿಶೇಷಣಸಹಿತವಾದ ನಾಮದಿಂದ ಪ್ರತಿಪಾದ್ಯವಾಗುತ್ತದೆ.

भाष्यम् — इति वेदविदः प्राहुः शब्दतत्वार्थवेदिनः ।
सूत्रेषु येषु सर्वेऽपि निर्णयास्समुदीरिताः ।।

ಹೀಗೆ ಶಬ್ದತತ್ವವನ್ನು ತಿಳಿದ ವೇದಜ್ಞಾನಿಗಳು ಹೇಳುತ್ತಾರೆ. ಆದ್ದರಿಂದ ಉಪಪದವಿಲ್ಲದ ಸೂತ್ರಪದದಿಂದ ಬ್ರಹ್ಮಸೂತ್ರಗಳು ಪ್ರತಿಪಾದ್ಯವಾಗಿ ಪ್ರಧಾನ ಎನ್ನಿಸಿವೆ.

भाष्यम् — शब्दजातस्य सर्वस्य यत्प्रमाणश्च निर्णयः ।

ಇಂತಹ ಬ್ರಹ್ಮಸೂತ್ರಗಳು ಸಕಲಶಬ್ದಗಳ ಅರ್ಥವನ್ನು ನಿರ್ಣಯ ಮಾಡುತ್ತವೆ.

भाष्यम् – एवं विधानि सूत्राणि कृत्वा व्यासो महायशाः ।
ब्रह्मरुद्रादिदेवेषु मनुष्यपितृपक्षिषु ।
ज्ञानं संस्थाप्य भगवान् क्रीडते पुरुषोत्तमः ।' इत्यादि ।।

ಈ ಸೂತ್ರಗಳನ್ನು ಅಗಾಧಕೀರ್ತಿಪೂರ್ಣರಾದ ಬಾದರಾಯಣರು ರಚಿಸಿ ಬ್ರಹ್ಮರುದ್ರಾದಿ-ದೇವತೆಗಳಿಗೆ ತತ್ವನಿಶ್ಚಯವನ್ನು ಸ್ಥಿರಪಡಿಸಿದರು. ಮನುಷ್ಯೋತ್ತಮರು, ಪಿತೃಗಳು, ಗಂಧರ್ವರು, ಚರಿತಾರ್ಯಾದಿಗಳಲ್ಲಿ ನಷ್ಟವಾದ ಜ್ಞಾನವನ್ನು ತಂದುಕೊಟ್ಟರು. ಹೀಗೆ ಜಗತ್ಪ್ರಭುವಾದ ನಾರಾಯಣನು ಅನೇಕ ಅವತಾರಲೀಲೆಗಳನ್ನು ತೋರಿಸುತ್ತಾ ವಿಹರಿಸುತ್ತಾನೆ. ಹೀಗೆ ಸ್ಕಾಂದಪುರಾಣದಲ್ಲಿ ಹೇಳಿದೆ.

## ಸತ್ತರ್ಕದೀಪಾವಳಿ

### ಬ್ರಹ್ಮಸೂತ್ರಕ್ಕೆ ಪ್ರಾಮಾಣ್ಯ ಸಮರ್ಥನೆ

सत्तर्कदीपावळिः –

कथमेतेषां सूत्राणां प्रामाण्यम्?, कथं चोपादेयत्वम्? इत्यत आह – द्वापरे इति । न दुर्मतिजिनादिवाक्यवदस्याप्यसुरादिव्यामोहनार्थत्वं किन्तु ब्रह्मादिदेवऋष्यादीनां परतत्वज्ञाननिर्वृत्त्यर्थं प्रणीतत्वात् श्रुतिमूलत्वाद् युक्तिमूलत्वाच्च प्रामाण्यम् । उपादेयत्वं त्विष्टानिष्टप्राप्तिपरिहारोपायज्ञापकवेद-निर्णायकत्वात् सिद्ध्यतीत्यर्थः । बहुपुराणादिसिद्धत्वेन विगानानर्हमप्येतत्सूत्र प्रामाण्यं स्कान्दपुराणादिवाक्यैर्द्रढयति – नारायणात् इति ।। गौतमशापस्तु स्वहतगोनिर्मातृविषयः । चतुर्विंशत्यादिभेदस्तु वेदशाखाविषयः । कृष्णद्वैपायनादन्ये द्रौणिव्यासादयो विशेषणात् सोपपदव्यासशब्दाभिधेया इत्यर्थः ।

ಅನುವಾದ - ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವಿದೆಯೇ? ಉಪಾದೇಯಗಳಾಗಿವೆಯೇ? ಎಂಬ ಪ್ರಶ್ನೆಗೆ 'ದ್ವಾಪರೇ' ಎಂಬ ಭಾಷ್ಯವು ಉತ್ತರಿಸುತ್ತಿದೆ. ದುಷ್ಟಬುದ್ಧಿಯುಳ್ಳ ಜಿನಾದಿವಾಕ್ಯಗಳಂತೆ ಈ ಭಾಷ್ಯವೂ ಸಹ ಅಸುರಾದಿಗಳ ಮೋಹಕ್ಕೋಸ್ಕರ ಹೊರಟಿಲ್ಲ, ಹೊರತು ಚತುರ್ಮುಖಬ್ರಹ್ಮನೇ ಮೊದಲಾದ ದೇವತೆಗಳಿಗೆ ಮತ್ತು ಋಷಿ ಮೊದಲಾದವರಿಗೆ ಶ್ರೇಷ್ಠವಾದ ತತ್ವಜ್ಞಾನವನ್ನು ದಯಪಾಲಿಸುವುದಕ್ಕಾಗಿ ಹೊರಟಿರುತ್ತದೆ. ಮತ್ತು ಶ್ರುತಿಮೂಲತ್ವ ಯುಕ್ತಿಮೂಲತ್ವವಿರುವುದರಿಂದ ಪ್ರಮಾಣವೂ ಆಗಿದೆ. ಇಷ್ಟಪ್ರಾಪ್ತಿ ಹಾಗೂ ಅನಿಷ್ಟಪರಿಹಾರದ ಉಪಾಯವನ್ನು ತಿಳಿಸುವ ಮೂಲಕ ವೇದಾರ್ಥವನ್ನು ನಿರ್ಣಯಿಸುವುದರಿಂದ ಉಪಾದೇಯವಾಗಲೇಬೇಕು. ಬ್ರಹ್ಮಸೂತ್ರಗಳಿಗೆ ಯಾವುದೇ ವಿರೋಧವಿಲ್ಲದಿದ್ದರೂ ಪ್ರಾಮಾಣ್ಯವು ಅನೇಕ ಪುರಾಣಸಿದ್ಧವಾಗಿದೆ. ಪ್ರಕೃತ ಸ್ಕಾಂದಪುರಾಣವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ 'ನಾರಾಯಣಾತ್' ಎಂಬ ವಾಕ್ಯದಿಂದ.

ಗೌತಮರ ಶಾಪವು ತಮ್ಮಿಂದ ಮೃತವಾದ ಗೋವನ್ನು ಸೃಷ್ಟಿ ಮಾಡಿದವರಲ್ಲಿ ಮಾತ್ರ ಪ್ರಭಾವವನ್ನು ಬೀರಿದೆ. ಇಷ್ವಾಕು ಮೊದಲಾದ ವಿಭಾಗಗಳು ವೇದಶಾಖೆಗೆ ವಿಷಯವಾಗಿದೆ. ಕೃಷ್ಣದ್ವೈಪಾಯನರನ್ನು ಬಿಟ್ಟು ಉಳಿದ ದ್ರೌಣವ್ಯಾಸಾದಿಗಳನ್ನು ವಿಶೇಷಣಸಹಿತವಾಗಿ ಕರೆದಿದ್ದಾರೆ' ಎಂದರ್ಥ.

## ತತ್ವಪ್ರದೀಪ

### ಸೂತ್ರಕಾರರ ಪ್ರಾಮಾಣ್ಯ ವಿಚಾರ

**तत्वप्रदीपः – कथमेतेषां सूत्राणां प्रामाण्यमिति चेदाप्तिमूलत्वात् श्रुतिमूलत्वाद्युक्तिमूलत्वाच्चेति ब्रूमः । आप्तिस्तावत्, प्रसक्तिश्रोतृवक्तॄणामानुकूल्याद्भवति ।**

ಭಾಷ್ಯಕಾರರು ಯಾವ ಸೂತ್ರಗಳನ್ನು ವ್ಯಾಖ್ಯಾನ ಮಾಡಲು ಹೊರಟಿದ್ದಾರೋ ಆ ಸೂತ್ರಗಳಿಗೆ ಪ್ರಾಮಾಣ್ಯವು ಹೇಗೆ ಸಿದ್ಧವಾಗಿದೆ ? ಎಂಬ ಪ್ರಶ್ನೆಗೆ ಆಪ್ತಿಮೂಲಕವಾದ್ದರಿಂದ ಶ್ರುತಿಮೂಲಕವಾದ್ದರಿಂದ ಯುಕ್ತಿಮೂಲಕವಾದ್ದರಿಂದ ಪ್ರಾಮಾಣ್ಯವು ಸಿದ್ಧವಾಗಿದೆ ಎಂದು ಉತ್ತರಿಸುತ್ತೇವೆ.

ಆಪ್ತಿಮೂಲಕವಾದ ಪ್ರಾಮಾಣ್ಯವನ್ನು ಹೇಳಬೇಕೆಂದರೆ ಪ್ರಸಂಗಾನುಕೂಲ್ಯ ಶ್ರೋತ್ರಾನುಕೂಲ್ಯ ವಕ್ತ್ರಾನುಕೂಲ್ಯಗಳು ಇರಬೇಕು.

### ದ್ವಾಪರ ಪದಕ್ಕೆ ಸುಂದರ ವ್ಯಾಖ್ಯಾನ

**तत्वप्रदीपः – तत्र प्रथमतः प्रसक्तिं दर्शयति – द्वापरे सर्वत्र ज्ञान आकुलीभूत इति । द्वावेव धर्मपादौ परं यस्मिन् युगे प्राप्ते, ततः क्रमादपचयोऽन्त एकोऽवशिष्यते तस्मिन् द्वापरे ।**

ಭಾಷ್ಯದಲ್ಲಿ ಮೊದಲು ಪ್ರಸಂಗಾನುಕೂಲ್ಯವನ್ನು 'ದ್ವಾಪರೇ ಸರ್ವತ್ರ ಜ್ಞಾನ ಆಕುಲೀಭೂತೇ' ಎಂಬುದರಿಂದ ಹೇಳಿದ್ದಾರೆ. ದ್ವಾಪರ ಎಂಬ ಪದಕ್ಕೆ 'ದ್ವಾವೇವ ಪರಮ್ ಯಸ್ಮಿನ್ ಇತಿ ದ್ವಾಪರಂ' ಎಂದು ನಿಷ್ಪತ್ತಿ ಮಾಡಬೇಕು. ಎರಡು ಧರ್ಮಪಾದಗಳು ಯಾವ ಯುಗದಲ್ಲಿ ಉಳಿದಿರುತ್ತದೋ ಅದು ದ್ವಾಪರ ಎಂದು ಇದರರ್ಥ. (ಪರಮ್ = ಕೃತ, ತ್ರೇತಾಯುಗಗಳ ಅನಂತರ, ದ್ವಾವೇವ = ಎರಡು ಧರ್ಮ ಪಾದಗಳು ಮಾತ್ರ, ಯಸ್ಮಿನ್ ಇತಿ = ಯಾವ ಯುಗದಲ್ಲಿ ಉಳಿದಿರುತ್ತದೋ, ಅದೇ ದ್ವಾಪರಯುಗ) ಈ ಎರಡು ಧರ್ಮ ಪಾದಗಳಲ್ಲಿಯೂ ಒಂದು ಪಾದವು ದ್ವಾಪರದ ಕೊನೆಯಲ್ಲಿ ಶಿಥಿಲವಾಗುವ ಹಂತವನ್ನು ತಲುಪಿರುತ್ತದೆ. ಇಂಥ ಸಂದರ್ಭದಲ್ಲಿ ಎಂದರ್ಥ.

ವಿಶೇಷ ವಿಚಾರ - ತ್ರಿವಿಧಪ್ರಾಮಾಣ್ಯಗಳಲ್ಲಿ ಆಪ್ತಿಮೂಲಕವಾದ ಪ್ರಾಮಾಣ್ಯವೇ ಶ್ರೇಷ್ಠವಾಗಿದೆ. ಆದ್ದರಿಂದ ಮೊದಲು ಆಪ್ತಿಮೂಲಕವಾದ ಪ್ರಾಮಾಣ್ಯವನ್ನು ಭಾಷ್ಯಕಾರರು ತೋರಿಸಿದ್ದಾರೆ. ಆಪ್ತನು ಹೇಳಿದ ಮಾತ್ರಕ್ಕೆ ವಾಕ್ಯವು ಪ್ರಮಾಣವಾಗುವುದಿಲ್ಲ. ಪ್ರಸಂಗಾನುಕೂಲ್ಯ, ಶ್ರೋತ್ರಾನುಕೂಲ್ಯ, ವಕ್ತ್ರಾನುಕೂಲ್ಯಗಳು ಇದ್ದರೆ ಮಾತ್ರ ಆಪ್ತವಚನವು ಪ್ರಮಾಣವಾಗುತ್ತದೆ. ಬ್ರಹ್ಮಮೀಮಾಂಸಾಶಾಸ್ತ್ರದ ರಚನೆಯ ಸಂದರ್ಭದಲ್ಲಿ ಪ್ರಸಂಗಾನುಕೂಲ್ಯವು ಸ್ಪಷ್ಟವಾಗಿ ಇತ್ತು ಎಂಬುದನ್ನು 'ದ್ವಾಪರೇ ಸರ್ವತ್ರ ಜ್ಞಾನ ಆಕೂಲೀಭೂತೇ' ಎಂಬುದರಿಂದ ತಿಳಿಸಿದ್ದಾರೆ. ದ್ವಾಪರಯುಗದಲ್ಲಿ ಎಲ್ಲೆಡೆ ಜ್ಞಾನವು ಕಲುಷಿತವಾದ್ದರಿಂದ ತತ್ವಜ್ಞಾನವನ್ನು ಉಪದೇಶಿಸುವ ಪ್ರಸಂಗಾನೂಕೂಲ್ಯ ಸ್ಪಷ್ಟವಾಗಿ ತೋರುತ್ತಿದೆ.

ಈ ಮೂರು ಬಗೆಯ ಪ್ರಾಮಾಣ್ಯಗಳಿಂದ ಬ್ರಹ್ಮಸೂತ್ರಗಳಿಗೆ ಪರಮಪ್ರಾಮಾಣ್ಯವು ಸಿದ್ಧವಾಗುತ್ತದೆಂಬ ವಿಷಯವನ್ನು ಶ್ರೀಮದಾಚಾರ್ಯರು ಅನುವ್ಯಾಖ್ಯಾನದಲ್ಲಿ ಸ್ಪಷ್ಟಪಡಿಸಿದ್ದಾರೆ.

ಅದನ್ನೇ ಇಲ್ಲಿ ಪಂಡಿತಾಚಾರ್ಯರು ವ್ಯಾಖ್ಯಾನ ಮಾಡಿದ್ದಾರೆಂದು ತಿಳಿಯಬೇಕು ವಕ್ತ್ರಾನೂಕೂಲ್ಯ, ಶ್ರೋತ್ರಾನುಕೂಲ್ಯ, ಪ್ರಸಂಗಾನುಕೂಲ್ಯಗಳಿಂದ ಬ್ರಹ್ಮಸೂತ್ರಕ್ಕೆ ಆಪ್ತಿಮೂಲಕತ್ವವನ್ನು ಸಮರ್ಥನೆ ಮಾಡಿ ಆಪ್ತವಾಕ್ಯವಾಗಿರುವುದರಿಂದ ಸೂತ್ರಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸಬೇಕು.

'ಧರ್ಮಪಾದೌ ಪರಂ ಯಸ್ಮಿನ್ ಯುಗೇ ಪ್ರಾಪ್ತೇ ಅವಶಿಷ್ಯತೇ ತಸ್ಮಿನ್ ದ್ವಾಪರೇ' ಎಂಬ ವ್ಯಾಖ್ಯಾನದ ಅಪೂರ್ವತೆಯನ್ನು ಗಮನಿಸಬೇಕು. ದ್ವಾಪರ ಪದಕ್ಕೆ ಪಂಡಿತಾಚಾರ್ಯರ ಈ ವ್ಯಾಖ್ಯಾನವು ಸಂದರ್ಭಕ್ಕೆ ಅತ್ಯಂತ ಉಚಿತವಾಗಿದೆ. ನಾಕು ಧರ್ಮಪಾದಗಳಲ್ಲಿ ಕೃತ ತ್ರೇತಾಯುಗಗಳ ಅನತರ ಎರಡು ಧರ್ಮಪಾದಗಳು ಉಳಿದಿರುವುದರಿಂದ ಇದಕ್ಕೆ 'ದ್ವಾಪರ' ಎಂದು ಹೆಸರು. ದ್ವಾಪರದ ಕೊನೆಯಲ್ಲಿ ಎರಡು ಪಾದಗಳಲ್ಲಿಯೂ ಒಂದು ಪಾದವು ಶೈಥಿಲ್ಯವನ್ನು ಹೊಂದಿರುತ್ತದೆ. ಇಂಥ ಸಂದರ್ಭದಲ್ಲಿ ಜ್ಞಾನವು ಆಕುಲಿತವಾಗಿತ್ತೆಂಬುದನ್ನು ಭಾಷ್ಯಕಾರರು 'ದ್ವಾಪರೇ' ಎಂಬ ಒಂದೇ ಪದದಿಂದ ತಿಳಿಸಿದ್ದಾರೆ.

### ತತ್ವಜ್ಞಾನದಲ್ಲಿ ಹುಟ್ಟುವ ಕಾಲುಷ್ಯಗಳ ಪ್ರಭೇದಗಳು

**ತत्वप्रदीपः – सर्वत्र, मनुष्याणामृषीणां देवानां च । केषाञ्चिदिदं वा तत्त्वमदो वेति संशयो बभूव । तत्र चैकतरप्राधान्यं केषाञ्चित्, अन्यतरप्राधान्यमन्येषां, इदमेव नान्यदित्यन्येषां, तद्विपरीतमपरेषामिति ज्ञानमाकुलीबभूव ।**

ಭಾಷ್ಯದಲ್ಲಿರುವ 'ಸರ್ವತ್ರ' ಎಂಬ ಪದಕ್ಕೆ ಮನುಷ್ಯರಲ್ಲಿ ಋಷಿಗಳಲ್ಲಿ ದೇವತೆಗಳಲ್ಲಿ ಎಂದರ್ಥ. ಕೆಲವರು ತತ್ವವು ಇದೋ ಅಥವಾ ಅದೋ ? ಎಂಬ ಸಂಶಯವನ್ನು ತಾಳಿದರು. ಕೆಲವರು ತತ್ವವಿಷಯದಲ್ಲಿಯೇ ಇದು ತತ್ವವಾಗಿರಬೇಕು ಎಂದು ಏಕತರಪ್ರಧಾನಕೋಟಿಕ ಸಂಶಯವನ್ನು ಪಡೆದರು. ಕೆಲವರು ಅತತ್ವವಿಷಯದಲ್ಲಿ ಇದು ಪ್ರಾಯಃ ತತ್ವವಾಗಿರಬಹುದು ಎಂಬ ಅನ್ಯತರಪ್ರಧಾನವಾದ ಸಂಶಯವನ್ನು ಪಡೆದರು. ಕೆಲವರು ತತ್ವವಿಷಯದಲ್ಲಿ ಇದೇ ತತ್ವ ಮತ್ತೊಂದಲ್ಲ ಎಂಬ ದುರಾಗ್ರಹ ಪೀಡಿತರಾದರು. ಕೆಲವರು ಅತತ್ವವಿಷಯದಲ್ಲಿ 'ಇದೇ ತತ್ವ ಮತ್ತೊಂದಲ್ಲ' ಎಂಬ ವಿಪರೀತಜ್ಞಾನ ಪಡೆದರು. ಜ್ಞಾನವು ಆಕುಲೀಭಾವವನ್ನು ಪಡೆಯಿತು.

ವಿಶೇಷ ವಿಚಾರ - 'ಸರ್ವತ್ರ' ಎಂಬ ಪದಕ್ಕೆ ತತ್ವಜ್ಞಾನ ಯೋಗ್ಯರಾದ ಮನುಷ್ಯರಲ್ಲಿ ಋಷಿಗಳಲ್ಲಿ ದೇವತೆಗಳಲ್ಲಿ ಎಂಬ ಅರ್ಥವನ್ನು ತಿಳಿಯಬೇಕು. ವಿಪರೀತಜ್ಞಾನಕ್ಕೆ ಅರ್ಹರಾದ ಅಸುರರನ್ನು ಸಂಶಯಜ್ಞಾನಕ್ಕೆ ಅರ್ಹರಾದ ನಿತ್ಯಸಂಸಾರಿಗಳನ್ನು ಇಲ್ಲಿ ವಿವಕ್ಷಿಸಬೇಕಾಗಿಲ್ಲ.

ತತ್ವಜ್ಞಾನದಲ್ಲಿ ಆಕುಲೀಭಾವವುಂಟಾಯಿತು ಎಂದಷ್ಟೇ ಭಾಷ್ಯದಲ್ಲಿ ಹೇಳಿದ್ದಾರೆ. ಇದನ್ನು ಪಂಡಿತಾಚಾರ್ಯರು ಸುಂದರವಾಗಿ ಅನೇಕ ವಿಧದಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಜ್ಞಾನವು ಆಕುಲೀಭಾವವನ್ನು ಹೊಂದಿತೆಂದರೆ ತತ್ವಜ್ಞಾನದ ವಿಷಯದಲ್ಲಿ ಸಜ್ಜನರು ಸಂಶಯಕ್ಕೆ ಈಡಾದರು ಎಂಬುದು ಸಾಮಾನ್ಯವಾದ ಅರ್ಥ. ಈ ಸಂಶಯವನ್ನು ಅನೇಕ ಕ್ರಮದಲ್ಲಿ ಇಟ್ಟುಕೊಳ್ಳಬೇಕು.

೧. 'ವಿಷ್ಣುಸರ್ವೋತ್ತಮತ್ವ' ಎಂಬುದು ತತ್ವವೋ ಅಥವಾ ಅತತ್ವವೋ ? ಎಂಬ ಸಂಶಯ ಕೆಲವರಿಗೆ ಉಂಟಾಯಿತು.

೨. ವಿಷ್ಣು, ಸರ್ವೋತ್ತಮನಾಗಿರಬಹುದು ಎಂಬ ಸಂಶಯ ಕೆಲವರಿಗೆ.

೩. ವಿಷ್ಣು, ಸರ್ವೋತ್ತಮನಲ್ಲದಿರಬಹುದು ಎಂಬ ಸಂಶಯ ಕೆಲವರಿಗೆ.

೪. ವಿಷ್ಣು, ಸರ್ವೋತ್ತಮ ಎಂಬ ವಿಷಯದಲ್ಲಿ ವಿಚಾರವಿಲ್ಲದ ದುರಾಗ್ರಹ ಕೆಲವರಿಗೆ.

೫. ವಿಷ್ಣು, ಸರ್ವೋತ್ತಮ ಅಲ್ಲವೇ ಅಲ್ಲ ಎಂಬ ದುರಾಗ್ರಹ ಇನ್ನು ಕೆಲವರಿಗೆ.

ಹೀಗೆ ಅನೇಕ ಬಗೆಯ ಆಕುಲೀಭಾವವನ್ನು ತಿಳಿಯಬೇಕು. ವಿಚಾರ ಮಾಡದೆ ಕೇವಲ ದುರಾಗ್ರಹದಿಂದ ಒಪ್ಪಿಕೊಳ್ಳುವ ಸತ್ಯವೂ ಕೂಡ ತತ್ವಜ್ಞಾನದ ಕಾಲುಷ್ಯವೆಂದು ಪಂಡಿತಾಚಾರ್ಯರು ಇಲ್ಲಿ ವ್ಯಾಖ್ಯಾನ ಮಾಡಿದ್ದನ್ನು ಗಮನಿಸಬೇಕು.

## ಸಜ್ಜನರ ವಿಷಯದಲ್ಲಿ ದೇವತೆಗಳ ಕಾರುಣ್ಯ

**तत्वप्रदीपः – तन्निर्णयाय ब्रह्मरुद्रेन्द्रादिभिरर्थित इति श्रोतॄन् दर्शयति । इदमेव तत्त्वं नान्यदिति सम्यग्ज्ञाननिर्णयापेक्षयेन्द्रादिभिरिर्थितो ब्रह्मा रुद्रश्च ।**

ತತ್ವಜ್ಞಾನದಲ್ಲಿ ಉಂಟಾದ ಕಾಲುಷ್ಯವನ್ನು ಪರಿಹರಿಸಿ ತತ್ವದ ನಿರ್ಣಯಕ್ಕಾಗಿ ಬ್ರಹ್ಮರುದ್ರಾದಿಗಳಿಂದ ನಾರಾಯಣನು ಪ್ರಾರ್ಥಿಸಲ್ಪಟ್ಟನು. 'ತನ್ನಿರ್ಣಯಾಯ-ಬ್ರಹ್ಮರುದ್ರೇಂದ್ರಾದಿಭಿರರ್ಥಿತಃ' ಎಂಬ ಭಾಷ್ಯದ ಈ ಮಾತಿನಿಂದ ಶ್ರೋತ್ರಾನುಕೂಲ್ಯವನ್ನು

ತೋರಿಸಿದ್ದಾರೆ. ಇದೇ ನಿಜವಾದ ತತ್ವ ಮತ್ತೊಂದು ಅಲ್ಲವೆಂಬ ಯಥಾರ್ಥಜ್ಞಾನದ ನಿರ್ಣಯಕ್ಕಾಗಿ ಇಂದ್ರಾದಿದೇವತೆಗಳಿಂದ ಬ್ರಹ್ಮ ಹಾಗೂ ರುದ್ರರು ಅರ್ಥಿತರಾದರು.

### ನಾರಾಯಣನನ್ನು ಶರಣೆಂದರು

**तत्वप्रदीपः – ततस्तैः सर्वैरुपगम्योत्तमाधिकारिभिरलब्धतत्त्वोत्कण्ठा-परिखिन्नहृदयैरनन्यशरणत्वेन सकरुणमभिष्टूय प्रसादितोऽर्थितो भगवान्नारायणो व्यासत्वेनावततारेति वक्तृस्वरूपमाह –**

ಅನಂತರ ಬ್ರಹ್ಮ ಹಾಗೂ ರುದ್ರರು ಇಂದ್ರಾದಿದೇವತೆಗಳಿಂದ ಒಡಗೂಡಿ ತತ್ವಜ್ಞಾನದ ಸ್ಥಾಪನೆಗಾಗಿ ಮತ್ತೊಬ್ಬ ಉತ್ತಮ ಅಧಿಕಾರಿಯನ್ನು ಜಗತ್ತಿನಲ್ಲಿ ಎಲ್ಲೂ ಕಾಣದೆ ಬಹಳ ತವಕದಿಂದ ದುಃಖಿತವಾದ ಹೃದಯವುಳ್ಳವರಾಗಿ ನಿನ್ನನ್ನು ಬಿಟ್ಟು ಬೇರೆ ಯಾರೂ ಆಶ್ರಯರಿಲ್ಲ ಎಂಬುದಾಗಿ ಕರುಣಾಮೂರ್ತಿಯಾದ ಪರಮಾತ್ಮನನ್ನು ಮೊರೆ ಹೋದರು. ಮತ್ತು ಕ್ಷೀರಸಮುದ್ರಶಾಯಿಯಾದ ಪರಮಾತ್ಮನು ಪ್ರಸನ್ನನಾಗುವಂತೆ ಪ್ರಾರ್ಥಿಸಿದರು. ಹೀಗೆ ದೇವತೆಗಳಿಂದ ಪ್ರಾರ್ಥಿತನಾದ ಷಡ್ಗುಣೈಶ್ವರ್ಯಸಂಪನ್ನನಾದ ನಾರಾಯಣನು ತತ್ವಜ್ಞಾನಸ್ಥಾಪನೆಗಾಗಿ ವೇದವ್ಯಾಸರೂಪದಿಂದ ಅವತರಿಸಿದನು. ಭಾಷ್ಯದಲ್ಲಿ 'ಅರ್ಥಿತೋ ಭಗವಾನ್ ನಾರಾಯಣಃ ವ್ಯಾಸತ್ವೇನಾವತತಾರ' ಎಂಬ ಮಾತಿನಿಂದ ವಕ್ತ್ರಾನುಕೂಲ್ಯವನ್ನು ತಿಳಿಸಿದ್ದಾರೆ.

ವಿಶೇಷ ವಿಚಾರ - ಹಿಂದೆ 'ಸರ್ವತ್ರ' ಎಂಬ ಪದಕ್ಕೆ ವ್ಯಾಖ್ಯಾನ ಮಾಡುವಾಗ ಮನುಷ್ಯರು ಋಷಿಗಳು ದೇವತೆಗಳಲ್ಲಿ ಎಂದು ಹೇಳಲಾಯಿತು. ಮನುಷ್ಯರಿಗೆ ತತ್ವಜ್ಞಾನದ ವಿಷಯದಲ್ಲಿ ಸಂಶಯ ಬರಬಹುದು. ಆದರೆ ಋಷಿಗಳಿಗೆ ಮತ್ತು ದೇವತೆಗಳಿಗೆ ಸಂಶಯ ಬರಲು ಹೇಗೆ ಸಾಧ್ಯ ? ಈ ಪ್ರಶ್ನೆಗೆ ಪಂಡಿತಾಚಾರ್ಯರು 'ಇದಮೇವ ತತ್ವಮ್ ನಾನ್ಯತ್' ಇತ್ಯಾದಿ ವಾಕ್ಯದಿಂದ ಸ್ಪಷ್ಟವಾಗಿ ಉತ್ತರವನ್ನು ನೀಡಿದ್ದಾರೆ. ದೇವತೆಗಳ ತತ್ವಜ್ಞಾನದಲ್ಲಿ ಕಾಲುಷ್ಯವು ಸರ್ವಥಾ ಉಂಟಾಗಲಿಲ್ಲ. ಆದರೆ ಭೂಲೋಕದಲ್ಲಿರುವ ಸಜ್ಜನರ ತತ್ವಜ್ಞಾನದಲ್ಲಿ ಉಂಟಾದ ಕಾಲುಷ್ಯವನ್ನು ತಿಳಿದ ದೇವತೆಗಳು ದುಃಖಿತರಾದರು. ಸಜ್ಜನರಲ್ಲಿ ಯಥಾರ್ಥವಾದ ಜ್ಞಾನವನ್ನು ನಿರ್ಣಯ ಮಾಡಬೇಕೆಂಬ ಅಪೇಕ್ಷೆ ಉಳ್ಳವರಾದರು. ಈ ದೃಷ್ಟಿಯಿಂದ ದೇವತೆಗಳಲ್ಲಿ ಕಳವಳ ಉಂಟಾಯಿತೆಂದು ತಿಳಿಯಬೇಕು. ಆದ್ದರಿಂದ 'ಸರ್ವತ್ರ' ಎಂಬ ಪದದಿಂದ ದೇವತೆಗಳನ್ನು ಋಷಿಗಳನ್ನು ವಿವಕ್ಷಿಸುವುದು ತಪ್ಪಾಗುವುದಿಲ್ಲ.

'ಬ್ರಹ್ಮರುದ್ರೇಂದ್ರಾದಿಭಿಃ' ಎಂಬ ಪದಕ್ಕೆ 'ಬ್ರಹ್ಮ ಚ ರುದ್ರಶ್ಚ ಇಂದ್ರಶ್ಚ ಬ್ರಹ್ಮರುದ್ರೇಂದ್ರಾಃ' ಹೀಗೆ ಸಮಾಸವನ್ನು ಮಾಡಬಾರದು. 'ಬ್ರಹ್ಮ ಚ ರುದ್ರಶ್ಚ ಬ್ರಹ್ಮರುದ್ರೌ ಬ್ರಹ್ಮರುದ್ರೌ ಚ ಇಂದ್ರಶ್ಚ ಬ್ರಹ್ಮರುದ್ರೇಂದ್ರಾಃ' ಎಂಬುದಾಗಿ ಸಮಾಸವನ್ನು ಮಾಡಬೇಕೆಂಬ ಹೊಸವಿಚಾರವನ್ನು ಪಂಡಿತಾಚಾರ್ಯರು 'ಇಂದ್ರಾದಿಭಿಃ ಅರ್ಥಿತಃ ಬ್ರಹ್ಮ ರುದ್ರಶ್ಚ' ಎಂಬುದರಿಂದ ತಿಳಿಸಿದ್ದಾರೆ.

'ಅರ್ಥಿತಃ ' ಎಂಬ ಪದಕ್ಕೆ ಸ್ಪಷ್ಟವಾದ ಅರ್ಥವನ್ನು ಹೀಗೆ ತಿಳಿಯಬೇಕು - ಸಜ್ಜನರಲ್ಲಿ ತತ್ತ್ವಜ್ಞಾನದ ಸ್ಥಾಪನೆಗಾಗಿ ಸಕಲದೇವತೆಗಳಿಂದ ಇಂದ್ರದೇವರು ಪ್ರಾರ್ಥಿತರಾದರು. ಸಕಲ ದೇವತೆಗಳಿಂದ ಒಡಗೂಡಿದ ಇಂದ್ರಾದಿದೇವರಿಂದ, ರುದ್ರದೇವರು ಪ್ರಾರ್ಥಿತರಾದರು. ಸಕಲ ದೇವತೆಗಳಿಂದ ಒಡಗೂಡಿದ ರುದ್ರದೇವರಿಂದ ಬ್ರಹ್ಮದೇವರು ಪ್ರಾರ್ಥಿತರಾದರು. ಸಕಲ ದೇವತೆಗಳಿಂದ ಜೊತೆಗೂಡಿದ ಬ್ರಹ್ಮದೇವರಿಂದ ಕ್ಷೀರ ಸಮುದ್ರಶಾಯಿಯಾದ ನಾರಾಯಣನು ಪ್ರಾರ್ಥಿತನಾದನು. ಈ ಕ್ರಮದಲ್ಲಿ ಪ್ರಾರ್ಥನೆಯನ್ನು ತಿಳಿದಾಗ ಪರಮಾತ್ಮನೊಬ್ಬನೇ ಅನನ್ಯ ಶರಣನೆಂದು ಸ್ಪಷ್ಟವಾಗುತ್ತದೆ.

### ನಾರಾಯಣನು ಏಕೆ ಭಗವಂತ ?

**तत्वप्रदीपः –**

**''ज्ञानशक्तिबलैश्वर्यवीर्यतेजांस्यशेषतः ।**
**भगवच्छब्दवाच्यानि विना हेयैर्गुणादिभिः'' ।।**

**इत्यादावशेषत इति विशेषणान्निरतिशयज्ञानादिगुणवान् भगवच्छब्दार्थ उक्तः स्यात् । गुणगुण्यभेदाभिप्रायात् । न च गुणानां परस्परं भेदः । विशेषाङ्गीकारेणैव बहुवचनाविरोधात् ।**

'ಭಗವಾನ್' ಎಂದು ಭಾಷ್ಯದಲ್ಲಿ ಹೇಳಿದ್ದಾರೆ. ಇದರರ್ಥ ಹೀಗಿದೆ -

ಜ್ಞಾನಶಕ್ತಿಬಲೈಶ್ವರ್ಯವೀರ್ಯತೇಜಾಂಸ್ಯಶೇಷತಃ ।
ಭಗವಚ್ಛಬ್ದವಾಚ್ಯಾನಿ ವಿನಾ ಹೇಯೈರ್ಗುಣಾದಿಭಿಃ ॥

ಹೇಯವಾದ ಗುಣಗಳಿಂದ ರಹಿತವಾದ ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸು, ಈ ಆರು ಸಂಪೂರ್ಣವಾದ ಗುಣಗಳು 'ಭಗವತ್' ಎಂಬ ಶಬ್ದದಿಂದ ಪ್ರತಿಪಾದ್ಯವಾಗಿವೆ.

ಹೀಗೆ ಭಗವತ್ ಶಬ್ದದ ಅರ್ಥವನ್ನು ಹೇಳುವ ಶ್ಲೋಕದಲ್ಲಿ 'ಅಶೇಷತಃ' ಎಂದು ವಿಶೇಷಣವನ್ನು ನೀಡಿರುವುದರಿಂದ ನಿರತಿಶಯವಾದ ಜ್ಞಾನಾದಿಗುಣಗಳೇ 'ಭಗವತ್' ಎಂದು ಕರೆಸಿಕೊಳ್ಳುತ್ತವೆ ಎಂದು ಹೇಳಿದಂತಾಯಿತು. ಈ ಗುಣಗಳು ಬೇರೆಯಲ್ಲ. ಗುಣಿಯಾದ ಪರಮಾತ್ಮನು ಬೇರೆಯಲ್ಲ. ಮತ್ತು ಆ ಗುಣಗಳಿಗೂ ಪರಸ್ಪರ ಭೇದವಿರುವುದಿಲ್ಲ. ಆದರೂ ಗುಣಗುಣಿಭಾವವು ಮತ್ತು ಅನೇಕ ಗುಣಗಳಿಗೆ ಆಶ್ರಯನಾಗಿದ್ದಾನೆಂಬುದು ಯುಕ್ತವಾಗುತ್ತದೆ. 'ವಿಶೇಷ' ಎಂಬ ವಸ್ತುವನ್ನು ಒಪ್ಪಿರುವುದರಿಂದ ಬಹುವಚನದ ವಿರೋಧಕ್ಕೆ ಅವಕಾಶವಿಲ್ಲ.

ವಿಶೇಷ ವಿಚಾರ - 'ಭಗವತ್' ಶಬ್ದದ ಅರ್ಥವನ್ನು ಹೇಳುವ ಈ ಶ್ಲೋಕವನ್ನು ಗಮನಿಸಿದರೆ ಶಕ್ತಿ, ಬಲ, ವೀರ್ಯ ಇತ್ಯಾದಿ ಶಬ್ದಗಳಿಂದ ಹೇಳಿದ ಅರ್ಥವನ್ನೇ ಪುನಃ ಪುನಃ ಹೇಳಿದಂತೆ ಕಾಣಿಸುತ್ತದೆ. ಮತ್ತು ಈ ಆರು ಗುಣಗಳನ್ನೇ ಮುಖ್ಯವಾಗಿ 'ಭಗವಾನ್' ಎಂದು ಕರೆಯಲು ಏನು ಕಾರಣ ? ಎಂಬ ಸಂಶಯ ಬರುತ್ತದೆ. ಇದಕ್ಕೆ ಹೀಗೆ ಉತ್ತರವನ್ನು ತಿಳಿಯಬೇಕು - ಜಗತ್ತಿನ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡುವವನೇ ಸರ್ವೋತ್ತಮನಾದ ವ್ಯಕ್ತಿ. ಇವನಲ್ಲಿ ಸೃಷ್ಟಿ, ಸ್ಥಿತಿ, ಸಂಹಾರಗಳನ್ನು ಮಾಡಲು ಮುಖ್ಯವಾಗಿ ಆರು ಗುಣಗಳು ಇರಲೇ ಬೇಕು. ಅಂಥ ಆರು ಗುಣಗಳೇ 'ಭಗವತ್' ಎಂದು ಕರೆಸಿಕೊಳ್ಳುತ್ತವೆ. ಜಗತ್ತಿನ ಸೃಷ್ಟಿಯನ್ನು ಮಾಡಬೇಕೆಂದರೆ ಸಂಪೂರ್ಣವಾದ ಜಗತ್ತಿನ ತಿಳುವಳಿಕೆ ಇರಬೇಕು. ಮತ್ತು ತಿಳುವಳಿಕೆ ಇದ್ದರೆ ಸಾಲದು, ಸೃಷ್ಟಿ ಮಾಡುವ ಶಕ್ತಿ ಇರಬೇಕು. ಹೀಗೆ ಸೃಷ್ಟಿಗೆ ಉಪಯೋಗಿಯಾದ ಎರಡು ಗುಣಗಳೆಂದರೆ ಜ್ಞಾನ ಮತ್ತು ಶಕ್ತಿ. ಸೃಷ್ಟಿಯನ್ನು ಮಾಡಿದ ಮೇಲೆ ಅದನ್ನು ರಕ್ಷಣೆ ಮಾಡುವ ಸಾಮರ್ಥ್ಯ ಬೇಕು. ರಕ್ಷಣೆ ಮಾಡುವ ಸಾಮರ್ಥ್ಯವನ್ನೇ 'ಬಲ' ಎನ್ನುತ್ತಾರೆ. ಆದ್ದರಿಂದ ಶಕ್ತಿಯೇ ಬೇರೆ, ಬಲವೇ ಬೇರೆ. ಸೃಷ್ಟಿಗೆ ಉಪಯೋಗಿಯಾದ ಸಾಮರ್ಥ್ಯಕ್ಕೆ 'ಶಕ್ತಿ' ಎಂದು ಹೆಸರು. ರಕ್ಷಣೆಗೆ ಉಪಯೋಗಿಯಾದ ಸಾಮರ್ಥ್ಯಕ್ಕೆ ಬಲ ಎಂದು ಹೆಸರು. ಮತ್ತು ರಕ್ಷಣೆ ಮಾಡಲು ತನ್ನಲ್ಲಿ ಹೇರಳವಾದ ಐಶ್ವರ್ಯ ಬೇಕು. ಹೀಗೆ ರಕ್ಷಣೆಗೆ ಉಪಯೋಗಿಯಾದ ಎರಡು ಗುಣಗಳೆಂದರೆ ಬಲ ಮತ್ತು ಐಶ್ವರ್ಯ. ಸೃಷ್ಟಿ ಹಾಗೂ ರಕ್ಷಣೆಯನ್ನು ಮಾಡುವ ವ್ಯಕ್ತಿಯಲ್ಲಿ ಸಂಹಾರ ಮಾಡುವ ಪರಾಕ್ರಮವಿರಬೇಕು. ಅದನ್ನು 'ವೀರ್ಯ' ಎನ್ನುತ್ತಾರೆ. ಎದುರಾಳಿ ನೋಡಿದರೆ ಹೆದರುವಂಥ ಕಾಂತಿಗೆ 'ತೇಜಸ್ಸು' ಎನ್ನುತ್ತಾರೆ. ಆದ್ದರಿಂದ ಸಂಹಾರಕ್ಕೆ ಅತ್ಯುಪಯುಕ್ತವಾದ ಎರಡು ಗುಣಗಳು ವೀರ್ಯ ಮತ್ತು ತೇಜಸ್ಸುಗಳು ಸಂಪೂರ್ಣವಾಗಿ ಪರಮಾತ್ಮನಲ್ಲಿರುವುದರಿಂದ ಅವನನ್ನು 'ಭಗವಾನ್' ಎನ್ನುತ್ತಾರೆ. ಆದ್ದರಿಂದ ಸೃಷ್ಟಿ,

ಸ್ಥಿತಿ, ಸಂಹಾರಗಳ ನಿಜವಾದ ಒಡೆಯ ಅವನೊಬ್ಬನೇ ಆಗುತ್ತಾನೆ. ಅವನೇ 'ಭಗವಾನ್' ಎಂಬ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ. ಮತ್ತು ಹೇಯವಾದ ಯಾವುದೇ ಗುಣಗಳಿಂದ ಕೂಡಿದವನಾಗಿರುವುದಿಲ್ಲ.

ಈ ಶ್ಲೋಕದಲ್ಲಿ ಜ್ಞಾನ, ಶಕ್ತಿ ಮೊದಲಾದ ಗುಣಗಳನ್ನೇ 'ಭಗವತ್' ಎಂಬ ಪದದಿಂದ ಹೇಳಿದ್ದಾರೆ. ಇದರಿಂದ ಗುಣಗಳೇ ಪರಮಾತ್ಮನಾಗಿದ್ದಾನೆ. ಗುಣ ಹಾಗೂ ಗುಣಿಯಾದ ಪರಮಾತ್ಮನಿಗೆ ಭೇದವಿಲ್ಲವೆಂದು ತಿಳಿಸಿದಂತಾಗುತ್ತದೆ. ವಿಶೇಷ ಬಲದಿಂದ ಗುಣಗುಣಿಭಾವವು ಯುಕ್ತವಾಗುತ್ತದೆಂಬ ಅಂಶವನ್ನು ಗಮನಿಸಬೇಕು.

### ಜ್ಞಾನಾದಿ ಗುಣಗಳೇ ಭಗವಾನ್

**तत्वप्रदीपः – ननु कथमेकस्यैव गुणगुणिभावः । गुणव्यतिरिक्तो हि गुणसम्बन्धेन गुणवान् । दण्डव्यतिरिक्तो दण्डीतिवत् भिन्नयोरेव तथाऽनुभवादिति चेन्न ।**

ಆಕ್ಷೇಪ - ಒಂದೇ ವಸ್ತುವಿಗೆ ಗುಣಗುಣಿಭಾವವು ಹೇಗೆ ಕೂಡುತ್ತದೆ ? ಗುಣವನ್ನೇ ಭಗವಾನ್ ಎನ್ನುತ್ತಿದ್ದೀರಿ. ಹೀಗಿರುವಾಗ ಗುಣಿಯು ಭಗವಾನ್ ಆಗಲು ಹೇಗೆ ಸಾಧ್ಯ ? ಗುಣಕ್ಕಿಂತ ಅತಿರಿಕ್ತವಾದ ಪದಾರ್ಥವು ಗುಣದ ಸಂಬಂಧದಿಂದ 'ಗುಣವಾನ್' ಎಂದು ಕರೆಸಿಕೊಳ್ಳುತ್ತದೆ. ಉದಾ - ದಂಡಕ್ಕಿಂತ ಅತಿರಿಕ್ತವಾದ ದೇವದತ್ತನು ದಂಡಿಯೆಂದು ಕರೆಸಿಕೊಳ್ಳುತ್ತಾನೆ. ಇದು ಲೋಕಸಿದ್ಧವಾದ ವಿಚಾರ. ಆದ್ದರಿಂದ ಭಿನ್ನವಾದ ಎರಡು ಪದಾರ್ಥಗಳಿಗೆ ಗುಣಗುಣಿಭಾವವು ಯುಕ್ತವಾಗುತ್ತದೆಂಬುದು ಅನುಭವಸಿದ್ಧವಾಗಿದೆ. ಹೀಗಿರುವಾಗ ಗುಣಗುಣಿಗಳಿಗೆ ಅಭೇದವನ್ನು ಹೇಗೆ ಹೇಳುವಿರಿ ?

### ಗುಣವೇ ಗುಣಿ

**तत्वप्रदीपः – प्रत्यक्षत एव दण्डदण्डिनोर्भेदानुभवात् सम्बन्धापेक्षया दण्डीति युज्यते । न च गुणागुणिनोर्भेदोऽनुभूयते । 'विज्ञानमानन्दं ब्रह्म' इत्यादिसामानाधिकरण्येनाभेदप्रतीतेः । लोके च 'शुक्लः पट' इत्यादौ । तत्र शौक्ल्यसम्बन्धापेक्षया शुक्लत्वमिति चेन्न ।**

ಪರಿಹಾರ - ಈ ಆಕ್ಷೇಪ ತಪ್ಪು. ದಂಡ ಹಾಗೂ ದಂಡಿಗಳಿಗೆ ಭೇದವಿರುವುದು ಪ್ರತ್ಯಕ್ಷದಿಂದ ಸಿದ್ಧವಾದ ವಿಚಾರ. ಆದ್ದರಿಂದ ದಂಡದ ಸಂಬಂಧದಿಂದ ದೇವದತ್ತನು ದಂಡಿಯೆಂದು ಕರೆಸಿಕೊಳ್ಳುತ್ತಾನೆ. ಇದು ತಪ್ಪಾಗುವುದಿಲ್ಲ. ಆದರೆ ಗುಣ ಹಾಗೂ ಗುಣಿಗಳ ವಿಷಯದಲ್ಲಿ ಹೀಗೆ ಹೇಳಲಾಗದು. ಯಾವ ವ್ಯಕ್ತಿಗೂ ಕೂಡ ಗುಣ ಹಾಗೂ ಗುಣಿಗಳಲ್ಲಿ ಭೇದವಿದೆ ಎಂಬ ಅನುಭವ ಬರುತ್ತಿಲ್ಲ. ಮತ್ತು 'ವಿಜ್ಞಾನಂ ಆನಂದಂ ಬ್ರಹ್ಮ' ಎಂಬ ಶ್ರುತಿಯಲ್ಲಿ ಸಮಾನ ವಿಭಕ್ತಿಯಲ್ಲಿ ಗುಣ ಹಾಗೂ ಗುಣಿಗಳ ಪ್ರಯೋಗವಿರುವುದರಿಂದ ಗುಣ ಹಾಗೂ ಗುಣಿಗಳಿಗೆ ಅಭೇದವಿದೆ ಎಂದೇ ಪ್ರತೀತವಾಗುತ್ತದೆ. ಲೋಕದಲ್ಲಿಯೂ ಕೂಡ 'ಶುಕ್ಲಃ ಪಟಃ' ಎಂಬಲ್ಲಿ ಸಾಮಾನಾಧಿಕರಣ್ಯದ ಪ್ರತೀತಿಯೇ ಬರುತ್ತಿದೆ.

### ಶುಕ್ಲಾದಿ ನಾಕು ಬಣ್ಣಗಳೇ ನಾರಾಯಣ

**तत्वप्रदीपः – 'शुक्लो वर्णः' इति प्रयोगदर्शनात् । तथाच श्रुतिः 'श्वेतं रूपम्' इति, 'तस्य ह वा एतस्य परमस्य नारायणस्य चत्वारि रूपाणि शुक्लं रक्तं रौक्मं कृष्णम्' इति च । शौक्ल्यमित्यादिव्यवहारो निष्कर्षार्थः स्वरूपत्वमितिवत् ।**

ಆಕ್ಷೇಪ - 'ಶುಕ್ಲಃ ಪಟಃ' ಎಂಬ ಪ್ರಯೋಗದಲ್ಲಿ 'ಶೌಕ್ಲ್ಯ' ಎಂಬ ಸಂಬಂಧಾಪೇಕ್ಷೆಯಿಂದ 'ಶುಕ್ಲಃ' ಎಂಬ ಪದವನ್ನು ಪ್ರಯೋಗಿಸುತ್ತಾರೆ. ಆದ್ದರಿಂದ 'ಶುಕ್ಲ' ಎಂಬ ಬಣ್ಣಕ್ಕೂ ಪಟಕ್ಕೂ ಅಭೇದವನ್ನು ಹೇಗೆ ಹೇಳಿದಂತಾಗುತ್ತದೆ.

ಪರಿಹಾರ - 'ಶುಕ್ಲಃ ವರ್ಣಃ' ಎಂಬ ಪ್ರಯೋಗವನ್ನು ಹೇಗೆ ಕೂಡಿಸುತ್ತೀರಿ ? ಇಲ್ಲಿ ಶುಕ್ಲ ಶಬ್ದಕ್ಕೆ ಶೌಕ್ಲ ಸಂಬಂಧವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಶ್ರುತಿ ಹೀಗಿದೆ - 'ತಸ್ಯ ಹ ವಾ ಏತಸ್ಯ ಪರಮಸ್ಯ ನಾರಾಯಣಸ್ಯ ಚತ್ವಾರಿ ರೂಪಾಣಿ ಶುಕ್ಲಂ ರಕ್ತಂ ರೌಕ್ಮಂ ಕೃಷ್ಣಮ್' ಎಂದು. 'ಸ್ವರೂಪ' ಎಂದೇ ಹೇಳಬಹುದು. ಆದರೂ 'ಸ್ವರೂಪತ್ವಂ' ಎಂಬುದಾಗಿ ಸ್ಪಷ್ಟತೆಗೋಸ್ಕರ ವ್ಯವಹರಿಸುವರು. ಅದರಂತೆ 'ಶುಕ್ಲಂ' ಎಂದೇ ಹೇಳಬಹುದು. 'ಶೌಕ್ಲಂ' ಎಂದು ವ್ಯವಹರಿಸುವುದು ಸ್ಪಷ್ಟತೆಗಾಗಿ.

ಮಣ್ಣು ಹಾಗೂ ಘಟಗಳಿಗೆ ಭೇದಾಭೇದ

**तत्वप्रदीपः – सामानाधिकरण्यं हि सर्वेषामभेदे प्रमाणम् । 'मृद्घटः' इत्यादिसामानाधिकरण्येऽपि कारणेनाभेदप्रतीतेर्विनाशाच्च कार्यस्य भेदाभेदोपपत्तिः।**

ಶಬ್ದಪ್ರಯೋಗದಲ್ಲಿ ಸಾಮಾನಾಧಿಕರಣ್ಯವಿದ್ದರೆ (ಸಮಾನ ವಿಭಕ್ತಿಗಳಿದ್ದರೆ) ಎಲ್ಲೆಡೆಯೂ ಅಭೇದದಲ್ಲೇ ಅದು ಪ್ರಮಾಣವಾಗುತ್ತದೆ.

ಹಾಗಾದರೆ 'ಮೃದ್ಘಟಃ' ಎಂಬಲ್ಲಿಯೂ ಸಾಮಾನಾಧಿಕರಣ್ಯ ಪ್ರಯೋಗವಿರುವುದರಿಂದ ಮೃತ್ ಹಾಗೂ ಘಟಗಳಿಗೆ ಅಭೇದವನ್ನು ಹೇಳಬೇಕಾದೀತೆಂಬ ಅತಿಪ್ರಸಂಗಕ್ಕೆ ಅವಕಾಶವಿಲ್ಲ.

ಘಟಕ್ಕೆ ಮಣ್ಣು ಕಾರಣವಾದ್ದರಿಂದ ಅಭೇದವು ಪ್ರತೀತವಾಗುತ್ತಿದೆ. ಆದರೆ ಘಟ ನಾಶವಾದರೂ ಮಣ್ಣು ಇರುವುದರಿಂದ ಕಾರ್ಯ ಹಾಗೂ ಕಾರಣಗಳಿಗೆ ಭೇದಾಭೇದವನ್ನು ಒಪ್ಪಬೇಕು.

ಯಾವದ್‌ದ್ರವ್ಯಭಾವಿ ಪದಾರ್ಥಗಳಿಗೆ ಮಾತ್ರ ಅಭೇದ

**तत्वप्रदीपः – तस्मात् द्रव्ये सत्यप्यपायिनां गुणादीनां भेदाभेदौ, यावद्-द्रव्यभाविनामभेदः ।**

ಆದ್ದರಿಂದ ದ್ರವ್ಯ ಇರುವಾಗಲೇ ಅದರ ಗುಣ ನಾಶವಾದರೆ ದ್ರವ್ಯಗುಣಗಳಿಗೆ ಭೇದಾಭೇದವನ್ನು ಒಪ್ಪಬೇಕು. ಯಾವದ್‌ದ್ರವ್ಯಭಾವಿಯಾದ ಗುಣಗಳಿಗೂ ದ್ರವ್ಯಕ್ಕೂ ಅಭೇದವನ್ನೇ ಒಪ್ಪಬೇಕು.

'ವಿಶೇಷ'ವು ಭೇದವ್ಯವಹಾರವನ್ನು ನಿರ್ವಹಿಸುತ್ತದೆ

**तत्वप्रदीपः – ननु भेदः प्रतीयते गुणगुणिनोः, पटस्य शौक्ल्यमिति तन्न । विशेषप्रतीतिरेषा 'पटस्य भेदः' इतिवत् । न हि पटात् भेदस्य भेदः । अनवस्थानात् । यथा च समवायस्य सत्त्वमिति स्वरूपभूतमेव सत्त्वं विशेष्यते।**

ಆಕ್ಷೇಪ - ಗುಣ ಹಾಗೂ ಗುಣಿಗಳಿಗೆ ಭೇದವೇ ಪ್ರತೀತವಾಗುತ್ತದೆ. 'ಪಟಸ್ಯ ಶೌಕ್ಲ್ಯಮ್' ಎಂಬುದಾಗಿ ಭೇದಸಾಪೇಕ್ಷವಾದ ಷಷ್ಠೀವಿಭಕ್ತಿಯ ವ್ಯವಹಾರವು ಲೋಕಪ್ರಸಿದ್ಧವಾಗಿದೆ. ಷಷ್ಠೀ ವಿಭಕ್ತಿಯಿಂದ ತಿಳಿಯುವ ಸಂಬಂಧವನ್ನು ಕೂಡಿಸಬೇಕೆಂದರೆ ಭೇದವನ್ನು ಒಪ್ಪಬೇಕಲ್ಲವೆ ?

ಪರಿಹಾರ - ಭೇದವನ್ನೇ ಒಪ್ಪಬೇಕಾಗಿಲ್ಲ. ಭೇದಪ್ರತಿನಿಧಿಯಾದ ವಿಶೇಷವನ್ನು ಒಪ್ಪಿದರೂ ಸಾಕು. 'ಪಟಸ್ಯ ಭೇದಃ' ಎಂಬ ವ್ಯವಹಾರ ಇದೆ ಎಂದ ಮಾತ್ರಕ್ಕೆ ಪಟಕ್ಕೂ ಭೇದಕ್ಕೂ ಭೇದವನ್ನು ಹೇಳಲು ಸಾಧ್ಯವಿಲ್ಲ. ಹಾಗೇನಾದರೂ ಭೇದವು ಪಟಕ್ಕಿಂತ ಭಿನ್ನವಾಗಿದೆ ಎಂದು ಹೇಳಿದರೆ ಅನವಸ್ಥಾದೋಷವು ಬರುತ್ತದೆ. 'ಸಮವಾಯಸ್ಯ ಸತ್ವಮ್' ಎಂದು ಹೇಳಿದಾಗ ಸಮವಾಯವನ್ನು ಹೇಗೆ ಸ್ವರೂಪಭೂತವೆಂದು ತಾರ್ಕಿಕರು ಹೇಳುತ್ತಾರೋ ಅದರಂತೆ 'ಪಟಸ್ಯ ಭೇದಃ' ಎಂಬಲ್ಲಿಯೂ ಭೇದವನ್ನು ಪಟಸ್ವರೂಪವೆಂದೇ ಹೇಳಬೇಕು. ವಿಶೇಷದ ಬಲದಿಂದ ವಿರೋಧವನ್ನು ಪರಿಹಾರ ಮಾಡಬೇಕು.

'ವಿಶೇಷ' ಒಪ್ಪದೆ ಬೇರೆ ದಾರಿಯಿಲ್ಲ

**ತत्वप्रदीपः – न च तस्य सत्ता भिन्नाऽभ्युपगम्यते वैशेषिकैः । द्रव्यगुणकर्मस्वेव सत्तासामान्यस्य वृत्तेः । अस्ति च "समवायः सन्" इति प्रयोगविशेषः । अन्यथा 'समवायः समवायः' इतिवदनर्थकः प्रयोगः स्यात् ।**

'ಸಮವಾಯಸತ್ವಮ್' ಎಂಬಲ್ಲಿ ಸಮವಾಯಕ್ಕೆ ಸತ್ತಾದಿಂದ ಭೇದವನ್ನು ವೈಶೇಷಿಕರು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಸತ್ತಾಸಾಮಾನ್ಯವು ದ್ರವ್ಯಗುಣಕರ್ಮಗಳಲ್ಲಷ್ಟೆ ಇರುತ್ತದೆ ಎಂದು ಅವರ ಮತ. ಆದರೂ 'ಸಮವಾಯಃ ಸನ್' ಎಂಬ ವಿಶೇಷ ಪ್ರಯೋಗವಿದೆ. ಇದನ್ನು ಕೂಡಿಸಬೇಕೆಂದರೆ ಸಮವಾಯವು ಸತ್ತಾಸ್ವರೂಪವೆಂದೇ ಹೇಳಬೇಕು. ಮತ್ತು ವಿಶೇಷದ ಬಲದಿಂದ ವಿರೋಧವನ್ನು ಪರಿಹಾರ ಮಾಡಬೇಕು. ವಿಶೇಷವನ್ನು ಒಪ್ಪದಿದ್ದರೆ 'ಸಮವಾಯಃ ಸಮವಾಯಃ' ಎಂದು ಹೇಳಿದ್ದನ್ನೇ ಪುನಃ ಹೇಳಿದಂತಾಗಿ ಪ್ರಯೋಗಕ್ಕೆ ವೈಯರ್ಥ್ಯವು ಬರುತ್ತದೆ.

ಹೇಳಿದ್ದನ್ನೇ ಹೇಳಬಾರದೆಂದರೆ ವಿಶೇಷವನ್ನು ಒಪ್ಪಿರಿ

**तत्वप्रदीपः – न चौपचारिकं समवायसत्त्वम् । मुख्यतस्तदभावप्रसङ्गात्। यथाच मायिनां ब्रह्मणः सत्यज्ञानानन्दत्वादि । नचैकस्मिन् ब्रह्मणि विशेषमन्तरेण सत्यज्ञानादिशब्दप्रवृत्तिः, तेषां पर्यायत्वप्रसङ्गात् ।**

ಸಮವಾಯದಲ್ಲಿ ಸತ್ವವು ಔಪಚಾರಿಕವೆಂದು ಹೇಳಲು ಸಾಧ್ಯವಿಲ್ಲ. ಹಾಗಾದರೆ ಮುಖ್ಯ ಸಮವಾಯವು ಎಲ್ಲೂ ಇಲ್ಲವೆಂದಾಗಬೇಕಾದೀತು. ಹೇಗೆ ಮಾಯಾವಾದಿಗಳು ಸತ್ಯ, ಜ್ಞಾನ

ಆನಂದಾದಿಗಳು ಬ್ರಹ್ಮನನ್ನು ಬಿಟ್ಟು ಬೇರೆ ಎಲ್ಲಿಯೂ ಮುಖ್ಯವಾಗಿ ಇಲ್ಲವೆಂದು ಹೇಳುತ್ತಾರೋ; ಅದರಂತೆ ಒಬ್ಬನೇ ಬ್ರಹ್ಮನಲ್ಲಿ ವಿಶೇಷವನ್ನು ಒಪ್ಪದಿದ್ದರೆ ಸತ್ಯ, ಜ್ಞಾನ ಮೊದಲಾದ ಶಬ್ದಗಳ ಪ್ರವೃತ್ತಿಯನ್ನೇ ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಹೇಳಿದ್ದನ್ನೇ ಹೇಳಿದಂತಾಗಿ ಪರ್ಯಾಯತ್ವ ದೋಷವು ಬರುತ್ತದೆ.

ಓ ಮಾಯಾವಾದಿ ! ವಿಶೇಷ ಒಪ್ಪದಿದ್ದರೆ ನಿನ್ನ ನಿರ್ವಿಶೇಷಬ್ರಹ್ಮನೂ ಸಿದ್ಧನಾಗಲಾರ

**तत्वप्रदीपः – निर्विशेषेऽपि वस्तुन्यनृतादिव्यावर्त्यभेदाच्छब्दान्तर-प्रवृत्तिरिति चेत् । अनृतादिव्यावृत्त्या ब्रह्मणि विशेषोऽस्ति वा न वा । न चेदेकपदेनैवाखण्डार्थसिद्धेः पदान्तरवैयर्थ्यं, पर्यायत्वं च सत्यादिपदानां स्यात्।**

ಆಕ್ಷೇಪ - ಬ್ರಹ್ಮನು ನಿರ್ವಿಶೇಷನಾಗಿದ್ದಾನೆ. ಆದ್ದರಿಂದ ಅವನಲ್ಲಿ ವಿಶೇಷವನ್ನು ಒಪ್ಪಲು ಸಾಧ್ಯವಿಲ್ಲ. ಹಾಗಾಗಿ 'ಸತ್ಯ' ಎಂಬ ಪದವು ಅನೃತವ್ಯಾವೃತ್ತಿಯನ್ನು ಜ್ಞಾನವೆಂಬ ಪದವು ಅಜ್ಞಾನವ್ಯಾವೃತ್ತಿಯನ್ನು, ಆನಂದ ಎಂಬ ಪದವು ದುಃಖವ್ಯಾವೃತ್ತಿಯನ್ನು ಹೇಳುತ್ತಿದೆ ಎಂದು ಪರ್ಯಾಯತಾದೋಷವನ್ನು ಪರಿಹರಿಸಬಹುದಲ್ಲವೆ ?

ಪರಿಹಾರ - ಹೀಗೆ ಹೇಳಿದರೂ ವಿಶೇಷವನ್ನು ಒಪ್ಪುದು ಅನಿವಾರ್ಯ. ಅನೃತಾದಿ ವ್ಯಾವೃತ್ತಿಗೋಸ್ಕರ ಬ್ರಹ್ಮನಲ್ಲಿ ವಿಶೇಷವನ್ನು ಒಪ್ಪುತ್ತೀಯೋ ಇಲ್ಲವೋ ? ಒಪ್ಪದಿದ್ದರೆ 'ಸತ್ಯ' ಎಂಬ ಒಂದೇ ಪದದಿಂದ ಅಖಂಡಾರ್ಥವು ಸಿದ್ಧವಾಗುವಾಗ ಉಳಿದ ಪದಗಳು ವ್ಯರ್ಥವಾಗುತ್ತವೆ. ಮತ್ತು ಸತ್ಯಾದಿಪದಗಳಿಗೆ ವೈಯ್ಯರ್ಥದೋಷವು ಬರುತ್ತದೆ.

ವಿಶೇಷಕ್ಕೋಸ್ಕರವಾದರೂ ನಮ್ಮ ಮತವನ್ನು ಒಪ್ಪಿಕೊ

**तत्वप्रदीपः – विशेषाभ्युपगमेन वेदपदोदितस्य ब्रह्मणोऽनन्तगुणत्वमित्य-स्मन्मतमेवाविस्मृतविमलविबुधामहाजनमानसमाननीयमखिलघस्मरैरस्मृतमपि तैरङ्गीकृतं स्यात् ।**

ವಿಶೇಷವನ್ನು ಒಪ್ಪುವುದರಿಂದ ನಮ್ಮ ಮತದಲ್ಲಿ ಬ್ರಹ್ಮನು ಸಕಲವೇದಗಳಿಂದ ಪ್ರತಿಪಾದ್ಯನಾಗಿ ಅನಂತಗುಣಪರಿಪೂರ್ಣನೆಂದು ಸಿದ್ಧನಾಗುತ್ತಾನೆ. ಸಜ್ಜನರೆಲ್ಲರೂ ಈ ನಮ್ಮ ಮತವನ್ನೇ

ಪೂಜಿಸುವರು. ಆ ಸಜ್ಜನರು ಸಾಮಾನ್ಯರಲ್ಲ. ಶಾಸ್ತ್ರದ ಮಾತುಗಳನ್ನು ಎಂದೂ ಮರೆಯದ ವಿಶಾಲಮನಸ್ಸಿನ ಮಹಾಮೇಧಾವಿಗಳು. ಇಂಥವರಿಂದ ಸ್ವೀಕೃತವಾದ ತತ್ವವಾದವನ್ನು ಭಗವಂತನಲ್ಲಿ ಗುಣಗಳನ್ನು ಅಲ್ಲಗಳೆಯುವ ಮಾಯಿಗಳು ತಮಗೆ ಸಮ್ಮತವಾದ ವಿಷಯವು ಶಾಸ್ತ್ರದಲ್ಲಿ ಹೇಳದಿದ್ದರೂ ಸಹ ಅಂಗೀಕಾರ ಮಾಡಬೇಕಾಗುತ್ತದೆ. ('ಘಸಲ್ಲ ಅದನೇ' ಎಂಬ ಧಾತುವಿಗೆ ಕ್ಮರಚ್ ಪ್ರತ್ಯಯವು ಬಂದು 'ಘಸ್ಮರ' ಎಂಬ ರೂಪವು ನಿಷ್ಪನ್ನವಾಗಿದೆ. ಎಲ್ಲವನ್ನು ನುಂಗುವನಿಗೆ 'ಘಸ್ಮರ' ಎನ್ನುತ್ತಾರೆ. ಭಗವಂತನಲ್ಲಿ ಅನಂತಗುಣಗಳನ್ನು (ನುಂಗಿದ) ನಿರಾಕರಿಸುವ ಹಾಗೂ ಸತ್ಯ ಜಗತ್ತನ್ನು (ನುಂಗಿದ) ನಿರಾಕರಿಸುವ ಮಾಯಾವಾದಿಯನ್ನು ಇಲ್ಲಿ 'ಘಸ್ಮರ' ಎಂದು ಕರೆದಿದ್ದಾರೆ.)

ಇಲ್ಲದಿದ್ದರೆ ಶೂನ್ಯವಾದಿಯೆಂದು ಒಪ್ಪಿಕೊ

**तत्वप्रदीपः – अथानृतादिव्यावृत्तेरन्यो विशेषो नाभ्युपगम्यते, अध्यस्तातद्रूपव्यावृत्तेरेव विवक्षितत्वात्; न च तावताऽद्वैतहानिः, भावरूपविशेषाभावात्, भावाद्वैतं हि तैरभ्युपगम्यते; अतो नाभावेन सविशेषत्वप्रसङ्ग इति यदि ब्रूयात् स प्रष्टव्यः ? सोऽभावो ब्रह्मणो भिन्नः किमुताभिन्न इति । भिन्नश्चेत् भेदधर्मकत्वादभावविशिष्टत्वाच्च ब्रह्मणः सविशेषत्वम् । अभिन्नश्चेदभाव एव वा ब्रह्मैव वा स्यात् । अभावत्वे शून्यवादप्रसङ्गः ।**

ಆಕ್ಷೇಪ - 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಯಲ್ಲಿರುವ ಸತ್ಯ ಪದವು ಅನೃತವ್ಯಾವೃತ್ತಿಯನ್ನು, ಜ್ಞಾನಪವು ಅಜ್ಞಾನವ್ಯಾವೃತ್ತಿಯನ್ನು, ಅನಂತಪದವು ಪರಿಧಿಯ ವ್ಯಾವೃತ್ತಿಯನ್ನು ಹೇಳುತ್ತದೆ. ಈ ಅನೃತಾದಿವ್ಯಾವೃತ್ತಿಗಿಂತ ಅತಿರಿಕ್ತವಾದ ವಿಶೇಷವನ್ನು ಒಪ್ಪುವುದಿಲ್ಲ. ಏಕೆಂದರೆ ಅನೃತಾದಿ ವ್ಯಾವೃತ್ತಿಯು ಮಿಥ್ಯಾಭೂತವಾಗಿದೆ. ಅನೃತಾದಿ ವ್ಯಾವೃತ್ತಿಯನ್ನು ಬ್ರಹ್ಮನಲ್ಲಿ ಒಪ್ಪುವುದರಿಂದ ಅದ್ವೈತಹಾನಿ ಪ್ರಸಂಗವು ಬರುವುದಿಲ್ಲ. ಏಕೆಂದರೆ ಭಾವರೂಪವಾದ ಯಾವುದೇ ವಿಶೇಷವನ್ನು ಅಂಗೀಕಾರ ಮಾಡಿರುವುದಿಲ್ಲ. ಬ್ರಹ್ಮನಲ್ಲಿ ಭಾವರೂಪವಾದ ಮತ್ತೊಂದು ಪದಾರ್ಥವಿಲ್ಲವೆನ್ನುತ್ತೇವೆ. ಅಭಾವರೂಪವಾದ ಪದಾರ್ಥವಿಲ್ಲವೆಂದು ಹೇಳುವುದಿಲ್ಲ. ಅನೃತಾದಿ ವ್ಯಾವೃತ್ತಿಯು ಅಭಾವರೂಪವಾಗಿರುವುದರಿಂದ ಇದನ್ನು ಒಪ್ಪಿದ ಮಾತ್ರಕ್ಕೆ ಬ್ರಹ್ಮನು ಸವಿಶೇಷನಾಗುವ ಪ್ರಸಂಗವೂ ಬರುವುದಿಲ್ಲ. ಮತ್ತು ಪರ್ಯಾಯತಾ ದೋಷಕ್ಕೂ ಅವಕಾಶವಿಲ್ಲ.

ಪರಿಹಾರ - ಹೀಗೆ ಹೇಳುವವನನ್ನು ಕುರಿತು ಪ್ರಶ್ನಿಸುತ್ತೇವೆ. ಬ್ರಹ್ಮನಲ್ಲಿ ಹೇಳುತ್ತಿರುವ ಅಭಾವವು ಬ್ರಹ್ಮನಿಗಿಂತ ಭಿನ್ನವೋ ಅಭಿನ್ನವೋ ? ಭಿನ್ನವೆಂದರೆ ಬ್ರಹ್ಮನಿಗೂ ಅಭಾವಕ್ಕೂ ಭೇದಕವಾದ ಧರ್ಮವನ್ನು ಬ್ರಹ್ಮನಲ್ಲಿ ಒಪ್ಪಬೇಕು. ಮತ್ತು ಬ್ರಹ್ಮನನ್ನು ಅಭಾವವಿಶಿಷ್ಟನೆಂದು ಹೇಳಬೇಕು. ಆವಾಗ ಸವಿಶೇಷತ್ವವನ್ನು ಬ್ರಹ್ಮನಲ್ಲಿ ಒಪ್ಪಿದಂತೆ ಆಯಿತು. ಅಭಿನ್ನವೆಂದು ಹೇಳಿದರೆ ಅಭಾವವೇ ಬ್ರಹ್ಮನೆಂದು ಹೇಳಿದಂತಾಗುತ್ತದೆ. ಆವಾಗ ಅದ್ವೈತಮತವು ಶೂನ್ಯವಾದವಾಗುತ್ತದೆ.

ಪ್ರತಿಯೊಬ್ಬ ವಾದಿಗಳಿಗೂ ವಿಶೇಷ ಒಪ್ಪುವುದು ಅನಿವಾರ್ಯ

**तत्वप्रदीपः – ब्रह्ममात्रत्वे ब्रह्मपदेनैव तस्य सिद्धेः पदान्तरवैयर्थ्यम् । अनृताद्यभावोपलक्षितस्वरूपत्वान्नाभावविशिष्टो वाक्यार्थ इति चेत्, उपलक्षितत्वविशेषः केन वार्यते । स्वरूपत्वं वाक्यार्थत्वमखण्डार्थत्वं च । तस्मात् सर्वथा सर्ववादिभिरभ्युपेयो विशेषः ।**

ಅಭಾವವನ್ನು ಬ್ರಹ್ಮಸ್ವರೂಪವೆಂದು ಹೇಳಿದರೆ ಬ್ರಹ್ಮನೆಂಬ ಪದದಿಂದಲೇ ಸಕಲವ್ಯಾವೃತ್ತಿಗಳು ಸಿದ್ಧವಾಗುವಾಗ ಪುನಃ ಸತ್ಯ ಜ್ಞಾನಾದಿ ಪದಗಳು ವ್ಯರ್ಥವಾಗುತ್ತವೆ.

ಆಕ್ಷೇಪ - ಅನೃತಾದ್ಯಭಾವಗಳಿಂದ ಬ್ರಹ್ಮಸ್ವರೂಪವು ಉಪಲಕ್ಷಿತವಾಗಿದೆ. ಆದ್ದರಿಂದ ಬ್ರಹ್ಮನಿಗೆ ಅಭಾವವೈಶಿಷ್ಟ್ಯವನ್ನು ಹೇಳಿದಂತಾಗುವುದಿಲ್ಲ.

ಪರಿಹಾರ - ಈ ಆಕ್ಷೇಪವು ತಪ್ಪು. ಹೀಗೆ ಹೇಳಿದರೆ ಬ್ರಹ್ಮನಲ್ಲಿ ಉಪಲಕ್ಷಿತತ್ವ ಎಂಬ ವಿಶೇಷವನ್ನು ಹೇಗೆ ಪರಿಹರಿಸಿಕೊಳ್ಳುವಿ ? ಮತ್ತು ಶ್ರುತಿಯು ಬ್ರಹ್ಮಸ್ವರೂಪಪ್ರತಿಪಾದಕವೆಂದು ಹೇಳಲು ಸಾಧ್ಯವಿಲ್ಲ. ಅಖಂಡಾರ್ಥತ್ವಕ್ಕೂ ಕೂಡ ಭಂಗ ಬರುತ್ತದೆ. ಆದ್ದರಿಂದ ಸಕಲ ವಾದಿಗಳೂ ಕೂಡ ವಿಶೇಷ ಎಂಬ ಪದಾರ್ಥವನ್ನು ಅಂಗೀಕಾರ ಮಾಡಲೇಬೇಕು.

ವಿಶೇಷದ ಬಗ್ಗೆ ನಿಖರ ಪರಿಷ್ಕಾರ

**तत्वप्रदीपः – सोऽयमेकत्रापर्यायनानाशब्दप्रवृत्तिहेतुः । तेनैकमेवानेकधा द्रव्यगुणक्रियासामान्यादिस्वरूपेण प्रमाणव्यवहारपदवीमध्यास्ते । स च**

**विशेषो वस्तुस्वरूपं स्वनिर्वाहकश्च । नचेदृशं विशेषमन्तरेण सर्वेषां व्यवहारनिर्वाहः ।**

ವಿಶೇಷದ ಲಕ್ಷಣ ಹೀಗಿದೆ - ಒಂದೇ ಅರ್ಥವನ್ನು ಪ್ರತಿಪಾದನೆ ಮಾಡುವ ಶಬ್ದಗಳಿಗೆ ಭಿನ್ನಾರ್ಥಕತ್ವವನ್ನು ನಿರ್ವಹಣೆ ಮಾಡಬೇಕು. ತನ್ಮೂಲಕವಾಗಿ ಶಬ್ದಗಳಿಗೆ ಪರ್ಯಾಯತಾ-ದೋಷ ಪರಿಹಾರ ಮಾಡಬೇಕು. ಇದರಿಂದ ಒಂದೇ ಪದಾರ್ಥವು ಗುಣ ಕ್ರಿಯಾ ಸಾಮಾನ್ಯ ಮೊದಲಾದ ಸ್ವರೂಪದಿಂದ ಪ್ರಮಾಣ ಎಂಬ ವ್ಯವಹಾರಪದವಿಯನ್ನು ಹೊಂದುವಂತೆ ಮಾಡಬೇಕು. ಇದನ್ನೇ ವಿಶೇಷ ಎಂದು ಕರೆಯುತ್ತೇವೆ. ಈ ವಿಶೇಷವು ವಸ್ತುಸ್ವರೂಪವಾಗಿದೆ ಮತ್ತು ಸ್ವನಿರ್ವಾಹಕವಾಗಿದೆ. ಆದ್ದರಿಂದ ಅನವಸ್ಥಾದಿ ದೋಷಗಳಿಗೆ ಅವಕಾಶವಿಲ್ಲ. ಇಂಥ ವಿಶೇಷವನ್ನು ಒಪ್ಪದೇ 'ಇದು ಗುಣ' ಇತ್ಯಾದಿ ವ್ಯವಹಾರವನ್ನು ನಿರ್ವಾಹಣೆ ಮಾಡಲು ಸಾಧ್ಯವೇ ಇಲ್ಲ.

### ಗುಣಗುಣಿಗಳಿಗೆ ಭೇದವಿಲ್ಲದ ಕಾರಣ ವಿಶೇಷ ಬೇಕು

**तत्वप्रदीपः – न च गुणगुण्यादिभेदे सम्बन्धः सम्भवी । तस्य सम्बन्धस्य ततो भिन्नत्वे गुणवदेव सम्बन्धान्तरापेक्षत्वादनवस्थानात् । अभिन्नत्वे वस्तुमात्रमिति न सम्बन्धः स्यात् ।**

ಗುಣ ಹಾಗೂ ಗುಣಿಗಳಿಗೆ ಭೇದವನ್ನು ಒಪ್ಪಿದರೆ ಸಂಬಂಧವನ್ನು ಹೇಳಲು ಸಾಧ್ಯವಿಲ್ಲ. ಏಕೆಂದರೆ ಆ ಸಂಬಂಧವು ಗುಣ ಹಾಗೂ ಗುಣಿಗಳಿಗಿಂತ ಭಿನ್ನವೆಂದಾದಲ್ಲಿ ಆ ಭಿನ್ನವಾದ ಸಂಬಂಧಕ್ಕೂ ಗುಣ ಹಾಗೂ ಗುಣಿಗಳಿಗೂ ಗುಣದಂತೆ ಮತ್ತೊಂದು ಸಂಬಂಧದ ಅಪೇಕ್ಷೆ ಇರುತ್ತದೆ. ಆ ಸಂಬಂಧಕ್ಕೂ ಕೂಡ ಮತ್ತೊಂದು ಸಂಬಂಧದ ಅಪೇಕ್ಷೆ ಇರುವುದರಿಂದ ಅನವಸ್ಥಾ ದೋಷವು ಪ್ರಾಪ್ತವಾಗುತ್ತದೆ. ಆದ್ದರಿಂದ ಸಂಬಂಧವನ್ನು ಗುಣ ಹಾಗೂ ಗುಣಿಗಳಿಗಿಂತ ಭಿನ್ನವೆಂದು ಹೇಳಲು ಸಾಧ್ಯವಿಲ್ಲ. ಅಭಿನ್ನವೆಂದು ಹೇಳಬೇಕು. ಹಾಗೆ ಹೇಳಿದರೆ ವಸ್ತುವನ್ನೇ ಸಂಬಂಧವೆಂದು ಹೇಳಿದಂತಾಯಿತು. ಆವಾಗ ಗುಣಗುಣಿಗಳಿಗೆ ಸಂಬಂಧವೇ ಇಲ್ಲದಂತಾಗುತ್ತದೆ.

ವಿಶೇಷವು ಸ್ವನಿರ್ವಾಹಕ

**तत्वप्रदीपः – तस्मात् गुणगुणिनोर्भेदं भेदाभेदौ वा कल्पयित्वा, तयोः सम्बन्धं समवायमन्यं वा कल्पयित्वा, तदनवस्थापरिहारार्थं तस्य स्वनिर्वाहकत्वकल्पनात् वरमेकस्य द्रव्यस्य गुणादिविशेषरूपेण स्वनिर्वाहकत्वम् ।**

ಆದ್ದರಿಂದ ಗುಣ ಹಾಗೂ ಗುಣಿಗಳಿಗೆ ಭೇದವನ್ನು ಅಥವಾ ಭೇದಾಭೇದವನ್ನು ಕಲ್ಪನೆ ಮಾಡಿ ಅವುಗಳಿಗೆ ಸಮವಾಯ ಅಥವಾ ಬೇರೆ ಸಂಬಂಧವನ್ನು ಕಲ್ಪನೆ ಮಾಡಿ ಅನವಸ್ಥಾ ಪರಿಹಾರಕ್ಕೋಸ್ಕರ ಆ ಸಂಬಂಧಕ್ಕೆ ಸ್ವನಿರ್ವಾಹಕತ್ವವನ್ನು ನೀವು ಕಲ್ಪನೆ ಮಾಡಬೇಕು. ಇಷ್ಟೆಲ್ಲಾ ಕಲ್ಪನೆ ಮಾಡುವುದಕ್ಕಿಂತ ಒಂದೇ ದ್ರವ್ಯಕ್ಕೆ ಗುಣವೆಂಬ ವಿಶೇಷ ಪದಾರ್ಥವನ್ನು ಒಪ್ಪಿ ಆ ವಿಶೇಷಕ್ಕೆ ಸ್ವನಿರ್ವಾಹಕತ್ವವನ್ನು ಒಪ್ಪುವುದು ಅತ್ಯಂತ ಲಘುಭೂತವಾಗಿದೆ.

ನಾರಾಯಣನು ಅನಂತಗುಣಾತ್ಮಕನು

**तत्वप्रदीपः – तदेवमेक एव नारायणो ज्ञानैश्वर्यादिसविशेषानन्त-गुणगणात्मको भगवान् व्यासत्वेनावततारेति सूक्तमुक्तम् ।**

ವಿಶೇಷವನ್ನು ಒಪ್ಪಿ ಗುಣಗುಣಿಭಾವವನ್ನು ಕೂಡಿಸಬೇಕು ಹೀಗೆ ಒಪ್ಪುವುದರಿಂದ ನಾರಾಯಣನಲ್ಲಿ ಜ್ಞಾನ ಐಶ್ವರ್ಯ ಮೊದಲಾದ ವಿಶೇಷ ಸಹಿತವಾದ ಅನಂತಗುಣಗಳ ಸ್ವರೂಪವನ್ನು ಹೇಳಬಹುದು. ಇಂಥ ಅನಂತಗುಣಪರಿಪೂರ್ಣನಾದ ನಾರಾಯಣನು ವೇದವ್ಯಾಸರೂಪದಿಂದ ಅವತಾರ ಮಾಡಿದನು ಎಂಬುದಾಗಿ ಭಾಷ್ಯದಲ್ಲಿ ಹೇಳಿದ್ದು ಅತ್ಯಂತ ಸಮಂಜಸವಾಗಿದೆ. ('ಅನಂತಗುಣಾತ್ಮಕಃ' ಎಂಬುದರಿಂದ ಇಂಥ ವಿಶೇಷವನ್ನು ಒಪ್ಪಬೇಕೆಂದು ಭಾಷ್ಯಕಾರರು ತಿಳಿಸಿದ್ದಾರೆ.)

**तत्वप्रदीपः – तथाच महोपनिषदि –**

ಗುಣಗುಣಿಗಳಿಗೆ ಸವಿಶೇಷಾಭೇದವನ್ನು ಒಪ್ಪಬೇಕೆನ್ನಲು ಮಹೋಪನಿಷತ್ತು ಆಧಾರವಾಗಿದೆ-

ದೇವರಲ್ಲಿ ಭೇದವಿಲ್ಲ

**तत्वप्रदीपः –**

**''गुणक्रियादयो विष्णोः स्वरूपं नान्यदिष्यते ।**
**अतो मिथोऽपि भेदो न तेषां कश्चित् कदाचन ।।''**

ಭಗವಂತನಲ್ಲಿರುವ ಗುಣ ಕ್ರಿಯಾ ಮೊದಲಾದವುಗಳು ಅವನ ಸ್ವರೂಪವೇ ಆಗಿವೆ. ಅವನಿಗಿಂತ ಭಿನ್ನವಲ್ಲ. ಯಾವುದೇ ಒಂದು ಗುಣ ಅಥವಾ ಕ್ರಿಯೆಗೆ ಯಾವ ಕಾಲದಲ್ಲಿಯೂ ಭಗವಂತನಿಂದ ಮತ್ತು ಪರಸ್ಪರ ಭೇದವಿರಲು ಸಾಧ್ಯವಿಲ್ಲ.

ಭೇದವ್ಯವಹಾರಕ್ಕೆ ಆತಂಕವಿಲ್ಲ

**''स्वरूपेऽपि विशेषोऽस्ति स्वरूपत्ववदेव तु ।**
**भेदाभावेऽपि तेनैव व्यवहारश्च वर्तते ।।'' इति**

'ಕಂಬುಗ್ರೀವಾದಿಮತ್ವ' ಎಂಬ ಆಕಾರವು ಘಟದ ಸ್ವರೂಪವಾಗಿದೆ. ಘಟವು ಸ್ವರೂಪಿಯಾಗಿದೆ. ಸ್ವರೂಪತ್ವವು ಸ್ವರೂಪದಲ್ಲಿರುವಂತೆ ಸ್ವರೂಪಿಯಾದ ಘಟದಲ್ಲಿಯೂ ಇದೆ. ಗುಣ ಹಾಗೂ ಗುಣಿಗಳಿಗೆ ಭೇದವನ್ನು ಒಪ್ಪುವವನೂ ಸಹ ಸ್ವರೂಪಿಗೂ ಸ್ವರೂಪಕ್ಕೂ ಅಭೇದ ಒಪ್ಪುತ್ತಾನೆ. ಇದರಂತೆ ಪ್ರಕೃತ ಗುಣಗಳು ಪರಮಾತ್ಮನ ಸ್ವರೂಪವೇ ಆಗಿದ್ದರೂ ವಿಶೇಷದ ಬಲದಿಂದ ಭೇದವಿಲ್ಲದಿದ್ದರೂ ಭೇದವಿರುವಂತೆ ವ್ಯವಹಾರವನ್ನು ನಿರ್ವಹಣೆ ಮಾಡಬಹುದು.

ವಿಶೇಷದಿಂದ ಧರ್ಮಧರ್ಮಿಭಾವ

**ब्रह्मतर्के च –**

''अभिन्नत्वमभेदश्च यथा भेदविवर्जितम् ।
व्यवहार्यं पृथक् च स्यादेवं सर्वे गुणा हरेः ।।

ಬ್ರಹ್ಮತರ್ಕದಲ್ಲಿಯೂ ಹೀಗೆ ಹೇಳಲಾಗಿದೆ -

ಅಭಿನ್ನತ್ವಮಭೇದಶ್ಚ ಯಥಾ ಭೇದವಿವರ್ಜಿತಮ್ ।
ವ್ಯವಹಾರ್ಯಂ ಪೃಥಕ್ ಚ ಸ್ಯಾದೇವಂ ಸರ್ವೇ ಗುಣಾ ಹರೇಃ ॥

ಅಭೇದವೆಂಬ ಧರ್ಮದಿಂದ ವಿಶಿಷ್ಟವಾದ ಧರ್ಮಿಗೂ ಅಭೇದವೆಂಬ ಧರ್ಮಕ್ಕೂ ಪರಸ್ಪರ ಭೇದವಿರುವುದಿಲ್ಲ. ಆದರೂ ವಿಶೇಷದ ಬಲದಿಂದ ಧರ್ಮಧರ್ಮಿಭಾವವನ್ನು ಕೂಡಿಸಬಹುದು. ಇದರಂತೆ ಶ್ರೀಹರಿಯ ಗುಣಗಳೂ ಪರಸ್ಪರ ಭಿನ್ನವಲ್ಲದಿದ್ದರೂ ಭೇದವ್ಯವಹಾರಕ್ಕೆ ಯೋಗ್ಯವಾಗಿವೆ.

ಅಭಿನ್ನತ್ವ ಹಾಗೂ ಅಭೇದ ಎಂಬೆರಡು ಪದಗಳು ಒಂದೇ ವಸ್ತುವನ್ನು ಪ್ರತಿಪಾದನೆ ಮಾಡಿದರೂ ಪ್ರತ್ಯೇಕ ಪದಗಳಿಂದ ವ್ಯವಹರಿಸಲ್ಪಡುವಂತೆ ಪರಮಾತ್ಮನಲ್ಲಿಯೂ 'ಗುಣತ್ವ' ಹಾಗೂ 'ಗುಣ' ಎಂಬ ಪದಗಳು ಶ್ರೀಹರಿಯೆಂಬ ಒಂದೇ ವಸ್ತುವನ್ನು ಪ್ರತಿಪಾದನೆ ಮಾಡಿದರೂ ಸಹ ಪ್ರತ್ಯೇಕ ವ್ಯವಹಾರಕ್ಕೆ ಯೋಗ್ಯವಾಗಿವೆ ಎಂದಭಿಪ್ರಾಯ.

ಭೇದ ಒಪ್ಪಿದರೆ ಅನವಸ್ಥಾ

**अभेदाभिन्नयोर्भेदा यदि वा भेदभिन्नयोः ।**
**अनवस्थितिरेव स्यान्न विशेषणतामतिः ॥**
**मूलसम्बन्धमज्ञात्वा ...... ।**

ಅಭೇದಾಭಿನ್ನಯೋರ್ಭೇದಾ ಯದಿ ವಾ ಭೇದಭಿನ್ನಯೋಃ ।
ಅನವಸ್ಥಿತಿರೇವ ಸ್ಯಾನ್ನ ವಿಶೇಷಣತಾಮತಿಃ ॥
ಮೂಲಸಂಬಂಧಮಜ್ಞಾತ್ವಾ........ ।

ಘಟಕ್ಕೆ ಘಟದಲ್ಲಿರುವ ರೂಪದಿಂದ ಅಭೇದ ಹೇಳಿದಾಗ ಘಟವು ಅಭಿನ್ನವಾಯಿತು. ಅಭೇದವು ಧರ್ಮವಾಯಿತು. ಈ ಅಭಿನ್ನಕ್ಕೂ ಅಭೇದಕ್ಕೂ ಭೇದವು ಸ್ಪಷ್ಟವಾಗಿ ಕಾಣಿಸುತ್ತಿದೆಯೆಂದು ಹೇಳಿದರೆ, ಅನವಸ್ಥಾದೋಷ ಬರುತ್ತದೆ. ಇದರಂತೆ ಪುಸ್ತಕದ ಭೇದ ಘಟದಲ್ಲಿ ಹೇಳಿದಾಗ ಘಟವು ಭಿನ್ನವಾಯಿತು. ಭೇದವು ಧರ್ಮವಾಯಿತು. ಭಿನ್ನವಾದ ಘಟಕ್ಕೆ ಪುಸ್ತಕ ಭೇದದಿಂದ ಭೇದವನ್ನೇ ಹೇಳಬೇಕು ಎಂದರೆ ಆವಾಗಲೂ ಅನವಸ್ಥಾದೋಷ ಬರುತ್ತದೆ.

ಹೀಗೆ ಅನವಸ್ಥಾದೋಷವು ಪ್ರಾಪ್ತವಾದರೆ 'ಇದು ವಿಶೇಷ್ಯ' 'ಇದು ವಿಶೇಷಣ' ಎಂಬ ವ್ಯವಹಾರವೇ ಕೂಡುವುದಿಲ್ಲ. ಏಕೆಂದರೆ ವಿಶೇಷಣತಾಜ್ಞಾನವು ಭೇದಜ್ಞಾನ ಸಾಪೇಕ್ಷಿತವಾಗಿದೆ.

ಅಭೇದ ಹಾಗೂ ಅಭಿನ್ನಗಳಿಗೆ ಭೇದವನ್ನು ಅಂಗೀಕರಿಸಿದರೆ ಆ ಭೇದವೂ ಕೂಡ ಭಿನ್ನವೆಂದೇ ಒಪ್ಪಬೇಕೆಂದು ಅನವಸ್ಥಾ ಬರುತ್ತದೆ. ಭೇದ ಹಾಗೂ ಭಿನ್ನಗಳಿಗೆ ಭೇದವನ್ನು ಒಪ್ಪಿದರೂ ಸಹ ಆ ಭೇದವೂ ಭಿನ್ನವೆಂದೇ ಒಪ್ಪಬೇಕಾದ್ದರಿಂದ ಅನವಸ್ಥಾದೋಷ ಬರುತ್ತದೆ. ಮೂಲಭೂತವಾದ ಸಂಬಂಧದ ಜ್ಞಾನವಿಲ್ಲದಿದ್ದರೆ ಭೇದವನ್ನಾಗಲೀ, ಅಭೇದವನ್ನಾಗಲೀ ಹೇಳಲು ಸಾಧ್ಯವಿಲ್ಲ. ಆವಾಗ ವಿಶೇಷ್ಯವಿಶೇಷಣಭಾವವನ್ನೂ ಕೂಡ ತಿಳಿಯಲು ಸಾಧ್ಯವಾಗುವುದಿಲ್ಲ.

ವಿಶೇಷ ಒಪ್ಪಿದರೆ ಸಾಲದು ಅಚಿಂತ್ಯಶಕ್ತಿಯೂ ಬೇಕು

**........ तस्मादेकमनन्तधा ।**
**व्यवहार्यं विशेषेण दुस्तर्क्यबलतो हरेः ।**
**विशेषोऽपि स्वरूपं सः स्वनिर्वाहकतास्य च'' ।। इति ।**

........... ತಸ್ಮಾದೇಕಮನಂತಧಾ ।
ವ್ಯವಹಾರ್ಯಂ ವಿಶೇಷೇಣ ದುಸ್ತರ್ಕ್ಯಬಲತೋ ಹರೇಃ ।
ವಿಶೇಷೋಽಪಿ ಸ್ವರೂಪಂ ಸ ಸ್ವನಿರ್ವಾಹಕತಾಸ್ಯ ಚ ॥ ಇತಿ ।

ಒಬ್ಬನೇ ಪರಮಾತ್ಮನಲ್ಲಿ ಅನೇಕ ಗುಣಕ್ರಿಯಾದಿಗಳ ಅನೇಕ ರೂಪಗಳ ವ್ಯವಹಾರವನ್ನೂ ವಿಶೇಷದ ಬಲದಿಂದ ಸುಲಭವಾಗಿ ಮಾಡಬಹುದು. ಶ್ರೀಹರಿಯು ಊಹೆಗೆ ನಿಲುಕದ ಕಾರಣ ವಿರೋಧಗಳೆಲ್ಲವೂ ಪರಿಹಾರವಾಗುತ್ತವೆ. ವಿಶೇಷವನ್ನು ಶ್ರೀಹರಿಯಲ್ಲಿ ಒಪ್ಪಿದಾಗ ವಿಶೇಷಕ್ಕೂ ಮತ್ತೊಂದು ವಿಶೇಷದ ಅಪೇಕ್ಷೆ ಇರುವುದರಿಂದ ಅನವಸ್ಥಾ ಬರುತ್ತದಲ್ಲವೆ? ಎಂದು ಪ್ರಶ್ನಿಸಬಾರದು. ವಿಶೇಷವು ವಸ್ತುಸ್ವರೂಪವಾಗಿದ್ದು ಸ್ವನಿರ್ವಾಹಕವಾಗಿದೆ. ಆದ್ದರಿಂದ ಮತ್ತೊಂದು ವಿಶೇಷದ ಅಪೇಕ್ಷೆ ಇರುವುದಿಲ್ಲ.

ಅವತರಿಸಿದರು ಸರ್ವಜ್ಞವ್ಯಾಸರು

**तत्वप्रदीपः – अथेत्यादेरयमर्थः । अथानन्तरमेव, अन्यत्राव्यापृतः ।**

ಭಾಷ್ಯದಲ್ಲಿರುವ 'ಅಥ' ಎಂಬುದಕ್ಕೆ ಅವತಾರ ಮಾಡಿದ ಕೂಡಲೇ ಎಂದರ್ಥ. ಗುರೂಪಸತ್ತಿ ಮೊದಲಾದ ಬೇರೆ ವ್ಯಾಪಾರಗಳಲ್ಲಿ ತೊಡಗದೆ ಸರ್ವಜ್ಞಶಿಖಾಮಣಿಗಳಾದ ವೇದವ್ಯಾಸದೇವರು ವೇದವಿಭಾಗವನ್ನು ಮಾಡಿದರು ಎಂದು ತಿಳಿಯಬೇಕು.

ವಿಶೇಷ ವಿಚಾರ - ಭಾಷ್ಯದಲ್ಲಿರುವ 'ಅಥ' ಎನ್ನುವ ಪದವು ವ್ಯರ್ಥ. ಏಕೆಂದರೆ 'ಅವತತಾರ' ಎಂಬ ಕ್ರಿಯಾಪದವನ್ನು ಹೇಳಿದ್ದರಿಂದಲೇ ಆನಂತರ್ಯವು ತಿಳಿಯುತ್ತದೆ. ಪುನಃ 'ಅಥ' ಎಂಬ ಪದವನ್ನು ಏಕೆ ಪ್ರಯೋಗಿಸಿದ್ದಾರೆ. ಇದಕ್ಕೆ ಯಾವುದೇ ಕೃತ್ಯವಿಲ್ಲ ? ಈ ಪ್ರಶ್ನೆಗೆ 'ಅಥ ಅನಂತರಮೇವ' ಎಂದು ಉತ್ತರಿಸುತ್ತಿದ್ದಾರೆ. 'ವೇದವ್ಯಾಸದೇವರು ಅವತಾರ ಮಾಡಿದ ಕೂಡಲೇ ಬೇರೆ ವ್ಯಾಪಾರಗಳಲ್ಲಿ ನಿರತರಾಗದೆ ವೇದ ವಿಭಾಗ ಮಾಡಿದರು' ಎಂಬ ಪ್ರಮೇಯವನ್ನು ತಿಳಿಸಲೋಸುಗ 'ಅಥ' ಎಂಬ ಪದವನ್ನು ಪ್ರಯೋಗಿಸಿದ್ದಾರೆ. ಸರ್ವಜ್ಞಶಿಖಾಮಣಿಗಳಾದ್ದರಿಂದ ವೇದವಿಭಾಗ ಮಾಡಲು ಸಂಪೂರ್ಣ ಅರ್ಹತೆಯನ್ನು ಹೊಂದಿದ್ದಾರೆಂಬ ಪ್ರಮೇಯವನ್ನು ತಿಳಿಸಿದಂತಾಗುತ್ತದೆ.

### ಅವತರಿಸಿದ ಕೂಡಲೇ ವೇದವಿಭಾಗ ಮಾಡಿದರು

**तत्वप्रदीपः – सुखप्राप्तौ दुःखपरिहारेचेच्छावतां तयोरुपायं विशिष्टमजानतां तज्ज्ञापनार्थं वेदमपपाठात् उदुत्सन्नमनभिव्यक्तमध्यापनेन व्यञ्जयन् अध्येतॄणामल्पशक्तित्वं वीक्ष्य ऋगादिभेदेन चतुर्धा व्यभजत् ।**

'ಇಷ್ಟಾನಿಷ್ಟಪ್ರಾಪ್ತಿಪರಿಹಾರೇಚ್ಛೂನಾಮ್' ಎಂಬುದಕ್ಕೆ ಹೀಗರ್ಥ - ಯಾವ ಸಜ್ಜನರಿಗೆ ಸ್ವರೂಪಸುಖದ ಪ್ರಾಪ್ತಿಯಲ್ಲಿ ಸಾಂಸಾರಿಕ ದುಃಖದ ಪರಿಹಾರದಲ್ಲಿ ಇಚ್ಛೆ ಇರುತ್ತದೋ ಅಂಥ ಸಜ್ಜನರು ಮೋಕ್ಷಮಾರ್ಗದ ನೂರಾರು ಮಾರ್ಗಗಳಲ್ಲಿ ಯಾವುದು ಸರಿ ಎಂಬ ಉಪಾಯ ತಿಳಿಯದೆ ಗೊಂದಲದಲ್ಲಿ ಸಿಲುಕಿದ್ದರು ಎಂದು. ಅಂಥ ಸಜ್ಜನರಿಗೆ ನಿಜವಾದ ಮೋಕ್ಷದ ಉಪಾಯವನ್ನು ತಿಳಿಸಲು ವೇದವ್ಯಾಸದೇವರು ವೇದವಿಭಾಗ ಮಾಡಿದರು. ಪಾಠವಿಲ್ಲದೆ ವೇದವು ಮರೆಯಾಗಿತ್ತು. ಹೀಗೆ ಅನಭಿವ್ಯಕ್ತವಾದ ವೇದವನ್ನು ಅಧ್ಯಾಪನ ಮಾಡುವ ಮೂಲಕ ಪುನಃ ವ್ಯಾಸರು ಬೆಳಕಿಗೆ ತಂದರು. ಆದರೂ ಸಹ ಅಧ್ಯಯನ ಮಾಡುವವರಲ್ಲಿ ಇರುವ ಅಲ್ಪಶಕ್ತಿಯನ್ನು ಗಮನಿಸಿ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬುದಾಗಿ ನಾಕು

ವಿಭಾಗವನ್ನು ಮಾಡಿ ಒಬ್ಬೊಬ್ಬರಿಗೆ ಒಂದೊಂದು ಭಾಗದ ಅಧ್ಯಯನದಲ್ಲಿ ತೊಡಗುವಂತೆ ಪ್ರೇರಣೆ ಮಾಡಿದರು.

ವಿಶೇಷ ವಿಚಾರ - 'ಅಪಪಾಠ' ಶಬ್ದಕ್ಕೆ ೧) ಅಶುದ್ಧ-ಪಾಠ ೨) ಅಪಾರ್ಥಕ-ಪಾಠ, ೩) ಅಪಗತ-ಪಾಠ ಹೀಗೆ ಅನೇಕ ಅರ್ಥಗಳನ್ನು ತಿಳಿಯಬೇಕು.

ಭಾಷ್ಯದಲ್ಲಿ 'ಇಷ್ಟಾನಿಷ್ಟಪ್ರಾಪ್ತಿಪರಿಹಾರೇಚ್ಛೂನಾಮ್' ಎಂದು ಇಷ್ಟಪ್ರಾಪ್ತಿ ಅನಿಷ್ಟದ ನಿವೃತ್ತಿಯನ್ನು ಅಪೇಕ್ಷಿಸುವ ಜನರಿಗೆ ಎಂದಷ್ಟೆ ಹೇಳಿದ್ದಾರೆ. ಆದರೆ ಸಜ್ಜನರನ್ನು ವಿವಕ್ಷಿಸಬೇಕಾದ್ದರಿಂದ ಸ್ವರೂಪಸುಖದ ಪ್ರಾಪ್ತಿ, ಸಾಂಸಾರಿಕ ದುಃಖದ ನಿವೃತ್ತಿಯನ್ನು ಅಪೇಕ್ಷಿಸುವ ಸಾಧಕರನ್ನು ಕುರಿತು ಎಂಬರ್ಥವನ್ನು ವಿವಕ್ಷಿಸಬೇಕು. 'ಅವಿಜಾನತಾಮ್' ಎಂಬುದಕ್ಕೆ 'ವಿಶಿಷ್ಟಂ ಅಜಾನತಾಂ' ಎಂದರ್ಥ. ಇದರ ಅಭಿಪ್ರಾಯ ಹೀಗಿದೆ - 'ಅಜಾನತಾಮ್' ಎಂದೇ ಭಾಷ್ಯದಲ್ಲಿ ಹೇಳಬಹುದಿತ್ತು, 'ವಿ' ಉಪಸರ್ಗವನ್ನು ಸೇರಿಸಿ 'ಅವಿಜಾನತಾಮ್' ಎಂದು ಹೇಳಿರುವುದರಿಂದ ಮೋಕ್ಷಮಾರ್ಗಕ್ಕೆ ನೂರಾರು ಉಪಾಯಗಳು ಕಾಣಿಸುತ್ತಿವೆ. ಇವುಗಳಲ್ಲಿ ಶ್ರೇಷ್ಠವಾದ ಋಜುವಾದ ಮಾರ್ಗ ಯಾವುದು ಎಂಬುದನ್ನು ತಿಳಿಯದೇ ಎಂಬರ್ಥವು ಸೂಚಿತವಾಯಿತು.

ಗೌತಮರ ಶಾಪದಿಂದ ಪ್ರಚಲಿತವಾದ ವೇದಪಾಠವು ನಿಂತು ಹೋಗಿತ್ತು. ಇದರಿಂದ ವೇದವು ಮರೆಯಾಗಿತ್ತೆಂದು ತಿಳಿಯಬೇಕು.

ಶಾಖೋಪಶಾಖೆಗಳ ವಿಭಾಗ

**तत्वप्रदीपः – तांश्च चतुरो वेदान् प्रत्येकं शाखोपशाखाभेदेन व्यभजत्; ऋग्वेदं चतुर्विंशतिधा, यजुर्वेदमेकशतधा, सामवेदं सहस्रधा, अथर्ववेदं द्वादशधेति ।**

ಈ ನಾಕು ವೇದಗಳನ್ನು ಪ್ರತ್ಯೇಕವಾಗಿ ಶಾಖೋಪಶಾಖೆಗಳ ಭೇದದಿಂದ ಪುನಃ ವಿಭಾಗ ಮಾಡಿದರು. ಋಗ್ವೇದವನ್ನು ಇಪ್ಪತ್ನಾಕು, ಯಜುರ್ವೇದವನ್ನು ನೂರೊಂದು, ಸಾಮವೇದವನ್ನು ಸಾವಿರ, ಅಥರ್ವವೇದವನ್ನು ಹನ್ನೆರಡು ಶಾಖೆಗಳನ್ನಾಗಿ ವಿಭಾಗ ಮಾಡಿದರು.

ವಿಶೇಷ ವಿಚಾರ - ಸಾಮವೇದವು ಸಾವಿರ ಶಾಖೆಯಿಂದ ಕೂಡಿದೆ ಎಂಬುದಕ್ಕೆ ಸಾವಿರ ಸಾಮವೇದಗಳಿವೆ ಎಂದರ್ಥವಲ್ಲ. ಗಾನಮಾಡುವ ಕ್ರಮ ಸಾವಿರ ಬಗೆಯಲ್ಲಿ ಇರುತ್ತದೆ ಎಂದರ್ಥ. ಈ ದೃಷ್ಟಿಯಿಂದ ಸಾವಿರ ಶಾಖೆಯಾಗಿದೆ ಎಂದು ತಿಳಿಯಬೇಕು. ಪ್ರಸ್ತುತ ಕಾಲದಲ್ಲಿ ಕೌತುಮ ರಾಣಾಯನೀಯ, ಜೈಮಿನೀಯ ಎಂಬ ಮೂರು ಶಾಖೆಗಳಷ್ಟೆ ಪ್ರಸಿದ್ಧವಾಗಿವೆ. ಉಳಿದ ಶಾಖೆಗಳೆಲ್ಲವೂ ತಿರೋಹಿತವಾಗಿವೆ.

ತಲವಕಾರ ಎಂದರೆ ತಾಳವಾದ್ಯಕಾರ ಎಂದರ್ಥ. ತಾಳವಾದ್ಯದ ಮೂಲಕ ಗಾನಬದ್ಧವಾಗಿ ಲಯಪುರಸ್ಸರವಾಗಿ ಹಾಡುವ ಮಂತ್ರಗಳೆಂದು ಅರ್ಥ - ಹೀಗೆ ಸಾಮವೇದದಲ್ಲಿ ಅನೇಕ ವಿಧವಾಗಿ ಹಾಡುವ ಕ್ರಮವಿದೆ. ಅವುಗಳು ಈಗ ನಷ್ಟವಾಗಿದೆ. ಯಜುರ್ವೇದವನ್ನು ನೂರೊಂದು ಶಾಖೆಗಳನ್ನಾಗಿ ವಿಭಾಗ ಮಾಡಿದರು ಎಂಬುದಕ್ಕೆ ಅನೇಕ ಪಾಠಾಂತರಗಳ ಮಂತ್ರಗಳಿಂದ ಕೂಡಿ ನೂರೊಂದು ಶಾಖೆಗಳಾಯಿತೆಂದು ತಿಳಿಯಬೇಕು. ಮಂತ್ರಗಳ ಸಂಖ್ಯೆ ಹಾಗೂ ಗಾತ್ರ ಒಂದೇ ರೀತಿಯಲ್ಲಿದ್ದರೂ ಮಂತ್ರದಲ್ಲಿರುವ ಶಬ್ದಗಳ ವ್ಯತ್ಯಾಸದಿಂದ ನೂರೊಂದು ಬಗೆಯನ್ನು ಪಡೆದಿದೆ.

## ಬ್ರಹ್ಮಮೀಮಾಂಸಾಶಾಸ್ತ್ರದ ರಚನೆ

**तत्वप्रदीपः – तेषां सर्वेषामर्थमुपक्रमोपसंहारादितात्पर्ययुक्तिभिर्निर्णेतुं ब्रह्मसूत्राणि चकारेति श्रुतिमूलत्वं युक्तिमूलत्वं च प्रदर्शितं सूत्राणाम् ।**

ಹೀಗೆ ಅನೇಕ ಶಾಖೋಪಶಾಖೆಗಳಿಂದ ಕೂಡಿರುವ ನಾಕು ವೇದಗಳ ಅರ್ಥವನ್ನು ಉಪಕ್ರಮ ಉಪಸಂಹಾರ ಮೊದಲಾದ ತಾತ್ಪರ್ಯಲಿಂಗಗಳಿಂದ ನಿರ್ಣಯ ಮಾಡುವುದಕ್ಕಾಗಿ ವೇದವ್ಯಾಸದೇವರು ಬ್ರಹ್ಮಸೂತ್ರಗಳನ್ನು ರಚನೆ ಮಾಡಿದರು. ಈ ಬ್ರಹ್ಮಸೂತ್ರಗಳಲ್ಲಿ ಶ್ರುತಿಮೂಲತ್ವ ಯುಕ್ತಿಮೂಲತ್ವವನ್ನು 'ಬ್ರಹ್ಮಸೂತ್ರಾಣಿ ಚಕಾರ' ಎಂಬ ಮಾತಿನಿಂದ ಪ್ರದರ್ಶನ ಮಾಡಿದ್ದಾರೆ.

## ಆಗಮವು ಸ್ವತಃಪ್ರಮಾಣ

**तत्वप्रदीपः – नन्वागमस्याप्रामाण्यान्न तन्मूलतया प्रामाण्यं सिद्ध्यतीति। तन्न । तदप्रामाण्यस्याप्यागमप्रामाण्यानङ्गीकारे दुःसाध्यत्वात् ।**

ಶ್ರುತಿಮೂಲವಾದ್ದರಿಂದ ಬ್ರಹ್ಮಸೂತ್ರಗಳು ಪ್ರಮಾಣವಾಗಿವೆ ಎಂದು ಹೇಗೆ ಹೇಳಿದಿರಿ? ಆಗಮವೇ ಅಪ್ರಮಾಣವಾಗಿರುವುದರಿಂದ ತನ್ಮೂಲಕವಾದ ಪ್ರಾಮಾಣ್ಯವು ಬ್ರಹ್ಮಸೂತ್ರಗಳಿಗೂ ಕೂಡ ಯುಕ್ತವಾಗುವುದಿಲ್ಲ?

ಈ ಆಕ್ಷೇಪವು ತಪ್ಪು. ಆಗಮದ ಅಪ್ರಾಮಾಣ್ಯವನ್ನು ಒಪ್ಪಬೇಕಾದರೂ ಸಹ ಆಗಮಪ್ರಾಮಾಣ್ಯವನ್ನು ಒಪ್ಪಬೇಕು. ಆಗಮಪ್ರಾಮಾಣ್ಯವನ್ನೇ ಒಪ್ಪದಿದ್ದರೆ ತದಭಾವರೂಪವಾದ ಅಪ್ರಾಮಾಣ್ಯವನ್ನು ಹೇಳಲು ಹೇಗೆ ಸಾಧ್ಯ ?

### ಅನುಮಾನ ವ್ಯರ್ಥ

**तत्वप्रदीपः – नचैतदनुमानसाध्यम् । वाक्यस्याबोधकत्वेऽनुमानप्रयोग वैयर्थ्यात् । वचनायत्तत्वात् साध्यनस्य । कथं चाबोधकेन परं प्रति साधयेत्।**

ಅನುಮಾನದಿಂದ ಆಗಮದ ಅಪ್ರಾಮಾಣ್ಯವನ್ನು ಸಾಧಿಸಲಾಗದು. ಏಕೆಂದರೆ ವಾಕ್ಯವು ಬೊಧಕವೇ ಆಗದಿದ್ದರೆ ಅನುಮಾನವನ್ನು ಏಕೆ ಪ್ರಯೋಗ ಮಾಡಬೇಕು. ಸಾಧನೆಯು ವಾಕ್ಯದ ಅಧೀನವೇ ಆಗಿರುತ್ತದಷ್ಟೇ. ಮತ್ತು ಅಬೋಧಕವಾದ ವಾಕ್ಯದಿಂದ ಮತ್ತೊಬ್ಬನನ್ನು ಕುರಿತು ವಿಷಯನ್ನು ತಿಳಿಸಲು ಹೇಗೆ ಸಾಧ್ಯವಾಗುತ್ತದೆ ?

### ಪ್ರತ್ಯಕ್ಷವೂ ದುರ್ಬಲ

**तत्वप्रदीपः – स्वयं वा कथं बुध्येत । प्रत्यक्षं मानं, नाऽगम इत्ययं सिद्धान्तोऽपि स्वगुरुवाक्यादवसीयते । आगमस्याप्रामाण्यं वदतः प्रत्यक्षस्यापि स्यात् ।**

ಅಥವಾ ವಾಕ್ಯವು ಅಪ್ರಮಾಣವಾದರೆ ಅಬೋಧಕ ವಾಕ್ಯದಿಂದ ಪರನಿಗೆ ಏನನ್ನೂ ತಿಳಿಸಲಾಗದು ಎಂಬುದಿರಲಿ; ತನಗೂ ಸಹ ಏನನ್ನೂ ತಿಳಿಯಲು ಸಾಧ್ಯವಿಲ್ಲ. 'ಪ್ರತ್ಯಕ್ಷವು ಪ್ರಮಾಣವಾಗಿದೆ ಆಗಮವಲ್ಲ' ಎಂಬ ಸಿದ್ಧಾಂತವೂ ಕೂಡ ತನ್ನ ಗುರುವಿನ ವಾಕ್ಯದಿಂದಲೇ ತಿಳಿಯಬೇಕು. ಆಗಮಕ್ಕೆ ಅಪ್ರಾಮಾಣ್ಯವನ್ನು ಹೇಳುವವನು ಪ್ರತ್ಯಕ್ಷಕ್ಕೂ ಅಪ್ರಾಮಾಣ್ಯವನ್ನು ಒಪ್ಪಬೇಕಾಗುತ್ತದೆ.

**तत्वप्रदीपः – प्रत्यक्षस्य सम्प्रतिपन्नं प्रामाण्यं चेदागमस्यापि तथा ।**

ಪ್ರತ್ಯಕ್ಷವು ಸಂಪ್ರತಿಪನ್ನವಾದ್ದರಿಂದ ಅಪ್ರಮಾಣವಾಗಿದೆ ಎಂದು ಉತ್ತರಿಸಿದರೆ ಆಗಮವೂ ಕೂಡ ಸಂಪ್ರತಿಪನ್ನವಾದ್ದರಿಂದ ಪ್ರಮಾಣವೆಂದು ನಾವು ಉತ್ತರಿಸುತ್ತೇವೆ.

ಸ್ವವ್ಯಾಹತಿದೋಷ

**तत्वप्रदीपः – किञ्च नाऽगमः प्रमाणमिति वचनं प्रमाणमुताप्रमाणम् । अप्रमाणं चेदागमः प्रमाणमेव । प्रमाणं चेत् स्वव्याहतिः । अतः प्रामाण्यमङ्गीकार्यम् ।**

ಮತ್ತು 'ಆಗಮಃ ನ ಪ್ರಮಾಣಂ' ಎಂಬ ಮಾತು ಪ್ರಮಾಣವೋ, ಅಪ್ರಮಾಣವೋ ? ಅಪ್ರಮಾಣವೆಂದರೆ ಆಗಮವು ಪ್ರಮಾಣವೆಂದೇ ಆಯಿತು. ಪ್ರಮಾಣವೆಂದರೆ ಸ್ವವ್ಯಾಹತಿಯುನ್ನು ಒಪ್ಪಿದಂತಾಯಿತು. ಆದ್ದರಿಂದ ಆಗಮಕ್ಕೆ ಪ್ರಾಮಾಣ್ಯವನ್ನು ಅಂಗೀಕಾರ ಮಾಡಬೇಕು.

ಆಗಮವು ಅಪ್ರಮಾಣವೆಂದು ಆಕ್ಷೇಪ

**तत्वप्रदीपः – अथोच्येत, वक्तृज्ञानं शब्दादनुमीयते, आप्तवाक्यस्य ज्ञानपूर्वकत्वाज्ज्ञानलिङ्गकोऽर्थोऽवगम्यते, तज्ज्ञानस्य यथार्थत्वात्, अतो नाव्यवधानेनापि शब्दादर्थनिश्चयः, अव्यवधानेन शब्दार्थनिश्चये प्रमाणाप्रमाण वाक्यविभागो न स्यादिति ।**

ಆಕ್ಷೇಪ - ವಕ್ತೃಜ್ಞಾನವನ್ನು ಶಬ್ದದಿಂದ ಅನುಮಾನ ಮಾಡುತ್ತೇವೆ. ಆಪ್ತವಾಕ್ಯವು ಜ್ಞಾನಪೂರ್ವಕವಾಗಿಯೇ ಇರುವುದರಿಂದ ಜ್ಞಾನವಿಷಯತ್ವವೆಂಬ ಹೇತುವಿನಿಂದ ವಿಷಯದಲ್ಲಿ ಯಾಥಾರ್ಥ್ಯವು ತಿಳಿಯಲ್ಪಡುತ್ತದೆ. ವಕ್ತೃವಿನ ಜ್ಞಾನವು ಯಥಾರ್ಥವಾಗಿ ಇರುವುದು ಇದಕ್ಕೆ ಮುಖ್ಯಕಾರಣ. ಹೀಗೆ ಹೇಳಿದಾಗ ಶಬ್ದವನ್ನು ಕೇಳಿದಾಗ ನೇರವಾಗಿ ಅರ್ಥನಿಶ್ಚಯವು ಆಗುವುದಿಲ್ಲ. ಒಂದುವೇಳೆ ನೇರವಾಗಿಯೇ ಅರ್ಥನಿಶ್ಚಯವಾಗುತ್ತದೆಂದು ನಾವು ಹೇಳಿದ್ದರೆ 'ಆಗಮಃ ನ ಪ್ರಮಾಣಂ' ಎಂಬ ವಾಕ್ಯವು ಪ್ರಮಾಣ ಅಪ್ರಮಾಣವೆಂಬ ವಾಕ್ಯವಿಭಾಗವು ಬರುವುದಿಲ್ಲವೆಂದು ಹೇಳಬಹುದಿತ್ತು ?

ಶ್ರುತಿಮೂಲವಾದ್ದರಿಂದ ಬ್ರಹ್ಮಸೂತ್ರಗಳು ಪ್ರಮಾಣವಾಗಿವೆ ಎಂದು ಹೇಗೆ ಹೇಳಿದಿರಿ? ಆಗಮವೇ ಅಪ್ರಮಾಣವಾಗಿರುವುದರಿಂದ ತನ್ಮೂಲಕವಾದ ಪ್ರಾಮಾಣ್ಯವು ಬ್ರಹ್ಮಸೂತ್ರಗಳಿಗೂ ಕೂಡ ಯುಕ್ತವಾಗುವುದಿಲ್ಲ?

ಈ ಆಕ್ಷೇಪವು ತಪ್ಪು. ಆಗಮದ ಅಪ್ರಾಮಾಣ್ಯವನ್ನು ಒಪ್ಪಬೇಕಾದರೂ ಸಹ ಆಗಮಪ್ರಾಮಾಣ್ಯವನ್ನು ಒಪ್ಪಬೇಕು. ಆಗಮಪ್ರಾಮಾಣ್ಯವನ್ನೇ ಒಪ್ಪದಿದ್ದರೆ ತದಭಾವರೂಪವಾದ ಅಪ್ರಾಮಾಣ್ಯವನ್ನು ಹೇಳಲು ಹೇಗೆ ಸಾಧ್ಯ ?

### ಅನುಮಾನ ವ್ಯರ್ಥ

**तत्वप्रदीपः – नचैतदनुमानसाध्यम् । वाक्यस्याबोधकत्वेऽनुमानप्रयोग वैयर्थ्यात् । वचनायत्तत्वात् साध्यनस्य । कथं चाबोधकेन परं प्रति साधयेत्।**

ಅನುಮಾನದಿಂದ ಆಗಮದ ಅಪ್ರಾಮಾಣ್ಯವನ್ನು ಸಾಧಿಸಲಾಗದು. ಏಕೆಂದರೆ ವಾಕ್ಯವು ಬೊಧಕವೇ ಆಗದಿದ್ದರೆ ಅನುಮಾನವನ್ನು ಏಕೆ ಪ್ರಯೋಗ ಮಾಡಬೇಕು. ಸಾಧನೆಯು ವಾಕ್ಯದ ಅಧೀನವೇ ಆಗಿರುತ್ತದಷ್ಟೇ. ಮತ್ತು ಅಬೋಧಕವಾದ ವಾಕ್ಯದಿಂದ ಮತ್ತೊಬ್ಬನನ್ನು ಕುರಿತು ವಿಷಯನ್ನು ತಿಳಿಸಲು ಹೇಗೆ ಸಾಧ್ಯವಾಗುತ್ತದೆ ?

### ಪ್ರತ್ಯಕ್ಷವೂ ದುರ್ಬಲ

**तत्वप्रदीपः – स्वयं वा कथं बुध्येत । प्रत्यक्षं मानं, नाऽगम इत्ययं सिद्धान्तोऽपि स्वगुरुवाक्यादवसीयते । आगमस्याप्रामाण्यं वदतः प्रत्यक्षस्यापि स्यात् ।**

ಅಥವಾ ವಾಕ್ಯವು ಅಪ್ರಮಾಣವಾದರೆ ಅಬೋಧಕ ವಾಕ್ಯದಿಂದ ಪರನಿಗೆ ಏನನ್ನೂ ತಿಳಿಸಲಾಗದು ಎಂಬುದಿರಲಿ; ತನಗೂ ಸಹ ಏನನ್ನೂ ತಿಳಿಯಲು ಸಾಧ್ಯವಿಲ್ಲ. 'ಪ್ರತ್ಯಕ್ಷವು ಪ್ರಮಾಣವಾಗಿದೆ ಆಗಮವಲ್ಲ' ಎಂಬ ಸಿದ್ಧಾಂತವೂ ಕೂಡ ತನ್ನ ಗುರುವಿನ ವಾಕ್ಯದಿಂದಲೇ ತಿಳಿಯಬೇಕು. ಆಗಮಕ್ಕೆ ಅಪ್ರಾಮಾಣ್ಯವನ್ನು ಹೇಳುವವನು ಪ್ರತ್ಯಕ್ಷಕ್ಕೂ ಅಪ್ರಾಮಾಣ್ಯವನ್ನು ಒಪ್ಪಬೇಕಾಗುತ್ತದೆ.

**तत्वप्रदीपः – प्रत्यक्षस्य सम्प्रतिपन्नं प्रामाण्यं चेदागमस्यापि तथा ।**

ಪ್ರತ್ಯಕ್ಷವು ಸಂಪ್ರತಿಪನ್ನವಾದ್ದರಿಂದ ಅಪ್ರಮಾಣವಾಗಿದೆ ಎಂದು ಉತ್ತರಿಸಿದರೆ ಆಗಮವೂ ಕೂಡ ಸಂಪ್ರತಿಪನ್ನವಾದ್ದರಿಂದ ಪ್ರಮಾಣವೆಂದು ನಾವು ಉತ್ತರಿಸುತ್ತೇವೆ.

ಸ್ವವ್ಯಾಹತಿದೋಷ

**तत्वप्रदीपः – किञ्च नाऽगमः प्रमाणमिति वचनं प्रमाणमुताप्रमाणम् । अप्रमाणं चेदागमः प्रमाणमेव । प्रमाणं चेत् स्वव्याहतिः । अतः प्रामाण्यमङ्गीकार्यम् ।**

ಮತ್ತು 'ಆಗಮಃ ನ ಪ್ರಮಾಣಂ' ಎಂಬ ಮಾತು ಪ್ರಮಾಣವೋ, ಅಪ್ರಮಾಣವೋ ? ಅಪ್ರಮಾಣವೆಂದರೆ ಆಗಮವು ಪ್ರಮಾಣವೆಂದೇ ಆಯಿತು. ಪ್ರಮಾಣವೆಂದರೆ ಸ್ವವ್ಯಾಹತಿಯನ್ನು ಒಪ್ಪಿದಂತಾಯಿತು. ಆದ್ದರಿಂದ ಆಗಮಕ್ಕೆ ಪ್ರಾಮಾಣ್ಯವನ್ನು ಅಂಗೀಕಾರ ಮಾಡಬೇಕು.

ಆಗಮವು ಅಪ್ರಮಾಣವೆಂದು ಆಕ್ಷೇಪ

**तत्वप्रदीपः – अथोच्येत, वक्तृज्ञानं शब्दादनुमीयते, आप्तवाक्यस्य ज्ञानपूर्वकत्वाज्ज्ञानलिङ्गकोऽर्थोऽवगम्यते, तज्ज्ञानस्य यथार्थत्वात्, अतो नाव्यवधानेनापि शब्दादर्थनिश्चयः, अव्यवधानेन शब्दार्थनिश्चये प्रमाणाप्रमाण वाक्यविभागो न स्यादिति ।**

ಆಕ್ಷೇಪ - ವಕ್ತೃಜ್ಞಾನವನ್ನು ಶಬ್ದದಿಂದ ಅನುಮಾನ ಮಾಡುತ್ತೇವೆ. ಆಪ್ತವಾಕ್ಯವು ಜ್ಞಾನಪೂರ್ವಕವಾಗಿಯೇ ಇರುವುದರಿಂದ ಜ್ಞಾನವಿಷಯತ್ವವೆಂಬ ಹೇತುವಿನಿಂದ ವಿಷಯದಲ್ಲಿ ಯಾಥಾರ್ಥ್ಯವು ತಿಳಿಯಲ್ಪಡುತ್ತದೆ. ವಕ್ತೃವಿನ ಜ್ಞಾನವು ಯಥಾರ್ಥವಾಗಿ ಇರುವುದು ಇದಕ್ಕೆ ಮುಖ್ಯಕಾರಣ. ಹೀಗೆ ಹೇಳಿದಾಗ ಶಬ್ದವನ್ನು ಕೇಳಿದಾಗ ನೇರವಾಗಿ ಅರ್ಥನಿಶ್ಚಯವು ಆಗುವುದಿಲ್ಲ. ಒಂದುವೇಳೆ ನೇರವಾಗಿಯೇ ಅರ್ಥನಿಶ್ಚಯವಾಗುತ್ತದೆಂದು ನಾವು ಹೇಳಿದ್ದರೆ 'ಆಗಮಃ ನ ಪ್ರಮಾಣಂ' ಎಂಬ ವಾಕ್ಯವು ಪ್ರಮಾಣ ಅಪ್ರಮಾಣವೆಂಬ ವಾಕ್ಯವಿಭಾಗವು ಬರುವುದಿಲ್ಲವೆಂದು ಹೇಳಬಹುದಿತ್ತು ?

ವಿವರಣೆ - ಒಂದು ಶಬ್ದಕ್ಕೆ ನೇರವಾಗಿ ಪ್ರಾಮಾಣ್ಯವನ್ನು ಒಪ್ಪಿರುವುದಿಲ್ಲ. ಶಬ್ದಪ್ರಯೋಗ ಮಾಡಿರುವ ವಕ್ತೃವಿನ ಜ್ಞಾನವನ್ನು ಮೊದಲು ಅನುಮಾನ ಮಾಡಬೇಕು. 'ಆಗಮಃ ನ ಪ್ರಮಾಣಂ' ಎಂದು ಯಾವ ವ್ಯಕ್ತಿ ಹೇಳುವನೋ ಅವನ ವಾಕ್ಯಪ್ರಯೋಗದಿಂದ ಅವನಿಗಿರುವ ಜ್ಞಾನವನ್ನು ಮೊದಲು ಅನುಮಾನ ಮಾಡಬೇಕು. 'ಆಗಮಃ ನ ಪ್ರಮಾಣಮಿತಿ ವಾಕ್ಯಂ ವಕ್ತೃಜ್ಞಾನಪೂರ್ವಕಂ ಆಪ್ತವಾಕ್ಯತ್ವಾತ್' ಎಂದು ವಕ್ತೃವಿನ ಜ್ಞಾನವು ಯಥಾರ್ಥವಾಗಿರುವುದರಿಂದ ವಿಷಯವನ್ನು ಅನಂತರ ಅನುಮಾನ ಮಾಡಬೇಕು. 'ಅಯಂ ವಿಷಯಃ ಯಥಾರ್ಥಃ ಯಥಾರ್ಥಜ್ಞಾನವಿಷಯತ್ವಾತ್' ಎಂದು. ಹೀಗೆ ಅನುಮಾನದ ಮೂಲಕವೇ ಶಬ್ದದಿಂದ ವಿಷಯಜ್ಞಾನ ಬರುತ್ತದೆ. ನೇರವಾಗಿ ವಿಷಯಜ್ಞಾನ ಬರುವುದಿಲ್ಲ.

ಆಕ್ಷೇಪ ನಿರಾಕರಣೆ

**तत्वप्रदीपः – मैवम् । न तावत् वक्तृज्ञानमात्रानुमानं शब्दात् । तथा सति तद्व्यवधानेनापि शब्दादर्थावगमाभावप्रसङ्गात् । अर्थविशेषितं ज्ञानमनुमीयते चेदर्थः प्रथमतः प्रतीत इति किमत्र व्यवधानम् ।**

ಪರಿಹಾರ - ಈ ಆಕ್ಷೇಪ ಅಯುಕ್ತವಾಗಿದೆ. ಅನುಮಾನದಿಂದ ವಕ್ತೃಜ್ಞಾನವನ್ನು ತಿಳಿಯುವಾಗ ವಿಷಯವನ್ನು ಉಲ್ಲೇಖ ಮಾಡದಿದ್ದರೆ ವ್ಯವಹಿತವಾಗಿ ಅನುಮಾನದ ಮೂಲಕ ವಿಷಯನಿಶ್ಚಯವು ಸಾಧ್ಯವಾಗುವುದಿಲ್ಲ. ಆದ್ದರಿಂದ ಅರ್ಥಜ್ಞಾನವು ಬರುವುದಿಲ್ಲವೆಂದು ಹೇಳಿದಂತಾಗುತ್ತದೆ. ಅರ್ಥವಿಷಯವನ್ನು ಉಲ್ಲೇಖ ಮಾಡಿ ಅನುಮಾನ ಮಾಡುವುದಾದರೆ ವಿಷಯವು ಅನುಮಾನಕ್ಕಿಂತ ಮೊದಲೇ ಪ್ರತೀತವಾಯಿತೆಂದು ಒಪ್ಪಿದಂತಾಯಿತು. ಹೀಗಿರುವಾಗ ಅನುಮಾನದ ಮೂಲಕವಾಗಿ ವಿಷಯ ನಿಶ್ಚಯವಾಗುತ್ತದೆ ಎಂದು ಹೇಳುವುದು ಅಯುಕ್ತವಾಗುತ್ತದೆ.

ವಿವರಣೆ - ವಾಕ್ಯಪ್ರಯೋಗದಿಂದ ವಕ್ತೃಜ್ಞಾನವನ್ನು ಅನುಮಾನ ಮಾಡುವಾಗ ವಿಷಯವನ್ನು ಉಲ್ಲೇಖ ಮಾಡುತ್ತೀರೋ? ಇಲ್ಲವೋ? ವಿಷಯವನ್ನು ಉಲ್ಲೇಖ ಮಾಡದಿದ್ದರೆ ಅನುಮಾನದ ಮೂಲಕವೂ ವಿಷಯನಿಶ್ಚಯ ಸಾಧ್ಯವಾಗುವುದಿಲ್ಲ. ಕೇವಲ ಜ್ಞಾನವನ್ನು ಅನುಮಾನ ಮಾಡುವುದಿಲ್ಲ; ವಿಷಯ ಸಹಿತವಾಗಿ ಜ್ಞಾನವನ್ನು ಅನುಮಾನ ಮಾಡುತ್ತೇವೆ ಎಂದರೆ ವಿಷಯವು ಪೂರ್ವದಲ್ಲೇ ಜ್ಞಾತವಾಯಿತು. ಆವಾಗ ಶಬ್ದದಿಂದಲೇ ಅರ್ಥನಿಶ್ಚಯವಾಯಿತೆಂಬುದನ್ನು ಒಪ್ಪಿದಂತಾಯಿತು.

ಪುರುಷವಾಕ್ಯವು ಅನುಮಾನ ರೂಪವಲ್ಲ

**तत्वप्रदीपः – प्रतीयत एव केवलं प्रथमतो न निश्चितः, तत्प्रमाणान्तरादेव हि निश्चीयते, तस्मादनुमानात्मकं पुरुषवाक्यमिति चेत्**

ವಾಕ್ಯವನ್ನು ಕೇಳಿದಾಗ ವಿಷಯವು ಸಾಮಾನ್ಯವಾಗಿ ಜ್ಞಾತವಾಗುತ್ತದೆ. ಬೇರೆ ಪ್ರಮಾಣದಿಂದ ನಿಶ್ಚಯಜ್ಞಾನ ಬರುತ್ತದೆ. ಆದ್ದರಿಂದ ಪುರುಷವಾಕ್ಯವು ಅನುಮಾನಸ್ವರೂಪವಾಗಿದೆ ಎಂದು ಹೇಳಬಹುದಲ್ಲವೆ?

ವಿವರಣೆ - ವೈಶೇಷಿಕರ ಏಕದೇಶಿಗಳು ಹೀಗೆ ಆಕ್ಷೇಪಿಸುವರು - ಅಪೌರುಷೇಯ ವಾಕ್ಯವಷ್ಟೇ ಆಗಮವೆನಿಸಿದೆ. ಪೌರುಷೇಯವಾಕ್ಯವು ಅನುಮಾನದಲ್ಲಿ ಅಂತರ್ಭಾವವಾಗುತ್ತದೆ. ವಾಕ್ಯವನ್ನು ಕೇಳಿದಾಗ ವಿಷಯದ ಜ್ಞಾನ ಸಾಮಾನ್ಯವಾಗಿ ಬರುತ್ತದೆ. ಬೇರೆ ಪ್ರಮಾಣದಿಂದಲೇ ವಿಷಯದ ನಿಶ್ಚಯವುಂಟಾಗುತ್ತದೆ.

ಶಬ್ದದಿಂದಲೇ ಅರ್ಥಜ್ಞಾನ

**तत्वप्रदीपः – न । शब्दादेवार्थज्ञानं, तन्निर्दोषत्वज्ञानं प्रमाणान्तरापेक्षम्। न च तावता तस्य तत्राप्रामाण्यम् । अन्यथा प्रत्यक्षेऽपि क्वचिन्निर्दोषत्वज्ञानस्य प्रमाणान्तराधीनत्वेन स्वार्थे प्रामाण्याभावप्रसङ्गादनुमानात्मत्कत्वप्रसङ्गाच्च ।**

ಶಬ್ದದಿಂದಲೇ ಅರ್ಥಜ್ಞಾನ ಬರುವುದು ಅನುಭವಸಿದ್ಧವಾಗಿದೆ. ಶಬ್ದ ಹಾಗೂ ಶಬ್ದಜನ್ಯಜ್ಞಾನವು ನಿರ್ದೋಷ ಎಂದು ನಿರ್ಣಯಿಸಲು ಬೇರೆ ಪ್ರಮಾಣವನ್ನು ಅಪೇಕ್ಷಿಸಬೇಕು. ಅಂದ ಮಾತ್ರಕ್ಕೆ ಶಬ್ದಕ್ಕೆ ಅಪ್ರಾಮಾಣ್ಯವು ಬರುವುದಿಲ್ಲ. ಹೀಗೊಪ್ಪದಿದ್ದರೆ ಪ್ರತ್ಯಕ್ಷದಲ್ಲಿಯೂ ಕೂಡ ನಿರ್ದೋಷತ್ವವನ್ನು ತಿಳಿಯಲು ಮತ್ತೊಂದು ಪ್ರಮಾಣವನ್ನು ಅಪೇಕ್ಷಿಸಬೇಕಾದೀತು. ಸ್ವಾರ್ಥದಲ್ಲಿ ಪ್ರತ್ಯಕ್ಷಕ್ಕೆ ಪ್ರಮಾಣ್ಯವಿಲ್ಲದ ಕಾರಣ ಅನುಮಾನವನ್ನು ಆಶ್ರಯಿಸಿ ಅನುಮಾನದ ಮೂಲಕವೇ ಜ್ಞಾನ ಬರುತ್ತದೆಂದು ಪ್ರತ್ಯಕ್ಷ ಪ್ರಮಾಣ್ಯವಿಲ್ಲದ ಕಾರಣ ಅನುಮಾನವನ್ನು ಆಶ್ರಯಿಸಿ ಅನುಮಾನದ ಮೂಲಕವೇ ಜ್ಞಾನ ಬರುತ್ತದೆಂದು ಪ್ರತ್ಯಕ್ಷ ವಿಷಯದಲ್ಲೂ ಒಪ್ಪುವ ಪ್ರಸಂಗ ಬರುತ್ತದೆ.

## 'ವೇದಂ' ಎಂಬ ಪದದ ವ್ಯಾಖ್ಯಾನ

**तत्वप्रदीपः – अत आगमस्य स्वार्थे प्रामाण्यमङ्गीकार्यं किं पुनर्वेदशब्दस्य। तदेतदाह भगवान् भाष्यकारो 'वेदम्' इति । वेदनादेव हि वेद इत्युच्यते । वेदो न वेदयतीति विप्रतिषिद्धम् ।**

ಆದ್ದರಿಂದ ಆಗಮಕ್ಕೆ ಸ್ವಾರ್ಥದಲ್ಲಿ ಪ್ರಾಮಾಣ್ಯವು ಸಿದ್ಧವಾಯಿತು. ಹೀಗೆ ಶಬ್ದಸಾಮಾನ್ಯಕ್ಕೆ ಪ್ರಾಮಾಣ್ಯವು ಸಿದ್ಧವಾದ ಮೇಲೆ ಅಪೌರುಷೇಯವಾದ ವೇದಕ್ಕೆ ಪ್ರಾಮಾಣ್ಯವು ಸಿದ್ಧವಾಗಿದೆ ಎಂದು ಪ್ರತ್ಯೇಕವಾಗಿ ಹೇಳಲೇಕಾಗಿಲ್ಲ. ಈ ಎಲ್ಲಾ ವಿಷಯವನ್ನು ಭಗವಾನ್ ಭಾಷ್ಯಕಾರರು 'ವೇದಂ' ಎಂಬ ಒಂದೇ ಪದದಿಂದ ಸಂಗ್ರಹಿಸಿದ್ದಾರೆ. ನೇರವಾಗಿ ಜ್ಞಾನವನ್ನು ಉಂಟುಮಾಡುವುದರಿಂದ 'ವೇದ' ಎಂದು ಕರೆಸಿಕೊಳ್ಳುತ್ತದೆ ಎಂಬುದು ಇದರರ್ಥ. ವೇದವು ಜ್ಞಾನವನ್ನು ಹುಟ್ಟಿಸುವುದಿಲ್ಲ-ವೆಂಬುದು ವಿರುದ್ಧ ಹೇಳಿಕೆ.

## ಪ್ರಾಮಾಣ್ಯಸ್ವತಸ್ತ್ವ ಒಪ್ಪದಿದ್ದರೆ ಅನವಸ್ಥಾ

**तत्वप्रदीपः – तच्च प्रामाण्यं स्वत एवाभ्युपगन्तव्यं प्रत्यक्षवदेव । परतश्चेत् तस्यापि परत इत्यनवस्थानात् ।**

ಆಕ್ಷೇಪ - ಪ್ರತ್ಯಕ್ಷವೂ ಕೂಡ ಸ್ವತಃ ಪ್ರಮಾಣವೆಂದು ಒಪ್ಪುವುದಿಲ್ಲ. ಅಲ್ಲಿಯೂ ಪರತಃ ಪ್ರಾಮಾಣ್ಯವನ್ನೇ ಒಪ್ಪುತ್ತೇವೆ. ಏಕೆಂದರೆ ನಾವು ಪರತಃ ಪ್ರಾಮಾಣ್ಯವಾದಿಗಳಾಗಿದ್ದೇವೆ. ಆದ್ದರಿಂದ ಪ್ರತ್ಯಕ್ಷದ ದೃಷ್ಟಾಂತದಂತೆ ವೇದಕ್ಕೆ ಸ್ವತಃ ಪ್ರಾಮಾಣ್ಯವನ್ನು ಸಮರ್ಥಿಸಲು ನಿಮ್ಮಿಂದ ಹೇಗೆ ಸಾಧ್ಯವಾಗುತ್ತದೆ?

ಸಮಾಧಾನ - ಹಾಗಾದಲ್ಲಿ ಅನವಸ್ಥಾದೋಷವು ಬರುತ್ತದೆ. ಪ್ರತ್ಯಕ್ಷ, ಆಗಮ ಇವುಗಳಲ್ಲಿರುವ ಪ್ರಾಮಾಣ್ಯವು ಮತ್ತೊಂದರ ಅಧೀನವೆಂದರೆ ಅದರಲ್ಲಿರುವ ಪ್ರಾಮಾಣ್ಯವೂ ಕೂಡ ಮತ್ತೊಂದರ ಅಧೀನವಾಗುತ್ತದೆ. ಹೀಗೆ ಅನವಸ್ಥಾದೋಷವನ್ನು ಪರತಃ ಪ್ರಾಮಾಣ್ಯವಾದಿಗಳಿಗೆ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ.

### ಅಪ್ರಾಮಾಣ್ಯಂ ಪರತಃ

**तत्वप्रदीपः – नचानुमादेः गुणविमर्शः क्रियते । दोषाभावे प्रामाण्यसिद्धेः। तस्मात् दोषादप्रामाण्यं दोषाभावे स्वत एव प्रामाण्यम् ।**

'ಪರ್ವತೋ ವಹ್ನಿಮಾನ್ ಧೂಮಾತ್' ಎಂಬ ಅನುಮಾನವನ್ನು ಕೇಳಿದಾಕ್ಷಣ ಪರ್ವತದಲ್ಲಿ ವಹ್ನಿಯು ಇರುತ್ತದೆಂಬ ಅರಿವು ಸಹಜವಾಗಿ ಬರುತ್ತದೆ. ಯಾರೊಬ್ಬರಿಗೂ ಈ ಅನುಮಾನವು ಪ್ರಮಾಣವೋ ಅಥವಾ ಅಪ್ರಮಾಣವೋ? ಎಂಬ ಗೊಂದಲವುಂಟಾಗುವುದಿಲ್ಲ. ಅನುಮಾನದಲ್ಲಿರುವ ಗುಣದ ಬಗ್ಗೆ ವಿಮರ್ಶೆಯನ್ನೂ ಕೂಡ ಮಾಡುವುದಿಲ್ಲ. ಆದ್ದರಿಂದ ದೋಷವು ಇಲ್ಲದಿದ್ದರೆ ಪ್ರಮಾಣವು ಸ್ವತಃ ಸಿದ್ಧವಾಗುತ್ತದೆ. ಆದ್ದರಿಂದ ದೋಷವಿದ್ದರೆ ಪರತಃ ಅಪ್ರಾಮಾಣ್ಯವನ್ನು ಹೇಳಬೇಕು. ಇಲ್ಲದಿದ್ದರೆ ಸ್ವತಃ ಪ್ರಾಮಾಣ್ಯವನ್ನು ಹೇಳಬೇಕು.

### ದೋಷವು ಪ್ರಾಮಾಣ್ಯಕ್ಕೆ ಪ್ರತಿಬಂಧಕ

**तत्वप्रदीपः – दोषस्य प्रामण्यप्रतिबन्धकत्वात् दोषाभावान्वय-व्यतिरेकित्वात् तस्मादेव प्रामाण्यं न स्वत इति चेत् ।**

ಆಕ್ಷೇಪ - ಸ್ವತಃ ಪ್ರಾಮಾಣ್ಯವೇ ಅರ್ಥವಿಲ್ಲದ್ದು. ಏಕೆಂದರೆ ದೋಷವಿಲ್ಲದಿದ್ದರೆ ಪ್ರಾಮಾಣ್ಯವನ್ನು ಸ್ವತಃ ಎನ್ನುತ್ತಿರುವಿರಿ. ಆವಾಗ ಪ್ರಾಮಾಣ್ಯವು ದೋಷಾಭಾವಜ್ಞಾನದ ಅಧೀನವಾಯಿತು. ಹೀಗಿರುವಾಗ ಪ್ರಾಮಾಣ್ಯವು ಸ್ವತಃ ಸಿದ್ಧವಾಯಿತೆಂದು ಹೇಗೆ ಹೇಳುತ್ತೀರಿ ?

ಆದ್ದರಿಂದ ದೋಷವು ಪ್ರಾಮಾಣ್ಯಕ್ಕೆ ಪ್ರತಿಬಂಧಕವಾಗಿದೆ. ದೋಷವಿದ್ದರೆ ಪ್ರಾಮಾಣ್ಯಜ್ಞಾನ ಬರುತ್ತದೆ. ದೋಷವಿಲ್ಲದಿದ್ದರೆ ಪ್ರಾಮಾಣ್ಯಜ್ಞಾನ ಬರುವುದಿಲ್ಲ ಹೀಗೆ ಅನ್ವಯ ವ್ಯತಿರೇಕದಿಂದ ಪ್ರಮಾಣ್ಯಸ್ವತಸ್ತ್ವವನ್ನು ಒಪ್ಪಲು ಸಾಧ್ಯವಾಗುವುದಿಲ್ಲ.

### ಈ ವಿಷಯದಲ್ಲಿ ಉದಾಹರಣೆ

**तत्वप्रदीपः – तदयुक्तम् । नह्युत्तम्भकाभावान्वयव्यतिरेकित्वेनाग्नेरौष्ण्यम-स्वतः स्यात् । तस्तात् प्रमाणानां प्रामाण्यं स्वत एव । दोषादप्रामाण्यम् दोषश्च बलवत्प्रमाणाज्ज्ञायते ।**

ಸಮಾಧಾನ - ಹಾಗಾದಲ್ಲಿ ಅಗ್ನಿಯಲ್ಲಿರುವ ದಾಹಕತ್ವವೂ ಕೂಡ ಸ್ವತಃ ಇರುವುದಿಲ್ಲವೆಂದು ಹೇಳಬೇಕಾಗುತ್ತದೆ. ಏಕೆಂದರೆ ಔಷಧಿವಿಶೇಷವು ಅಗ್ನಿಯಲ್ಲಿರುವ ದಾಹಕತ್ವಶಕ್ತಿಯನ್ನು ನಾಶ ಮಾಡುತ್ತದೆ. ಔಷಧಿಯೆಂಬ ಪ್ರತಿಬಂಧಕವಿಲ್ಲದಿದ್ದಾಗ ಅಗ್ನಿಯಲ್ಲಿ ದಾಹಕತ್ವಶಕ್ತಿಯು ಕಾಣಿಸುತ್ತದೆ. ಆದ್ದರಿಂದ ದಾಹಕತ್ವಶಕ್ತಿಯು ಪ್ರತಿಬಂಧಕಾಭಾವದ ಅಧೀನವೆಂದು ಹೇಳಿದಂತಾಯಿತು. ಒಂದುವೇಳೆ ಪ್ರಾಮಾಣ್ಯವು ದೋಷಾಭಾವಜ್ಞಾನದ ಅಧೀನವೆಂದು ಹೇಳುವುದಾದರೆ, ಅಗ್ನಿಯಲ್ಲಿರುವ ದಾಹಕತ್ವಶಕ್ತಿಯೂ ಕೂಡ ಪ್ರತಿಬಂಧಕಾಭಾವಜ್ಞಾನದ ಅಧೀನವೆಂದು ಹೇಳಬೇಕಾಗುತ್ತದೆ. ಆದರೆ ಅಗ್ನಿಯಲ್ಲಿರುವ ದಾಹಕತ್ವಶಕ್ತಿಯು ಪರತಃ ಎಂದು ಒಪ್ಪುವುದು ಅನುಭವವಿರುದ್ಧ. ಆದರಂತೆ ಪ್ರಕೃತದಲ್ಲಿಯೂ ಪ್ರತ್ಯಕ್ಷದಲ್ಲಿ ಪ್ರಾಮಾಣ್ಯವನ್ನು ಸ್ವತಃ ಎಂದೇ ಒಪ್ಪಬೇಕು. ದೋಷವಿದ್ದರೆ ಮಾತ್ರ ಪರತಃ ಅಪ್ರಾಮಾಣ್ಯವನ್ನು ಒಪ್ಪಬೇಕು.

ಯಾವುದು ನಿರ್ದುಷ್ಟ?

**तत्वप्रदीपः – उक्तं च ब्रह्मतर्के -**

**''अदुष्टमिन्द्रियं त्वक्षं तर्कोऽदुष्टस्तथाऽनुमा ।**
**आगमोऽदुष्टवाक्यं च स्वदृक्चानुभवःस्मृतः ।**
**बलवत्प्रमाणतश्चैव ज्ञेया दोषा नचान्यथा ।।'' इति ।**

ಇದನ್ನು ಬ್ರಹ್ಮತರ್ಕವು ಸ್ಪಷ್ಟಪಡಿಸಿದೆ -

'ಅದೃಷ್ಟಮಿಂದ್ರಿಯಂ ತ್ವಕ್ಷಂ ತರ್ಕೋಽದುಷ್ಟಸ್ತಥಾಽನುಮಾ ।
ಆಗಮೋಽದುಷ್ಟವಾಕ್ಯಂ ಚ ಸ್ವದೃಕ್ಚಾನುಭವಃ ಸ್ಮೃತಃ ।
ಬಲವತ್ಪ್ರಮಾಣಯಶ್ಚೈವ ಜ್ಞೇಯಾ ದೋಷಾ ನಚಾನ್ಯಥಾ ॥

ದೋಷವಿಲ್ಲದ ಇಂದ್ರಿಯವೆನಿಸಿದ ಪ್ರತ್ಯಕ್ಷ ಹಾಗೂ ದೋಷವಿಲ್ಲದ ತರ್ಕವೆನಿಸಿದ ಅನುಮಾನ ಮತ್ತು ದೋಷವಿಲ್ಲದ ವಾಕ್ಯವೆನಿಸಿದ ಆಗಮ, ಅನುಭವವೆನಿಸಿದ ಸಾಕ್ಷಿಜ್ಞಾನ ಇವುಗಳಲ್ಲಿ ಬಲಿಷ್ಠವಾದ ಪ್ರಮಾಣದಿಂದಲೇ ದೋಷವನ್ನು ತಿಳಿಯಬೇಕು. ಬೇರೆ ಯಾವುದರಿಂದಲೂ ದೋಷವನ್ನು ತಿಳಿಯಬಾರದು.

ಅಪೌರುಷೇಯದಲ್ಲಿ ದೋಷ ಶಂಕೆ ಇಲ್ಲ

**तत्वप्रदीपः – किं पुनर्वेदस्यापौरुषेयत्वेनासम्भव्यदोषस्य । पुरुषकृतत्वे ह्यज्ञानविप्रलम्भादिदोषाः शङ्क्येरन् ।**

ದೋಷವಿಲ್ಲದ ಇಂದ್ರಿಯಾದಿಗಳೇ ಪ್ರಮಾಣವೆಂದು ಸಿದ್ಧವಾಗಿರುವಾಗ ಅತ್ಯಂತ ಅಸಂಭಾವಿತವಾದ ದೋಷವುಳ್ಳ ಅಪೌರುಷೇಯವಾದ ವೇದವು ಪ್ರಮಾಣವೆಂದು ಪ್ರತ್ಯೇಕವಾಗಿ ಹೇಳಬೇಕೇನು? ಒಂದು ವೇಳೆ ವೇದವು ಪುರುಷರಿಂದ ರಚಿತವಾಗಿದೆ ಎಂದು ಹೇಳಿದ್ದಲ್ಲಿ, ಪುರುಷನಲ್ಲಿರುವ ಅಜ್ಞಾನ, ವಿಪ್ರಲಂಭ ಮೊದಲಾದ ದೋಷಗಳನ್ನು ವೇದದಲ್ಲಿಯೂ ಕೂಡ ಆಶಂಕಿಸಬಹುದಿತ್ತು. ಆದರೆ ಅಪೌರುಷೇಯವಾದ ವೇದದಲ್ಲಿ ದೋಷಶಂಕೆಗೆ ಆಸ್ಪದವಿರುವುದಿಲ್ಲ.

ವೇದನಿತ್ಯತ್ವ ವಿಚಾರ

**तत्वप्रदीपः – न च वेदनित्यत्वं विना धर्माधर्मादिसिद्धिः । न चादृष्टत्वात् तदभावः । प्रत्यक्षायोग्यत्वात् तस्य । दृश्यन्ते हि सूक्ष्माः सूक्ष्मदृग्भिः स्थूलदृग्भिरदृष्टाः ।**

ವೇದಕ್ಕೆ ಅಪೌರುಷೇಯತ್ವವನ್ನು ಒಪ್ಪದಿದ್ದರೆ ಸ್ವರ್ಗ, ನರಕ, ಪುಣ್ಯ, ಪಾಪ ಇವುಗಳು ಅಸಿದ್ಧವಾಗುತ್ತಿದ್ದವು. ಹೌದು ! ಕಣ್ಣಿಗೆ ಕಾಣಿಸದ ಸ್ವರ್ಗ-ನರಕಾದಿಗಳು ಇರುವುದೇ ಇಲ್ಲವೆಂದು ಹೇಳಬಾರದು. ಪ್ರತ್ಯಕ್ಷದಿಂದ ತಿಳಿಯಲು ಅವುಗಳು ಯೋಗ್ಯವಾಗಿಲ್ಲ. ಪ್ರಾಕೃತವಾದ ಸ್ಥೂಲ ಪದಾರ್ಥಗಳನ್ನು ಮಾತ್ರ ನೋಡುವ ಅರ್ಹತೆ ನಮ್ಮ ಪ್ರತ್ಯಕ್ಷದ್ದು. ಆದ್ದರಿಂದ ಸ್ಥೂಲದೃಷ್ಟಿಯುಳ್ಳವರಿಗೆ ಪುಣ್ಯ-ಪಾಪಾದಿಗಳು ಕಣ್ಣಿಗೆ ಕಾಣಿಸುವುದಿಲ್ಲ. ಆದರೆ ಯೋಗಿಗಳ ಸೂಕ್ಷ್ಮದೃಷ್ಟಿಗೆ ಅವುಗಳು ಕಾಣಿಸುತ್ತವೆ. ಆದ್ದರಿಂದ ಧರ್ಮ ಮತ್ತು ಅಧರ್ಮಗಳ ಸಿದ್ಧಿಗಾಗಿ ವೇದನಿತ್ಯತ್ವವನ್ನು ಒಪ್ಪಬೇಕು.

ಈಶ್ವರನು ವೇದವನ್ನು ರಚಿಸಿಲ್ಲ

**तत्वप्रदीपः – विप्रतिपत्तौ परवाक्याद्युक्त्या वा निर्णयः । युक्त्यविषयत्वात्तु धर्मादौ वाक्यापेक्षा । तस्य च पौरुषेयत्वकल्पने सर्वज्ञत्वतत्कृत्वादिगुरुकल्पना स्यात् ।**

ಲೌಕಿಕ ಪದಾರ್ಥಗಳಲ್ಲಿ ವಿಪ್ರತಿಪತ್ತಿಯು ಉಂಟಾದರೆ ಆಪ್ತವಾಕ್ಯದಿಂದ ಅಥವಾ ಯುಕ್ತಿಯಿಂದ ಅದನ್ನು ಬಗೆಹರಿಸಬಹುದು. ಏಕೆಂದರೆ ಧರ್ಮಾದಿಗಳು ಯುಕ್ತಿಯನ್ನು ಆಶ್ರಯಿಸಿದರೆ ಅದು ಪುನಃ ಪ್ರತ್ಯಕ್ಷ ಮತ್ತು ಆಗಮಗಳ ಸಹಾಯವನ್ನು ಕೇಳುವುದರಿಂದ ಯುಕ್ತಿಗೆ ಅವಕಾಶವಿಲ್ಲ. ಇನ್ನು ವಾಕ್ಯದಿಂದ ನಿರ್ಣಯ ಮಾಡಬೇಕು. ಆ ವಾಕ್ಯವು ಪೌರುಷೇಯವೆಂದು ಹೇಳಿದರೆ ಸರ್ವಜ್ಞನಾದ ಈಶ್ವರನಿಂದಲೇ ರಚಿತವಾಗಿವೆ ಎಂದು ಒಪ್ಪಬೇಕಾಗುತ್ತದೆ. ಸರ್ವಜ್ಞನಾದ ಈಶ್ವರನಿಂದ ರಚಿತವೆಂದು ಒಪ್ಪಿದರೂ ಕೂಡ ಅನೇಕ ಅನುಪಪತ್ತಿಗಳ ಆಕ್ಷೇಪವುಂಟಾಗುತ್ತದೆ. ಅದನ್ನು ಪರಿಹರಿಸಲು ಅನೇಕ ಬಗೆಯ ಗುರುತರವಾದ ಕಲ್ಪನೆಗಳನ್ನು ಮಾಡಬೇಕು.

### ಅಪೌರುಷೇಯತ್ವವೂ ಸ್ವತಃ ಸಿದ್ಧ

**तत्वप्रदीपः – न च नित्यत्वे किञ्चित् कल्प्यम् । कर्तरि प्रमाणाभावे स्वत एव नित्यत्वं स्यादेव ।**

ಸರ್ವಜ್ಞನಾದ ಈಶ್ವರನಿಂದ ಪ್ರಣೀತವಾಗಿದೆ ಎಂದು ಒಪ್ಪುವುದಕ್ಕಿಂತ ಅಪೌರುಷೇಯವಾದ ವೇದವನ್ನು ಒಪ್ಪಿ, ಇದರಿಂದಲೇ ಧರ್ಮಾದಿಗಳ ಸಿದ್ಧಿಯು ಆಗುತ್ತದೆಂದು ಒಪ್ಪುವುದು ಲಘುಭೂತವಾಗಿದೆ. ವೇದವು ಅಪೌರುಷೇಯವಾಗಿದೆ ಎಂಬ ವಿಷಯದಲ್ಲಿ ಯಾವುದೇ ಪ್ರಮಾಣವಿಲ್ಲ ಎನ್ನಬಾರದು. ವೇದವನ್ನು ರಚಿಸಿರುವ ಕರ್ತೃವಿನ ವಿಷಯದಲ್ಲಿ ಪ್ರಮಾಣವಿಲ್ಲದ್ದರಿಂದ ಸಹಜವಾಗಿಯೇ ವೇದನಿತ್ಯತ್ವವು ಸಿದ್ಧವಾಗುತ್ತದೆ.

### ಧರ್ಮಾದಿಗಳ ಸಿದ್ಧಿ ಅನುಮಾನದಿಂದಲ್ಲ

**तत्वप्रदीपः – न च धर्मादिः कस्यदिचत् प्रत्यक्षः प्रमेयत्वात् करतलामलकविदित्वनुमानमात्रत् सर्वज्ञसिद्धिः ।**

ಪ್ರಶ್ನೆ - ಧರ್ಮಾದಿಗಳು ಯುಕ್ತಿಯಿಂದಲೇ ಸಿದ್ಧವಾಗುತ್ತವೆ. ಅದು ಹೀಗೆ - 'ಧರ್ಮಾದಿಃ ಕಸ್ಯಚಿತ್ ಪ್ರತ್ಯಕ್ಷಃ । ಪ್ರಮೇಯತ್ವಾತ್ ಕರತಲಾಮಕಲವತ್' ಅಂಗೈಯಲ್ಲಿರುವ ನೆಲ್ಲಿಕಾಯಿಯು ಪ್ರಮೇಯವಾಗಿದೆ ಮತ್ತು ಪ್ರತ್ಯಕ್ಷಸಿದ್ಧವಾಗಿದೆ. ಅದರಂತೆ ಧರ್ಮಾದಿಗಳೂ ಕೂಡ ಪ್ರಮೇಯ-ವಾಗಿರುವುದರಿಂದ ಯಾರೋ ಒಬ್ಬ ವ್ಯಕ್ತಿಯ ಪ್ರತ್ಯಕ್ಷಕ್ಕೆ ವಿಷಯವಾಗಿದೆ. ಆ ವ್ಯಕ್ತಿಯು

ಸರ್ವಜ್ಞನಾದ ಈಶ್ವರನನ್ನು ಬಿಟ್ಟು ಬೇರೆ ಯಾರೂ ಸಾಧ್ಯವಿಲ್ಲ. ಹೀಗೆ ಯುಕ್ತಿಯಿಂದ ಧರ್ಮಾದಿಗಳನ್ನು ಸಾಧಿಸಬಹುದಲ್ಲವೇ?

### ಧರ್ಮಾದಿಸಾಧಕ ಅನುಮಾನಕ್ಕೆ ಆಭಾಸಸಮಾನಯೋಗಕ್ಷೇಮ

**तत्वप्रदीपः – विप्रतिपन्ना दर्यः केनचित् पाटिताः दरीत्वात् सम्प्रतिपन्न-दरीवदित्यादिना सिंहभृङ्गादेरपि सौलभ्यप्रसङ्गात् ।**

ಪರಿಹಾರ - ಧರ್ಮಾದಿಗಳನ್ನು ಸಾಧಿಸುವ ನೀವು ಹೇಳಿದ ಅನುಮಾನವು, ಆಭಾಸಸಮಾನ-ಯೋಗಕ್ಷೇಮವುಳ್ಳದ್ದಾಗಿದೆ - 'ವಿಪ್ರತಿಪನ್ನಾ ದರ್ಯಃ ಕೇನಚಿತ್ ಪಾಟಿತಾಃ ದರೀತ್ವಾತ್ ಸಂಪ್ರತಿಪನ್ನದರೀವತ್' ಕೃತಕವಾದ ಗುಹೆಯೂ ಕೂಡ ಗುಹೆಯಾಗಿದೆ. ಮನುಷ್ಯರಿಂದ ಸೀಳಿ ಅದು ಮಾಡಲ್ಪಟ್ಟಿದೆ. ಅದರಂತೆ ಕಾಡಿನಲ್ಲಿರುವ ವಿಪ್ರತಿಪನ್ನವಾದ ಗುಹೆಯೂ ಕೂಡ ಗುಹೆಯಾಗಿರುವುದರಿಂದ ಯಾರಾದರೊಬ್ಬರಿಂದ ಸೀಳಿ ಮಾಡಲ್ಪಟ್ಟಿರಬೇಕು. ಅದು ಸಿಂಹದ ಶೃಂಗವೇ ಆಗಿದೆ. ಸಿಂಹದ ಶೃಂಗದಿಂದಷ್ಟೇ ಕಾಡಿನಲ್ಲಿರುವ ಗುಹೆಯು ಸೀಳಿ ಮಾಡಲ್ಪಡುತ್ತದೆ. ಹೀಗೆ ನಾವು ಅನುಮಾನ ಮಾಡಿದರೆ ನಿಮ್ಮಿಂದ ಯಾವುದೇ ದೋಷ ಹೇಳಲು ಸಾಧ್ಯವಿಲ್ಲ. ನಮ್ಮ ಅನುಮಾನದಲ್ಲಿ ಏನಾದರೂ ದೋಷ ಹೇಳಿದರೆ ಅದು ಧರ್ಮಾದಿಸಾಧಕವಾದ ನಿಮ್ಮ ಅನುಮಾನದಲ್ಲಿಯೂ ಸಮಾನವಾಗುತ್ತದೆ.

### ಸಿಂಹದ ಕೊಂಬು ಏಕೆ ಅನುಮೇಯವಲ್ಲ?

**तत्वप्रदीपः – योग्यानुपलब्धिविरुद्धोऽयं हेतुरिति चेत् समः पर्यनुयोगः ।**

ಆಕ್ಷೇಪ - ಸಿಂಹಕ್ಕೆ ಕೊಂಬು ಇರುತ್ತದೆಂದು ಸಾಧಿಸುವ ಅನುಮಾನವು ಯೋಗ್ಯಾನುಪಲಬ್ಧಿಯಿಂದ ವಿರುದ್ಧವಾಗಿದೆ ಅಲ್ಲವೇ?

ಪರಿಹಾರ - ಸಿಂಹ ಪ್ರತ್ಯಕ್ಷಕ್ಕೆ ಯೋಗ್ಯವಾಗಿದೆ. ಆದರೂ ಕೂಡ ನಮಗೆ ಕಾಣಿಸುತ್ತಿಲ್ಲ. ಆದ್ದರಿಂದ ಅದು ಅಸತ್ಯವಾಗಿದೆ ಎಂದು ನೀವು ಉತ್ತರಿಸಿದರೆ ನಾವೂ ಕೂಡ ಸರ್ವಜ್ಞನಾದ ಈಶ್ವರನೂ ಸಹ ಪ್ರತ್ಯಕ್ಷಕ್ಕೆ ಯೋಗ್ಯನಾಗಿರುವನು ಆದರೂ ಸಹ ಕಣ್ಣಿಗೆ ಕಾಣಿಸುತ್ತಿಲ್ಲ. ಆದ್ದರಿಂದ

ಸಿಂಹಶೃಂಗದಂತೆ ಈಶ್ವರನೂ ಕೂಡ ಅಸತ್ಯನಾಗಿದ್ದಾನೆಂದು ನಾವು ಸಮಾನವಾದ ದೋಷವನ್ನು ಹೇಳುತ್ತೇವೆ.

ಕಾಣಿಸಲು ಯೋಗ್ಯವಲ್ಲವೆಂಬ ದೋಷ ಸಮಾನ

**तत्वप्रदीपः – धर्मादिसूक्ष्मवस्तुनिदर्शिन उपलब्धियोगत्वमेव नास्तीति चेदेवं पृथुलगभीरदरीकारणस्येत्यपि समं समाधानम् ।**

ಆಕ್ಷೇಪ - ಧರ್ಮಾದಿ ಸೂಕ್ಷ್ಮವಸ್ತುಗಳನ್ನು ಕಾಣಲು ಸಮರ್ಥನಾದ ವ್ಯಕ್ತಿಯು ಯೋಗ್ಯನೇ ಅಲ್ಲ. ಆದ್ದರಿಂದ ನಮ್ಮ ಕಣ್ಣಿಗೆ ಕಾಣಿಸುತ್ತಿಲ್ಲ ?

ಪರಿಹಾರ - ಹಾಗಾದರೆ ವಿಶಾಲವಾದ ಗಂಭೀರವಾದ ಗುಹೆಯನ್ನು ಸಿಂಹದ ಶೃಂಗವೂ ಕೂಡ ಸೀಳಿ ರಚಿಸಿದೆ. ಆದರೆ ಕಣ್ಣಿಗೆ ಕಾಣಿಸಲು ಯೋಗ್ಯವೇ ಅಲ್ಲ. ಆದ್ದರಿಂದ ಶೃಂಗವು ಕಾಣಿಸುತ್ತಿಲ್ಲ. ಕಾಣಿಸುತ್ತಿಲ್ಲವೆಂದ ಮಾತ್ರಕ್ಕೆ ಅಸತ್ಯವೆಂದು ಹೇಳಬಾರದು ಎಂಬ ಸಮಾಧಾನವನ್ನು ನಾವೂ ಸಹ ಸಮಾನವಾಗಿ ಹೇಳುತ್ತೇವೆ.

ಧರ್ಮಜ್ಞಾನವಿಲ್ಲವೆಂಬುದನ್ನೂ ಸಹ ಅನುಮಾನದಿಂದ ಸಾಧಿಸಬಹುದು

**तत्वप्रदीपः – प्रत्यनुमा चात्र सम्भवति, विमतो धर्मदृक् न भवति पुरुषत्वात्, अविप्रलम्भकत्वनियतश्च न भवति, चैत्रवदित्यादिका ।**

ಮತ್ತು ಧರ್ಮಾದಿಸಾಧಕವಾದ ಅನುಮಾನಕ್ಕೆ ನಾವು ಪ್ರತಿಯಾದ ಅನುಮಾನವನ್ನು ಹೀಗೆ ಹೇಳುತ್ತೇವೆ - 'ವಿಮತಃ ಧರ್ಮದೃಕ್ ನ ಭವತಿ ಪುರುಷತ್ವಾತ್ ಚೈತ್ರವತ್' 'ವಿಮತಃ ಅವಿಪ್ರಲಂಭಕತ್ವನಿಯತಶ್ಚ ನ ಭವತಿ ಪುರುಷತ್ವಾತ್ ಚೈತ್ರವತ್' ಚೈತ್ರನು ಪುರುಷನಾಗಿದ್ದಾನೆ. ಮತ್ತು ಧರ್ಮಜ್ಞಾನವುಳ್ಳವನಲ್ಲ. ಮತ್ತು ಚೈತ್ರನು ಪುರುಷನಾಗಿದ್ದಾನೆ. ನಿಯಮೇನ ಅವಿಪ್ರಲಂಭಕನಾಗಿದ್ದಾನೆಂಬ ನಿಯಮವಿಲ್ಲ. ಅದರಂತೆ ವಿವಾದಕ್ಕೆ ವಿಷಯನಾದ ವ್ಯಕ್ತಿಯು ಪುರುಷನಾಗಿರುವುದರಿಂದ ಧರ್ಮಜ್ಞಾನವುಳ್ಳವನಲ್ಲ. ಮತ್ತು ಪುರುಷನಾಗಿರುವುದರಿಂದಲೇ ನಿಯಮೇನ ಅವಿಪ್ರಲಂಭಕನಾಗಿದ್ದಾನೆಂದೂ ಕೂಡ ಹೇಳಲೂ ಸಾಧ್ಯವಿಲ್ಲ.

ಆಭಾಸಸಮಾನಯೋಗಕ್ಷೇಮದ ಬಗ್ಗೆ

**तत्वप्रदीपः – न चापसिद्धान्तोक्तिरियम् । केवलानुमानगम्यसर्वज्ञ-निरासपरत्वादस्याः ।**

ಆಕ್ಷೇಪ - ಈಶ್ವರನಿಗೆ ಧರ್ಮಜ್ಞಾನವಿಲ್ಲ ಮತ್ತು ವಿಪ್ರಲಂಭಕನೇ ಆಗಿದ್ದಾನೆ ಎಂದು ನೀವು ಸಾಧಿಸಿದರೆ ಅಪಸಿದ್ಧಾಂತ ಬರುತ್ತದಲ್ಲವೇ?

ಪರಿಹಾರ - ಅನುಮಾನದಿಂದಲೇ ಸರ್ವಜ್ಞನಾದ ಈಶ್ವರನನ್ನು ಸಾಧಿಸುವ ನಿಮಗೆ ನಾವು ಕೇವಲ ಆಭಾಸಮಾನಯೋಗಕ್ಷೇಮವನ್ನಷ್ಟೇ ಹೇಳುತ್ತಿದ್ದೇವೆ. ಇದು ನಮ್ಮ ಸಿದ್ಧಾಂತವಲ್ಲ.

ಅನುಮಾನದಿಂದಲೇ ಅಪೌರುಷೇಯತ್ವವನ್ನು ಸಾಧಿಸಬಹುದು

**तत्वप्रदीपः – अथ वाक्यत्वाल्लौकिकवाक्यवत् पौरुषेयत्वं मन्येथाः, सशरीरकर्तृरहितत्वादपौरुषेयत्वं किं न स्यादात्मवत् ।**

ಆಕ್ಷೇಪ - ವೇದವು ಲೌಕಿಕವಾಕ್ಯಗಳಂತೆ ವಾಕ್ಯವುಳ್ಳದ್ದಾಗಿದೆ. ಆದ್ದರಿಂದ ಲೌಕಿಕವಾಕ್ಯಗಳನ್ನು ಹೇಗೆ ಪುರುಷರೇ ರಚನೆ ಮಾಡಿರುತ್ತಾರೋ, ಅದರಂತೆ ವೇದವನ್ನೂ ಕೂಡ ಯಾರೋ ಒಬ್ಬ ಪುರುಷನೇ ರಚನೆ ಮಾಡಿರಬೇಕು. ಆ ಪುರುಷನು ಪರಮೇಶ್ವರನನ್ನು ಬಿಟ್ಟು ಬೇರೆ ಯಾರೂ ಅಲ್ಲ. ಅಲೌಕಿಕನಾದ ಪುರುಷನಿಂದ ರಚನೆ ಮಾಡಿರುವ ಕಾರಣ ವೇದವು ಅಪೌರುಷೇಯವೆಂಬ ಪ್ರಸಿದ್ಧಿ ಬಂದಿದೆ ?

ಪರಿಹಾರ - ಹೀಗೆ ತಿಳಿಯಬೇಡ. ಏಕೆಂದರೆ ಪಾಂಚಭೌತಿಕವಾದ ಶರೀರವುಳ್ಳವರಿಂದ ವೇದವು ರಚಿತವಲ್ಲವೆಂದು ನೀನು ಹೇಳುತ್ತಿರುವಿ. ಈ ಕಾರಣದಿಂದಲೇ ಅಪೌರುಷೇಯವೆಂದು ನಾನು ಹೇಳಿದರೆ ನಿನ್ನಿಂದ ಉತ್ತರಿಸಲಾಗದು. ಆತ್ಮನು ಯಾವರೀತಿಯಾಗಿ ಪಾಂಚಭೌತಿಕವಾದ ಶರೀರವುಳ್ಳವನಿಂದ ಜನಿಸಿಲ್ಲ, ಆದ್ದರಿಂದಲೇ ಅಪೌರುಷೇಯನಾಗಿರುತ್ತಾನೆ. ಅದರಂತೆ ವೇದವೂ ಕೂಡ ಪಾಂಚಭೌತಿಕವಾದ ಶರೀರವುಳ್ಳವನಿಂದ ರಚಿತವಲ್ಲದ ಕಾರಣದಿಂದಲೇ ಅಪೌರುಷೇಯವೆಂದು ಸಾಧಿಸಿದ್ದೇವೆ. ಮತ್ತು ಶರೀರವಿಲ್ಲದ ಒಬ್ಬ ಪುರುಷನಿದ್ದಾನೆಂಬುದು ನಾವು ಅಂಗೀಕಾರ ಮಾಡಿಲ್ಲ.

### ಪೌರುಷೇಯತ್ವವಾದಿಗಳಿಗೆ ಅನ್ಯೋನ್ಯಾಶ್ರಯ ದೋಷ

**तत्वप्रदीपः – ''न तस्य कार्यं करणं च विद्यते'' इत्यादिवाक्य-सिद्धत्वान्नेश्वरस्यात्यन्तासिद्धिरिति चेन्न । सर्वज्ञेश्वरसिद्धौ तत्कृतत्वेन वेदप्रामाण्यसिद्धिः, प्रामाण्यसिद्धौ ततः सर्वज्ञसिद्धिरित्यन्योन्याश्रयत्वात् ।**

ಆಕ್ಷೇಪ - ಶರೀರವಿಲ್ಲದ ಒಬ್ಬ ಪುರುಷನಿದ್ದಾನೆಂಬುದನ್ನು ಸಾಧಿಸುತ್ತೇವೆ. 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' ಎಂಬ ಶ್ವೇತಾಶ್ವತರಶ್ರುತಿಯು ಪರಮೇಶ್ವರನಿಗೆ ಪಾಂಚಭೌತಿಕವಾದ ಶರೀರವಿಲ್ಲ. ಮತ್ತು ಅವನ ಶರೀರಕ್ಕೆ ಯಾವುದೇ ಕಾರಣಗಳು ಇರುವುದಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತಿದೆ. ಇದರಿಂದ ಪರಮಾತ್ಮನಿಗೆ ಶರೀರವಿಲ್ಲವೆಂದು ಸಿದ್ಧವಾಗುತ್ತದೆ. ಮತ್ತು ಈಶ್ವರನಿದ್ದಾನೆಂದೂ ಕೂಡ ಸಿದ್ಧವಾಗುತ್ತದೆ. ಹೀಗಿರುವಾಗ ಶರೀರವಿಲ್ಲದ ಒಬ್ಬ ಈಶ್ವರನೇ ಇಲ್ಲ. ಅವನು ಅಸಿದ್ಧನಾಗಿದ್ದಾನೆಂದು ಹೇಗೆ ಹೇಳುವಿರಿ ?

ಪರಿಹಾರ - ಇದು ತಪ್ಪು. ಏಕೆಂದರೆ ಸರ್ವಜ್ಞನಾದ ಈಶ್ವರನು ಸಿದ್ಧವಾದ ಮೇಲೆ ಅವನಿಂದ ರಚಿತವಾದ ವೇದಕ್ಕೆ ಪ್ರಾಮಾಣ್ಯ ಸಿದ್ಧವಾಗುತ್ತದೆ. ವೇದಕ್ಕೆ ಪ್ರಾಮಾಣ್ಯಸಿದ್ಧವಾದ ಮೇಲೆ 'ನ ತಸ್ಯ ಕಾರ್ಯಂ' ಇತ್ಯಾದಿ ವಾಕ್ಯಗಳಿಂದ ಸರ್ವಜ್ಞನಾದ ಈಶ್ವರನು ಸಿದ್ಧನಾಗುತ್ತಾನೆ. ಸರ್ವಜ್ಞನಾದ ಈಶ್ವರನು ಸಿದ್ಧವಾಗದೇ ವೇದಪ್ರಾಮಾಣ್ಯವು ಸಿದ್ಧಿಸುವುದಿಲ್ಲ. ವೇದ ಪ್ರಾಮಾಣ್ಯಸಿದ್ಧವಾಗದೇ ಸರ್ವಜ್ಞನಾದ ಈಶ್ವರನು ಸಿದ್ಧನಾಗಲಾರ. ಹೀಗೆ ಅನ್ಯೋನ್ಯಾಶ್ರಯದೋಷವು ನಿಮಗೆ ಬರುತ್ತದೆ.

### 'ಉತ್ಸನ್ನಂ ವ್ಯಂಜಯನ್' ಎಂಬುದರ ವ್ಯಾಖ್ಯಾನ

**तत्वप्रदीपः – तस्मादपौरुषेयो वेदः स्वत एव प्रमाणं चेति सिद्धम् ।। तच्चोक्तमाचार्यवर्येणैव वेदमुत्सन्नं व्यञ्जयन्निति ।। स्वत एव वेदयतीति वेदः ।**

ಅಪೌರುಷೇಯವಾದ ವೇದವು ಸ್ವತಃ ಪ್ರಮಾಣವಾಗಿದೆ ಎಂದು ಸಿದ್ಧವಾಯಿತು. ಇದನ್ನೇ ಶ್ರೀಮದಾಚಾರ್ಯರು ''ವೇದಮುತ್ಸನ್ನಂ ವ್ಯಂಜಯನ್'' ಎಂಬುದರಿಂದ ಹೇಳಿದ್ದಾರೆ. ವೇದಶಬ್ದಕ್ಕೆ 'ಸ್ವತಃ ವೇದಯತಿ' ಎಂದು ನಿಷ್ಪತ್ತಿ ಮಾಡಬೇಕು. ಆವಾಗ ಸ್ವತಂತ್ರವಾಗಿ ವಿಷಯವನ್ನು ತಿಳಿಸುವುದರಿಂದ ಸ್ವತಃಪ್ರಮಾಣವಾಗಿದೆ ಎಂದು ವೇದ ಪದದಿಂದ ಹೇಳಿದಂತಾಗುತ್ತದೆ. 'ಉತ್ಸನ್ನಂ

ವ್ಯಂಜಯನ್' ಎಂಬುದರಿಂದ ವೇದಗಳು ಮೊದಲೇ ಇದ್ದವೆಂದು ಒಪ್ಪಿದ್ದಾರೆ. ಆದ್ದರಿಂದ ಅಪೌರುಷೇಯವಾಗಿದೆ ಎಂದು ತಿಳಿಸಿದ್ದಾರೆ.

### ಅಪೌರುಷೇಯತ್ವ ವಿಷಯದಲ್ಲಿ ಶ್ರುತಿಗಳು

**तत्वप्रदीपः – तथाच पिप्पलादश्रुतिः - ''नेन्द्रियाणि नानुमानं वेदा ह्येवेनं वेदयन्ति तस्माद्दाहुर्वेदा इति'' । ''न चक्षुर्न श्रोत्रं न तर्को न स्मृतिर्वेदा ह्येवैनं वेदयन्ति'' इति च भाल्लवेयश्रुतिः ।**

ವೇದಗಳು ಸ್ವತಃ ಪ್ರಮಾಣವಾಗಿವೆ ಎಂಬ ವಿಷಯದಲ್ಲಿ ಪಿಪ್ಪಲಾದಶ್ರುತಿ ಹೀಗೆ ಹೇಳುತ್ತದೆ- ''ನೇಂದ್ರಿಯಾಣಿ ನಾನುಮಾನಂ ವೇದಾ ಹ್ಯೇವೇನಂ ವೇದಯಂತಿ ತಸ್ಮಾದಾಹುರ್ವೇದಾಃ'' 'ಇಂದ್ರಿಯಗಳು ಹಾಗೂ ಅನುಮಾನವು ಪರಮಾತ್ಮನನ್ನು ತಿಳಿಸಲು ಅಸಮರ್ಥವಾಗಿವೆ. ವೇದಗಳು ಮಾತ್ರ ತಿಳಿಸುವುದರಿಂದ 'ವೇದ' ಎಂದು ಹೆಸರು ಪಡೆದಿವೆ'. ''ನ ಚಕ್ಷುರ್ನ ಶ್ರೋತ್ರಂ ನ ತರ್ಕೋ ನ ಸ್ಮೃತಿರ್ವೇದಾ ಹ್ಯೇವೈನಂ ವೇದಯಂತಿ'' 'ಚಕ್ಷುರಿಂದ್ರಿಯ ಶ್ರೋತ್ರೇಂದ್ರಿಯ ಹಾಗೂ ಉಳಿದ ಯಾವುದೇ ಇಂದ್ರಿಯಗಳು ತರ್ಕ, ಸ್ಮೃತಿ ಇವುಗಳು ಪರಮಾತ್ಮನನ್ನು ತಿಳಿಸಲಾರವು. ವೇದವಷ್ಟೇ ತಿಳಿಸುತ್ತದೆ. ಆದ್ದರಿಂದಲೇ ವೇದವೆಂದು ಹೆಸರು ಪಡೆದಿವೆ'. ಹೀಗೆ ಭಾಲ್ಲವೇಯ ಶ್ರುತಿಯು ಕೂಡ ಹೇಳುತ್ತಿದೆ.

### ಐತರೇಯ ಹಾಗೂ ಪೈಂಗಿಶ್ರುತಿಗಳು

**तत्वप्रदीपः – नित्यत्वे च श्रुतिः - ''वाचा विरूप नित्यया'' इति । ''नित्ययाऽनित्यया स्तौमि ब्रह्म तत्परमं पदम्'' इति । ''श्रुतिर्वाव नित्या अनित्या वाव स्मृतयो याश्चान्या वाचः'' इति पैङ्गिश्रुतिः ।**

ವೇದವು ನಿತ್ಯವಾಗಿದೆ ಎಂಬ ವಿಷಯದಲ್ಲಿ ''ವಾಚಾ ವಿರೂಪ ನಿತ್ಯಯಾ'' 'ಎಲೈ ವಿರೂಪ ಋಷಿಯೇ ! ನಿತ್ಯವಾದ ಮಾತುಗಳಿಂದ' ಎಂಬುದಾಗಿ ಐತರೇಯ ಶ್ರುತಿಯು ಹೇಳುತ್ತಿದೆ. ಮತ್ತು 'ನಿತ್ಯಯಾಽನಿತ್ಯಯಾ ಸ್ತೌಮಿ ಬ್ರಹ್ಮ ತತ್ ಪರಮಂ ಪದಮ್' 'ನಿತ್ಯವಾದ ಮತ್ತು ಅನಿತ್ಯವಾದ ಮಾತುಗಳಿಂದ ಶ್ರೇಷ್ಠನಾದ ಬ್ರಹ್ಮನನ್ನು ಸ್ತುತಿಸುತ್ತೇನೆ' ಎಂಬುದಾಗಿ ಮತ್ತು 'ಶ್ರುತಿರ್ವಾವ ನಿತ್ಯಾ

ಅನಿತ್ಯಾ ವಾವ ಸ್ಮೃತಿಯೋ ಯಶ್ಚಾನ್ಯಾ ವಾಚಃ' 'ನಿತ್ಯವಾದ ಶ್ರುತಿ ಹಾಗೂ ಅನಿತ್ಯವಾದ ಸ್ಮೃತಿಗಳು ಉಳಿದ ಮಾತುಗಳು' ಎಂದು ಪೈಂಗಿಶ್ರುತಿಯು ವೇದನಿತ್ಯತ್ವವನ್ನು ಹೇಳುತ್ತದೆ.

ಕಾತ್ಯಾಯನೀಶ್ರುತಿ ಹಾಗೂ ಮಹಾವಾರಾಹವಚನ

**तत्वप्रदीपः –**

**''विज्ञेयं परमं ब्रह्म ज्ञापिका परमा श्रुतिः ।**
**अनादिनित्या सा तच्च विना तां न स गम्यते '' ॥**
**इति कात्यायनश्रुतिः ।**

**''वेदास्ते नित्यविन्नत्वात् श्रुतयश्चाखिलैः श्रुतेः ।**
**आम्नायोऽनन्यथापाठादीशबुद्धिस्थिताः सदा'' इति महावाराहे ॥**

'ವಿಜ್ಞೇಯಂ ಪರಮಂ ಬ್ರಹ್ಮ ಜ್ಞಾಪಿಕಾ ಪರಮಾ ಶ್ರುತಿಃ।
ಅನಾದಿನಿತ್ಯಾ ಸಾ ತಚ್ಚ ವಿನಾ ತಾಂ ನ ಸ ಗಮ್ಯತೇ' ॥

ಪರಬ್ರಹ್ಮನನ್ನು ಅನಾದಿನಿತ್ಯನಾದ ಶ್ರುತಿಯು ಪ್ರತಿಪಾದನೆ ಮಾಡುವುದರಿಂದಲೇ ಶ್ರೇಷ್ಠಸ್ಥಾನವನ್ನು ಹೊಂದಿದೆ. ಆ ಪರಬ್ರಹ್ಮನಾದರೋ ಅನಾದಿನಿತ್ಯನಾಗಿದ್ದಾನೆ. ಶ್ರುತಿಯಿಲ್ಲದೆ ಬೇರೆ ಯಾವುದೇ ಪ್ರಮಾಣಗಳಿಂದ ಅವನು ಗಮ್ಯನಾಗುವುದಿಲ್ಲ. ಹೀಗೆ ಕಾತ್ಯಾಯಿನಿಶ್ರುತಿಯು ಹೇಳುತ್ತಿದೆ -

'ವೇದಾಸ್ತೇ ನಿತ್ಯವಿನ್ನತ್ವಾತ್ ಶ್ರುತಯಶ್ಚಾಖಿಲೈಃ ಶ್ರುತೇಃ।
ಆಮ್ನಾಯೋಽನನ್ಯಥಾಪಾಠಾದೀಶಬುದ್ಧಿಸ್ಥಿತಾಃ ಸದಾ ॥

ನಿತ್ಯಸಿದ್ಧವಾದ್ದರಿಂದಲೇ 'ವೇದ' ಎಂದು ಹೆಸರು ಪಡೆದಿದೆ. ನಿತ್ಯವಾಗಿ ಶ್ರುತವಾಗಿರುವುದರಿಂದಲೇ 'ಶ್ರುತಿ' ಎಂಬ ಹೆಸರನ್ನು ಪಡೆದಿದೆ. ಯಾರೇ ಒಬ್ಬ ಜ್ಞಾನಿಯೂ ಕೂಡ 'ನನ್ನ ಉಚ್ಚಾರವೇ ಮೊದಲ ಉಚ್ಚಾರ' ಎಂಬುದಾಗಿ ವೇದವನ್ನು ಅಧ್ಯಯನ ಮಾಡಿರುವುದಿಲ್ಲ. 'ಸಂಪ್ರದಾಯದಿಂದ ಬಂದಿರುವ ವೇದವನ್ನು ಅಧ್ಯಯನ ಮಾಡುತ್ತಿದ್ದೇನೆ. ಮತ್ತು ಪಾಠ

ಹೇಳುತ್ತಿದ್ದೇನೆ' ಎಂಬ ಅನುಸಂಧಾನದಿಂದಲೇ ವೇದವನ್ನು ಓದುತ್ತಾನೆ. ಸಂಪ್ರದಾಯಾಗತವಾದ್ದರಿಂದಲೇ 'ಆಮ್ನಾಯ' ಎಂದು ಕರೆಸಿಕೊಳ್ಳುತ್ತದೆ. ನಿರಂತರವಾಗಿ ಈಶ್ವರನ ಬುದ್ಧಿಯಲ್ಲಿ ಈ ವೇದವು ಒಂದೇ ಆನುಪೂರ್ವಿಯಲ್ಲಿ ಸ್ಥಿತವಾಗಿದೆ. ಹೀಗೆ ಮಹಾವರಾಹಪುರಾಣವು ಪ್ರತಿಪಾದನೆ ಮಾಡುತ್ತಿದೆ.

### ಅನ್ವಿತಾಭಿಧಾನವಾದ

**तत्वप्रदीपः – नचानन्विते शब्दशक्तिरिति युक्तम् । अनन्वितार्थस्यैवाभावात्। अन्वितमेव हि सर्वं दृश्यते । एकपदश्रवणेन हि सामान्यान्वयप्रतीतौ विशेषान्वयाकाङ्क्षा पदान्तरश्रवणात् पूर्यते ।**

ಅನ್ವಯವನ್ನು ಹೊಂದದ ಅರ್ಥದಲ್ಲಿ ಶಬ್ದಕ್ಕೆ ಶಕ್ತಿಯು ಸರ್ವಥಾ ಇರುವುದಿಲ್ಲ. ಅನ್ವಯವನ್ನು ಹೊಂದದ ಒಂದು ಅರ್ಥವೇ ಲೋಕದಲ್ಲಿ ಇಲ್ಲ. ಪ್ರತಿಯೊಂದು ಸಹ ಮತ್ತೊಂದು ಪದಾರ್ಥದಿಂದ ಅನ್ವಯವನ್ನು ಹೊಂದಿರುವುದೇ ಕಾಣಸುತ್ತಿದೆ. ಒಂದು ಪದವನ್ನು ಕೇಳಿದಾಗ ಸಾಮಾನ್ಯವಾದ ಅರ್ಥವು ಮೊದಲು ಪ್ರತೀತವಾಗುತ್ತದೆ. ವಿಶೇಷಾನ್ವಯದ ಆಕಾಂಕ್ಷೆಯು ಪ್ರಾಪ್ತವಾದಾಗ ಬೇರೊಂದು ಪದವನ್ನು ಕೇಳಿದಾಗ ಆಕಾಂಕ್ಷೆಯು ಶಾಂತವಾಗುತ್ತದೆ.

### ಲಕ್ಷಣಾವೃತ್ತಿ ವ್ಯರ್ಥ

**तत्वप्रदीपः – स्वत एवान्वितानामर्थानामनन्वितत्वेन पदवाच्यत्वं कल्पयित्वा तेषामेवान्योन्यान्वितानां वाक्यार्थलक्षकत्वकल्पनात् वरमन्वितानामेव पदार्थानां वाक्यार्थत्वाश्रयणम् ।**

ಹೀಗೆ ಸ್ವಾಭಾವಿಕವಾಗಿಯೇ ಅನ್ವಿತವಾದ ಅರ್ಥಕ್ಕೆ ಅನನ್ವಿತವಾದ ಅರ್ಥದಲ್ಲಿ ಪದವಾಚಿತ್ವವನ್ನು ಕಲ್ಪನೆ ಮಾಡಿ ವಾಕ್ಯಕ್ಕೆ ವಾಚ್ಯಾರ್ಥದಲ್ಲಿ ಲಕ್ಷಣಾವನ್ನು ಒಪ್ಪಿದರೆ ಎಲ್ಲಾ ವಾಕ್ಯಗಳಿಗೂ ಕೂಡ ಲಕ್ಷಣಾವೃತ್ತಿಯನ್ನೇ ಒಪ್ಪಿದಂತಾಗುತ್ತದೆ. ಇದಕ್ಕಿಂತಲೂ ಅನ್ವಿತವಾದ ಪದಾರ್ಥದಲ್ಲಿಯೇ ವಾಕ್ಯಾರ್ಥತ್ವವನ್ನು ಆಶ್ರಯಿಸುವುದು ಯುಕ್ತವಾಗಿದೆ.

ಲಕ್ಷಣಾವೃತ್ತಿ ಒಪ್ಪಿದರೆ ಹಾನಿ

**तत्वप्रदीपः – अनुभवानुकूल्यात् । अन्यथा वाक्यार्थो नाम न स्यात् ।**

ಅನುಭವವೇ ಈ ವಿಷಯದಲ್ಲಿ ಆಧಾರವಾಗಿದೆ. ಇಲ್ಲದಿದ್ದರೆ ಲಕ್ಷಣಾವೃತ್ತಿಯಿಂದ ಅನ್ವಿತವಾದ ಅರ್ಥದ ಬೋಧವು ಬರುತ್ತದೆಂದು ಒಪ್ಪಿದರೆ ವಾಕ್ಯದಿಂದ ವಾಚ್ಯಾರ್ಥವೇ ಬರುವುದಿಲ್ಲವೆಂದು ಹೇಳಿದಂತಾಗುತ್ತದೆ.

ಅನನ್ವಿತಾರ್ಥಪ್ರತೀತಿ ಪ್ರಾಮಾಣಿಕವೇ ?

**तत्वप्रदीपः – ननु श्वेतरूपं पश्यतो हेषाशब्दं खुरनिष्पेषशब्दं च शृण्वतः 'श्वेतोऽश्वो धावति' इति धीर्भवति, तस्मात् प्रथममनन्विताः प्रतीता अर्थाः परस्परान्वयं बोधयन्तीति दृष्टमेवाश्रीयते, न कल्प्यत इति ।**

ಪ್ರಶ್ನೆ - ಮೊದಲು ಅನನ್ವಿತವಾದ ಅರ್ಥದ ಪ್ರತೀತಿ ಬಂದು ಅನಂತರ ಅನ್ವಿತವಾದ ಅರ್ಥದ ಪ್ರತೀತಿ ಬರುವುದು ನಮ್ಮ ಅನುಭವದಿಂದ ಸಿದ್ಧವಾಗಿದೆ. ದೂರದಿಂದ ಬಿಳಿಬಣ್ಣವನ್ನು ನೋಡುತ್ತಾನೆ. ಕಿವಿಯಿಂದ ಕೂಗಿನ ಶಬ್ದವನ್ನು ಹಾಗೂ ಗೊರಸಿನ ಶಬ್ದವನ್ನು ಕೇಳುತ್ತಾನೆ. ಅನಂತರ 'ಶ್ವೇತೋಽಶ್ವೋ ಧಾವತಿ' 'ಬಿಳಿಕುದುರೆ ಓಡುತ್ತಿದೆ' ಎಂಬ ಜ್ಞಾನವು ಬರುತ್ತದೆ. ಆದ್ದರಿಂದ ಮೊದಲು ಅನನ್ವಿತವಾಗಿ ಪ್ರತೀತವಾದ ಅರ್ಥಗಳಿಗೆ ಅನಂತರ ಪರಸ್ಪರವಾಗಿ ಅನ್ವಯಜ್ಞಾನ ಬರುವುದು ಸಿದ್ಧವಾಗಿದೆಯಲ್ಲವೆ?

'ಶ್ವೇತೋಽಶ್ವೋ ಧಾವತಿ' ಎಂಬಲ್ಲಿಯೂ ಅನ್ವಿತಾಭಿಧಾನ

**तत्वप्रदीपः – तदेतदयुक्तम् । यतस्तत्राप्यन्वितानामेव प्रथमतः प्रतीतिः। न हि श्वेतिमा द्रव्यानन्वितः प्रतीयते, हेषादेश्च सामान्यान्वयो ज्ञात एव, वस्तूनामन्वयनियमात् । अन्यथा तैरन्वितत्वेन कथमश्वो विशिष्टार्थः पश्चात् बोध्येत ।**

ಉತ್ತರ - ಈ ಪ್ರಶ್ನೆ ತಪ್ಪು. ಏಕೆಂದರೆ 'ಶ್ವೇತೋಽಶ್ವೋ ಧಾವತಿ' ಎಂಬಲ್ಲಿಯೂ ಕೂಡ ಅನ್ವಿತವಾಗಿಯೇ ಮೊದಲು ಪ್ರತೀತಿ ಬಂದಿದೆ. ಶ್ವೇತವೆಂಬ ದ್ರವ್ಯವು ಮತ್ತೊಂದರಿಂದ

ಅನ್ವಯವಾಗಿಲ್ಲವೆಂಬ ಪ್ರತೀತಿಯೂ ಬರುತ್ತಿಲ್ಲ. ಆದ್ದರಿಂದ ಕೂಗಿನ ಶಬ್ದಕ್ಕೆ ಮೊದಲು ಸಾಮಾನ್ಯವಾಗಿ ಅನ್ವಯ ಜ್ಞಾನವು ಬಂದಿದೆ. ಅನಂತರ ವಿಶೇಷವಾಗಿ ಅನ್ವಯಜ್ಞಾನವು ಬಂದು 'ಶ್ವೇತೋಽಶ್ವೋ ಧಾವತಿ' ಎಂಬ ಪ್ರತೀತಿಯು ಬರುವುದೇ ಅನುಭವಸಿದ್ಧವಾಗಿದೆ. ಹೀಗೊಪ್ಪದಿದ್ದರೆ 'ಅಶ್ವ' 'ಕೂಗಿನ ಶಬ್ದ', 'ಗೊರಸಿನ ಶಬ್ದ' ಈ ಅರ್ಥಗಳಿಂದ ವಿಶಿಷ್ಟವಾಗಿದೆ ಎಂಬ ಪ್ರತೀತಿಯು ಅನಂತರ ಹೇಗೆ ತಾನೇ ಬರಲು ಸಾಧ್ಯ?

### ಅನುಮಾನದಿಂದ ವಿಶಿಷ್ಟಾರ್ಥಜ್ಞಾನ

**तत्वप्रदीपः – न चात्रार्थानमन्वयबोधकत्वम् । नह्यर्थो नाम प्रमाणमस्ति । अनुमा ह्येषा, अयं श्वेतपदार्थोऽश्वो भवितुमर्हति खुरनिष्पेषहेषाशब्दवत्त्वात् सम्प्रतिपन्नवदिति ।**

'ಶ್ವೇತೋಽಶ್ವೋ ಧಾವತಿ' ಎಂಬಲ್ಲಿ ಅರ್ಥಕ್ಕೆ ಅನ್ವಯಬೋಧಕತ್ವವು ಇರುವುದಿಲ್ಲ. ಏಕೆಂದರೆ ಅರ್ಥ ಎಂಬುದು ಎಂದೂ ಸಹ ಪ್ರಮಾಣವಲ್ಲ. ಆದ್ದರಿಂದ ಅನುಮಾನವೆಂದೇ ಹೇಳಬೇಕು. 'ಅಯಂ ಶ್ವೇತಪದಾರ್ಥೋಽಶ್ವೋ ಭವಿತುಮರ್ಹತಿ ಖುರನಿಷ್ಪೇಷಹೇಷಾಶಬ್ದವತ್ತ್ವಾತ್ ಸಂಪ್ರತಿಪನ್ನವತ್' ಖುರನಿಷ್ಪೇಷಶಬ್ದ, ಹೇಷಾಶಬ್ದದಿಂದ ವಿಶಿಷ್ಟವಾಗಿರುವ ಕಾರಣ ಈ ಶ್ವೇತಪದಾರ್ಥವು ಕುದುರೆಯೇ ಆಗಿರುತ್ತವೆಂದು.

### 'ತದ್ಯೋಗಮವಿಜಾನತಾಂ' ಎಂಬುದರ ವ್ಯಾಖ್ಯಾನವಿದು

**तत्वप्रदीपः – तस्मादन्विताभिधायिनः शब्दाः । एतदपि सूचितं गुरुभिरेव 'तद्योगमविजानतां तज्ज्ञापनार्थं वेदम्' इति ॥**

ಆದ್ದರಿಂದ ಸಕಲಶಬ್ದಗಳು ಅನ್ವಿತವಾದ ಅರ್ಥಗಳನ್ನೇ ಪ್ರತಿಪಾದನೆ ಮಾಡುತ್ತವೆ ಎಂಬುದನ್ನು ಒಪ್ಪಬೇಕು. ಇದನ್ನು ಗುರುಗಳಾದ ಆಚಾರ್ಯರು 'ತದ್ಯೋಗಮ್ ಅವಿಜಾನತಾಂ ತಜ್-ಜ್ಞಾಪನಾರ್ಥಂ ವೇದಮ್'ಎಂಬುದರಿಂದ ಸೂಚನೆ ಮಾಡಿದ್ದಾರೆ.

ವಿಶೇಷ ವಿಚಾರ - 'ತದ್ಯೋಗಮ್' ಇತ್ಯಾದಿ ವಾಕ್ಯದಿಂದ ಶ್ರೀಮದಾಚಾರ್ಯರು ಶಬ್ದಗಳಿಗೆ ಅನ್ವಿತಾಭಿಧಾಯಿತ್ವವನ್ನು ಹೀಗೆ ಸಮರ್ಥಿಸಿದ್ದಾರೆ - ವೇದಗಳು ಗುಣದಿಂದ

ಅನ್ವಿತವಾದ ಭಗವಂತನನ್ನು ಪ್ರತಿಪಾದನೆ ಮಾಡುತ್ತವೆ ಎಂಬುದನ್ನು ಸಜ್ಜನರು ತಿಳಿಯದೇ ಹೋದರು. ಹೀಗಿರುವಾಗ ತಜ್ಜ್ಞಾಪನಾರ್ಥಂ = ಗುಣಗಳಿಂದ ಪರಮಾತ್ಮನೇ ವೇದದಿಂದ ಪ್ರತಿಪಾದ್ಯನಾಗುತ್ತಾನೆ ಎಂಬುದನ್ನು ತಿಳಿಸಲು, ವೇದವ್ಯಾಸದೇವರು ಅವತರಿಸಿದರು ಎಂದಭಿಪ್ರಾಯ. ಗುಣದಿಂದ ಅನ್ವಿತನಾದ ಭಗವಂತನನ್ನೇ ಮುಖ್ಯವೃತ್ತಿಯಿಂದ ತಿಳಿಸುವ ಕಾರಣ 'ವೇದ' ಎಂದು ಕರೆಸಿಕೊಳ್ಳುತ್ತದೆ ಎಂದರ್ಥ.

### ಕಾರ್ಯಾನ್ವಿತವಾದ

**तत्वप्रदीपः – अत्र च केचिदाचक्षते, सत्यमन्विताभिधायित्वं शब्दानामस्त्येव, तथाऽपि न सिद्धान्विते तेषां शक्तिः किन्तु कार्यान्वित एव, तत्रैव व्युत्पत्तिसम्भवादिति ।**

ಕೆಲವರ ಆಕ್ಷೇಪ - ಶಬ್ದಗಳು ಅನ್ವಿತವಾದ ಅರ್ಥವನ್ನೇ ಹೇಳುವುದು ಸತ್ಯ, ಆದರೆ ಸಿದ್ಧದಿಂದ ಅನ್ವಿತವಾದ ಅರ್ಥವನ್ನು ಹೇಳಲಾರವು. ಕಾರ್ಯದಿಂದ ಅನ್ವಿತವಾದ ಅರ್ಥವನ್ನೇ ಹೇಳುತ್ತವೆ. ಕಾರ್ಯಾನ್ವಿತದಲ್ಲಿಯೇ ಶಬ್ದಗಳ ವ್ಯುತ್ಪತ್ತಿ ಅನುಭವಸಿದ್ಧವಾಗಿದೆ.

### ನಿರಾಕರಣೆ

**तत्वप्रदीपः – तदप्यचारु, कार्यस्य कार्यान्वयाभावत् प्रयोजकभेद-कल्पनाप्रसङ्गात् ।**

ಇವರ ಆಕ್ಷೇಪ ಅಯುಕ್ತವಾಗಿದೆ. ಕಾರ್ಯಕ್ಕೆ ಕಾರ್ಯದಿಂದಲೇ ಅನ್ವಯ ಹೇಳಲು ಸಾಧ್ಯವಿಲ್ಲ. ಹಾಗಾದಲ್ಲಿ ಪ್ರಯೋಜಕಭೇದವನ್ನು ಕಲ್ಪನೆ ಮಾಡಬೇಕಾಗುತ್ತದೆ.

### ಕಾರ್ಯಾನ್ವಯಾನ್ವಿಯಲ್ಲಿ ಶಕ್ತಿಯನ್ನು ಒಪ್ಪಬಾರದು

**तत्वप्रदीपः – न च कार्यान्वयान्वयिनीति वाच्यम् । तथाविधवस्तु-व्यवहाराभावात् । न हि देवदत्तो देवदत्तपुत्रपुत्रीत्युच्यते ।**

**न च कार्यप्रतियोगिकेनान्वयेनान्वयित्वं कार्यस्य । अन्वयित्वं हि नामान्वयधर्मधर्मित्वम् । कार्यधर्मेणान्वयेनान्वयित्वं सिद्धस्य च नास्ति । अतो न कार्यान्वयान्वयिनि शक्तिः कल्प्या ।।**

ಆಕ್ಷೇಪ - 'ಗಾಮಾನಯ' ಎಂದು ಹೇಳಿದಾಗ ಗೋಪದಾರ್ಥವು ಕ್ರಿಯೆಯಿಂದ ಅನ್ವಯ ಪಡೆದಿದೆ. ಪುನಃ ಗೋವಿನಿಂದ ಆನಯನವು ಅನ್ವಿತವಾಗುತ್ತದೆ. ಹೀಗೆ ಕಾರ್ಯಾನ್ವಯಾನ್ವಯಿಯಲ್ಲಿ ಶಕ್ತಿ ಎಂದು ಹೇಳುತ್ತೇವೆ.

ಸಮಾಧಾನ - ಇಂಥ ಒಂದು ವಸ್ತುವಿನ ವ್ಯವಹಾರವೇ ಇರುವುದಿಲ್ಲ. 'ಯಾರು ದೇವದತ್ತ?' ಎಂದು ಕೇಳಿದಾಗ 'ದೇವದತ್ತಪುತ್ರಪುತ್ರೀ' 'ದೇವದತ್ತನ ಮಗ ಯಜ್ಞದತ್ತ. ಯಜ್ಞದತ್ತ ಎಂಬ ಮಗವುಳ್ಳವನು ದೇವದತ್ತ' ಎಂದು ಯಾರೂ ಉತ್ತರಿಸುವುದಿಲ್ಲ. ಇದರಂತೆ ಗೋವಿಗೆ ಆನಯನದಿಂದ ಅನ್ವಯ ಹೇಳಿ ಪುನಃ ಆನಯನದಿಂದ ಗೋವಿಗೆ ಅನ್ವಯ ಹೇಳುವುದು ಅತ್ಯಂತ ಅಸಂಗತ.

'ಆನಯನ' ಎಂಬ ಕಾರ್ಯದಿಂದ ಗೋವಿನಲ್ಲಿ ಅನ್ವಯ ಹೇಳಿದಾಗ 'ಗೋ' ಎಂಬುದು ಕಾರ್ಯಪ್ರತಿಯೋಗಿಕವಾಗುತ್ತದೆ. ಇದೇ ಕಾರ್ಯಪ್ರತಿಯೋಗಿಕವಾದ ಗೋವಿನಿಂದ ಪುನಃ ಆನಯನವೆಂಬ ಕಾರ್ಯದಲ್ಲಿ ಅನ್ವಯಿತ್ವ ಹೇಳಲು ಸಾಧ್ಯವಿಲ್ಲ.

ಆಕ್ಷೇಪ - ಕಾರ್ಯಾನ್ವಯ ಎಂದರೆ ಕಾರ್ಯಪ್ರತಿಯೋಗಿಕವಾದ ಅನ್ವಯ ಎಂದರ್ಥವಲ್ಲ. ಕಾರ್ಯಾನುಯೋಗಿಕವಾದ ಅನ್ವಯ ಎಂದರ್ಥ. ಇದು ಕಾರ್ಯದ ಧರ್ಮವೇ ಆಗಿರುವುದರಿಂದ ದೋಷವಿಲ್ಲ.

ಸಮಾಧಾನ - ಇದೂ ಸಹ ತಪ್ಪು. 'ಅನ್ವಯ' ಶಬ್ದಕ್ಕೆ ಅನ್ವಯವುಳ್ಳದ್ದು ಎಂದೇ ಎಲ್ಲರೂ ಒಪ್ಪಿರುವ ಅರ್ಥ. ಆದ್ದರಿಂದ ಕಾರ್ಯಾನ್ವಯಾನ್ವಯಿಯಲ್ಲಿ ಶಕ್ತಿ ಎಂದು ಒಪ್ಪಿದರೆ ಕಾರ್ಯಾನುಯೋಗಿಕವಾದದ್ದು ಅನ್ವಯ. ತದನುಯೋಗಿಕವಾದ ಅನ್ವಯವನ್ನು ಕಾರ್ಯದಲ್ಲಿ ಹೇಳಿದಂತಾಯಿತು. ಮತ್ತು ಕಾರ್ಯದ ಧರ್ಮವೆನಿಸಿದ ಅನ್ವಯದಿಂದ ಅನ್ವಯವುಳ್ಳದ್ದು ಸಿದ್ಧವೆಂದು ಹೇಳಲು ಆಗುವುದಿಲ್ಲ. ಆದ್ದರಿಂದ ಕಾರ್ಯಾನ್ವಯಾನ್ವಯದಲ್ಲಿ ಶಕ್ತಿಯನ್ನು ಕಲ್ಪನೆ ಮಾಡುವುದು ಅಯುಕ್ತವಾಗಿದೆ.

ಕಾರ್ಯತಾವಾದ

**तत्वप्रदीपः – ननु 'शुक्लां दण्डेन गामानय' इति वाक्यश्रवणसमनन्तरमेव श्रोतुर्गवानयनप्रवृत्तिदर्शनात् ततः प्रवर्तकज्ञानमनुमिमीते बालः, 'विगीता प्रवृत्तिः प्रवर्तकज्ञानपूर्विका प्रवृत्तित्वादस्मत्प्रवृत्तिवत्' इति; तच्च कार्यज्ञानं भवितुमर्हति प्रवर्तकज्ञानत्वादस्मत्प्रवर्तकज्ञानवत् इति चानुमाय पुनः ''शुक्लां गां बधान'' ''शुक्लमश्वं दण्डेनाऽनय'' इत्यादि बहुकृत्व एकैकपदान्तरावापोद्धारे दण्डाद्यर्थविशेषावापोद्धारदर्शनात् सर्वप्रयोगे च कार्यानुगमात् प्रवर्तकज्ञानपूर्वकत्वनियमात् प्रवृत्तौ प्रवर्तकद्वारमेव सकलशब्दशक्तिं जानाति, कार्यस्यैव प्रवर्तकत्वं कार्यान्वित एव सकलशक्तिं बालो निश्चिनोतीति ।**

ಆಕ್ಷೇಪ - ಕಾರ್ಯಾನ್ವಿತದಲ್ಲಿಯೇ ಶಕ್ತಿಯನ್ನು ಒಪ್ಪಬೇಕು. ಅದು ಹೀಗೆ - 'ಶುಕ್ಲಾಂ ದಂಡೇನ ಗಾಮಾನಯ' 'ಕೋಲಿನಿಂದ ಬಿಳಿಹಸುವನ್ನು ಕರೆದು ತಾ' ಎಂಬುದಾಗಿ ಒಬ್ಬ ವೃದ್ಧನು ತನ್ನ ಯುವಕನಾದ ಮಗನಿಗೆ ಹೇಳುತ್ತಾನೆ. ಅದನ್ನು ಕೇಳಿಸಿಕೊಂಡ ಕೂಡಲೇ ಆ ಯುವಕನು ಹಸುವನ್ನು ತರಲು ಹೊರಡುತ್ತಾನೆ. ಇದನ್ನು ನಿಂತು ನೋಡುತ್ತಿದ್ದ ಬಾಲಕನು (ಯುವಕನ ಮಗ) ಹೀಗೆ ಅನುಮಾನ ಮಾಡುತ್ತಾನೆ - 'ವಿಗೀತಾ ಪ್ರವೃತ್ತಿಃ ಪ್ರವರ್ತಕಜ್ಞಾನಪೂರ್ವಿಕಾ ಪ್ರವೃತ್ತಿತ್ವಾತ್ ಮತ್ ಪ್ರವೃತ್ತಿವತ್' ನನ್ನ ತಂದೆಯ ಪ್ರವೃತ್ತಿಯು ನಮ್ಮ ಪ್ರವೃತ್ತಿಯಂತೆ ಪ್ರವರ್ತಕಜ್ಞಾನಪೂರ್ವಕವಾಗಿದೆ. 'ಮಗುವೇ ಹಾಲು ಕುಡಿ' ಎಂದು ತಾಯಿ ಹೇಳಿದಾಗ ಪ್ರವರ್ತಕವಾದ ಜ್ಞಾನವನ್ನು ಹೊಂದಿ ನಾವು ಹಾಲು ಕುಡಿಯಲು ಮುನ್ನುಗ್ಗುತ್ತೇವೆ. ಅದರಂತೆ ನನ್ನ ತಂದೆಯೂ ಕೂಡ ಪ್ರವರ್ತಕ ಜ್ಞಾನವನ್ನು ಹೊಂದಿ ಹಸುವನ್ನು ತರಲು ಹೊರಟಿದ್ದಾನೆ. ಈ ಪ್ರವರ್ತಕಜ್ಞಾನವೆಂದರೆ ಕಾರ್ಯಜ್ಞಾನವೇ ಆಗಿರುತ್ತದೆಂಬುದನ್ನು ಕೂಡ ಬಾಲಕನು ಹೀಗೆ ಅನುಮಾನ ಮಾಡುತ್ತಾನೆ - 'ತಚ್ಚ ಕಾರ್ಯಜ್ಞಾನಂ ಭವಿತುಮರ್ಹತಿ ಪ್ರವರ್ತಕಜ್ಞಾನತ್ವಾತ್, ಅಸ್ಮತ್ಪ್ರವಕರ್ತಕಜ್ಞಾನವತ್' ಪ್ರವರ್ತಕಜ್ಞಾನವು ಕಾರ್ಯಜ್ಞಾನವಾಗಿರುವುದು ನಮ್ಮ ಅನುಭವವಿದೆ. ಏಕೆಂದರೆ 'ಹಾಲು ಕುಡಿ' ಎಂಬ ವಾಕ್ಯವನ್ನು ಕೇಳಿದಾಗ ಹಾಲು ಕುಡಿಯುವಿಕೆ ಎಂಬ ಕ್ರಿಯೆಯಲ್ಲಿ ನನ್ನ ತಾಯಿ ಪ್ರೇರಣೆ ಮಾಡುತ್ತಿದ್ದಾಳೆ ಎಂಬ ಜ್ಞಾನವು ನನಗೆ ಬರುತ್ತದೆ. ಇದು ಕಾರ್ಯಜ್ಞಾನವೇ ಆಗಿದೆ. ಇದೇ ರೀತಿಯಲ್ಲಿ 'ಗಾಮಾನಯ' ಎಂಬ ವಾಕ್ಯವು ಕೂಡ ಕಾರ್ಯಜ್ಞಾನವೇ ಆಗಿರುತ್ತದೆ.

ಪುನಃ ವೃದ್ಧನು ಯುವಕನಿಗೆ ಮತ್ತೊಂದು ಸಂದರ್ಭದಲ್ಲಿ 'ಶುಕ್ಲಾಂ ಗಾಂ ಬಧಾನ' 'ಬಿಳಿಯಾದ ಹಸುವನ್ನು ಕೊಟ್ಟಿಗೆಯಲ್ಲಿ ಕಟ್ಟು' ಎಂದು ಹೇಳುತ್ತಾನೆ. ಮತ್ತೊಂದು ಸಂದರ್ಭದಲ್ಲಿ 'ಶುಕ್ಲಮಶ್ವಂ ದಂಡೇನ ಆನಯ' 'ಕೋಲಿನಿಂದ ಬಿಳಿಯಾದ ಕುದುರೆಯನ್ನು ಕರೆದು ತಾ' ಎಂದು ಹೇಳುತ್ತಾನೆ. ಹೀಗೆ ಒಂದೊಂದು ಬಾರಿ ಒಂದೊಂದು ರೀತಿಯಲ್ಲಿ ವಾಕ್ಯವನ್ನು ಪ್ರಯೋಗಿಸುತ್ತಿದ್ದಾನೆ. ಈ ಎರಡೂ ವಾಕ್ಯಗಳಲ್ಲಿ ಶುಕ್ಲ ಎಂಬ ಪದವು ಸಮಾನವಾಗಿದೆ. ಆದರೆ ಎರಡನೆಯ ವಾಕ್ಯದಲ್ಲಿ 'ಹಸುವನ್ನು ಕರೆದು ತಾ' ಎಂದು ಹೇಳುವ ಬದಲು 'ಕುದುರೆಯನ್ನು ಕರೆದು ತಾ' ಎಂದು ಹೇಳುತ್ತಿದ್ದಾನೆ. 'ಗಾಂ' ಮತ್ತು 'ಬಧಾನ' ಎಂಬ ಎರಡು ಪದಗಳ ಬದಲು 'ಅಶ್ವಂ ದಂಡೇನ ಆನಯ' ಎಂಬ ಪದಗಳನ್ನು ಹಾಕಿದ್ದಾನೆ. ಆ ಸಂದರ್ಭದಲ್ಲಿ 'ಗಾಂ ಬಧಾನ' ಎಂಬ ವಾಕ್ಯವನ್ನು ಕೇಳುತ್ತಾನೆ. ಆ ಸಂದರ್ಭದಲ್ಲಿ ಬಾಲಕನು ಹೀಗೆ ಯೋಚನೆ ಮಾಡುತ್ತಾನೆ - ಒಂದೊಂದು ಪದಗಳನ್ನು ಹಾಕುವುದು ತೆಗೆಯುವುದು ಮಾಡಿದಾಗ ನನ್ನ ಅಪ್ಪನು ಬೇರೆಬೇರೆ ವ್ಯಾಪಾರಗಳನ್ನು ಮಾಡುತ್ತಾನೆ. ಆದರೆ ಪ್ರತಿಯೊಂದು ವಾಕ್ಯಗಳಲ್ಲಿಯೂ ಕಾರ್ಯವು ಅನುಗತವೇ ಆಗಿದೆ. ಆದ್ದರಿಂದ ಈ ಕಾರ್ಯವು ಪ್ರವರ್ತಕಜ್ಞಾನಪೂರ್ವಕವಾಗಿರುತ್ತದೆಂದು ನಿಯಮೇನ ಹೇಳಬಹುದು. ಹೀಗೆ ಎಲ್ಲೆಡೆಯೂ ಕಾರ್ಯವೇ ಪ್ರವರ್ತಕವಾಗುತ್ತದೆ. ಕಾರ್ಯಾನ್ವಿತದಲ್ಲಿಯೇ ಶಬ್ದಗಳಿಗೆ ಶಕ್ತಿಯು ಇರುತ್ತದೆಂದು ಬಾಲಕನು ನಿಶ್ಚಯ ಮಾಡುತ್ತಾನೆ.

### ಕಾರ್ಯತಾವಾದ ನಿರಾಕರಣೆ

**ತತ್ವಪ್ರದೀಪः – तदेतत् बालविभीषिकामात्रं भ्रान्तानाम् । नहि तस्य वृद्धस्यापीदृशी पटुतरा बुद्धिर्भवति, यया शुक्लादिपदसमुदायक्रमं सकृत् श्रुतमविस्मृत्य तदनन्तरमेवान्यसम्भाषणोत्थानादिकां श्रोतुरानुषङ्गिकप्रवृत्तिं च दृष्टामपहाय गवानयनप्रवृत्तावेव ततः प्रवर्तकज्ञानमनुमिमीते, पुनस्तदर्थसमुदायं च हृदि सन्निधाय, तदेकपदोद्धारे तदर्थोद्धारं, पदान्तरावापे तदर्थावापं, सर्वत्र कार्यानुगमात् कार्यान्विते शक्तिं जानीयात् । किं पुनर्द्वित्रवर्षस्य बालस्य तत् कक्षणदृष्टमपि विस्मरतः ।**

ಈ ಮಾತುಗಳು ಕೇವಲ, ಭ್ರಾಂತರು ಮಕ್ಕಳಿಗೆ ಹೆದರಿಸುವ ಮಾತುಗಳು. ಬಾಲಕನಿಗೆ ಈ ಕ್ರಮದಲ್ಲಿ ಶಾಬ್ದಬೋಧ ಬರಲು ಸಾಧ್ಯವೇ ಇಲ್ಲ. ಬಾಲಕನಿರಲಿ ವೃದ್ಧನಾದ ವ್ಯಕ್ತಿಗೂ ಕೂಡ ನೀವು ಹೇಳುವ ಕ್ರಮದಲ್ಲಿಯೇ ಅತ್ಯಂತ ಪಟುವಾದ ಬುದ್ಧಿ ಬರಲು ಸಾಧ್ಯವಿಲ್ಲ. 'ಶುಕ್ಲಾಂ ದಂಡೇನ' ಇವೇ ಮೊದಲಾದ ಪದಗಳ ಸಮುದಾಯ ಕ್ರಮವನ್ನು ಒಂದು ಬಾರಿ ಕೇಳಿದ ಮಾತ್ರಕ್ಕೆ ನೆನಪಿಟ್ಟುಕೊಳ್ಳುವುದೇ ಕಷ್ಟ. ಹೀಗಿರುವಾಗ ಆ ಎಲ್ಲಾ ಪದ ಸಮುದಾಯಗಳ ಕ್ರಮವನ್ನು ನೆನಪಿಟ್ಟುಕೊಂಡು ಇಬ್ಬರ ಸಂಭಾಷಣೆಯಿಂದ ಆ ಪದಗಳನ್ನು ಅನುಸಂಧಾನ ಮಾಡಿ ಶ್ರೋತೃವಿನ ಆನುಷಂಗಿಕವಾದ ಪ್ರವೃತ್ತಿಯನ್ನು ಕಂಡು, ಹಸುವನ್ನು ತರುವ ಪ್ರವೃತ್ತಿಯಲ್ಲೇ ಏಕೆ ತೊಡಗುತ್ತಾನೆಂದು ವಿಚಾರ ಮಾಡಿ, ಆದರಿಂದ ಪ್ರವರ್ತಕಜ್ಞಾನವನ್ನು ಅನುಮಾನ ಮಾಡಿ, ತದನಂತರ ಕೇಳಿಸಿಕೊಂಡವನಿಗೆ ಈ ಶಬ್ದಗಳಿಂದ ಅರ್ಥಜ್ಞಾನವು ಬಂದಿದೆ ಎಂದು ಮನಸ್ಸಿನಲ್ಲಿ ಭಾವನೆಯನ್ನು ತಾಳಿ, ವೃದ್ಧನು ಪ್ರಯೋಗಿಸಿದ ವಾಕ್ಯದಲ್ಲಿ ಒಂದೊಂದು ಪದಗಳನ್ನು ತೆಗೆದಾಗ ಯಾವ ಅರ್ಥ ಬರುತ್ತದೆ ಬೇರೆ ಪದಗಳನ್ನು ಹಾಕಿದಾಗ ಯಾವ ಅರ್ಥ ಬರುತ್ತದೆಂದು ವಿಚಾರಮಾಡಿ, ಕೊನೆಯಲ್ಲಿ ಎಲ್ಲೆಡೆಯೂ ಕಾರ್ಯವೇ ಅನುಗತವಾಗಿರುವುದರಿಂದ ಕಾರ್ಯಾನ್ವಿತದಲ್ಲೇ ಶಕ್ತಿಯನ್ನು ತಿಳಿಯಬೇಕೆಂದು ತೀರ್ಮಾನಿಸುವುದು ಹಿರಿಯವ್ಯಕ್ತಿಗೂ ಸಾಧ್ಯವಿಲ್ಲ. ಹೀಗಿರುವಾಗ ಒಂದೊಂದು ಶಬ್ದಗಳನ್ನು ಕೇಳಿದ ಕ್ಷಣದಲ್ಲಿಯೇ ಮರೆಯುವ ಸ್ವಾಭಾವವುಳ್ಳ ಎರಡು ಮೂರು ವರ್ಷದ ಮಗುವಿಗೆ ಈ ಕ್ರಮದಲ್ಲಿ ಶಾಬ್ದಬೋಧ ಬರಲು ಹೇಗೆ ತಾನೆ ಸಾಧ್ಯವಾಗುತ್ತದೆ ?

### ಮಕ್ಕಳಿಗೆ ಬರುವ ಶಾಬ್ದಬೋಧ ಕ್ರಮ

**तत्वप्रदीपः – स हि 'इयं माता', 'अयं तव भ्राताऽपूपमत्ति' इत्यादिवाक्यानां नित्यपरिचितेष्विष्टेषु वर्तमानेष्वर्थेष्वाकाङ्क्षासन्निधियोग्यताभावात् प्रथमं शक्तिं जानाति । पुनश्च 'भ्राता क्षीरं पिबति', 'अहमपूपमद्मि' इत्यावापोद्धाराभ्यामङ्गुलिप्रसारणादिपूर्वकमुक्ते विशेषव्युत्पन्नो भवति ।**

ಆದ್ದರಿಂದ ಬಾಲಕನಿಗೆ ಬರುವ ಶಾಬ್ದಬೋಧದ ಕ್ರಮವನ್ನು ಹೀಗೆ ತಿಳಿಯಬೇಕು - 'ಇವಳು ನಿನ್ನ ತಾಯಿ' 'ನಿನ್ನ ಅಣ್ಣನು ಅಪೂಪವನ್ನು ತಿನ್ನುತ್ತಿದ್ದಾನೆ' ಇವೇ ಮೊದಲಾದ ವಾಕ್ಯಗಳನ್ನು

ನಿತ್ಯವಾಗಿ ಪರಿಚಿತರಾದ ಇಷ್ಟನಾದ ವ್ಯಕ್ತಿಯಲ್ಲಿ ಪ್ರಯೋಗಿಸಿದಾಗ ಆಕಾಂಕ್ಷೆ, ಸನ್ನಿಧಿ, ಯೋಗ್ಯತೆಗಳ ಬಲದಿಂದ ಮಗುವಿಗೆ ಮೊದಲು ಶಬ್ದಗಳ ಶಕ್ತಿಜ್ಞಾನವು ಬರುತ್ತದೆ. ಪುನಃ 'ನಿನ್ನ ಅಣ್ಣ ಹಾಲು ಕುಡಿಯುತ್ತಿದ್ದಾನೆ' 'ನಾನು ಅಪೂಪ ತಿನ್ನುತ್ತಿರುವೆ' ಹೀಗೆ ಪದಗಳ ವ್ಯತ್ಯಾಸ ಮಾಡಿ ಬೆರಳನ್ನು ತೋರಿಸುವ ಮೂಲಕ ಮಗುವಿನ ಬಳಿ ಮಾತನಾಡಿದಾಗ ಆಯಾ ಶಬ್ದಗಳ ಅರ್ಥಜ್ಞಾನವು ಮಗುವಿಗೆ ಉಂಟಾಗುತ್ತದೆ.

### ಸಿದ್ಧಾನ್ವಿತದಲ್ಲಿಯೇ ಶಕ್ತಿ

**तत्वप्रदीपः – पुनश्च 'अपूपमघसं', 'गामयमानैषीत्' इत्यादावनन्तरानीतेऽर्थे, एवं वर्तमानेऽतीते च व्युत्पन्नस्य तत एष्यदानयने बुद्धिरवतरतीति सिद्धान्वित एव बालः शक्तिं जानाति ।**

ಪುನಃ ಬಾಲಕನಿಗೆ ಶಾಬ್ದಬೋಧದಲ್ಲಿ ಹೆಚ್ಚಿನ ವಿಚಾರ ಬರುತ್ತದೆ 'ಅಪೂಪಮಘಸಂ' (ಅಪೂಪಮ್ = ಅಪೂಪವನ್ನು ಅಘಸಂ = ನಿನ್ನೆಯ ದಿವಸ ತಿಂದೆನು. 'ಘಸಲೃ ಅದನೇ' ಲಙ್‌ಲಕಾರ) 'ಗಾಮಯಮ್ ಆನೈಷೀತ್' (ಅಯಂ = ಇವನು ಗಾಂ = ಹಸುವನ್ನು ಆನೈಷೀತ್ = ಕರೆದುಕೊಂಡು ಬಂದನು. ಆಙ್ ಇತ್ಯುಪಸರ್ಗಪೂರ್ವಕಾತ್ 'ಣೀಞ್ ಪ್ರಾಪಣೇ' ಲುಙ್‌ಲಕಾರ) ಇವೇ ಮೊದಲಾದ ಪ್ರಯೋಗಗಳನ್ನು ಮಾಡಿದಾಗ ಬಾಲಕನಿಗೆ ವ್ಯುತ್ಪತ್ತಿಯು ವರ್ತಮಾನದ ಅರ್ಥದಲ್ಲಿ ಹಾಗೂ ಅತೀತದ ಅರ್ಥಗಳಲ್ಲಿ ಉಂಟಾಗುತ್ತದೆ. ಅನಂತರ ಭವಿಷ್ಯದ ಅರ್ಥದಲ್ಲಿಯೂ ಕೂಡ ಬುದ್ಧಿಯು ಕ್ರಮವಾಗಿ ಪ್ರಾಪ್ತವಾಗುತ್ತದೆ. ಹೀಗೆ ಸಿದ್ಧಾನ್ವಿತದಲ್ಲಿಯೇ ಬಾಲಕನಿಗೆ ಶಬ್ದಗಳ ಶಕ್ತಿಗ್ರಹಣವಾಗುತ್ತದೆ.

### ಮಗು ಹೇಗೆ ಅನುಮಾನ ಮಾಡುತ್ತದೆ?

**तत्वप्रदीपः – न प्रवर्तकद्वारं बालो ज्ञातुं शक्नोति । प्रवृत्तावाकाङ्क्षाद्यभावात्।**

ಬಾಲಕನಿಗೆ ಪ್ರವರ್ತಕಜ್ಞಾನವನ್ನು ಅನುಮಾನ ಮಾಡುವ ಮೂಲಕ ಶಾಬ್ದಬೋಧ ಬರಲು ಸಾಧ್ಯವೇ ಇಲ್ಲ. ಏಕೆಂದರೆ ಪ್ರವೃತ್ತಿಯ ವಿಷಯದಲ್ಲಿ ಅವನಿಗೆ ಆಕಾಂಕ್ಷೆಯೇ ಹುಟ್ಟುವುದಿಲ್ಲ.

### ಇಷ್ಟಸಾಧನತ್ವವೇ ಕಾರ್ಯತ್ವ

**तत्वप्रदीपः – नापि कार्यान्विते, कार्यस्यैवाभावात् । नापीष्टसाधनतां विना कार्यता नामास्ति । कृतियोग्यं कार्यमित्युक्ते निषिद्धस्यापि कार्यत्वं स्यात् । अकर्तुमशक्यत्वं च निषिद्धे समानम् । तस्मादिष्टसाधनव्यतिरेकेण कार्याभावान्न कार्यस्य प्रवर्तकत्वम् ।**

ಕಾರ್ಯಾನ್ವಿತದಲ್ಲಿ ವ್ಯುತ್ಪತ್ತಿ ಗ್ರಹಣವಾಗಲು ಸಾಧ್ಯವಿಲ್ಲ. ಏಕೆಂದರೆ ಕಾರ್ಯವೇ ಇರುವುದಿಲ್ಲ. ಇಷ್ಟಸಾಧನತ್ವಕ್ಕಿಂತ ಅತಿರಿಕ್ತವಾದ ಕಾರ್ಯತಾ ಇದೆ ಎನ್ನಲು ಪ್ರಮಾಣವಿಲ್ಲ. ಕೃತಿಯೋಗ್ಯವಾದ ಕಾರ್ಯವು ಇದೆಯಲ್ಲವೆ? ಎಂದು ಪ್ರಶ್ನಿಸಬಾರದು. ಹಾಗಾದಲ್ಲಿ ನಿಷಿದ್ಧ-ವಾದದ್ದು ಕೂಡ ಕಾರ್ಯವಾಗಬೇಕಾಗುತ್ತದೆ. 'ಅಕರ್ತುಮ್ ಅಶಕ್ಯವಾದದ್ದನ್ನು ಕಾರ್ಯ-ವೆನ್ನುತ್ತೇವೆ' ಎಂದು ಹೇಳಬಾರದು. ನಿಷಿದ್ಧವಾದದ್ದು ಅಕರ್ತುಮ್ ಅಶಕ್ಯವಾಗಿ ಇದ್ದೇ ಇರುತ್ತದೆ. ಆದ್ದರಿಂದ ಇಷ್ಟಸಾಧನಕ್ಕಿಂತ ಅತಿರಿಕ್ತವಾದ ಕಾರ್ಯವು ಇಲ್ಲದ ಕಾರಣ ಕಾರ್ಯಕ್ಕೆ ಪ್ರವರ್ತಕತ್ವವನ್ನು ಒಪ್ಪಬಾರದು.

### ಇಬ್ಬರೂ ಒಪ್ಪಿದ ಅನ್ವಯವ್ಯತಿರೇಕ

**तत्वप्रदीपः – साधनज्ञानस्य प्रवृत्त्यन्वयव्यतिरेकावुभयसम्प्रतिपन्नौ ।**

'ಇಷ್ಟಸಾಧನ' ಎಂಬ ಜ್ಞಾನವಿದ್ದರೆ ಪ್ರವೃತ್ತಿಯಾಗುತ್ತದೆ. 'ಇಷ್ಟಸಾಧನ' ಎಂಬ ಜ್ಞಾನವಿಲ್ಲದಿದ್ದರೆ ಪ್ರವೃತ್ತಿ ಇರುವುದಿಲ್ಲ. ಈ ಅನ್ವಯವ್ಯತಿರೇಕವು ಇಬ್ಬರಿಗೂ ಸಮ್ಮತವಾಗಿದೆ.

### ಅತಿವ್ಯಾಪ್ತಿ ದೋಷವಿಲ್ಲ

**तत्वप्रदीपः – न चातीतेष्टसाधने साधनताज्ञानमस्ति । नष्टस्य साधनस्य साधनताया अपि नष्टत्वात् ।**

ಅತೀತಭೋಜನದಲ್ಲಿ ಇಷ್ಟಸಾಧನತ್ವವಿದೆ. ಆದರೆ ಯಾರೂ ಕೂಡ ಅದರಲ್ಲಿ ಪ್ರವೃತ್ತಿ ಮಾಡುವುದಿಲ್ಲವೆನ್ನಬಾರದು. ಅದರಲ್ಲಿ ಇಷ್ಟಸಾಧನತಾಜ್ಞಾನವೇ ಇರುವುದಿಲ್ಲ. ಅತೀತ-ಭೋಜನವೆಂಬ ಸಾಧನವು ನಷ್ಟವಾದ ಮೇಲೆ ಅದರಲ್ಲಿ ಸಾಧನತಾವೂ ಕೂಡ ನಷ್ಟವಾಗುತ್ತದೆ.

### ನೇರವಾಗಿ ಇಷ್ಟಸಾಧನತಾಜ್ಞಾನವೇ ಪ್ರವರ್ತಕ

**तत्वप्रदीपः – तत्पक्षे यत्कार्यज्ञानहेतुरिष्टसाधनज्ञानं तदेव प्रवृत्तिहेतुरस्माकमिति नातीतदूरस्थादौ व्यभिचारः ।**

ಕಾರ್ಯಜ್ಞಾನವು ಪ್ರವರ್ತಕವಾಗಿದೆ. ಆ ಕಾರ್ಯಜ್ಞಾನಕ್ಕೆ ಇಷ್ಟಸಾಧನತಾಜ್ಞಾನವು ಕಾರಣವಾಗಿದೆಯೆಂದು ಪೂರ್ವಪಕ್ಷಕಾರರು ಹೇಳುತ್ತಾರೆ. ಮಧ್ಯದಲ್ಲಿ ಕಾರ್ಯಜ್ಞಾನವು ಬೇಡ ಇಷ್ಟಸಾಧನತಾಜ್ಞಾನವೇ ನೇರವಾಗಿ ಪ್ರವರ್ತಕವೆಂದು ನಾವು ಹೇಳುತ್ತಿದ್ದೇವೆ. ಆದ್ದರಿಂದ ಅತೀತಪದಾರ್ಥದಲ್ಲಿ ಮತ್ತು ದೂರಸ್ಥಪದಾರ್ಥದಲ್ಲಿ ಇಷ್ಟಸಾಧನತಾವೇ ಇರುವುದಿಲ್ಲ. ಆದ್ದರಿಂದ ವ್ಯಭಿಚಾರದೋಷವು ಬರುವುದಿಲ್ಲ.

### ಸಿದ್ಧಾರ್ಥದಲ್ಲಿ ಪ್ರಾಮಾಣ್ಯನಿರಾಕರಣೆ ಸಾಧ್ಯವಿಲ್ಲ

**तत्वप्रदीपः – अपिच 'सिद्धेऽर्थे प्रामाण्यं नास्ति' इत्येतद्वाक्यं प्रमाणमुताप्रमाणम् ? प्रमाणं चेदिदमेव हि सिद्धेऽर्थे प्रमाणं किमन्यनिवारणेन। अप्रमाणं चेत् सिद्धार्थे प्रामाण्यं न निराकृतम् ।**

ಮತ್ತು 'ಸಿದ್ಧೇ ಅರ್ಥೇ ಪ್ರಾಮಾಣ್ಯಂ ನಾಸ್ತಿ' ಎಂಬ ವಾಕ್ಯವು ಪ್ರಮಾಣವೊ ಅಪ್ರಮಾಣವೋ? ಎಂಬ ಪ್ರಶ್ನೆಗೆ ಕಾರ್ಯತಾವಾದಿಗಳು ಉತ್ತರಿಸಬೇಕು. ಪ್ರಮಾಣವೆಂದು ಹೇಳಿದರೆ ಈ ವಾಕ್ಯವೇ ಸಿದ್ಧಾರ್ಥವಿಷಯದಲ್ಲಿ ಪ್ರಮಾಣವೆಂದು ಒಪ್ಪಿದಂತಾಯಿತು. ಉಳಿದ ವಾಕ್ಯಗಳು ಸಿದ್ಧಾರ್ಥದಲ್ಲಿ ಪ್ರಮಾಣವಲ್ಲ ಎಂಬ ನಿರಾಕರಣೆಯು ತಪ್ಪಾಗುತ್ತದೆ. ಅಪ್ರಮಾಣವೆಂದು ಹೇಳಿದರೆ ಸಿದ್ಧಾರ್ಥದಲ್ಲಿ ಪ್ರಾಮಾಣ್ಯವನ್ನು ನಿರಾಕರಣೆ ಮಾಡಿದಂತಾಗುವುದಿಲ್ಲ.

### ಕಾರ್ಯತಾವಾದಿಗಳಿಗೆ ''ಆಧಿಕ್ಯ' ನಿಗ್ರಹಸ್ಥಾನ

**तत्वप्रदीपः – किञ्च कार्यवादिनो न परार्थानुमानं प्रमाणम् । सिद्धविषयत्वात् । न च तत्र विद्धीत्याद्यध्याहारः । अनध्याहृतेऽपि तस्मिन् वाक्यादर्थावगमात् । अप्रयोजकत्वात् तस्याऽधिक्यदोषप्रसङ्गाच्च ।**

ಮತ್ತು ಕಾರ್ಯತಾವಾದಿಗಳಿಗೆ ಪರಾರ್ಥಾನುಮಾನವೂ ಕೂಡ ಅಪ್ರಮಾಣವೆಂದಾಗಬೇಕಾಗುತ್ತದೆ. ಏಕೆಂದರೆ ಪರಾರ್ಥಾನುಮಾನವು ಸಿದ್ಧವಾದದ್ದನ್ನೇ ಬೋಧಿಸಲು ಹೊರಟಿರುತ್ತದೆ. ಅಲ್ಲಿಯೂ ಕೂಡ 'ವಿದ್ಧಿ' ಎಂಬ ಕಾರ್ಯತಾವಾಚಕವಾದ ಪದವನ್ನು ಅಧ್ಯಾಹಾರ ಮಾಡಬಹುದಲ್ಲವೆ? ಎಂಬ ಪ್ರಶ್ನೆ ಮಾಡಬಾರದು. ಅಧ್ಯಾಹಾರ ಮಾಡದಿದ್ದರೂ ಕೂಡ ವಾಕ್ಯಾರ್ಥಜ್ಞಾನ ಬರುವುದು ಅನುಭವಸಿದ್ಧವಾಗಿದೆ. ಆದ್ದರಿಂದ 'ವಿದ್ಧಿ' ಎಂಬ ಪದವನ್ನು ಅಧ್ಯಾಹಾರ ಮಾಡುವುದು ಅಪ್ರಯೋಜಕ. ಹಾಗೇನಾದರೂ ಅಧ್ಯಾಹಾರ ಮಾಡಿದರೆ 'ಆಧಿಕ್ಯ' ಎಂಬ ನಿಗ್ರಹಸ್ಥಾನ ಪ್ರಾಪ್ತವಾಗುತ್ತದೆ.

'ವಿದ್ಧಿ' ಎಂಬುದನ್ನು ಅಧ್ಯಾಹಾರ ಮಾಡಿದರೆ ಅನುಮಾನವೇ ವ್ಯರ್ಥವಾಗುತ್ತದೆ

**तत्वप्रदीपः – विध्यध्याहारेऽप्यनुमायाः स्वार्थे प्रामाण्यमभ्युपगन्तव्यम्। अन्यथा प्रतिवादिनं प्रति ज्ञानविधिमात्रपरं साधनदूषणरहितमसङ्गतं स्यात् ।**

ಮತ್ತು 'ವಿದ್ಧಿ' ಎಂಬ ಪದವನ್ನು ಅಧ್ಯಾಹಾರ ಮಾಡಿದರೂ ಕೂಡ ಅನುಮಾನಕ್ಕೆ ಸ್ವಾರ್ಥದಲ್ಲಿ ಪ್ರಾಮಾಣ್ಯವನ್ನು ಒಪ್ಪಲೇಬೇಕು. ಇಲ್ಲದಿದ್ದರೆ ಪ್ರತಿವಾದಿಗೆ ಜ್ಞಾನವನ್ನಷ್ಟೇ ವಿಧಾನ ಮಾಡಿದಂತಾಗುತ್ತದೆ. ಆವಾಗ 'ಪರ್ವತೋ ವಹ್ನಿಮಾನ್ ಧೂಮಾತ್ ಇತಿ ವಿದ್ಧಿ' ಎಂಬುದಾಗಿ ಜ್ಞಾನವಿಧಿಯಲ್ಲಿ ಅನುಮಾನವು ಪರ್ಯವಸಿತವಾಗುತ್ತದೆ, ಹೊರತು ಪರಾರ್ಥಾನುಮಾನವು ಯಾವುದನ್ನೂ ಸಾಧನೆ ಮಾಡಿದಂತಾಗುವುದಿಲ್ಲ. ಮತ್ತು ಪರನಿಗೆ ಏನನ್ನು ಕೂಡ ದೂಷಣೆ ಮಾಡಿದಂತೆ ಆಗುವುದಿಲ್ಲ. ಹೀಗೆ ಅನುಮಾನಪ್ರಯೋಗ ಮಾಡಿದ್ದೇ ವ್ಯರ್ಥವಾಗುವ ಪರಿಸ್ಥಿತಿ ಬರುತ್ತದೆ.

ಪ್ರತಿಯೊಂದೆಡೆಯೂ 'ವಿದ್ಧಿ' 'ವಿದ್ಧಿ' ಎನ್ನುತ್ತಲೇ ಇರು

**तत्वप्रदीपः – तस्मात् ब्रह्मवाक्यानां च प्रतिपत्तिकर्तव्यतापरत्वेऽपि यथाश्रुतानन्तगुणगणपरिपूर्णब्रह्मणि प्रामाण्यपर्याप्तिरिति न नः किञ्चिच्छिद्यत इति सिद्धेऽर्थे प्रामाण्यं सुस्थितम् ।**

ಆದ್ದರಿಂದ ಬ್ರಹ್ಮಪರವಾದ ವಾಕ್ಯಗಳಲ್ಲಿಯೂ ಕೂಡ ಇದೇ ರೀತಿಯಾಗಿ ಕಾರ್ಯತಾ-ಬೋಧಕವಾದ ಪದಗಳನ್ನು ನೀವು ಅಧ್ಯಾಹಾರ ಮಾಡಿಕೊಳ್ಳಬೇಕಾಗುತ್ತದೆ. 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ' ಎಂಬಲ್ಲಿಯೂ ಕೂಡ 'ವಿದ್ಧಿ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಬ್ರಹ್ಮನಲ್ಲಿ ಹೀಗೆ 'ವಿದ್ಧಿ' ಎಂಬ ಪದವನ್ನು ಅಧ್ಯಾಹಾರ ಮಾಡುವ ಮೂಲಕ ಪ್ರತಿಯೊಂದು ಪದಗಳಿಗೆ ಬೋಧಕತ್ವವನ್ನು ಅಂಗೀಕಾರ ಮಾಡುವುದಾದರೆ ನಮಗೇನು ಹಾನಿಯಿಲ್ಲ. ನಿಮಗೇನೇ ವ್ಯರ್ಥವಾದ ಪದಗಳ ಅಧ್ಯಾಹಾರ ಮಾಡಿಕೊಳ್ಳುವ ಸಂಕಷ್ಟ ನಿರಂತರ ತಪ್ಪಿದ್ದಲ್ಲ. ಈ ಎಲ್ಲಾ ಸಮಸ್ಯೆಗಳಿಂದ ಹೊರಬರಲು ಸಿದ್ಧಾರ್ಥದಲ್ಲಿ ಶಬ್ದಗಳಿಗೆ ಪ್ರಾಮಾಣ್ಯವನ್ನು ಒಪ್ಪಿಕೊಳ್ಳಲೇ ಬೇಕು.

ವಿಶೇಷ ವಿಷಯ - [೧]ವೃದ್ಧರ ವ್ಯವಹಾರವನ್ನು ನೋಡಿ ಬಾಲನು ವ್ಯುತ್ಪತ್ತಿಯನ್ನು ಹೊಂದುವ ಪ್ರಯುಕ್ತ ವೃದ್ಧವ್ಯವಹಾರವು ಕಾರ್ಯಜ್ಞಾನದ್ವಾರಾ ವ್ಯುತ್ಪತ್ತಿಗೆ ಕಾರಣವಾಗುತ್ತದೆ. ಆದುದರಿಂದ ಶಬ್ದವು ಕಾರ್ಯವನ್ನು ಪ್ರತಿಪಾದಿಸುತ್ತದೆನ್ನುವುದೇ ಯುಕ್ತವು. ಹೇಗೆಂದರೆ - 'ಚೈತ್ರನೇ ನೀರನ್ನು ತೆಗೆದುಕೊಂಡು ಬಾ' ಎಂದು ಹೇಳುವ ಪ್ರಯೋಜಕವೃದ್ಧನ ಮಾತನ್ನು ಕೇಳಿದ ಮೇಲೆ ಮತ್ತೊಬ್ಬ ಪ್ರಯೋಜ್ಯವೃದ್ಧನು ನೀರನ್ನು ತರಲಿಕ್ಕೆ ಪ್ರವೃತ್ತಿ ಮಾಡುತ್ತಾನೆ. ಅದನ್ನು ನೋಡಿ ಸಮೀಪದಲ್ಲಿರತಕ್ಕ ಬಾಲಕನು, ಹೀಗೆ ಆಲೋಚಿಸುವನು - 'ಅಸ್ಯೇಯಂ ಪ್ರವೃತ್ತಿಃ ಬುದ್ಧಿಪೂರ್ವಾ, ಸ್ವತಂತ್ರಪ್ರವೃತ್ತಿತ್ವಾತ್, ಮದೀಯಸ್ತನ್ಯಪಾನಾದಿಪ್ರವೃತ್ತಿವತ್' ನೀರನ್ನು ತರುವ ಈ ಪ್ರಯೋಜ್ಯವೃದ್ಧನ ಪ್ರವೃತ್ತಿಯು ಬುದ್ಧಿಪೂರ್ವಕವು, ಸ್ವತಂತ್ರಪ್ರವೃತ್ತಿಯಾದುದರಿಂದ, ನನ್ನ ಈ ಸ್ತನ್ಯಪಾನಾದಿಗಳ ಪ್ರವೃತ್ತಿಯಂತೆ, ಎಂದು ಆಲೋಚಿಸುವನು. ಮತ್ತು ಪ್ರಯೋಜ್ಯವೃದ್ಧನ ಪ್ರವೃತ್ತಿಗೆ ಕಾರಣವಾದ ಬುದ್ಧಿಗೆ ಯಾವುದು ವಿಷಯವು ಎಂದು ತಿಳಿಯಬೇಕೆಂದಿಚ್ಛಿಸುತ್ತಿರಲು ಸಮೀಪದಲ್ಲಿದ್ದ ಬಾಲಕನು ಹೀಗೆ ನಿಶ್ಚಯಿಸುತ್ತಾನೆ - 'ವೃದ್ಧಸ್ಯ ಪ್ರವೃತ್ತಿಹೇತುಭೂತಾ ಬುದ್ಧಿಃ = ಪ್ರಯೋಜ್ಯ ವೃದ್ಧನ ಪ್ರವೃತ್ತಿಗೆ ಕಾರಣವಾದ ಬುದ್ಧಿಯು, ಮಮ ಪ್ರವೃತ್ತಿಹೇತುಭೂತಾ ಬುದ್ಧಿಃ ಯದ್ವಿಷಯಿಣೀ ತದ್ವಿಷಯೈವ ಭವಿತುಮರ್ಹತಿ = ನನ್ನ ಪ್ರವೃತ್ತಿಗೆ ಕಾರಣವಾದ ಬುದ್ಧಿಯು ಯಾವುದನ್ನು ವಿಷಯೀಕರಿಸುತ್ತದೋ, ತದ್ವಿಷಯಕವೇ ಆಗಲಿಕ್ಕೆ ಯೋಗ್ಯವಾಗುತ್ತದೆ.

(೧) 'ಕಾರ್ಯತಾವಾದ' ವಿಚಾರವು ವಿಷ್ಣುತತ್ವನಿರ್ಣಯ ಗ್ರಂಥದ ಟೀಕೆಯಲ್ಲಿ ಬಹಳ ವಿವರವಾಗಿದೆ. ಅದನ್ನು ಓದಿದಾಗ ಮಾತ್ರ ಸಂಪೂರ್ಣವಾಗಿ ಕಾರ್ಯತಾವಾದ ಅರ್ಥವಾಗುತ್ತದೆ. ಓದುಗರ ಅನುಕೂಲಕ್ಕಾಗಿ ಇಲ್ಲಿ ವಿಷ್ಣುತತ್ವನಿರ್ಣಯದ ಗ್ರಂಥದ ಅಗ್ರಹಾರ ತಂತ್ರಿಗಳ ಪುಸ್ತಕದ ವಿಚಾರವನ್ನು ನೀಡಲಾಗಿದೆ. ಈ ವಿಶೇಷ ವಿಷಯವು ತತ್ವಪ್ರದೀಪದ ವಿವರಣೆಯಲ್ಲ ಎಂಬುದನ್ನು ಗಮನಿಸತಕ್ಕದ್ದು.

ಪ್ರವೃತ್ತಿಹೇತುಭೂತಬುದ್ಧಿತ್ವಾತ್ = ಪ್ರವೃತ್ತಿಗೆ ಕಾರಣವಾದ ಬುದ್ಧಿಯಾದುದರಿಂದ, ಮದೀಯಪ್ರವೃತ್ತಿಹೇತುಭೂತಬುದ್ಧಿವತ್ = ತನ್ನ ಪ್ರವೃತ್ತಿಗೆ ಕಾರಣವಾದ ಬುದ್ಧಿಯಂತೆ, ಹೀಗೆ ನಿಶ್ಚಯಿಸುತ್ತಾನೆ.

ಪುನಃ ಹೀಗೆ ನಿಶ್ಚಯಿಸುತ್ತಾನೆ - 'ಯದ್ವಿಷಯಾ ಸಾ ಬುದ್ಧಿಃ ಪ್ರವೃತ್ತಿಹೇತುಭೂತಾ ತದ್ವಸ್ತು ಅಸ್ಯ ಅನೇನ ಶಬ್ದೇನ ಬೋಧಿತಂ' ಆ ವಸ್ತುವಿನ ಜ್ಞಾನವು ಪ್ರಯೋಜ್ಯ ವೃದ್ಧನಿಗೆ ಈ ಶಬ್ದದಿಂದ ಹುಟ್ಟಿರುವುದು, ಆ ಶಬ್ದವನ್ನು ಪ್ರಯೋಗ ಮಾಡಿದ ಮೇಲೆ ಹುಟ್ಟಿರುವುದರಿಂದ. ಅಂತೂ ಪ್ರಯೋಜ್ಯ ವೃದ್ಧನ ಪ್ರವೃತ್ತಿಯಾದರೂ ಶಬ್ದರೂಪ ಪ್ರಮಾಣದಿಂದ ಹುಟ್ಟಿರುವುದು. ಆದರೆ, ನನ್ನ ಸ್ತನ್ಯಪಾನಾದಿಗಳ ಪ್ರವೃತ್ತಿಯಾದರೂ ಜನ್ಮಾಂತರಾನುಭವದಿಂದ ಹುಟ್ಟಿದ ಸಂಸ್ಕಾರದಿಂದ ಅಥವಾ ಅನುಮಾನದಿಂದ ಹುಟ್ಟಿರುವುದು. ಇಷ್ಟೇ ಪ್ರಯೋಜ್ಯವೃದ್ಧನ ಪ್ರವೃತ್ತಿಗೂ ನನ್ನ ಪ್ರವೃತ್ತಿಗೂ ವಿಶೇಷವು. ಆದುದರಿಂದ ಯಾವುದರ ಜ್ಞಾನದಿಂದ ನನಗೆ ಸ್ತನ್ಯಪಾನಾದಿಗಳಲ್ಲಿ ಪ್ರವೃತ್ತಿಯೋ, ಅದು ಈ ಶಬ್ದದಿಂದ ತಿಳಿಸಲ್ಪಡುತ್ತದೆ. ಹೀಗೆ ಶಬ್ದವು ಪ್ರವೃತ್ತಿಗೆ ಕಾರಣವಾದ ಅರ್ಥವನ್ನು ತಿಳಿಸಿಕೊಡುತ್ತದೆ.

ಮತ್ತು ಪ್ರಯೋಜ್ಯವೃದ್ಧನ ಪ್ರವೃತ್ತಿಗೆ ಕಾರಣವಾದ ಶಬ್ದಬೋಧ್ಯವಾದ (ಶಬ್ದದಿಂದ ತಿಳಿಯಲ್ಪಡುವ) 'ಅರ್ಥವು ಯಾವುದು' ಎಂದು ನಿಶ್ಚಯಿಸಲಿಕ್ಕೆ ತನ್ನಲ್ಲಿ ತಿಳಿಯಲ್ಪಡುವ ಸ್ತನ್ಯಪಾನಾದಿಗಳ ಪ್ರವೃತ್ತಿಗೆ ಕಾರಣವಾದ ಅರ್ಥವನ್ನು ಅನುಸಂಧಾನ ಮಾಡಿಕೊಳ್ಳುತ್ತಾನೆ. ಅವುಗಳಲ್ಲಿ ನಾನು ಕೇವಲ ಸ್ತನ್ಯಪಾನಾದಿರೂಪ ಕ್ರಿಯೆಯನ್ನಾಗಲೀ, ಕೇವಲ ತೃಪ್ತಿರೂಪ ಫಲವನ್ನಾಗಲೀ, ಕೇವಲ ಸಾಧ್ಯಸಾಧನಭಾವರೂಪ ಸಂಬಂಧವನ್ನಾಗಲೀ ತಿಳಿದು ಪ್ರವೃತ್ತಿ ಮಾಡಿದ್ದಲ್ಲ. ಮತ್ತೆ 'ಇದಂ ಮಾಯಾ ಕರ್ತವ್ಯಂ ಸ್ತನ್ಯಪಾನತ್ವಾತ್ = ಇದು ನನ್ನಿಂದ ಮಾಡತಕ್ಕುದ್ದು ಸ್ತನ್ಯಪಾನವಾದುದರಿಂದ' ಎಂದು ಸ್ತನ್ಯಪಾನಾದಿಗಳಿಗೆ ಕಾರ್ಯತ್ವವನ್ನು ಅನುಮಾನದಿಂದ ತಿಳಿದೇ ನಾನು ಸ್ತನ್ಯಪಾನಾದಿಗಳಲ್ಲಿ ಪ್ರವೃತ್ತಿಮಾಡಿದೆನು ಎಂದು ತನ್ನ ಪ್ರವೃತ್ತಿಗೆ ಕಾರ್ಯಜ್ಞಾನಪೂರ್ವಕತ್ವವನ್ನು ನಿಶ್ಚಯಿಸಿ, ಇವನೂ ಕೂಡ ಕಾರ್ಯಜ್ಞಾನದಿಂದಲೇ ಪ್ರವೃತ್ತಿಮಾಡಿದನೆಂದು ನಿಶ್ಚಯಿಸುತ್ತಾನೆ.

'ಚೈತ್ರಸ್ಯ ಪ್ರವೃತ್ತಿಃ = ಚೈತ್ರನ ಪ್ರವೃತ್ತಿಯು, ಕಾರ್ಯಬೋಧಪೂರ್ವಿಕಾ = ಕಾರ್ಯಜ್ಞಾನವು ಪ್ರಾಥಮಿಕವಾಗಿ ಉಳ್ಳದ್ದು. (ಅಂದರೆ ಕಾರ್ಯಜ್ಞಾನದಿಂದ ಹುಟ್ಟಿದ್ದು) ಬುದ್ಧಿಪೂರ್ವಪ್ರವೃತ್ತಿತ್ವಾತ್ = ಬುದ್ಧಿಪೂರ್ವಕವಾದ ಪ್ರವೃತ್ತಿಯಾದುದರಿಂದ, ಮದೀಯ

ಸ್ತನ್ಯಪಾನಾದಿ ಪ್ರವೃತ್ತಿವತ್ = ನಾನು ಮಾಡತಕ್ಕ ಸ್ತನ್ಯಪಾನಾದಿಗಳ ಪ್ರವೃತ್ತಿಯಂತೆ, ಎಂದನು ಮೇಯಿಸಿ, ಪ್ರವೃತ್ತಿಗೆ ಕಾರಣವಾದ ಅರ್ಥವನ್ನು ತಿಳಿಸಿಕೊಡತಕ್ಕ ವಾಕ್ಯಗಳೆಲ್ಲವೂ ಕಾರ್ಯಪರಗಳೆಂದು ನಿಶ್ಚಯಿಸುತ್ತಾನೆ.

ಆಮೇಲೆ ಲಿಙ್, ಲೋಟ್, ತವ್ಯ, ಪ್ರತ್ಯಯಗಳ ಯೋಗ(ಸಂಬಂಧ)ವಿದ್ದರೆ 'ಇದನ್ನು ನಾನು ಮಾಡಬೇಕು' ಎಂದು ಕಾರ್ಯಜ್ಞಾನವು ಬರುವುದರಿಂದಲೂ, ಲಿಙಾದಿಗಳನ್ನು ತೆಗೆದು ಬಿಟ್ಟರೆ ಕಾರ್ಯಜ್ಞಾನವು ಬಾರದಿರುವುದರಿಂದಲೂ ಲಿಙ್, ಲೋಟ್, ತವ್ಯ, ಪ್ರತ್ಯಯಗಳೇ ಕಾರ್ಯಜ್ಞಾನಕ್ಕೆ ಕಾರಣಗಳಾಗುತ್ತವೆ. ಬೇರೆ ಶಬ್ದಗಳಾದರೂ ಕಾರ್ಯದಿಂದೊಡಗೂಡಿದ ಚೈತ್ರಾದಿ ಪದಾರ್ಥಗಳನ್ನು ತಿಳಿಸಿಕೊಡುತ್ತವೆ.

ಹೀಗೆ ಶಬ್ದಪ್ರಕ್ಷೇಪ (ಸ್ಥಾಪನ) ನಿಷ್ಕಾಸನ (ಪರಿತ್ಯಾಗ)ಗಳಿಂದ ತಿಳಿಯುತ್ತಾನೆ. ಹೀಗೆ ಲೋಕದಲ್ಲಿ ಕಾರ್ಯದಲ್ಲಿಯೇ ಶಬ್ದಗಳಿಗೆ ಸಂಬಂಧವನ್ನು ತಿಳಿದಮೇಲೆ ವೇದದಲ್ಲಿಯೂ ಕಾರ್ಯವನ್ನೇ ಶಬ್ದದಿಂದ ತಿಳಿಯುತ್ತಾನೆ. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇತ್ಯಾದಿ ವೇದವಾಕ್ಯಗಳಲ್ಲಿ ಲಿಙಾದಿ ಪ್ರತ್ಯಯಗಳು (ಈತ ಪ್ರತ್ಯಯ) ಪ್ರಯತ್ನರೂಪವಾದ ಶಾಬ್ದೀಭಾವನೆಯನ್ನೂ (ಕಾರ್ಯಸ್ವರೂಪವನ್ನೂ) ಪ್ರಕೃತಿಯು (ಯಜ್ ಎಂಬುವ ಧಾತುವು) ಲಿಙ್‌ವಾಚ್ಯ ಪ್ರಯತ್ನವಿಷಯವಾದ ಯಾಗವನ್ನೂ 'ಇನ' ಎಂಬುವ ತೃತೀಯಾ ವಿಭಕ್ತಿಯು ಯಾಗಕ್ಕೆ ಕರಣತ್ವವನ್ನೂ, 'ಜ್ಯೋತಿಷ್ಟೋಮ' ಎನ್ನುವುದು ಪ್ರಕೃತ್ಯರ್ಥವಾದ ಯಾಗದಲ್ಲಿ ವಿಶೇಷಣಭೂತವಾದ ನಾಮಧೇಯವನ್ನೂ, 'ಸ್ವರ್ಗಕಾಮಃ' ಎನ್ನುವುದು ನಿಯೋಜ್ಯನಾದ ಅಧಿಕಾರಿಯನ್ನೂ ಹೇಳುವವುಗಳಾಗಿ ಕಾರ್ಯಜ್ಞಾನದಲ್ಲಿಯೇ ವ್ಯಾಪಾರವುಳ್ಳವುಗಳಾಗುತ್ತವೆ. ಅಂದರೆ, ಕಾರ್ಯಜ್ಞಾನವನ್ನೇ ಹುಟ್ಟಿಸುತ್ತವೆ.

ಅಂಗವಾಕ್ಯಗಳು, ೧. ಸನ್ನಿಪತ್ಯೋಪಕಾರಕಗಳು, ೨. ಆರಾದುಪಕಾರಕಗಳು ಹೀಗೆ ೨ ವಿಧವು. ಇವುಗಳಲ್ಲಿ ೧. ಸನ್ನಿಪತ್ಯೋಪಕಾರಗಳು ದೃಷ್ಟಪ್ರಯೋಜನ ದ್ವಾರಾ ಸಾಕ್ಷಾತ್ ಉಪಕಾರಕಗಳು. ಉದಾ :- 'ವ್ರೀಹಿನವಹಂತಿ' 'ವ್ರೀಹೀನ್ ಪ್ರೋಕ್ಷತಿ' ಇತ್ಯಾದಿಗಳು ಭತ್ತಗಳನ್ನು ಅವಹನನ (ಕುಟ್ಟುವುದು) ಮಾಡುವುದರಿಂದ ಹೊಟ್ಟು ಹೋಗಿ ಯಾಗಸ್ವರೂಪಕ್ಕೆ ಅವಹನನಾದಿಗಳು ಉಪಕಾರಕಗಳಾಗುತ್ತವೆ. ೨. ಆರಾದುಪಕಾರಕಗಳು ಅದೃಷ್ಟ (ಪುಣ್ಯ) ದ್ವಾರಾ ಉಪಕಾರಕಗಳು.

ಉದಾ:- 'ಇಡೋ ಯಜತಿ' ಇದು ಮೊದಲಾದ ೫ ಪ್ರಯೋಜವಾಕ್ಯಗಳು. ಅದೃಷ್ಟ ಹುಟ್ಟಿಸಿ, ಯಾಗಫಲದಲ್ಲಿ ಉಪಕಾರಕಗಳಾಗುತ್ತವೆ. ಆದಕಾರಣ ಯಾಗೋತ್ಪತ್ತ್ಯ

ಪೂರ್ವ (ಪುಣ್ಯ)ವನ್ನು ಹುಟ್ಟಿಸುವ ಅವಹನನ (ಕುಟ್ಟುವುದು) ಪ್ರೋಕ್ಷಣ ಮೊದಲಾದ ಅಂಗಗಳನ್ನು ಪ್ರತಿಪಾದಿಸುವ 'ವ್ರೀಹೀನವಹಂತಿ' 'ವ್ರೀಹೀನ್ ಪ್ರೋಕ್ಷತಿ' ಇವೇ ಮೊದಲಾದ ಸನ್ನಿಪತ್ಯೋಪಕಾರಕ ಅಂಗವಾಕ್ಯಗಳು ಯದ್ಯಪಿ ಸ್ವರ್ಗಾದಿಫಲಗಳನ್ನು ದೊರಕಿಸುವ ಪ್ರಧಾನಾಪೂರ್ವ (ಕಾರ್ಯ)ದಿಂದ ಬೇರೆ ಪ್ರಧಾನ ಕಾರ್ಯವನ್ನು ಬೋಧಿಸುವುದಿಲ್ಲ. ಅಂದರೆ 'ಯಜೇತ ಸ್ವರ್ಗಕಾಮಃ' ಇತ್ಯಾದಿಗಳಲ್ಲಿ ಯಾಗವಿಷಯಕವಾದ ಕಾರ್ಯವು ಎನ್ನುವಂತೆ ಅವಹನನವಿಷಯಕವಾದ ಕಾರ್ಯವು ಎಂದು ಅನ್ವಯಜ್ಞಾನವು ಬರುವುದಿಲ್ಲ. ಆದಾಗ್ಯೂ ಸ್ವರ್ಗಾದಿಫಲಗಳಿಗೆ ಮುಖ್ಯ ಸಾಧನವಾದುದರಿಂದ ಪ್ರಧಾನಭೂತವಾದ ಯಾಗ (ಕಾರ್ಯ)ದಿಂದ ಅನ್ವಯವನ್ನು ಹೊಂದಿಯೇ ತನ್ನ ಅರ್ಥವನ್ನು ಪ್ರತಿಪಾದಿಸುವುದರಿಂದ ಪ್ರಧಾನಯಾಗರೂಪ ಕಾರ್ಯಜ್ಞಾನದಲ್ಲಿಯೇ ವ್ಯಾಪಾರವುಳ್ಳವುಗಳಾಗುತ್ತವೆ.

'ವ್ರೀಹೀಣಾಂ ಮೇಧ ಸುಮನಸ್ಯಮಾನಃ' ಇತ್ಯಾದಿ ಮಂತ್ರಗಳೂ ಕೂಡ ಕಾರ್ಯ (ಪ್ರಧಾನ ಭೂತಯಾಗ)ಕ್ಕೆ ಅಂಗಭೂತಗಳಾದ ಪುರೋಡಾಶಾದಿದ್ರವ್ಯ, ದೇವತಾ ಇವುಗಳ ಸ್ಮೃತಿಯನ್ನು ಹುಟ್ಟಿಸುತ್ತಾ ಕಾರ್ಯ (ಪ್ರಧಾನಭೂತವಾದ ಯಾಗ)ದಲ್ಲಿಯೇ ವಿನಿಯುಕ್ತಗಳಾಗಿ ವ್ಯಾಪಾರವುಳ್ಳವುಗಳು. 'ವಾಯುರ್ವೈ ಕ್ಷೇಪಿಷ್ಠಾ ದೇವತಾ' ಇತ್ಯಾದ್ಯರ್ಥ-ವಾದಗಳೂ ವಿಧಿಬೋಧ್ಯವಾದ ಕಾರ್ಯದಲ್ಲಿಯೇ ಪ್ರಾಶಸ್ತ್ಯವನ್ನು ಬೋಧಿಸುವುದರಿಂದ, ಶೀಘ್ರದಲ್ಲಿ ಪ್ರವೃತ್ತಿಯನ್ನು ಹುಟ್ಟಿಸುತ್ತಾ ಉಪಯುಕ್ತಗಳಾಗುತ್ತವೆ.

ಹೀಗೆಯೇ ಎಲ್ಲಾ ವೇದಗಳೂ ಕಾರ್ಯದಲ್ಲಿಯೇ ಪ್ರಮಾಣವು. ಪ್ರಯತ್ನದಿಂದ ಸಾಧಿಸಲಿಕ್ಕೆ ಯೋಗ್ಯವಾಗಿದ್ದು ಪ್ರಯತ್ನಕ್ಕೆ ಉದ್ದೇಶ್ಯವಾದುದು ಕಾರ್ಯವು. ಆ ಕಾರ್ಯವು 'ಗಾಮಾನಯ' ಇದು ಮೊದಲಾದ ಪೌರುಷೇಯಪ್ರಯೋಗಗಳಲ್ಲಿ ಧಾತುವಿನ ಅರ್ಥವಾದ ಆನಯನವು (ತರೋಣವು) ಆಗುತ್ತದೆ. ವೇದದಲ್ಲಾದರೂ ಕಾರ್ಯವು ಅಪೂರ್ವ (ಅದೃಷ್ಟ)ವು. ಎಲ್ಲಾ ವೇದಗಳೂ ಕಾರ್ಯಪರಗಳಾದುದರಿಂದಲೇ ವೇದಾಂತಗಳೂ ಅಂದರೆ 'ವಿಜ್ಞಾನಘನ ಏವೈತೇಭ್ಯೋ ಭೂತೇಭ್ಯಃ ಸಮುತ್ಥಾಯ' ಇತ್ಯಾದಿಗಳು ಕಾರ್ಯಕ್ಕೆ ಅಂಗಭೂತವಾದ ಕರ್ತೃಸ್ವರೂಪವನ್ನು ಪ್ರತಿಪಾದಿಸುತ್ತವೆ. 'ವಾಗ್ವಾವ ನಾಮ್ನೋ ಭೂಯಸೀ' ಇತ್ಯಾದಿಗಳು ಕಾರ್ಯಕ್ಕೆ ಅಂಗಭೂತವಾದ ದೇವತಾಸ್ವರೂಪವನ್ನು ಪ್ರತಿಪಾದಿಸುತ್ತವೆ. ಇಷ್ಟು ಪೂರ್ವಪಕ್ಷ.

ಸಿದ್ಧಾಂತ ಹೀಗಿದೆ - ಮಕ್ಕಳು ಕೆಲವು ವೇಳೆಯಲ್ಲಿ ತಮ್ಮ ತಾಯಿ ತಂದೆಯವರ ತೊಡೆಯ ಮೇಲೆ ಕುಳಿತಿರುವರು. ಆಗ ಮಕ್ಕಳ ಮನಸ್ಸು ಎಲ್ಲಿಯೋ ಬೇರೊಂದು ಲಕ್ಷ್ಯದಲ್ಲಿದ್ದರೆ ತಾಯಿ ತಂದೆಯವರು ಅವರಿಗೆ ಏನನ್ನಾದರೂ ಬೋಧಿಸಬೇಕೆಂದು

ಇಚ್ಛಿಸುವಾಗ ಬೆರಳ ಚಿಟಕಿ ಇತ್ಯಾದಿಗಳಿಂದ ಅವರ ಮನಸ್ಸನ್ನು ಆ ಲಕ್ಷ್ಯದಿಂದ ತಿರುಗಿಸಿ ಹೀಗೆ ಬೋಧಿಸುವರು. 'ಬಾಲಕನೇ ಇವಳು ನಿನ್ನ ತಾಯಿಯು, ಇವನು ನಿನ್ನ ತಂದೆಯು, ಇವನು ನಿನ್ನ ಅಣ್ಣನು, ಅವನು ಬಾಳೆಹಣ್ಣನ್ನು ತಿನ್ನುತ್ತಾನೆ ಎಂದು. ಆಗ ವೃದ್ಧರ ವ್ಯವಹಾರವಿಲ್ಲದೇನೇ ಬಾಲಕರು ಆ ನಿರ್ದೇಶದಿಂದಲೇ ಆ ಶಬ್ದಗಳ ಸಮುದಾಯಕ್ಕೆ ಕಾರ್ಯದಲ್ಲಿ ಅನ್ವಯವಿಲ್ಲದಿದ್ದರೂ ಸಿದ್ಧವಾದ ಆ ಅರ್ಥಸಮುದಾಯದಲ್ಲಿ ಇವರು ಈ ಪದದಿಂದ ಈ ಅರ್ಥವನ್ನು ತಿಳಿಸಿಕೊಡುತ್ತಾರೆ ಎಂಬುದಾಗಿ ಪ್ರತಿಪಾದ್ಯ ಪ್ರತಿಪಾದಕಭಾವಸಂಬಂಧವನ್ನು ತಿಳಿಯುತ್ತಾರೆ.

ಮತ್ತು ಇವಳು ನಿನ್ನ ತಂಗಿಯು, ಇವನು ನಿನ್ನ ಮಿತ್ರನು, ಅವನು ಅಪೂಪ(ಅಪ್ಪ) ವನ್ನು ತಿನ್ನುತ್ತಾನೆ. ಇದು ಮೊದಲಾದ ಬೇರೆ ವಾಕ್ಯಗಳಲ್ಲಿ ಶಬ್ದಾರ್ಥಗಳ ಆವಾಪೋದ್ಧಾರ (ವಿವಕ್ಷಿತವಾದ ಅರ್ಥವನ್ನು ತಿಳಿಸುವುದಕ್ಕಾಗಿ ಅದಕ್ಕೆ ಯೋಗ್ಯವಾದ ಶಬ್ದವನ್ನು ಸ್ಥಾಪಿಸುವುದು ಆವಾಪವು. ಆ ಅರ್ಥವನ್ನು ಬಿಡುವುದಕ್ಕಾಗಿ ಆ ಶಬ್ದವನ್ನು ಪರಿತ್ಯಾಗ ಮಾಡುವುದು ಉದ್ಧಾರವು.)ಗಳಿಂದ ಶಬ್ದವಿಭಾಗಾದಿಗಳನ್ನು ತಿಳಿದು ಮಾತ್ರಾದಿಪದಗಳಿಗೆ ಯೋಗ್ಯವಾದ ಇತರದಿಂದೊಡಗೂಡಿದ ತಾಯಿ, ತಂದೆ ಮೊದಲಾದ ಅರ್ಥಗಳ ವಾಚಕತ್ವವಿದೆ, ಎಂದು ನಿಶ್ಚಯಿಸುತ್ತಾನೆ.

ಈ ಉಪಾಯವು ಅತಿ ಲಘುವಾದುದು. ಯಾವಾಗಲೂ ಮರೆತು ಹೋಗುವ ಸ್ವಭಾವವುಳ್ಳ ಬಾಲಕರು ಶಬ್ದಗಳನ್ನನುಸಂಧಾನಮಾಡಿಕೊಂಡು ತಮಗೆ ಅಪೇಕ್ಷಿತವೇ ಆಗದಿರುವ ವೃದ್ಧನ ಆಗಮನಾದಿಗಳನ್ನು ನಿರೀಕ್ಷಿಸಿಕೊಂಡಿದ್ದಾರೆ ಎಂದು ಕಲ್ಪಿಸುವುದು ಅತಿಗುರುವಾಗಿದೆ. ಇಷ್ಟ ಸಾಧನರೂ ಅಪೇಕ್ಷಿತರೂ ಆಗಿ, ಮುಂಭಾಗದಲ್ಲಿರುವ ಮಾತ್ರಾದಿಗಳಲ್ಲಿ ಶಬ್ದವು ಶ್ರುತವಾದೊಡನೆಯೇ ಆ ಶಬ್ದವು ಆ ಅರ್ಥದಲ್ಲಿ ಶಕ್ತಿಯುಳ್ಳದ್ದೆಂದು ತಿಳಿಯುತ್ತಾರೆಂದು ಕಲ್ಪಿಸುವುದು ಅತಿಲಘುವಾಗಿದೆ. ವರ್ತಮಾನ ಪದಾರ್ಥಗಳಲ್ಲಿ ಇದೇ ರೀತಿಯಾಗಿ ವ್ಯುತ್ಪತ್ತಿಯಾದ ಬಳಿಕ ಭವಿಷ್ಯದ್ವಸ್ತುಗಳಲ್ಲಿ ವ್ಯುತ್ಪತ್ತಿಯನ್ನು ತಿಳಿಯಬೇಕೆಂಬ ಕುತೂಹಲ ಹುಟ್ಟಿದರೆ ಆಮೇಲೆ ವ್ಯವಹಾರವನ್ನು ನೋಡಿ ಕಾರ್ಯಪರವಾದ ವಾಕ್ಯದಲ್ಲಿಯೂ ವ್ಯುತ್ಪತ್ತಿಯು ಆಗುವುದು. ಸಿದ್ಧಾರ್ಥಪರವಾದ ವಾಕ್ಯದಿಂದಲೂ ಆಗತಕ್ಕ ವ್ಯುತ್ಪತ್ತಿಗಳೆಲ್ಲವೂ ಪ್ರಥಮತಃ ಕಾರ್ಯದಲ್ಲಿಯೇ ವ್ಯುತ್ಪತ್ತಿಯಾಗಿ ಆಮೇಲೆ ಸಿದ್ಧಾರ್ಥದಲ್ಲಿ ವ್ಯುತ್ಪತ್ತಿಬರುವುದರಿಂದ ಅದೂ ಕಾರ್ಯವ್ಯುತ್ಪತ್ತಿಯೇ ಆಗುವುದು, ಎನ್ನುವುದೂ ತಿರಸ್ಕೃತವಾಯಿತು.

ಯಾರು ಬಾಲ್ಯದಲ್ಲಿಯೇ ಕಾರಣಾಂತರದಿಂದ ತಂದೆ, ತಾಯಿಗಳಿಂದ ವಿಯೋಗವನ್ನು ಹೊಂದಿರುವನೋ, ಅಂತಹವನು ಇತರ ಬಾಲಕರ ತಂದೆ, ತಾಯಿಗಳನ್ನು ನೋಡಿ ತನಗೂ ತಂದೆ, ತಾಯಿಗಳು ಇರಬಹುದೆಂದು ಅನುಮಾನ ಮಾಡಿ, 'ನನ್ನ ತಾಯಿಯು ಯಾರು, ನನಗೆ ಯಾರು ತಂದೆಯು, ಎಂತಹರು, ಎಲ್ಲಿರುವರು' ಎಂದು ತಿಳಿಯಲಿಕ್ಕೆ ಉತ್ಸಾಹ ಪಡುವನು. ಆಗ ಅವನ ಹತ್ತಿರ ಒಬ್ಬನು ಹೇಳುತ್ತಾನೆ. 'ಪಾಟಲಿಪುತ್ರವೆಂಬುವ ಪಟ್ಟಣದಲ್ಲಿ ಭದ್ರಸೇನನೆಂಬುವ ರಾಜನು ಇರುತ್ತಾನೆ. ಅವನು ನಿನ್ನ ತಂದೆಯು, ಭದ್ರಸೇನನ ಪತ್ನಿಯಾದ ಲೀಲಾವತಿಯು ನಿನ್ನ ತಾಯಿಯು, ಎಂದು'. ಆಗ ಕಾರ್ಯವನ್ನುಪದೇಶಿಸದೇನೇ ಸಿದ್ಧವಾದ ಅರ್ಥವನ್ನೇ ತಿಳಿಸಕೊಡೋಣದರಿಂದ ಕೇಳತಕ್ಕವನಿಗೆ ಆಕಾಂಕ್ಷಾನಿವೃತ್ತಿಯಾಗುವುದರಿಂದ ಆ ವಾಕ್ಯವು ಪರ್ಯವಸಾನ ಹೊಂದುವುದು. ಆಮೇಲೆ ಆತನು ತಂದೆ ತಾಯಿಗಳನ್ನು ಹೇಗೆ ನೋಡುವೆನು, ಎಂದು ವಿಚಾರ ಮಾಡುತ್ತಾನೆ. ಆಗ ತಂದೆ ತಾಯಿಗಳನ್ನು ನೋಡಲಿಚ್ಛಿಸುವ ನೀನು ಈ ದಾರಿಯಿಂದ ಪಾಟಲೀಪುತ್ರ ಪಟ್ಟಣಕ್ಕೆ ಹೋಗು, ಎಂದು ಕಾರ್ಯವನ್ನು ತಿಳಿಸುತ್ತಾನೆ. ಹಾಗೆಯೇ ಯಾರು ತನ್ನ ಮುಖವನ್ನು ನೋಡದೆ ಬೇರೆ ಸುರೂಪಿಗಳನ್ನೂ, ಕುರೂಪಿಗಳನ್ನೂ ನೋಡಿ 'ತಾನು ಸುರೂಪನೋ, ವಿರೂಪನೋ' ಎಂದು ತನ್ನಲ್ಲಿಯೇ ಸಂಶಯಪಡುವನೋ, ಅಂತಹವನನ್ನು ಕುರಿತು ನೀನು ಸುರೂಪಿಯಾಗಿರುವಿ, ಎಂದು ಹೇಳುತ್ತಾನೆ.

ಆ ವಾಕ್ಯವು ಸಿದ್ಧಾರ್ಥವನ್ನು ಮಾತ್ರ ತಿಳಿಸಿಕೊಡೋಣದರಿಂದ ಪರ್ಯವಸಾನವಾಗುವುದು. ಆಮೇಲೆ ಆಕಾಂಕ್ಷಾ ಬರುವುದಿಲ್ಲ. ಆದುದರಿಂದ ವಾಕ್ಯವು ಪರ್ಯವಸಾನವಾಗಲಿಕ್ಕೆ ಇಷ್ಟಸಾಧನವನ್ನು ತಿಳಿಸಿಕೊಡುವುದೇ ಕಾರಣವು. ಕಾರ್ಯವನ್ನು ತಿಳಿಸಿಕೊಡುವುದೇ ವಾಕ್ಯಪರ್ಯವಸಾನವಾಗಲಿಕ್ಕೆ ಕಾರಣವು ಎಂಬುವ ನಿಯಮವಿಲ್ಲ. ಕಾರ್ಯವನ್ನು ತಿಳಿಸಿಕೊಡುವುದರಲ್ಲಿ ಪರ್ಯವಸಾನವಾಗುವ ವಾಕ್ಯಕ್ಕೂ ಇಷ್ಟಸಾಧನವನ್ನು ತಿಳಿಸಿಕೊಡುವುದೇ ನಿಮಿತ್ತವು.

ಸಿದ್ಧಾರ್ಥವನ್ನು ಮಾತ್ರ ತಿಳಿಸಿಕೊಡೋಣದರಿಂದ ವಾಕ್ಯವು ಪರ್ಯವಸಾನವಾಗುತ್ತದೆ ಎಂದು ಉಪಪಾದಿಸಿದುದರಿಂದ ವೇದವಾಕ್ಯಗಳಿಗೆ ಈ ಯೋಜನೆಯನ್ನು ಸೂಚಿಸುತ್ತಾರೆ. ಸಾತ್ವಿಕ ಸ್ವಭಾವವುಳ್ಳವನು ಲೋಕಪ್ರವಾದದಿಂದಾಗಲೀ ಕಾರ್ಯತ್ವ ಮೊದಲಾದ ಹೇತುಗಳ ಅನುಸಂಧಾನದಿಂದಾಗಲೀ ಸಾಮಾನ್ಯಾಕಾರವಾಗಿ ತನ್ನ ಶರೀರಾದಿಗಳಿಗೆ ಸೃಷ್ಟಿಕರ್ತನಾದವನನ್ನು ತಿಳಿಯುತ್ತಾ ಸ್ನೇಹ ಮಾಹಾತ್ಮ್ಯಜ್ಞಾನಗಳಿಂದ ಆ ಸೃಷ್ಟಿಕರ್ತನನ್ನು ಇನ್ನೂ ವಿಶೇಷಾಕಾರವಾಗಿ

ತಿಳಿಯಬೇಕೆಂದು ಆತುರಪಟ್ಟವನಾಗಿ ಆತನ ಮಹಾತ್ಮ್ಯಜ್ಞಾನದಿಂದುಟಾದ ಸಂಸ್ಕಾರದಿಂದ ಬೇರೆ ಯಾವುದನ್ನೂ ಗಣನೆ ಮಾಡದೇನೇ ಯಾವನು ಇರುತ್ತಾನೋ, ಆತನನ್ನು ಕುರಿತು ಆಪ್ತನಾದ ಬಂಧುವಿನಂತೆ ವೇದವು ('ವಿಜ್ಞಾನಮಾನಂದಂ ಬ್ರಹ್ಮ, ಸತ್ಯಜ್ಞಾನಮನಂತಂ ಬ್ರಹ್ಮ, ನಿರನಿಷ್ಟೋ ನಿರವದ್ಯಃ, ಸತ್ಯಕಾಮಃ, ಸತ್ಯಸಂಕಲ್ಪಃ' ಇವೇ ಮೊದಲಾದುವು) ಆ ಭಗವಂತನ ಸ್ವರೂಪವನ್ನು ಸರ್ವಾಪೇಕ್ಷಯಾ ಪ್ರಧಾನವನ್ನಾಗಿಯೇ ಬೋಧಿಸುತ್ತಿದೆ. ಆಮೇಲೆ ವಾಕ್ಯಾರ್ಥಜ್ಞಾನದಿಂದ ಪರಮಾನಂದವನ್ನು ಹೊಂದಿದವನಾಗಿ ಭಗವಂತನ ಸಾಕ್ಷಾತ್ಕಾರವನ್ನು ಇಚ್ಛಿಸುತ್ತಾನೆ.

ಆತನಿಗೆ 'ಶ್ರೋತವ್ಯಃ ಮಂತವ್ಯಃ ನಿದಿಧ್ಯಾಸಿತವ್ಯಃ ಸೋಽನ್ವೇಷ್ಟವ್ಯಃ' ಇತ್ಯಾದಿ ಶ್ರುತಿಗಳಲ್ಲಿ ಉಪಾಸನೆಯು ವಿಹಿತವಾಗಿದೆ. ಆ ಉಪಾಸನೆಯು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ ಎಂಬುವ ಷಡ್ವೈರಿಗಳು ಇಲ್ಲದಿದ್ದವರಿಗೇನೇ ಸಂಭವಿಸುತ್ತದೆ. ಅದಕ್ಕಾಗಿ 'ಅಹರಹಃ ಸಂಧ್ಯಾಮುಪಾಸೀತ' 'ಅರ್ಚತ ಪ್ರಾರ್ಚತ' 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಇವು ಮೊದಲಾದ ಕರ್ಮಪ್ರತಿಪಾದಕಗಳಾದ ವಿಧಿಗಳು ಪ್ರವೃತ್ತಗಳಾಗುತ್ತವೆ. ಹೀಗೆ ಎಲ್ಲಾ ವೇದಗಳು ಪರಮೇಶ್ವರನ ಸ್ವರೂಪವನ್ನು ತಿಳಿಸಿಕೊಡುವುದರಲ್ಲಿಯೇ ಪರ್ಯವಸಾನವಾಗುವುವು. ಏಕಾಂತಭಕ್ತರನ್ನು ವಿವಕ್ಷಿಸಿಕೊಂಡು, ಈ ಯೋಜನೆಯು

('ಇಯಂ ಮಾತಾಽಯಂ ಪಿತಾ' ಎಂಬುವ ಅಂಶದಿಂದ ಸೂಚಿತವಾದುದು) ಉಕ್ತವಾಯಿತು. (ಮಧ್ಯಮ ಭಕ್ತರನ್ನು ವಿವಕ್ಷಿಸಿಕೊಂಡು 'ಸುರೂಪೋಽಸಿ' ಎಂಬುವುದರಿಂದ ಸೂಚಿತವಾದ ಯೋಜನೆಯು ಈ ರೀತಿಯಾಗಿದೆ.) ಅಥವಾ ಯಾರು ಶರೀರ, ಇಂದ್ರಿಯ, ಅಂತಃಕರಣಾದಿಗಳ ಸನ್ನಿಧಾನದಿಂದ ತಾನು ಅನೇಕ ದುಃಖಗಳನ್ನು ಅನುಭವಿಸುತ್ತಾ ದುಃಖ ತಿರಸ್ಕವಾಗದಿರುವ ಸುಖವನ್ನು ಅನುಭವಿಸದೆ ಇರುವವನಾಗಿ 'ತನಗೆ ಈ ದುಃಖಾದಿಗಳು ಶರೀರಾದಿಗಳ ಸಂಪರ್ಕ ನಿಮಿತ್ತಕಗಳೋ ಅಥವಾ ಸ್ವಾಭಾವಿಕಗಳೋ ಎಂದು ಸಂಶಯಪಡುವರೋ, ಅವರನ್ನು ಕುರಿತು 'ತತ್ತ್ವಮಸಿ' ಇದು ಮೊದಲಾದ ವೇದಗಳು ಪ್ರವೃತ್ತಗಳಾಗಿರುತ್ತವೆ.

ಯದ್ಯಪಿ ನೀನು ಪರಮಾತ್ಮನಂತೆ ದುಃಖಲೇಶ ರಹಿತವಾದ ಪರಮಾನಂದ-ಸ್ವಭಾವವುಳ್ಳವನೇ ಆಗಿರುವಿ. ಆದರೆ ಈಗ ಈಶ್ವರಾಧೀನವಾದ ಅವಿದ್ಯಾ ಕಾಮಕರ್ಮಾದಿ-ಗಳಿಂದ ಪ್ರಾಪ್ತವಾದ, ಶರೀರಾದಿನಿಮಿತ್ತಕವಾದ ಅನ್ಯಥಾರೂಪದಿಂದೊಡಗೂಡಿರುತ್ತಿ.

ಆಮೇಲೆ ಈತನು 'ಯಾವ ಉಪಾಯದಿಂದ ನಾನು ಈ ಅಸ್ವಾಭಾವಿಕವಾದ ರೂಪವನ್ನು ಬಿಟ್ಟು ನಿರ್ದುಃಖ ಪರಮಾನಂದ ಸ್ವರೂಪದಿಂದ ಯುಕ್ತನಾಗುವೆನು, ಎಂದು ವಿಚಾರ ಮಾಡುವನು. ಆತನಿಗೆ ಪ್ರಸನ್ನನಾದ ಪರಮೇಶ್ವರನೇ ಅಂತಹ ಸ್ವರೂಪಾನಂದಾವಿರ್ಭಾವವಾಗಲಿಕ್ಕೆ ಉಪಾಯಭೂತನು.

ಆದುದರಿಂದ ಭಗವಂತನ ಸ್ವರೂಪವು ನಿರೂಪಿಸಲ್ಪಡುತ್ತದೆ. ಆಮೇಲೆ ಇಂತಹ ಭಗವಂತನು ಹೇಗೆ ಪ್ರಸನ್ನನಾಗುತ್ತಾನೆ ಎಂದಪೇಕ್ಷಿಸಿದರೆ - ಆತನ ಪ್ರಸಾದಕ್ಕಾಗಿ ಆತನ ಸಾಕ್ಷಾತ್ಕಾರವು, ಅದಕ್ಕಾಗಿ ಶ್ರವಣ, ಮನನ ನಿದಿಧ್ಯಾಸನಾದಿಗಳು, ಅವುಗಳ ಅಂಗವಾಗಿ ಕರ್ಮಗಳೂ ವಿಹಿತಗಳಾಗುತ್ತವೆ. ಈ ಪ್ರಕಾರ ಎಲ್ಲಾ ವೇದಗಳೂ ಪರಮೇಶ್ವರನ ಸ್ವರೂಪವನ್ನು ತಿಳಿಸಿಕೊಡುವುದರಲ್ಲಿಯೇ ಪರ್ಯವಸಾನವಾಗುವುವು. ಪರಮೇಶ್ವರನ ಸ್ವರೂಪವನ್ನು ತಿಳಿಸಿಕೊಡುವುದರಲ್ಲಿಯೇ ಸರ್ವವೇದಗಳೂ ಪರ್ಯವಸಾನಗಳಾಗುತ್ತವೆ ಎಂಬೀ ವಿಷಯವು 'ಅನ್ಯಾರ್ಥಂ ತು ಜೈಮಿನಿಃ' ಇತ್ಯಾದಿಗಳಿಂದ ಸೂತ್ರಕಾರರೇ ನಿರೂಪಿಸಿರುವರು.

### ಕಾರ್ಯತಾವಾದವನ್ನು ಭಾಷ್ಯಕಾರರೇ ನಿರಾಕರಿಸಿದ್ದಾರೆ

**तत्वप्रदीपः – अतः सुष्ठूक्तं 'इष्टानिष्टप्राप्तिपरिहारेच्छूनां तद्योगमविजानतां तज्ज्ञापनार्थम्' इति ॥ उक्तेऽर्थे प्रमाणमाह – तच्चोक्तं स्कान्दे ''नारायणात् विनिष्पन्नम्'' इत्यादि ॥**

ಈ ಅಭಿಪ್ರಾಯದಿಂದ ಶ್ರೀಮದಾಚಾರ್ಯರು ಭಾಷ್ಯದಲ್ಲಿ 'ಇಷ್ಟಾನಿಷ್ಟಪ್ರಾಪ್ತಿ ಪರಿಹಾರೇಚ್ಛೂನಾಂ ತದ್ಯೋಗಮವಿಜಾನತಾಂ ತಜ್ಜ್ಞಾಪನಾರ್ಥಮ್' ಇತ್ಯಾದಿಯಾಗಿ ಹೇಳಿದ್ದಾರೆ. 'ತದ್ಯೋಗಮ್' ಎಂದರೆ ಇಷ್ಟಪ್ರಾಪ್ತಿಗೆ ಕಾರಣನಾದ ನಾರಾಯಣನನ್ನು ಅವಿಜಾನತಾಮ್ = ತಿಳಿಯದೇ ಇರುವ ಬುಭುತ್ಸುಗಳಿಗೆ ತಜ್ಜ್ಞಾಪನಾರ್ಥಮ್ = 'ಇಷ್ಟಸಾಧನತ್ವಕ್ಕಿಂತ ಅತಿರಿಕ್ತವಾದ ಕಾರ್ಯತ್ವವು ಇಲ್ಲದ ಕಾರಣ ವಾಕ್ಯಗಳಿಗೆ ಸಿದ್ಧಾರ್ಥದಲ್ಲಿಯೇ ತಾತ್ಪರ್ಯವಿರುವುರಿಂದ ನಾರಾಯಣನೇ ಮುಖ್ಯನಾಗಿ ಇಷ್ಟಸಾಧನನಾಗಿದ್ದಾನೆ. ಅವನೇ ಸಕಲ ವೇದಪ್ರತಿಪಾದ್ಯನಾಗಿದ್ದಾನೆಂಬುದನ್ನು ತಿಳಿಸಲೋಸುಗ' ಎಂಬುದಾಗಿ ಭಾಷ್ಯದ ಮಾತಿಗೆ ಅರ್ಥವನ್ನು ತಿಳಿಯಬೇಕು. ಭಾಷ್ಯದಲ್ಲಿ ಹೇಳಿದ ತಮ್ಮ

ಮಾತುಗಳಿಗೆ ಆಧಾರವನ್ನು 'ತಚ್ಚೋಕ್ತಂ ಸ್ಕಾಂದೇ' ಎಂಬಲ್ಲಿಂದ ಪ್ರಾರಂಭಿಸಿ 'ನಾರಾಯಣಾದ್ವಿನಿಷ್ಪನ್ನಮ್' ಎಂಬಲ್ಲಿಯ ತನಕ ನಿರೂಪಿಸಿದ್ದಾರೆ.

### ಭಾಷ್ಯಕಾರರು ತಾಮಸಪುರಾಣವನ್ನೇಕೆ ಆಧರಿಸಿದರು

**तत्वप्रदीपः – नन्वपौरुषेयो वेदः प्रमाणमस्तु, किमिति पुराणादिष्वादरः क्रियते ।**

ಪ್ರಶ್ನೆ - ಅಪೌರುಷೇಯವಾದ ವೇದವನ್ನು ಪ್ರಮಾಣವೆಂದು ಒಪ್ಪೋಣ ಆದರೆ ಪುರಾಣಗಳನ್ನು ಪ್ರಮಾಣವೆಂದು ಒಪ್ಪಬೇಕಾಗಿಲ್ಲ ? ಶ್ರೀಮದಾಚಾರ್ಯರು ಸ್ಕಾಂದಪುರಾಣದ ಮಾತನ್ನು ಪ್ರಮಾಣವನ್ನಾಗಿ ನೀಡುತ್ತಿದ್ದಾರೆ. ಅಪೌರುಷೇಯವಾದ ವೇದವನ್ನು ಪ್ರಮಾಣವನ್ನಾಗಿ ಹೇಳಬಹುದಿತ್ತು. ಸ್ಕಾಂದಪುರಾಣವನ್ನು ಆಧಾರವನ್ನಾಗಿ ಹೇಳುವ ಅವಶ್ಯಕತೆ ಇರಲಿಲ್ಲ. ಅದರಲ್ಲಿಯೂ ತಾಮಸಪುರಾಣವನ್ನು ಏಕೆ ಆಧಾರವನ್ನಾಗಿ ನೀಡಿದ್ದಾರೆ?

### ವೇದದಂತೆ ಎಲ್ಲಾ ಪುರಾಣಗಳು ಪ್ರಮಾಣ

**तत्वप्रदीपः – उच्यते । वेदानुसारित्वात् वेदपरिगृहीतत्वाच । ''ऋग्वेदं भगवोऽध्येमि' इत्यारभ्य, 'इतिहासपुराणं पञ्चमं वेदानां वेदम्'' इति हि च्छन्दोगश्रुतिः ।**

ವೇದಗಳು ಹೇಗೆ ಪ್ರಮಾಣವೋ ಅದರಂತೆ ವೇದಾನುಸಾರಿಯಾದ ಮತ್ತು ವೇದ ಪರಿಗೃಹಿತವಾದ್ದರಿಂದ ಪುರಾಣಗಳೂ ಕೂಡ ಪ್ರಮಾಣವೇ ಆಗಿವೆ. ಒಂದುವೇಳೆ ಪುರಾಣಗಳು ಅಪ್ರಮಾಣವಾದಲ್ಲಿ ಪುರಾಣದ ಆಧಾರವನ್ನು ಬಯಸುವ ವೇದಗಳೂ ಕೂಡ ಅಪ್ರಮಾಣವಾಗಬೇಕಾದೀತು. 'ಋಗ್ವೇದಂ ಭಗವೋಽಧ್ಯೇಮಿ' 'ಋಗ್ವೇದವನ್ನು ಅಧ್ಯಯನ ಮಾಡುತ್ತೇನೆ' ಎಂಬುದಾಗಿ ಸಂಕಲ್ಪಮಾಡಿ 'ಇತಿಹಾಸ ಪುರಾಣಂ ಪಂಚಮೋ ವೇದಾನಾಂ ವೇದಂ' ಐದನೆಯ ವೇದವೆನಿಸಿದ ಇತಿಹಾಸ, ಪುರಾಣ ಮೊದಲಾದವುಗಳನ್ನು ಕೂಡ ಅಧ್ಯಯನ ಮಾಡುತ್ತೇನೆಂಬ ಸಂಕಲ್ಪವನ್ನು ಛಾಂದೋಗ್ಯಶ್ರುತಿಯು ಹೇಳುತ್ತಿದೆ.

ಇತಿಹಾಸವೂ ಪ್ರಮಾಣ

**तत्वप्रदीपः – 'इतिहासपुराणः पञ्चमो वेदानां वेदः' इति च । 'इतिहासः पुराणं विद्या उपनिषदः श्लोकाः' इति बृहदारण्यके । 'सर्वेषु वेदेषु तथेतिहासे' इति पैङ्गिश्रुतिः ।**

'ಇತಿಹಾಸಪುರಾಣಃ ಪಂಚಮೋ ವೇದಾನಾಂ ವೇದಃ' ಎಂಬುದಾಗಿ ಮತ್ತು 'ಇತಿಹಾಸ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ' ಎಂಬುದಾಗಿಯೂ ಬೃಹದಾರಣ್ಯಕವು ವೇದದ ಜೊತೆ ಪುರಾಣ ಇತಿಹಾಸಗಳಿಗೂ ಕೂಡ ಪ್ರಾಮಾಣ್ಯವನ್ನು ಅಂಗೀಕರಿಸಿದೆ. 'ಸರ್ವೇಷು ವೇದೇಷು ತಥೇತಿಹಾಸೇ' ಎಂಬ ಪೈಂಗಿಶ್ರುತಿಯು ಸಕಲವೇದಗಳ ಜೊತೆ ಇತಿಹಾಸವನ್ನು ಪ್ರಮಾಣವನ್ನಾಗಿ ಅಂಗೀಕರಿದೆ.

ಸಕಲ ಸಚ್ಛಾಸ್ತ್ರಗಳೂ ಪ್ರಮಾಣ

**तत्वप्रदीपः –**

**'उपास्य एकः परतः परो यो वेदैश्च सर्वैः सह चेतिहासैः ।**
**सपञ्चरात्रैः सपुराणैश्च देवः सर्वैर्गुणैस्तत्र तत्र प्रतीतैः ।।'**
**इति भाल्लवेयश्रुतिः ।**

ಉತ್ತಮರಿಗೂ ಉತ್ತಮನಾದ ಕ್ರೀಡಾದಿಗುಣವಿಶಿಷ್ಟನಾದ ಪರಮಾತ್ಮನೊಬ್ಬನೇ ಸಕಲವೇದ-ಗಳಿಂದ, ಇತಿಹಾಸದಿಂದ, ಮೂಲರಾಮಾಯಣದಿಂದ, ಪಂಚರಾತ್ರಗಳಿಂದ, ಪುರಾಣಗಳಿಂದ ಸಕಲಗುಣಪರಿಪೂರ್ಣನಾಗಿ ಉಪಾಸ್ಯನಾಗಿದ್ದಾನೆಂದು ಎಲ್ಲಡೆಯೂ ಹೇಳಲಾಗಿದೆ. ಹೀಗೆ ಭಾಲ್ಲವೇಯಶ್ರುತಿಯು ವೇದಗಳ ಜೊತೆ ಇತಿಹಾಸಾದಿಗಳಿಗೂ ಪ್ರಾಮಾಣ್ಯಾದಿಗಳನ್ನು ಅಂಗೀಕರಿಸಿದೆ.

ಪಂಚರಾತ್ರದ ಪ್ರತಿಯೊಂದು ಭಾಗಗಳೂ ಪ್ರಮಾಣ

**तत्वप्रदीपः –**

**''वेदैश्च पञ्चरात्रैश्च ध्येयो नारायणः परः ।**
**पञ्चरात्रं च वेदाश्च विद्यैकैव विधीयते'' इति नारायणश्रुतिः ।**

'ವೇದೈಶ್ಚ ಪಂಚರಾತ್ರೈಶ್ಚ ಧ್ಯೇಯೋ ನಾರಾಯಣಃ ಪರಃ।
ಪಂಚರಾತ್ರಂ ಚ ವೇದಾಶ್ಚ ವಿದ್ಯೈಕೈವ ವಿಧೀಯತೇ''

ವೇದಗಳಿಂದ ಹಾಗೂ ಪಂಚರಾತ್ರಾದಿಗಳಲ್ಲಿರುವ ಎಲ್ಲಾ ಭಾಗಗಳಿಂದಲೂ ಶ್ರೇಷ್ಠನಾದ ನಾರಾಯಣನೊಬ್ಬನೇ ಧ್ಯೇಯನಾಗಿರುತ್ತಾನೆ. ಪಂಚರಾತ್ರ ಹಾಗೂ ವೇದಗಳು ಒಂದೇ ವಿದ್ಯೆಗಳಾಗಿವೆಂದು ಹೇಳಲ್ಪಟ್ಟಿದೆ ಎಂಬುದಾಗಿ ನಾರಾಯಣಶ್ರುತಿಯು ಪಂಚರಾತ್ರದ ಪ್ರತಿಯೊಂದು ಭಾಗಗಳು ಪ್ರಮಾಣವಾಗಿವೆ ಎಂದು ಅಂಗೀಕರಿಸಿದೆ.

ಬ್ರಹ್ಮ[illegible]ದಿಂದ ಸಕಲಸಚ್ಛಾಸ್ತ್ರಗಳಿಗೆ ಪ್ರಾಮಾಣ್ಯ ಸಮರ್ಥನೆ

तत्वप्रदीपः –

**''सर्वान् वेदान् सेतिहासान् सपुराणान् सयुक्तिकान् ।
सपश्चरात्रान् विज्ञाय विष्णुर्ज्ञेयो न चान्यथा ।।'' इति ब्रह्मतर्के ।
सूत्रकारश्च भगवांस्तत्रतत्रोवाच ''स्मृतेश्च', ''अपि स्मर्यते'' इत्यादि।।**

'ಸರ್ವಾನ್ ವೇದಾನ್ ಸೇತಿಹಾಸಾನ್ ಸಪುರಾಣಾನ್ ಸಯುಕ್ತಿಕಾನ್ ।
ಸಪಂಚರಾತ್ರಾನ್ ವಿಜ್ಞಾಯ ವಿಷ್ಣುರ್ಜ್ಞೇಯೋ ನ ಚಾನ್ಯಥಾ'

ಸಕಲ ವೇದಗಳಿಂದ, ಇತಿಹಾಸಗಳಿಂದ, ಪುರಾಣಗಳಿಂದ, ಸಮೀಚಿನವಾದ ಯುಕ್ತಿಗಳಿಂದ, ಪಂಚರಾತ್ರಗಳಿಂದ, ವಿಷ್ಣು ಒಬ್ಬನನ್ನೇ ತಿಳಿಯಬೇಕು. ಮತ್ತೊಬ್ಬರನ್ನು ಪ್ರಮುಖಪ್ರತಿಪಾದ್ಯರನ್ನಾಗಿ ತಿಳಿಯಬಾರದು. ಹೀಗೆ ಬ್ರಹ್ಮತರ್ಕವು ಪುರಾಣ ಪಂಚರಾತ್ರಾದಿಗಳಿಗೆ ಪ್ರಾಮಾಣ್ಯವನ್ನು ಅಂಗೀಕರಿಸಿದೆ.

ಭಗವಾನ್ ಸೂತ್ರಕಾರರೂ ಸಹ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಅನೇಕ ಕಡೆ 'ಸ್ಮೃತೇಶ್ಚ' 'ಅಪಿ ಸ್ಮರ್ಯತೇ' ಇತ್ಯಾದಿಯಾಗಿ ಸ್ಮೃತಿವಚನಗಳಿಗೆ ಪ್ರಾಮಾಣ್ಯವನ್ನು ಅಂಗೀಕರಿಸಿದ್ದಾರೆ.

ನಮಗೆ ಶ್ರೀಮದಾಚಾರ್ಯರೇ ಸ್ವತಃ ಪ್ರಮಾಣ, ಪುರಾಣಗಳ ಆಧಾರ ಬೇಡ

**तत्वप्रदीपः – यद्यप्याचार्यः स्वोक्तार्थे स्वयमेव प्रमाणं, सर्वज्ञत्वादविप्रलम्भकत्वाच । तथाऽपि 'स्कान्दे चोक्तम्' इति प्रौढवादं करोति। सर्वज्ञत्वं तावत् श्रुतिसिद्धं, ''बळित्था तद्वपुषे धायि दर्शतम्'' इति।**

ಶ್ರೀಮದಾಚಾರ್ಯರು ತಾವು ಹೇಳಿದ ವಿಷಯದಲ್ಲಿ ತಾವೇ ಸ್ವತಃ ಪ್ರಮಾಣವಾಗಿದ್ದಾರೆ. ಅವರು ಸರ್ವಜ್ಞಶಿಖಾಮಣಿಗಳು ವಂಚನೆ ಮಾಡುವ ಸ್ವಭಾವ ಅವರಲ್ಲಿ ಲವಲೇಶವೂ ಇರುವುದಿಲ್ಲ. ಹೀಗಿರುವಾಗ ಪುರಾಣದ ಆಧಾರವನ್ನೇಕೆ ಶ್ರೀಮದಾಚಾರ್ಯರು ನೀಡುತ್ತಾರೆ?

ಹೌದು, ಆದರೂ ಸಹ 'ಸ್ಕಾಂದೇ ಚ ಉಕ್ತಮ್' ಇತ್ಯಾದಿಯಾಗಿ ಅಲ್ಲಲ್ಲಿ ಪ್ರೌಢವಾದವನ್ನು ಮಾಡಿದ್ದಾರೆ. ತಮ್ಮನ್ನು ವಾಯುದೇವರ ಅವತಾರವೆಂದು ಒಪ್ಪದವರಿಗೂ ಕೂಡ ಯಥಾರ್ಥ-ವಿಷಯವನ್ನು ಸ್ಪಷ್ಟ ಪಡಿಸಲು ಶ್ರುತಿಸ್ಮೃತಿಗಳನ್ನು ಆಧಾರವಾಗಿ ಇಟ್ಟುಕೊಂಡೆ ವ್ಯಾಖ್ಯಾನ ಮಾಡಿದ್ದಾರೆ. 'ತುಷ್ಯತು ದುರ್ಜನಃ' ನ್ಯಾಯದಿಂದ ಪ್ರತಿಪಾದಿಸುವ ವಿಷಯವು ಪ್ರೌಢವಾದ ಎಂದು ಕರೆಸಿಕೊಳ್ಳುತ್ತದೆ. ಶ್ರೀಮದಾಚಾರ್ಯರು ಸರ್ವಜ್ಞರಾಗಿದ್ದಾರೆ ಎಂಬುದು ಶ್ರುತಿಸಿದ್ಧವೇ ಆಗಿದೆ. 'ಬಳಿತ್ಥಾ ತದ್ವಪುಷೇ ಧಾಯಿ ದರ್ಶತಮ್' ಎಂಬುದಾಗಿ ಶ್ರುತಿಯು ಜ್ಞಾನ ಶಕ್ತಿ ಮೊದಲಾದವು ಶ್ರೀಮದಾಚಾರ್ಯರಲ್ಲಿ ಪರಿಪೂರ್ಣವಾಗಿವೆ ಎಂದು ಪ್ರತಿಪಾದನೆ ಮಾಡುತ್ತಿದೆ.

### ಪ್ರಾಣಾಗ್ನಿಸೂಕ್ತವು ಹನುಮ ಪರ

**तत्वप्रदीपः – इह हि प्रस्तुतस्य बलज्ञानस्वरूपस्य वायोः प्रथमावतारो रामस्याऽज्ञाप्रणेता साधको 'मति'शब्दोक्तः ।**

ಈ ಪ್ರಾಣಾಗ್ನಿಸೂಕ್ತದಲ್ಲಿ ಬಲ ಹಾಗೂ ಜ್ಞಾನಸ್ವರೂಪರಾದ ವಾಯುದೇವರ ಮೊದಲನೆಯ ಹನುಮದವತಾರವನ್ನು ಮತಿಶಬ್ದದಿಂದ ಹೇಳಲಾಗಿದೆ. 'ಮತಿಃ ಋತಸ್ಯ ಧೇನಾ ಅನಯಂತ' ಮತಿಃ = ಹನುಮಂತನು, ಋತಸ್ಯ = ಶ್ರೀರಾಮನ, ಧೇನಾಃ = ಸಂದೇಶಗಳನ್ನು, ಅನಯಂತ = ಸೀತೆಗೆ ಕೊಂಡೊಯ್ದನು ಎಂದು.

### ಪ್ರಾಣಾಗ್ನಿಸೂಕ್ತವು ಭೀಮ ಪರ

**तत्वप्रदीपः – द्वितीयं वपुः पृतनाक्षयकृत् 'पृक्ष'शब्दोक्तम्, ऋगादि-सप्तविद्यानिवासात्मकं च । अस्य ऋषभस्य तृतीयं वपुर्ज्ञानदोहनार्थं योषासु जातम् ।**

ಎರಡನೆಯ ಅವತಾರವನ್ನು 'ಪೃಕ್ಷ' ಶಬ್ದದಿಂದ ಶ್ರುತಿಯು ಹೇಳುತ್ತಿದೆ. ದುಷ್ಟರನ್ನು ನಾಶಮಾಡಿರುವ ಕಾರಣ ಭೀಮಸೇನ ದೇವರು 'ಪೃಕ್ಷ' ಎಂದು ಕರೆಸಿಕೊಳ್ಳುತ್ತಾರೆ. 'ಆಶಯೇ' ಸಪ್ತಶಿವಾಸು ಮಾತೃಷು' ಎಂಬುದಕ್ಕೆ ಋಗ್ವೇದವೇ ಮೊದಲಾದ ಏಳು ವಿದ್ಯೆಗಳಲ್ಲಿ ನಿರಂತರ ವಾಸ ಮಾಡುವವರು ಎಂದರ್ಥ. ಇವರೇ ಮುಂದೆ ಮೂರನೆಯ ಮಧ್ವರೂಪದಿಂದ ಅವತಾರ ಮಾಡಿದರು. ಜ್ಞಾನಪ್ರಚಾರಕ್ಕಾಗಿ ಮಧ್ಯಗೇಹ ಭಟ್ಟರ ಪತ್ನಿಯಲ್ಲಿ ಅವತರಿಸಿದರು.

### ಪ್ರಾಣಾಗ್ನಿಸೂಕ್ತವು ಮಧ್ವ ಪರ

**तत्वप्रदीपः -- 'दर्श'शब्दः पूर्णवाची, ''तानी दश दशेति वै सर्वमेतावती हि सङ्ख्या'' इत्यादिश्रुतेः । 'दशप्रमतिम्' इति पूर्णप्रज्ञनामोक्त्या सर्वज्ञत्वमुक्तम् ।**

'ದರ್ಶ' ಶಬ್ದಕ್ಕೆ 'ಪೂರ್ಣ' ಎಂದರ್ಥ. ''ತಾನಿ ದಶ ದಶೇತಿ ವೈ ಸರ್ವಮೇತಾವತೀ ಹಿ ಸಂಖ್ಯಾ'' ಇತ್ಯಾದಿ ಶ್ರುತಿಯು 'ದರ್ಶ' ಶಬ್ದಕ್ಕೆ 'ಸರ್ವ' ಎಂಬರ್ಥವನ್ನು ಹೇಳಿದೆ. ಆದ್ದರಿಂದ 'ದಶಪ್ರಮತಿ' ಶಬ್ದವು 'ಪೂರ್ಣಪ್ರಜ್ಞ' ಎಂಬ ಹೆಸರನ್ನು ಹೇಳುವ ಮೂಲಕ ಸರ್ವಜ್ಞತ್ವವನ್ನು ಹೇಳಿದೆ.

### ಪ್ರಾಣಾಗ್ನಿಸೂಕ್ತ ವ್ಯಾಖ್ಯಾನ

**तत्वप्रदीपः – येन 'शवसा' सुखेन महितषड्गुणस्य विष्णोर्वरणीयान् गुणान् रुद्रादीश्वरा अन्ये च सूरयो 'निरक्रन्त' निरजानत । यत्र चायं 'प्रदिवः' प्रकृष्टज्ञानो मध्वनामा भूत्वा 'मातरिश्वा' गुहायां निहितं विष्णुम् 'आधवे' आ समन्तादीश्वरत्वे 'मथायति' प्रकाशयति, असत्यमनीश्वरं जगत् वदद्भिरसुरैर्गूहितं सन्तं प्रकाशयतीत्यर्थः ।**

**यत्र च परमेश्वरस्य स्वपितुरिच्छया नीयमानः प्रभ्रवीरुधः स्वदन्तेषु पर्यारोहयति चर्वितवच्छकलीकरोतीत्यर्थः ।।**

'ನಿರ್ಯತ್' ಎಂಬಲ್ಲಿರುವ 'ಯತ್' ಪದವು 'ಯೇನ' ಎಂಬ ತೃತೀಯಾರ್ಥದಲ್ಲಿದೆ. ಶವಸಾ = ಸುಖದಿಂದ, ಮಹಿಷಸ್ಯ = ಮಹಿತವಾದ ಷಡ್ಗುಣಗಳುಳ್ಳ ವಿಷ್ಣುವಿನ, ವರ್ಪಸಃ = ಶ್ರೇಷ್ಠವಾದ ಗುಣಗಳನ್ನು, ನಿಃ ಕ್ರಂತ = ರುದ್ರಾದಿಗಳು ಹಾಗೂ ಇತರ ಜ್ಞಾನಿಗಳು ಚೆನ್ನಾಗಿ ತಿಳಿದರು. 'ಯದೀಮನು' ಎಂಬಲ್ಲಿ ಸಪ್ತಮ್ಯರ್ಥದಲ್ಲಿ ಯತ್ ಪದವಿದೆ. ಪ್ರದಿವಃ = ಪ್ರಕೃಷ್ಟವಾದ ಜ್ಞಾನವುಳ್ಳ 'ಮಧ್ವ' ಎಂಬ ರೂಪದಿಂದ, ಮಾತರಿಶ್ವಾ = ಹೃದಯ ಗುಹೆಯಲ್ಲಿರುವ ವಿಷ್ಣುರೂಪವನ್ನು, ಆಧವೇ = ಎಲ್ಲದಕ್ಕೂ ಸ್ವಾಮಿಯಾಗಿದ್ದಾನೆಂದು, ಮಥಾಮತಿ = ಪ್ರಕಟಪಡಿಸಿದ್ದಾರೆ. 'ಜಗತ್ತು ಸುಳ್ಳು' 'ಯಾರು ಈಶ್ವರರಿಲ್ಲ' ಎಂದು ಅಸುರರಿಂದ ಮುಚ್ಚಿಟ್ಟ ತತ್ವವನ್ನು ಪ್ರಕಾಶ ಪಡಿಸಿದರು.

ಯತ್ = ಮೂರನೆಯ ಅವತಾರದಲ್ಲಿ, ಪಿತುಃ = ತಂದೆಯಾದ ಪರಮಾತ್ಮನಿಂದ ಪ್ರೇರಿತನಾಗಿರುವನು. ಪ್ರಶ್ನೆಗಳೆಂಬ ಬಳ್ಳಿಗಳನ್ನು ತನ್ನ ಹಲ್ಲುಗಳಲ್ಲಿ ಇಟ್ಟು ತಿಂದು ಬಿಡುವನು.

ವಿವರಣೆ -

(೧)ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ
ದೇವಸ್ಯ ಭರ್ಗಃ ಸಹಸೋ ಯತೋಽಜನಿ ।
ಯದೀಮುಪಹ್ವರತೇ ಸಾಧತೇ
ಮತಿರ್ಋತಸ್ಯ ಧೇನಾ ಅನಯಂತ ಸಸ್ರುತಃ ॥

ಯತಃ = ಯಾವ ನಾರಾಯಣನಿಂದ, ಅಜನಿ = (ವಾಯುದೇವರು), ಹುಟ್ಟಿದರೋ, ದೇವಸ್ಯ = ಆ ನಾರಾಯಣನ ಪ್ರೀತಿಗಾಗಿ ಅವನ ಆಜ್ಞೆಯಿಂದ, ಸಹಸಃ = ಬಲ ರೂಪರಾದ, ಕಲ್ಯಾದಿ ಶತ್ರುವೇಗ ಸಹನಶೀಲರಾದ, ವೇಗವುಳ್ಳ ಮುಖ್ಯಪ್ರಾಣದೇವರ, ಬಟ್ = ಬಲಾತ್ಮಕವಾದ, ದರ್ಶತಂ = ಜ್ಞಾನದಿಂದ ಪೂರ್ಣವಾದ, ಭರ್ಗಃ = ಜಗತ್ತನ್ನು ಭರಣಮಾಡುವ, ಪರಬ್ರಹ್ಮನನ್ನು ಹೊಂದಿಸುವ, ತತ್ = ಆ ಮೂಲರೂಪವು, ಇತ್ಥಾ = ಮೂಲರೂಪದಂತೆಯೇ, ವಪುಷೇ =

(೧) ಪ್ರಾಸಂಗಿಕವಾಗಿ 'ಬಳಿತ್ಥಾ' ಸೂಕ್ತದ ಅರ್ಥವನ್ನು ನೀಡಲಾಗಿದೆ. ಗುರುರಾಜ ಅಸೋಸಿಯೇಷನ್ ಸಂಸ್ಥೆಯವರು ೧೯೯೦ರಲ್ಲಿ ಮುದ್ರಣ ಮಾಡಿದ ತಾತ್ಪರ್ಯನಿರ್ಣಯ ಪುಸಕ್ತದಲ್ಲಿರುವ ಬಳಿತ್ಥಾಸೂಕ್ತದ ಪಾಠವನ್ನು ಇಲ್ಲಿ ಮುದ್ರಿಸಲಾಗಿದೆ. ಲೋಕದಲ್ಲಿ ಇದು 'ಬಳಿತ್ಥಾಸೂಕ್ತ' ಎಂದು ಪ್ರಸಿದ್ಧವಾಗಿದೆ. ಆದರೆ ಜ್ಞಾನಿಗಳು ಇದಕ್ಕೆ 'ಪ್ರಾಣಾಗ್ನಿಸೂಕ್ತ' ಎನ್ನುತ್ತಾರೆ.

ಅವತಾರಕ್ಕೋಸ್ಕರ, ಧಾಯಿ = ಧರಿಸಲ್ಪಟ್ಟಿತು (ಅವತಾರ ಮಾಡಿತು), ಯತ್ = ಯಾವ ಅವತಾರ ರೂಪವು, ಮತಿಃ = ಹನುಮಾನ್ ಎಂಬ ಶಬ್ದದಿಂದ ವಾಚ್ಯವಾಗಿದೆಯೋ, ಋತಸ್ಯ = ಜ್ಞಾನಸ್ವರೂಪನಾದ ರಾಮನ, ಉಪ = ಹತ್ತಿರದಲ್ಲಿ, ಹ್ವರತೇ = ಕ್ರೀಡಿಸುತ್ತದೋ, ಭಕ್ತಿಯಿಂದ ನಮ್ರವಾಗಿದೆಯೋ, ಈಂ = ಇದರಂತೆ, ಸಾಧತೇ = ದೂರವಿದ್ದೂ ರಾಮಸೇವೆಯನ್ನು ಮಾಡುತ್ತದೋ, ಯೇನ = ಯಾವ ಅವತಾರ ರೂಪದಿಂದ, ಋತಸ್ಯ = ಸತ್ಯವಚನವುಳ್ಳ ಶ್ರೀರಾಮನ, ಸಸ್ರುತಃ = ಅಮೃತಸ್ರವದಿಂದ ಕೂಡಿದ, ಧೇನಾಃ = ಸುರಕಾರ್ಯಪೋಷಕಗಳಾದ ಸಂದೇಶ ವಚನಗಳು, ಅನಯಂತ = ಸೀತಾದೇವಿಯ ಬಳಿಗೆ ಒಯ್ಯಲ್ಪಟ್ಟವೋ, ತತ್ = ಆ ಅವತಾರವು, ಪ್ರಥಮಂ = ಮೊದಲನೆಯ ಅವತಾರವು.

ತಾತ್ಪರ್ಯ - ಶ್ರೀ ವಾಯುದೇವರು ಶ್ರೀಮನ್ನಾರಾಯಣನಿಂದ ಹುಟ್ಟಿದವರು. ಪೂರ್ಣಬಲ ಜ್ಞಾನಸ್ವರೂಪರು. ಕಲ್ಯಾದಿಗಳ ಭಾದೆ ಅವರಿಗಿಲ್ಲ. ಅವರ ಅವತಾರ ರೂಪಗಳೂ ಮೂಲರೂಪದಂತೆ ಜ್ಞಾನ ಮತ್ತು ಬಲಗಳಿಂದ ಪೂರ್ಣ. ಭಗವದಾಜ್ಞೆಯಿಂದ ಭಗವತ್‌ಪ್ರೀತ್ಯರ್ಥವಾಗಿ ವಾಯುದೇವರು ಮೂರು ಅವತಾರಗಳನ್ನು ಮಾಡಿದ್ದಾರೆ. ಪ್ರಥಮಾವತಾರವು ವಿಶೇಷ ಬುದ್ಧಿಯುಳ್ಳದ್ದಾದ್ದರಿಂದ 'ಹನುಮಾನ್' ಎಂದು ಪ್ರಸಿದ್ಧವಾಗಿದೆ. ಈ ರೂಪವು ಸದಾ ರಾಮದೇವರ ಬಳಿ ಭಕ್ತಿಯಿಂದ ನಮ್ರವಾಗಿದೆ ಮತ್ತು ದೂರದಲ್ಲೂ ರಾಮಸೇವೆಯನ್ನು ಮಾಡಿದೆ ಅಂದರೆ, ರಾಮದೇವರ ಉತ್ತಮ ಸಂದೇಶವನ್ನು ಲಂಕೆಯಲ್ಲಿದ್ದ ಸೀತೆಗೆ ಮುಟ್ಟಿಸಿದೆ.

ವಿಶೇಷ ವಿಷಯ - 'ದ್ರವಿಣಂ ತರಃ ಸಹಃ ಬಲಂ ಶೌರ್ಯಾಣಿ' ಎಂಬ ಅನುಶಾಸನದ ಪ್ರಕಾರ 'ಸಹಸ್' ಶಬ್ದಕ್ಕೆ ಬಲ ಎಂದರ್ಥ. 'ಸಹಸಃ' ಎಂದರೆ ಬಲಸ್ವರೂಪರಾದ ಎಂದು ಅರ್ಥ. ಈ ಶಬ್ದವು 'ಷಹ ಮರ್ಷಣೇ' ಎಂಬ ಧಾತುವಿನಿಂದ ನಿಷ್ಪನ್ನವಾದ್ದರಿಂದ (ಮರ್ಷಣ) ಸಹನಶೀಲ ಎಂದೂ ಅರ್ಥ. ವಾಯುದೇವರು ಕಲ್ಯಾದ್ಯುಪದ್ರವವನ್ನು ಸಹಿಸುವುದರಿಂದ ಅಂದರೆ ಉಪದ್ರವಕ್ಕೆ ಒಳಗಾಗದಿರುವುದರಿಂದ ಇವರು 'ಸಹಸ್' ಶಬ್ದವಾಚ್ಯರಾಗಿದ್ದಾರೆ. ವಾಯುದೇವರಿಗೆ ಅಸುರೋಪದ್ರವ ಇಲ್ಲವೆನ್ನುವುದಕ್ಕೆ ಆಧಾರ ಛಾಂದೋಗ್ಯ ಉಪನಿಷತ್ತಿನಲ್ಲಿದೆ - 'ಯ ಏವಾಯಂ ಮುಖ್ಯಪ್ರಾಣಃ ತಂ ಉದ್ಗೀಥಮುಪಾಸಾಂಚಕ್ರಿರೇ। ತಂ ಹ ಅಸುರಾಃ ಋತ್ವಾ ವಿದಧ್ವಸುಃ ಯಥಾ ಅಶ್ಮಾನಂ ಆಖಣಂ ಋತ್ವಾ ವಿಧ್ವಂಸತೇ॥'

(ದೇವತೆಗಳು ಮುಖ್ಯಪ್ರಾಣನಲ್ಲಿ ಉದ್ಗೀಥನಾಮಕ ಪರಮಾತ್ಮನ ಉಪಾಸನೆಯನ್ನು ಮಾಡಿದರು. ದಾನವರು ಮುಖ್ಯಪ್ರಾಣನೆಂಬ ಪ್ರತಿಮೆಯನ್ನು ಅಶುದ್ಧಿಗೊಳಿಸಲು ಬಂದು ಗಟ್ಟಿಯಾದ ಬಂಡೆಕಲ್ಲಿಗೆ ಬಡಿದ ಮಣ್ಣಿನ ಹೆಂಟೆ ಪುಡಿಯಾಗುವ ಹಾಗೆ ನಾಶ ಹೊಂದಿದರು).

'ಬಿಭರ್ತಿ ಗಮಯತಿ ಚ ಇತಿ ಭರ್ಗಃ' ಶ್ವಾಸರೂಪದಿಂದ ಜಗತ್ತಿನ ಭರಣ ಮಾಡುತ್ತಾರೆ, ಮತ್ತು 'ಸ ಏನಾನ್ ಬ್ರಹ್ಮ ಗಮಯತಿ' ಎಂಬ ಶ್ರುತಿಯ ಪ್ರಕಾರ ಪರಮಾತ್ಮನ ಕಡೆಗೆ ಕರೆದುಕೊಂಡು ಹೋಗುತ್ತಾರೆ. ಆದ್ದರಿಂದ ವಾಯುದೇವರು ಭರ್ಗಶಬ್ದವಾಚ್ಯರು. 'ಆದಿಭೂಭ್ಯಾಂ ಡುತಚ್' ಎಂಬ ಸೂತ್ರದಿಂದ ಎರಡು ಧಾತುಗಳಿಗೆ ಒಂದು ಪ್ರತ್ಯಯ ಬಂದಂತೆ ಇಲ್ಲಿಯೂ ಭೃ ಮತ್ತು ಗಮ್ ಎಂಬ ಎರಡು ಧಾತುಗಳಿಗೆ ಉಣಾದಿ ಪ್ರತ್ಯಯಗಳಲ್ಲಿ ಸೇರಿದ ಅಸುನ್ ಪ್ರತ್ಯಯವು ಬಂದು 'ಭರ್ಗಃ' ಎಂದಾಗಿದೆ.

ಈ ಮಂತ್ರದಲ್ಲಿರುವ 'ಬಟ್' ಮತ್ತು 'ದರ್ಶತಂ' ಎಂಬ ಎರಡು ವಿಶೇಷಣಗಳಿಂದ 'ವಾಯು' ಶಬ್ದಾರ್ಥವನ್ನು ವಿವರಿಸಿದಂತಾಗುತ್ತದೆ. 'ಅಯ ಪಯ ಗತೌ' ಎಂಬ ಧಾತುಪಾಠದ ಪ್ರಕಾರ 'ವಾಯು' ಎಂಬಲ್ಲಿ 'ಅಯ್' ಎಂದರೆ ಜ್ಞಾನ. ಇದನ್ನು 'ದರ್ಶತಂ' ಎಂಬ ಪದವು ವಿವರಿಸಿದೆ. 'ವ' ಎಂದರೆ ಬಲ. ಅದನ್ನೇ 'ಬಟ್' ಎಂಬ ಪದವು ವಿವರಿಸಿದೆ. 'ವಬಯೋಃ ಅಭೇದಃ' (ವ ಬ ಅಕ್ಷರಗಳು ಒಂದೇ) ಎಂಬ ನ್ಯಾಯದ ಪ್ರಕಾರ 'ಬಟ್' ಎಂಬಲ್ಲಿ ವಕಾರದ ಬದಲು ಬಕಾರ ಬಂದಿದೆ.

'ಹನೂಮಾನ್' ಶಬ್ದವು 'ಹನ' ಧಾತುವಿನಿಂದ ನಿಷ್ಪನ್ನವಾಗಿದೆ. ಹನಧಾತುವಿಗೆ 'ಹನ ಹಿಂಸಾಗತ್ಯೋಃ' ಎಂಬ ಧಾತುಪಾಠದ ಪ್ರಕಾರ ಗತಿ ಎಂದರ್ಥ. ಗತ್ಯರ್ಥಕ ಧಾತುಗಳೆಲ್ಲ ಜ್ಞಾನಾರ್ಥಕವಾಗಿರುತ್ತವೆ ಎಂಬ ನಿಯಮದಿಂದ 'ಹನ' ಧಾತುವಿಗೆ 'ಜ್ಞಾನ' ಎಂದೂ ಅರ್ಥ. ವಿಶೇಷವಾದ ಜ್ಞಾನವುಳ್ಳವರು ಎಂಬ ಅರ್ಥದಲ್ಲಿ 'ಹನುಮಾನ್' ಎಂದಾಗಿದೆ. ಯದ್ಯಪಿ 'ಹನವಾನ್' ಎಂದು ಆಗಬೇಕಾಗಿತ್ತು. ಆದರೆ ಜ್ಞಾನವು ಅವರ ಸ್ವಭಾವ (ಶೀಲ) ಎಂದು ತಿಳಿಸಲು (ಸ್ವಭಾವ) ತಾಚ್ಛೀಲ್ಯಾರ್ಥದಲ್ಲಿ ಬರುವ ಉಕಾರವನ್ನು ಸೇರಿಸಲಾಗಿದೆ. ಯಾವಾಗಲೂ ಜ್ಞಾನಶೀಲರೆಂದು ಸೂಚಿಸಲು ಮತ್ತೊಂದು ಉಕಾರವನ್ನೂ ಸೇರಿಸಿ ಹನೂಮಾನ್ ಎಂಬ ಶಬ್ದನಿಷ್ಪತ್ತಿಯನ್ನು ಮಾಡಿದ್ದಾರೆ.

'ಋ ಗತೌ' ಎಂಬ ಧಾತುವಿನಿಂದ ನಿಷ್ಪನ್ನವಾದ 'ಋತ' ಶಬ್ದಕ್ಕೆ ಜ್ಞಾನಾತ್ಮಕ ಎಂದು ಅರ್ಥ.

'ಹ್ವರ ಕೌಟಿಲ್ಯೇ' ಎಂಬ ಧಾತುಪಾಠದ ಪ್ರಕಾರ ಹ್ವರ ಧಾತುವಿಗೆ ವಕ್ರವಾಗುವುದು ಎಂದರ್ಥ. ಪ್ರಕೃತದಲ್ಲಿ ಹ್ವರತೇ ಎಂಬ ಪದಕ್ಕೆ ಭಕ್ತಿಯಿಂದ ಬಾಗಿದ್ದಾರೆ ಎಂದು ಅರ್ಥವನ್ನು ಹೇಳಲಾಗಿದೆ.

'ಧೇನಾಃ' ಎಂಬ ಶಬ್ದವು ಧಿಜ್ ಪೋಷಣೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ ಸುರಕಾರ್ಯಪೋಷಕ ಎಂದು ಅರ್ಥ.

ಎರಡನೆಯ ಮತ್ತು ಮೂರನೆಯ ಅವತಾರದ ರೂಪವನ್ನು ಹೇಳುತ್ತಾರೆ -

ಪೃಕ್ಷೋ ವಪುಃ ಪಿತುಮಾನ್ ನಿತ್ಯ ಆಶಯೇ
ದ್ವಿತೀಯಮಾ ಸಪ್ತ ಶಿವಾಸು ಮಾತೃಷು ।
ತೃತೀಯಮಸ್ಯ ವೃಷಭಸ್ಯ ದೋಹಸೇ
ದಶಪ್ರಮತಿಂ ಜನಯಂತ ಯೋಷಣಃ ॥

ದ್ವಿತೀಯಂ ವಪುಃ = ಎರಡನೆಯ ಭೀಮಾವತಾರ ರೂಪವು, ಪೃಕ್ಷಃ = ದುಷ್ಟ ಸೈನ್ಯವನ್ನು ಸಂಹರಿಸುವುದರಿಂದ ಪೃಕ್ಷಸ್ ಶಬ್ದವಾಚ್ಯವಾಗಿದೆ. ಪಿತುಮಾನ್ = ಬಹಳ ಅನ್ನವನ್ನು ಭುಂಜಿಸುವ, ನಿತ್ಯಃ = ಸ್ವೇಚ್ಛಾ ಮರಣವುಳ್ಳ ಆ ಭೀಮನು, ಸಪ್ತ ಶಿವಾಸು ಮಾತೃಷು = ಶೋಭನವಾದ ಋಗ್ ಯಜುಸ್ ಸಾಮ ಅಥರ್ವ ಭಾರತ ಪಂಚರಾತ್ರ ಮತ್ತು ಮೂಲರಾಮಾಯಣವೆಂಬ ಏಳು ವಿದ್ಯೆಗಳಲ್ಲಿ, ಆ ಶಯೇ = ಚೆನ್ನಾಗಿ ಪರಿಣತನಾಗಿದ್ದಾನೆ. ಯೋಷಣಃ = ಶ್ರೀ, ಭೂ, ದುರ್ಗಾ ಎಂಬ ವೇದಾಭಿಮಾನಿ ದೇವತೆಗಳು, ದೋಹಸೇ = ಜ್ಞಾನಪ್ರಸಾರ ಮಾಡಲು, ವೃಷಭಸ್ಯ = ದೇವ ಶ್ರೇಷ್ಠರಾದ, ಅಸ್ಯ = ವಾಯುದೇವರ, ತೃತೀಯಂ = ಮೂರನೆಯದಾದ, ದಶಪ್ರಮತಿಂ = ಪೂರ್ಣಪಜ್ಞ ಎಂಬ ರೂಪವನ್ನು, ಜನಯಂತ = ಪಡೆದರು.

ತಾತ್ಪರ್ಯ - ವಾಯುದೇವರ ದ್ವಿತೀಯಾವತಾರಭೂತರಾದ ಭೀಮಸೇನದೇವರು ಶತ್ರು ಸೈನ್ಯವನ್ನು ವಿಶೇಷವಾಗಿ ಸಂಹಾರ ಮಾಡಿದ್ದಾರೆ, ಬಹಳ ಅನ್ನವನ್ನು ಜೀರ್ಣಮಾಡಿಕೊಳ್ಳುವ ಶಕ್ತಿಯನ್ನು ಹೊಂದಿದ್ದಾರೆ. ಸ್ವೇಚ್ಛಾ ಮರಣಗಳಾಗಿದ್ದಾರೆ. ನಾಕು ವೇದಗಳು ಭಾರತ ಪಂಚರಾತ್ರ ಮತ್ತು ಮೂಲ ರಾಮಾಯಣವೆಂಬ ಏಳು ವಿದ್ಯೆಗಳಲ್ಲಿ ಯಾವಾಗಲೂ ಆಸಕ್ತರಾಗಿದ್ದಾರೆ.

ವಾಯುದೇವರ ಮೂರನೆಯ ರೂಪವಾದ ಪೂರ್ಣಪ್ರಜ್ಞರೂಪವನ್ನು ವೇದಾಭಿಮಾನಿಗಳಾದ ಶ್ರೀ ಭೂ-ದುರ್ಗಾದೇವಿಯರು, ಇತರರು ವೇದಕ್ಕೆ ಮಾಡಿದ ಅಪಾರ್ಥವನ್ನು ಖಂಡಿಸಿ ಸಮೀಚೀನ ವ್ಯಾಖ್ಯಾನ ಮಾಡಿ ಎಲ್ಲರಿಗೂ ಉಪದೇಶ ಮಾಡಲಿ ಎಂಬ ಉದ್ದೇಶದಿಂದ ಮಧ್ಯಗೇಹಭಟ್ಟರ ಪತ್ನಿಯಲ್ಲಿ ಸನ್ನಿಹಿತರಾಗಿ ಪಡೆದಿದ್ದಾರೆ.

ವಿಶೇಷ ವಿಷಯ – ಪೃಕ್ಷಃ ಎಂಬಲ್ಲಿ ಸೇನಾರ್ಥಕ ಪೃತ್ ಶಬ್ದದ ನಂತರವಿರುವ ಕ್ಷೀಜ್ (ಕ್ಷಯೇ) ಧಾತುವಿಗೆ 'ಕರ್ತಾ' ಎಂಬ ಅರ್ಥದಲ್ಲಿ ಉಣಾದಿಗಳಲ್ಲಿ ಸೇರಿದ ಡಸನ್ ಪ್ರತ್ಯಯ ಬಂದು 'ಪೃಕ್ಷಸ್' ಎಂದು ಸಕಾರಾಂತ ಶಬ್ದವಾಗಿದೆ. ಸೇನಾಕ್ಷಯಕರ್ತ ಎಂದು ಅರ್ಥ.

'ಪಿತುಃ ಇತಿ ಅನ್ನನಾಮ' (ಪಿತುಃ ಎಂದರೆ ಅನ್ನ) ಎಂಬ ಬ್ರಾಹ್ಮಣ (ವೇದವ್ಯಾಖ್ಯಾನರೂಪವಾದ ಅಪೌರುಷೇಯಗ್ರಂಥ) ವಚನದಿಂದ ಪಿತು ಶಬ್ದಕ್ಕೆ ಅನ್ನ ಎಂದು ಅರ್ಥ. ಈ ಶಬ್ದಕ್ಕೆ 'ಪ್ರಾಶಸ್ತ್ಯ' ಎಂಬ ಅರ್ಥದಲ್ಲಿ ಮತುಪ್ ಪ್ರತ್ಯಯ ಬಂದು ನಿಷ್ಪನ್ನವಾದ 'ಪಿತುಮಾನ್' ಶಬ್ದಕ್ಕೆ ಬಹ್ವನ್ನಭೋಕ್ತಾ ಎಂದು ಅರ್ಥ.

'ಮಾಪಯಂತಿ ಪರಮಾತ್ಮಾನಂ' (ಪರಮಾತ್ಮನನ್ನು ತಿಳಿಸುತ್ತವೆ) ಎಂಬ ವ್ಯುತ್ಪತ್ತಿಯಿಂದ ಸಿದ್ಧವಾದ 'ಮಾತ್ರ' ಶಬ್ದಕ್ಕೆ 'ವಿದ್ಯೆ' ಎಂದು ಅರ್ಥವಿದೆ.

'ಆ ಶಯೇ' ಎಂದರೆ ಚೆನ್ನಾಗಿ ಮಲಗಿದ್ದಾರೆ ಎಂದರ್ಥ. ಅಂದರೆ, ಮಲಗಿದವರಿಗೆ ಹೇಗೆ ಬಾಹ್ಯ ಪರಿಜ್ಞಾನವಿರುವುದಿಲ್ಲವೋ ಹಾಗೇ ಭೀಮಸೇನದೇವರು ಬೇರೆಕಡೆ ಗಮನವಿಡದೆ ಸಪ್ತವಿದ್ಯೆಗಳಲ್ಲೇ ಬಾಣ ತಯಾರಿಸುವವನಂತೆ ಏಕಾಗ್ರತೆಯಿಂದ ಅವುಗಳನ್ನೇ ವಿಮರ್ಶೆಮಾಡುತ್ತಿದ್ದಾರೆ ಎಂದು ಅಭಿಪ್ರಾಯ. ಇದನ್ನು ಸೂಚಿಸಲೆಂದೇ 'ಆ ಶಯೇ' ಎಂಬುದಾಗಿ ವೇದಮಂತ್ರದಲ್ಲಿದೆ. ಇದರಿಂದ 'ಭೃತಾಃ ಮಾಃ ಯೇನ ಸಃ ಭೀಮಃ' (ಎಲ್ಲ ವಿದ್ಯೆಗಳನ್ನೂ ಧರಿಸಿದವನು ಭೀಮ) ಎಂದು ಭೀಮ ಶಬ್ದಾರ್ಥವನ್ನು ವಿವರಿಸಿದಂತಾಯಿತು. ಯದ್ಯಪಿ ಈ ವ್ಯುತ್ಪತ್ತಿಯಿಂದ 'ಭೃಮ' ಎಂದಾಗಬೇಕಾಗುತ್ತದೆ. ಆದರೂ 'ವರ್ಣಾಗಮೋ ವರ್ಣವಿಕಾರಶ್ಚ' (ಶಬ್ದ ನಿಷ್ಪತ್ತಿಯಲ್ಲಿ ಕೆಲವು ವರ್ಣಗಳು ಬಂದು ಸೇರುತ್ತವೆ, ಕೆಲವು ವಿಕಾರವಾಗುತ್ತವೆ) ಎಂಬ ವಚನದ ಪ್ರಕಾರ ಭೃ ಎಂಬಲ್ಲಿ ಋಕಾರಕ್ಕೆ ಈಕಾರ ಬಂದು 'ಭೀಮ' ಎಂದಾಗಿದೆ.

'ದೋಹಸೇ' ಎಂಬ ಶಬ್ದವು ದುಹ ಪ್ರಪೂರಣೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ 'ಜ್ಞಾನ ಪೂರಣೆಗಾಗಿ' ಎಂದರ್ಥ.

'ದಶೇತಿ ಪೂರ್ಣಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ ।
ಪ್ರಜ್ಞಾ ಪ್ರಮತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತಃ ॥

(ದಶ ಎಂದರೆ ಸರ್ವ. ಸರ್ವ ಎಂದರೆ ಪೂರ್ಣ. ಪ್ರಮತಿ ಎಂದರೆ ಪ್ರಜ್ಞಾ ಆದ್ದರಿಂದ ದಶ ಪ್ರಮತಿ ಎಂದರೆ ಪೂರ್ಣಪ್ರಜ್ಞ ಎಂದರ್ಥ) ಎಂಬ ಸ್ಮೃತಿಯಿಂದಲೂ ಮತ್ತು 'ದಶದಶತಃ ತತ್ ಶತಂ' (ಹತ್ತಕ್ಕೆ ಹತ್ತರಿಂದ ಗುಣಿಸಿದರೆ ನೂರು. ಇದೇ ರೀತಿ ಗುಣಕದಿಂದ ಸಾವಿರ ಮೊದಲಾದುದಾಗಿ ಅನಂತವಾಗುತ್ತದೆ) ಎಂಬ ಶ್ರುತಿಯಿಂದಲೂ 'ದಶ' ಎಂದರೆ 'ಪೂರ್ಣ'. 'ಮತಿ' ಎಂದರೆ 'ಬುದ್ಧಿ'. ಅದು ಭಗವದ್ವಿಷಯಕವಾದ್ದರಿಂದ ಪ್ರಕೃಷ್ಟವಾಗಿ ಪ್ರಮತಿ ಎನಿಸುತ್ತದೆ. ಹೀಗೆ ದಶ (ಪೂರ್ಣವಾದ) ಪ್ರಮತಿ (ಪ್ರಜ್ಞೆ)ವುಳ್ಳವರು ಎಂಬ ವ್ಯುತ್ಪತ್ತಿಯಿಂದ 'ದಶಪ್ರಮತಿ' ಪದಕ್ಕೆ 'ಪೂರ್ಣಪ್ರಜ್ಞ' ಎಂದು ಅರ್ಥ.

'ಬಹುಲಂ ಛಂದಸಿ ಅಮಾಙ್ ಯೋಗೇಽಪಿ' (ಮಾ ಅಭೂತ್ ಎಂದಿರುವಾಗ, ಮಾಙ್ ಇರುವುದರಿಂದ ಅಭೂತ್ ಎಂಬಲ್ಲಿ ಅಕಾರವು ಇಲ್ಲದಂತೆ ಮಾಭೂತ್ ಎಂದು ಪ್ರಯೋಗಿಸಬೇಕು. ಆದರೆ ವೇದದಲ್ಲಿ ಮಾಙ್ ಇಲ್ಲದಿದ್ದರೂ ಪ್ರಾಯಃ ಅಕಾರವಿಲ್ಲದ ಪ್ರಯೋಗವಿರುತ್ತದೆ) ಎಂಬ ವಚನ ಇರುವುದರಿಂದ ಅಜನಯಂತ ಎಂದಿರಬೇಕಾದದ್ದು 'ಜನಯಂತ' ಎಂದಾಗಿದೆ.

ನಿರ್ಯದೀಂ ಬುಧ್ನಾನ್ಮಹಿಷಸ್ಯ ವರ್ಪಸ
ಈಶಾನಾಸಃ ಶವಸಾ ಕ್ರಂತ ಸೂರಯಃ ।
ಯದೀಮನುಪ್ರದಿವೋ ಮಧ್ವ ಆಧವೇ
ಗುಹಾ ಸಂತಂ ಮಾತರಿಶ್ವಾ ಮಥಾಯತಿ ॥

ಯತ್ = ಯಾವ ಕಾರಣದಿಂದ, ಮಧ್ವಃ ಮಾತರಿಶ್ವಾ = ಯಾವ ಮಧ್ವರೆಂಬ ವಾಯುದೇವರು, ಈಂ = ಹಿಂದೆ ಹೇಳಿದಂತೆ ಜ್ಞಾನಪೂರಣೆಗಾಗಿ, ಪ್ರದಿವಃ ಅನು = ಪ್ರಕೃಷ್ಟ ಬುದ್ಧಿಪ್ರಕಾಶವುಳ್ಳ ರುದ್ರಾದಿ ದೇವತೆಗಳನ್ನು ಕುರಿತು, ಗುಹಾ ಸಂತಂ = ಹೃದಯಗುಹೆಯಲ್ಲಿ ಅಡಗಿರುವ ಪರಮಾತ್ಮನನ್ನು, ಆಧವೇ = ಅವನ ಸರ್ವೋತ್ತಮತ್ವ ವಿಷಯದಲ್ಲಿ, ಮಥಾಯತಿ = ವೇದಶಾಸ್ತ್ರ ವಿಮರ್ಶೆಯಿಂದ ತಿಳಿಸಿದ್ದಾರೋ, ತತ್ = ಆ ಕಾರಣದಿಂದ, ಬುಧ್ನಾತ್ = ಜ್ಞಾನರೂಪವಾದ ಅಥವಾ ಪಂಡಿತರನ್ನು ಸನ್ಮಾರ್ಗಕ್ಕೆ ಒಯ್ಯುವ, ವರ್ಪಸಃ = ಸಜ್ಜನರನ್ನು ಸ್ವೀಕರಿಸುವ ಮತ್ತು ಪಾಲಿಸುವ,

ಮಹಿಷಸ್ಯ ಯತ್ = ದೇವಶ್ರೇಷ್ಠರಾದ ವಾಯುದೇವರ ಯಾವ ಮೂರನೆಯ ಅವತಾರವಾದ ಮಧ್ವರ ದೆಶೆಯಿಂದ, ಈಂ = ಈ ಪ್ರಕಾರವಾಗಿ, ಈಶಾನಾಸಃ = ರುದ್ರಾದಿದೇವತೆಗಳು, ಶವಸಾ = ಅನಾಯಾಸವಾಗಿ, ಸೂರಯಃ ನಿಃ ಕೃಂತ = ಚೆನ್ನಾಗಿ ಜ್ಞಾನಿಗಳಾಗಿ ಮಾಡಲ್ಪಟ್ಟರೋ, ಅಂತಹ ರೂಪವನ್ನು ಶ್ರೀ, ಭೂ, ದುರ್ಗಾದೇವಿಯರು ಪಡೆದರು.

ತಾತ್ಪರ್ಯ - ವಾಯುದೇವರು ಜ್ಞಾನರೂಪರು. ಪಂಡಿತರನ್ನು ಸನ್ಮಾರ್ಗದಲ್ಲಿ ತರುವರು. ಸಜ್ಜನರನ್ನು ತನ್ನವರೆಂದು ಸ್ವೀಕರಿಸಿ ಪಾಲಿಸುವರು. ಇವರ ಮೂರನೆ ಅವತಾರರಾದ ಶ್ರೀಮಧ್ವರು ರುದ್ರಾದಿದೇವತೆಗಳನ್ನುದ್ದೇಶಿಸಿ ವೇದಶಾಸ್ತ್ರ ವಿಮರ್ಶಪೂರ್ವಕವಾಗಿ ಹೃದಯ ಗುಹವಾಸಿಯಾದ ಭಗವಂತನನ್ನು ಸರ್ವೋತ್ತಮನೆಂದು ತಿಳಿಸಿದ್ದಾರೆ. ಆದ್ದರಿಂದಲೇ ರುದ್ರಾದಿಗಳು ಜ್ಞಾನಿಗಳಾದರು.

ವಿಶೇಷ ವಿಷಯ - ಬುಧ್ನ ಶಬ್ದವು ಬುಧ ಅವಗಮನೇ (ಅವಗಮನ-ಜ್ಞಾನ) ಧಾತುವಿನಿಂದ ನಿಷ್ಪನ್ನವಾಗಿದೆ. ಆದ್ದರಿಂದ 'ಬುಧ್ನಾತ್' ಎಂಬ ಪದಕ್ಕೆ 'ಜ್ಞಾನ ರೂಪರಾದ' ಎಂದರ್ಥ. ಅಥವಾ 'ಬುಧಃ ಪಂಡಿತಾನ್ ನಯತೀತಿ ಬುಧ್ನಃ' (ಪಂಡಿತರನ್ನು ಸನ್ಮಾರ್ಗದಲ್ಲಿ ನಡೆಸುವವರು) ಎಂದು ವ್ಯುತ್ಪತ್ತಿ ಮಾಡಬಹುದು.

'ವರ್ಪಸಃ' ಎಂಬಲ್ಲಿಯೂ 'ವರಯತಿ ಪಾಲಯತಿ' ಎಂಬ ವ್ಯುತ್ಪತ್ತಿಯಿಂದ 'ವೃ' ಮತ್ತು 'ಪಾಲ' ಧಾತುಗಳಿಗೆ ಕರ್ತ ಎಂಬ ಅರ್ಥದಲ್ಲಿ ಡಸುನ್ ಪ್ರತ್ಯಯ ಬಂದು 'ವರ್ಪಸ್' ಶಬ್ದ ನಿಷ್ಪತ್ತಿಯಾಗಿದೆ. 'ವರ್ಪಸಃ' ಎಂಬ ಪದವು 'ವರ್ಪಸ್' ಶಬ್ದದ ಪಂಚಮೀವಿಭಕ್ತ್ಯಂತ ರೂಪ.

'ಬಹುವಚನಂ ಆದ್ಯರ್ಥೇ' (ಬಹುವಚನಕ್ಕೆ ಆದಿ ಎಂಬ ಅರ್ಥವಿದೆ) ಎಂಬ ವಚನದಂತೆ 'ಈಶಾನಾಸಃ' ಎಂದರೆ ರುದ್ರಾದಿ ದೇವತೆಗಳು ಎಂದರ್ಥ.

'ಗುಹಾ' ಎಂಬ ಪದವು ಸಪ್ತಮೀವಿಭಕ್ತ್ಯಂತ ಪದ. ಸಪ್ತಮೀ ವಿಭಕ್ತಿಯು ಲೋಪವಾಗಿ ಗುಹಾ ಎಂದಾಗಿದೆ.

'ಆಧವೇ' ಎಂಬಲ್ಲಿ 'ಆ' ಎಂದರೆ 'ಸಮಗ್ರ' ಎಂದರ್ಥ. 'ಧವ' ಪದಕ್ಕೆ 'ಧವಃ ಪ್ರಿಯಃ ಪತಿಃ ಭರ್ತಾ' ಎಂಬ ಅನುಶಾಸನದ ಪ್ರಕಾರ 'ಪತಿ' ಎಂದರ್ಥ. 'ಭಾವಪ್ರಧಾನ ನಿರ್ದೇಶ'ದಿಂದ (ಧರ್ಮಿವಾಚಕ ಪದವನ್ನು ಪ್ರಯೋಗಿಸಿದ್ದರೂ ಧರ್ಮವೇ ಪ್ರಧಾನವಾಗಿ

ವಾಚ್ಯವೆಂಬ ಉದ್ದೇಶವಿರುತ್ತದೆ ಆದ್ದರಿಂದ) ಧವ ಪದಕ್ಕೆ ಪತಿತ್ವ ಎಂದರ್ಥ. ಒಟ್ಟಿನಲ್ಲಿ 'ಸಮಗ್ರ ಪ್ರಪಂಚದ ಪತಿತ್ವ ವಿಷಯದಲ್ಲಿ' ಎಂದು ಅರ್ಥವಾಗುತ್ತದೆ.

'ಭಗವಂತನು ಅನಂತವೇದ ವಿಷಯನು ಎಂದು ಮಥನ ಮಾಡಿದ್ದಾರೆ' ಎಂಬ ಅರ್ಥವು ಅಭಿಪ್ರೇತವಾದ್ದರಿಂದ ಇಂತಹ ಮಥನವು ಮಹತ್ವ ಪೂರ್ಣವಾದ್ದರಿಂದ ಇದನ್ನು ಸೂಚಿಸಲು ಮಥಯತಿ ಎಂಬ ಪದದಲ್ಲಿ, ದೀರ್ಘ ಬಂದು ಮಥಾಯತಿ ಎಂದಾಗಿದೆ. ಅಪಾರವೇದ ರಾಶಿಯನ್ನು ವಿಮರ್ಶೆಮಾಡಿ ಹರಿಸರ್ವೋತ್ತಮತ್ವವನ್ನು ಸ್ಥಾಪಿಸಿದ್ದಾರೆಂದು ಅಭಿಪ್ರಾಯ.

ಪ್ರ ಯತ್ ಪಿತುಃ ಪರಮಾನ್ನೀಯತೇ ಪರ್ಯಾ
ಪೃಕ್ಷುಧೋ ವೀರುಧೋ ದಂಸು ರೋಹತಿ ।
ಉಭಾ ಯದಸ್ಯ ಜನುಷಂ ಯದಿನ್ವತ
ಆದಿದ್ಯವಿಷ್ಠೋ ಅಭವತ್ ಘೃಣಾ ಶುಚಿಃ ॥

ಯತ್ = ಯಾವ ಕಾರಣದಿಂದ, ಪರಮಾತ್ = ಉತ್ತಮನಾದ, ಪಿತುಃ = ತಂದೆಯಾದ ನಾರಾಯಣನಿಂದ, ಆ = ಚೆನ್ನಾಗಿ, ಪರಿ = ಎಲ್ಲ ಕಡೆಯಲ್ಲಿಯೂ, ಪ್ರಣೀಯತೇ = ಪ್ರೇರಿಸಲ್ಪಡುತ್ತಾರೋ, ಪೃಕ್ಷುಧಃ = ಹಸಿವೆಯಂತೆ ಪೀಡಿಸುವ ಪ್ರಶ್ನೆಗಳೆಂಬ, ವೀರುಧಃ = ಬಳ್ಳಿಗಳನ್ನು, ದಂಸು ರೋಹತಿ = ಹಲ್ಲಿನಲ್ಲಿಡುತ್ತಾರೋ, ಯತ್ = ಯಾವ ಕಾರಣದಿಂದ, ಉಭಾ = ಲಕ್ಷ್ಮೀನಾರಾಯಣರಿಬ್ಬರು, ಅಸ್ಯ ಜನುಷಂ = ಶ್ರೀ ಮಧ್ವರ ಜನ್ಮವನ್ನು, ಯತ್ = ಜ್ಞಾನದ ಉದ್ದೇಶದಿಂದ, ಇನ್ವತಃ = ಪ್ರತಿಯುಗದಲ್ಲಿ ಪ್ರೇರಿಸುವರೋ, ತತ್ = ಆ ಕಾರಣದಿಂದ, ಆತ್ ಯವಿಷ್ಠಃ = ಅಕಾರವಾಚ್ಯನಾದ ಭಗವಂತನಿಗಿಂತ ಕನಿಷ್ಠರಾದ ಮಧ್ವಾಚಾರ್ಯರು, ಇತ್ = ಈ ಪ್ರಕಾರವಾಗಿ, (ಈಗ ತೋರುವಂತೆ) ಘೃಣಾ = ಕರುಣಾಶಾಲಿಗಳಾಗಿ, ಶುಚಿಃ = ದೋಷದ ಅಪವಾದದಿಂದಲೂ ದೂರವಾಗಿದ್ದಾರೆ.

ತಾತ್ಪರ್ಯ - ಶ್ರೀ ಮಧ್ವರು ತಂದೆಯಾದ ನಾರಾಯಣನ ಆದೇಶದಂತೆ ನಡೆಯುವವರು. ಎತ್ತು ಬಳ್ಳಿಗಳನ್ನು ತಿಂದು ಹಾಕುವಂತೆ ಎಲ್ಲ ಪ್ರಶ್ನೆಗಳನ್ನು ಇವರು ಖಂಡಿಸುವರು. ಲಕ್ಷ್ಮೀನಾರಾಯಣರ ಆಜ್ಞೆಯಿಂದ ಇವರು ಪ್ರತಿಯುಗದಲ್ಲಿ ಜ್ಞಾನ ಪ್ರಸಾರಕ್ಕಾಗಿ ಜನಿಸುವರು. ಈ ಕಾರಣದಿಂದ

ಭಗವಂತನಿಗಿಂತ ಕನಿಷ್ಠರಾದ ಇವರು ದಯಾಮಯರು. ಹನುಮ ಭೀಮರಂತೆ ಭಗವದಾಜ್ಞೆ ಇಲ್ಲದ್ದರಿಂದ ಶತ್ರುಗಳನ್ನು ಸಂಹರಿಸದೆ ವಾದದಲ್ಲಿ ಮಾತಿನಿಂದಲೇ ಸೋಲಿಸಿದ್ದಾರೆ. ಆದ್ದರಿಂದ ದೋಷದ ಆರೋಪಕ್ಕೂ ಇವರು ಹೊರತಾಗಿದ್ದಾರೆ.

ವಿಶೇಷ ವಿಷಯ - 'ಪಿತುಃ ಆ ಪರಿ ಪ್ರಣೀಯತೇ' (ತಂದೆಯಾದ ಭಗವಂತನಿಂದ ಎಲ್ಲ ಕಾರ್ಯದಲ್ಲಿಯೂ ಪ್ರೇರಿಸಲ್ಪಟ್ಟಿದ್ದಾರೆ) ಅಂದರೆ 'ಪಾಜಕ ಕ್ಷೇತ್ರದಲ್ಲಿ ಅವತರಿಸು. ಬ್ರಹ್ಮಸೂತ್ರ ದಶೋಪನಿಷತ್ತುಗಳಿಗೆ ಭಾಷ್ಯವನ್ನು ರಚಿಸು, ಉಡುಪಿಯಲ್ಲಿ ಕೃಷ್ಣ ಪ್ರತಿಷ್ಠೆ ಮಾಡು. ಸೇತು (ರಾಮೇಶ್ವರ) ದರ್ಶನಕ್ಕಾಗಿ ಹೋಗಿ ದುರ್ಜನರನ್ನು ಜಯಿಸು. ಸಜ್ಜನರಲ್ಲಿ ಜ್ಞಾನಪ್ರಸಾರ ಮಾಡು. ಬದರಿಗೆ ಹೋಗು. ವ್ಯಾಸರನ್ನು ಸಂದರ್ಶಿಸು. ಮಾರ್ಗ ಮಧ್ಯದಲ್ಲಿ ಸಜ್ಜನರನ್ನು ಅನುಗ್ರಹಿಸು' ಇತ್ಯಾದಿಯಾಗಿ ಪ್ರೇರಿಸಲ್ಪಟ್ಟಿದ್ದಾರೆ ಎಂದರ್ಥ.

'ಪೃಕ್ಷುಧೋ ವೀರುಧಃ' ಎಂಬಲ್ಲಿ ಪ್ರಶ್ನೆಗಳನ್ನು ಬಳ್ಳಿಗಳಿಗೆ ಹೋಲಿಸಿದ್ದಾರೆ. ಏಕೆಂದರೆ ಬಳ್ಳಿಗಳಂತೆ ಪ್ರಶ್ನೆಗಳೂ ಪುನಃ ಪುನಃ ಉದ್ಭವಿಸುತ್ತವೆ.

'ದಂಸು ರೋಹತಿ' ಎಂಬಲ್ಲಿ ರೋಹತಿ ಎಂಬ ಕ್ರಿಯಾಪದವು ಣಿಚ್ ಪ್ರತ್ಯಯದ ಅರ್ಥವನ್ನೊಳಗೊಂಡು 'ರೋಪಯತಿ' ಎಂಬ ಅರ್ಥವುಳ್ಳದ್ದಾಗಿದೆ ಎಂದಿಟ್ಟುಕೊಳ್ಳಬೇಕು. ಆಗ 'ಹಲ್ಲಿನಲ್ಲಿಡುತ್ತಾರೆ' ಎಂದು ಅರ್ಥವು ಯುಕ್ತವಾಗುತ್ತದೆ.

ಇಲ್ಲಿ 'ಹಲ್ಲುಗಳಲ್ಲಿ' ಎಂಬ ಅರ್ಥದಲ್ಲಿ 'ದತ್ಸು' ಎಂದು ಪ್ರಯೋಗಿಸಬೇಕಾಗಿತ್ತು. ಆದರೆ 'ವರ್ಣ ವಿಕಾರ'ವಾಗಿ 'ಪುಂಸು' ಎಂಬ ಪದದಂತೆ 'ದಂಸು' ಎಂದಾಗಿದೆ ಎಂದು ತಿಳಿಯಬೇಕು.

ಈ ಮಂತ್ರದಲ್ಲಿ 'ಯದನ್ವತಃ' ಎಂಬಲ್ಲಿರುವ ಯತ್ ಶಬ್ದವು 'ಯಾಪ್ರಪಣೇ' ಧಾತುವಿನಿಂದನಿಷ್ಪನ್ನವಾಗಿದೆ.'ಯಾ' ಧಾತುವಿಗೆ(ಪ್ರಾಪಣ) ಗತಿ ಎಂಬ ಅರ್ಥವಿರುವುದರಿಂದ ಜ್ಞಾನವೆಂಬ ಅರ್ಥವೂ ಇದೆ. ಅಂತಹ ಧಾತುವಿನಿಂದ ನಿಷ್ಪನ್ನವಾದ್ದರಿಂದ 'ಯತ್'ಪದಕ್ಕೆ 'ಜ್ಞಾನವನ್ನುದ್ದೇಶಿಸಿ' ಎಂದು ಅರ್ಥಮಾಡಿದ್ದು ಯುಕ್ತವೇ ಆಗಿದೆ.

ಆದಿನ್ಮಾತ್ಯರಾವಿಶದ್ಯಾಸ್ವಾಶುಚಿರಹಿಂಸ್ಯಮಾನ
ಉರ್ವಿಯಾ ವಿವಾವೃಧೇ ।
ಅನು ಯತ್ ಪೂರ್ವಾ ಅರುಹತ್ ಸನಾಜುವೋ
ನಿ ನವ್ಯಸೀಷ್ವವರಾಸು ಧಾವತೇ ॥

ಯಾಸು = ಯಾವ ತಾಯಂದಿರಲ್ಲಿ, ಉರ್ವಿಯಾ = ಶ್ರೇಷ್ಠವಾದ ತನ್ನ ಶಕ್ತಿಯಿಂದ, ಆ = ಚೆನ್ನಾಗಿ, ಶುಚಃ = ದುಷ್ಕರ್ಮದ ಸ್ಪರ್ಶವಿಲ್ಲದವರಾಗಿ, ಆದ್ದರಿಂದಲೇ ಅಹಿಂಸ್ಯಮಾನಃ = ಪಾಪಕರ್ಮದಿಂದಾಗಲೀ, ಉದರದಲ್ಲಿರುವ ಜಂತುಗಳಿಂದಾಗಲೀ ಹಿಂಸೆ ಪಡೆಯದವರಾಗಿ, ವವೃಧೇ = ಪ್ರಸವದವರೆಗೆ ಬೆಳೆದರೋ, ಮಾತೄಃ = ಅಂತಹ ತಾಯಂದಿರನ್ನು, ಅತ್ = ಅಕಾರವಾಚ್ಯನಾದ ಭಗವಂತನ ಆಜ್ಞೆಯಿಂದ, ಇತ್ = ಹಿಂದೆ ಹೇಳಿದಂತೆ, ಆ = ತ್ರೇತಾ ದ್ವಾಪರ ಕಲಿಯುಗಗಳನ್ನು ಗಡುವನ್ನಾಗಿ ಮಾಡಿ, ಆವಿಶತ್ = ಪ್ರವೇಶಿಸಿದರು. ಸನಾಜುವಃ = ಸನಾತನನಾದ ಭಗವಂತನನ್ನು ಪ್ರತಿಪಾದಿಸುವ, ಪೂರ್ವಾಃ = ಋಗಾದಿ ಏಳು ವಿದ್ಯೆಗಳಲ್ಲಿ ಮೊದಲಿನವುಗಳಾದ ನಾಕು ವೇದಗಳು ಯತ್ = ಯಾವ ಕಾರಣದಿಂದ ನಿತ್ಯವಾಗಿವೆಯೋ, ತತ್ = ಆ ಕಾರಣದಿಂದ, ಅನು = ವೇದಾರ್ಥಬೋಧಕವಾದ ಶಿಕ್ಷಾ, ಕಲ್ಪ, ವ್ಯಾಕರಣಾದಿಗಳನ್ನನುಸರಿಸಿ, ಅರುಹತ್ = ಸಾವಧಾನವಾಗಿ ವಿಮರ್ಶಿಸಿದರು. ನಿನವ್ಯಸೀಷು = ಅತ್ಯಂತ ನೂತನವಾದ, ಅವರಾಸು = ಪೌರುಷೇಯವಾದ್ದರಿಂದ ವೇದಗಳಿಗಿಂತ ನಿಕೃಷ್ಟಗಳಾದ ಪಂಚರಾತ್ರ ಭಾರತಾದಿಗಳನ್ನು, ಧಾವತೇ = ಶೀಘ್ರವಾಗಿ ವ್ಯಾಖ್ಯಾನ ಮಾಡುತ್ತಾರೆ.

ತಾತ್ಪರ್ಯ - ವಾಯುದೇವರು ತ್ರೇತಾದಿ ಮೂರು ಯುಗಗಳಲ್ಲಿಯೂ ಕ್ರಮವಾಗಿ ಅಂಜನಾ, ಕುಂತೀ, ಮಧ್ಯಗೇಹರ ಪತ್ನಿಯರಲ್ಲಿ ಪ್ರವೇಶಿಸಿ ಉತ್ಕೃಷ್ಟವಾದ ತಮ್ಮ ಶಕ್ತಿಯಿಂದಲೇ, ಯಾವುದೇ ಪಾಪಕರ್ಮದ ಸ್ಪರ್ಶವಿಲ್ಲದವರಾದ್ದರಿಂದ ತಾಯಂದಿರ ಉದರದಲ್ಲಿರುವ ಜಂತುಗಳಿಂದ ಹಿಂಸೆ ಪಡದೆ (ಗರ್ಭವಾಸ ದುಃಖವಿಲ್ಲದೇ) ಪ್ರಸವದ ತನಕ ಚೆನ್ನಾಗಿ ಬೆಳೆದಿದ್ದಾರೆ. ಮತ್ತು ಅಪೌರುಷೇಯವಾದ ನಿತ್ಯವಾದ ಋಗಾಟ ವಿದ್ಯೆಗಳನ್ನು ಮರ ಹತ್ತುವರಂತೆ ಜಾಗರೂಕತೆಯಿಂದ ಸಾವಧಾನವಾಗಿ ಶಿಕ್ಷಾದಿ ಷಡಂಗಗಳಿಗನುಸಾರವಾಗಿ ವಿಮರ್ಶಿಸಿ ವ್ಯಾಖ್ಯಾನ ಮಾಡಿದ್ದಾರೆ. ವೇದಕ್ಕಿಂತ ನವೀನವಾದ, ಪೌರುಷೇಯವಾದ್ದರಿಂದ ವೇದಗಳಿಗಿಂತ ಅವರಗಳಾದ ಪಂಚರಾತ್ರಾದಿಗಳನ್ನು ವೇದದಂತೆ ಕಠಿಣವಲ್ಲವಾದ್ದರಿಂದ ಶೀಘ್ರದಲ್ಲಿ ವ್ಯಾಖ್ಯಾನ ಮಾಡಿದ್ದಾರೆ.

ವಿಶೇಷ ವಿಷಯ : - ಸನಾಜುವಃ - ಇದು 'ಜುಷೀ ಪ್ರೀತಿಸೇವನಯೋಃ' ಎಂಬ ಧಾತುವಿನಿಂದ ನಿಷ್ಪನ್ನವಾದ ಶಬ್ದ. 'ಸಜೂಃ' ಎಂಬ ಶಬ್ದದಂತೆ 'ಸನಾಜೂಃ' ಎಂಬ

ಶಬ್ದವು ಉಕಾರಾಂತವಾಗಿದೆ. ಇದರ ದ್ವಿತೀಯಾ ವಿಭಕ್ತಿ ಬಹುವಚನದಲ್ಲಿ 'ಸನಾಜುವಃ' ಎಂದಾಗುತ್ತದೆ.

ಅನುಯತ್ ಪೂರ್ವ ಎಂಬಲ್ಲಿ ಯತ್ ಶಬ್ದಮಾತ್ರವಿದ್ದರೂ ಯತ್ತದೋರ್ನಿತ್ಯಸಂಬಂಧಃ (ಯತ್ ತದ್ ಶಬ್ದಗಳಿಗೆ ಯಾವಾಗಲೂ ಸಂಬಂಧವಿರುತ್ತದೆ) ಎಂಬ ನಿಯಮದ ಪ್ರಕಾರ ತದ್ ಶಬ್ದವನ್ನು ಇಟ್ಟುಕೊಳ್ಳಬೇಕು.

ವೇದಗಳಲ್ಲಿ, ಅಪ್ರಸಿದ್ಧವಾದ ಅಲೌಕಿಕ ಪದಗಳು ಬಹಳ ಇರುತ್ತವೆ ಹಾಗೂ ಸ್ವರ, ಸಂಹಿತೆ, ಮತ್ತು ಪದಗಳೂ ನಿಯತವಾಗಿರುತ್ತವೆ. ಆದ್ದರಿಂದ ಸ್ವಚ್ಛಂದವಾಖ್ಯಾನವು ಅನುಚಿತವಾಗುವ ಪ್ರಯುಕ್ತ ಚೆನ್ನಾಗಿ ಆಲೋಚಿಸಿ ವ್ಯಾಖ್ಯಾನ ಮಾಡಬೇಕು. ಋಜುಯೋಗಿಗಳಾದ್ದರಿಂದ ವಾಯುದೇವರ ಜ್ಞಾನವು ಆಲೋಚಿಸಿದರೆ ಸರ್ವವಿಷಯಕವಾಗುವ ಕಾರಣ ಆಲೋಚಿಸಿ ವೇದಗಳನ್ನು ವ್ಯಾಖ್ಯಾನ ಮಾಡುತ್ತಾರೆ. ಇದನ್ನು ಸೂಚಿಸಲು 'ಅರುಹತ್' (ಏರಿದರು.) ಎಂದು ಪ್ರಯೋಗಿಸಲಾಗಿದೆ. ಮರವನ್ನೇರುವರುವವರು ಜಾಗರೂಕತೆಯಿಂದ ಆಲೋಚಿಸಿ ಏರುವಂತೆ, ಆಲೋಚಿಸಿ ವ್ಯಾಖ್ಯಾನ ಮಾಡುತ್ತಾರೆಂದು ಅಭಿಪ್ರಾಯ. ಪೌರುಷೇಯ ಗ್ರಂಥಗಳು ಕಠಿಣವಲ್ಲವಾದ್ದರಿಂದ ಶೀಘ್ರವಾಗಿ ವ್ಯಾಖ್ಯಾನ ಮಾಡುತ್ತಾರೆ ಎಂದು ಸೂಚಿಸಲು 'ಧಾವತೇ' (ಓಡುತ್ತಾರೆ) ಎಂದು ಪ್ರಯೋಗಿಸಲಾಗಿದೆ.

ಶ್ರೀಮದಾಚಾರ್ಯರಲ್ಲಿ ಅಶ್ರುತಪ್ರತಿಭೆಯನ್ನು ಪ್ರತ್ಯಕ್ಷವಾಗಿ ಅನುಭವಿಸಿದ್ದೇವೆ.

**तत्वप्रदीपः –**

**''अश्रुतप्रतिभा यस्य श्रुतिस्मृत्यविरोधिनी ।**
**विश्रुता नृषु जातं च तं विद्याद् देवसत्तमम् ।।'' इति नारायणश्रुतिः ।**
**प्रत्यक्षमेव चैतल्लक्षणं दृश्यते भगवति भाष्यकारे ।**

ಶ್ರುತಿ ಸ್ಮೃತಿಗಳಿಗೆ ವಿರೋಧವಿಲ್ಲದ ಮನುಷ್ಯರಲ್ಲಿ ಊಹಿಸಲು ಸಹ ಸಾಧ್ಯವಿಲ್ಲದ ಪ್ರತಿಭೆಯು ಯಾವ ವ್ಯಕ್ತಿಯಲ್ಲಿ ಕಾಣಿಸುತ್ತಿದೋ, ಅವನನ್ನು ದೇವಶ್ರೇಷ್ಠನೆಂದು ತಿಳಿಯಬೇಕು. ಹೀಗೆ ನಾರಾಯಣ ಶ್ರುತಿ ಹೇಳುತ್ತಿದೆ.

ಭಗವಾನ್ ಭಾಷ್ಯಕಾರರಾದ ಶ್ರೀಮದಾಚಾರ್ಯರಲ್ಲಿ ಇಂಥ ಪ್ರತಿಭೆಯು ಪ್ರತ್ಯಕ್ಷವಾಗಿ ಕಾಣಿಸುತ್ತಿದೆ.

ವಾಯುದೇವರ ಮೊದಲನೆಯ ಅವತಾರ ಹನುಮ

**तत्वप्रदीपः –**

**''हनशब्दो ज्ञानवाची हनूमान् मतिशब्दितः ।**
**रामस्य स्वृतरूपस्य वाचस्तेनानयन्त हि ।।**

'ಹನ, ಗತೌ' ಎಂಬ ಧಾತುವಿನಂತೆ ಹನ ಶಬ್ದವು ಜ್ಞಾನವಾಚಕವಾಗಿದೆ. ಶ್ರುತಿಯಲ್ಲಿ 'ಮತಿ'ಶಬ್ದದಿಂದ ಹನುಮಂತನು ಹೇಳಲ್ಪಟ್ಟಿದ್ದಾನೆ. ಶ್ರೀರಾಮನ ಸಂದೇಶಗಳು ಸೀತೆಯ ವಿಷಯದಲ್ಲಿ ಅಜ್ಞಾನಮೂಲಕವಾಗಿರಲಿಲ್ಲ ಜ್ಞಾನರೂಪವೇ ಆಗಿತ್ತು. ಅಂಥ ಸಂದೇಶವನ್ನು ಸೀತೆಗೆ ತಲುಪಿಸಿದನು.

ಎರಡನೆಯ ಅವತಾರ ಭೀಮ

**तत्वप्रदीपः –**

**भृतमो भीम इत्युक्तो वाचो मा मातरः स्मृताः ।**
**ऋगाद्या इतिहासं स पुराणं पञ्चरात्रकम् ।**
**प्रोक्ताः सप्तशिवास्तत्र शयो भीमस्ततः स्मृतः ।।**

'ಆಶಯೇ ದ್ವಿತೀಯಮಾ ಸಪ್ತಶಿವಾಸು ಮಾತೃಷು' ಎಂಬುದಾಗಿ ಭೀಮಶಬ್ದದ ನಿಷ್ಪತ್ತಿಯನ್ನು ಹೇಳಲಾಗಿದೆ. ಏಳು ಬಗೆಯ ವಿದ್ಯೆಗಳನ್ನು ಧಾರಣೆ ಮಾಡಿರುವುದರಿಂದ 'ಭೀಮ' ಎಂದು ಕರೆಸಿಕೊಳ್ಳುತ್ತಾನೆ. 'ಭೀಮ' ಎಂಬಲ್ಲಿರುವ 'ಮಾ' ಎಂಬ ಅಕ್ಷರವು ಮಾತುಗಳನ್ನು ಹೇಳುತ್ತದೆ. ವಿದ್ಯೆಗಳು ಎಂದರ್ಥ. ಆ ಏಳು ವಿದ್ಯೆಗಳು ಹೀಗಿವೆ - ೧. ಋಗ್ವೇದ, ೨. ಯಜುರ್ವೇದ, ೩. ಸಾಮವೇದ, ೪. ಅಥರ್ವವೇದ, ೫. ಇತಿಹಾಸ, ೬. ಪುರಾಣ, ೭. ಮೂಲರಾಮಾಯಣ ಪಂಚರಾತ್ರ ಎಂದು. ಈ ಏಳು ವಿದ್ಯೆಗಳಲ್ಲಿ ವಿಹರಿಸುವ ಕಾರಣ 'ಭೀಮ' ಎಂದು ಕರೆಸಿಕೊಳ್ಳುತ್ತಾನೆ.

ಮೂರನೆಯ ಅವತಾರ ಮಧ್ವ

**तत्वप्रदीपः –**

**मध्वित्यानन्द उद्दिष्टोवेति तीर्थमुदाहृतम् ।**
**मध्व आनन्दतीर्थः स्यात् तृतीया मारुती तनुः ।।**

'ಮಧ್ವ ಆಧವೇ' ಎಂಬ ಶ್ರುತಿಯಲ್ಲಿ ಮಧ್ವ ಎಂಬ ಪದವಿದೆ. 'ಮಧು' ಎಂಬ ಪದಕ್ಕೆ 'ಆನಂದ' ಎಂದರ್ಥ. 'ವಾ' ಎಂಬ ಪದಕ್ಕೆ 'ತೀರ್ಥ' ಎಂದರ್ಥ. ಆದ್ದರಿಂದ 'ಮಧ್ವ'ಪದದಿಂದ 'ಆನಂದತೀರ್ಥ' ಎಂಬ ವಾಯುದೇವರ ಮೂರನೆಯ ಅವತಾರವನ್ನು ಹೇಳಿದಂತಾಯಿತು.

ಪ್ರಾಣಾಗ್ನಿಸೂಕ್ತದ ಅರ್ಥ ತಿಳಿದವರೇ ತತ್ವಜ್ಞಾನಿಗಳು

**तत्वप्रदीपः –**

**इति सूक्तगतं रूपत्रयमेतन्महात्मनः ।**
**यो वेद वेदवित् स स्यात् तत्ववित् तत्प्रसादतः'' इति भाववृत्ते ।**

ಹೀಗೆ ಪ್ರಾಣಾಗ್ನಿಸೂಕ್ತದಲ್ಲಿ ಜೀವೋತ್ತರಾದ ವಾಯುದೇವರ ಮೂರು ರೂಪಗಳನ್ನು ಯಾರು ತಿಳಿಯುತ್ತಾರೋ ಅವರು ವಾಯುದೇವರ ಅನುಗ್ರಹದಿಂದ ತತ್ವಜ್ಞಾನಿ ಆಗುತ್ತಾರೆ. ಹೀಗೆ ಭಾವವೃತ್ತವೆಂಬ ಗ್ರಂಥದಲ್ಲಿ ಹೇಳಲಾಗಿದೆ.

'ಹನೂಮಾನ್' 'ಭೀಮ' 'ಮಧ್ವ' ಈ ಮೂರು ಶಬ್ದಗಳ ನಿರ್ವಚನವನ್ನು ಮಾಡಿದ್ದರಿಂದಲೇ ವಾಯುದೇವರ ಮೂರು ಅವತಾರವನ್ನು ವೇದವು ಪ್ರತಿಪಾದಿಸುತ್ತದೆ ಎಂದು ಹೇಳಿದಂತಾಯಿತು. ಇದೇ ಶ್ರುತಿಯಲ್ಲಿರುವ ಕೆಲವು ಮಂತ್ರಗಳಿಗೆ ಯಜುಃಸಂಹಿತೆಯೂ ಕೂಡ ಅರ್ಥವನ್ನು ವಿವರಿಸುತ್ತಿದೆ.

ಯಜುಃಸಂಹಿತೆಯಲ್ಲಿ ಪ್ರಾಣಾಗ್ನಿಸೂಕ್ತ ವ್ಯಾಖ್ಯಾನ

**तत्वप्रदीपः –**

**''साधको रामवाक्यानां तत्समीपगतः सदा ।**
**हनूमान् प्रथमो ज्ञेयो भीमस्तु बहुभुक् पितुः ।**

ಶ್ರೀರಾಮಚಂದ್ರನ ಸಂದೇಶವನ್ನು ಸೀತಾದೇವಿಗೆ ತಲುಪಿಸಿರುತ್ತಾರೆ. ನಿರಂತರವಾಗಿ ಶ್ರೀರಾಮಚಂದ್ರದೇವರ ಸೇವೆಯಲ್ಲಿ ತತ್ಪರರಾಗಿರುತ್ತಾರೆ. ಇವರೇ ವಾಯುದೇವರ ಮೊದಲನೆಯ ಅವತಾರವಾದ ಹನುಮಂತದೇವರು. ('ಸಾಧತೇ' ಮತ್ತು 'ಉಪಹ್ವರತೇ ಮತಿಃ' ಎಂಬ ಪದದ ಅರ್ಥವನ್ನು ವ್ಯಾಖ್ಯಾನ ಮಾಡಿದಂತಾಯಿತು.)

ಶ್ರುತಿಯಲ್ಲಿ ಮಧ್ವ ಎಂಬ ಶಬ್ದದಿಂದಲೇ ಪ್ರತಿಪಾದ್ಯರಾಗಿದ್ದಾರೆ

**तत्वप्रदीपः –**

**पृतनाक्षयकारी च द्वितीयस्तु तृतीयकः ।**
**पूर्णप्रज्ञस्तथाऽऽनन्दतीर्थनामा प्रकीर्तितः ।।**

ದುರ್ಯೋಧನನ ಸೇನೆಯನ್ನು ನಾಶ ಮಾಡಿರುವುದರಿಂದ ಎರಡನೆಯ ಅವತಾರವು 'ಭೀಮ' ಎಂದು ಕರೆಸಿಕೊಳ್ಳುತ್ತದೆಂದು. 'ಪೃಕ್ಷಃ' ಪದವು ಹೇಳುತ್ತಿದೆ. ಮೂರನೆಯ ಅವತಾರವನ್ನು 'ಮಧ್ವ' ಎಂಬ ಪದವು ಹೇಳುತ್ತಿದೆ. ಪೂರ್ಣಪ್ರಜ್ಞರೇ ಆನಂದತೀರ್ಥರೆಂಬ ಹೆಸರಿನಿಂದ ಪ್ರಸಿದ್ಧರಾಗಿದ್ದಾರೆ.

ಇವರು ಪೂರ್ಣಪ್ರಜ್ಞರೆಂದು ಶ್ರುತಿಯೇ ಹೇಳುತ್ತಿದೆ

**तत्वप्रदीपः –**

**दशेति सर्वमुद्दिष्टं सर्वं पूर्णमिहोच्यते ।**
**प्रज्ञा प्रमतिरुद्दिष्टा पूर्णप्रज्ञस्ततः स्मृतः ।।**

'ದಶ' ಎಂದರೆ 'ಸರ್ವ', 'ಸರ್ವ' ಎಂದರೆ 'ಪೂರ್ಣ', 'ಪ್ರಮತಿ' ಎಂದರೆ 'ಪ್ರಜ್ಞ', ಹೀಗೆ 'ದಶಪ್ರಮತಿ' ಶಬ್ದಕ್ಕೆ 'ಪೂರ್ಣಪ್ರಜ್ಞ' ಎಂದರ್ಥ.

ಶ್ರೀಮದಾಚಾರ್ಯರ ಅವತಾರದ ಉದ್ದೇಶ

**तत्वप्रदीपः –**

**आ समन्तात् पतित्वे तु गूढं कलियुगे हरिम् ।**
**असत्यमप्रतिष्ठं च जगदेतदनीश्वरम् ।**
**वदद्भिर्गूहितं सन्तं तृतीयोऽसुर्मथायति ।।**

'ಗುಹಾಸಂ ತಂ' ಎಂಬ ಶ್ರುತಿವಾಕ್ಯಕ್ಕೆ ಎರಡರ್ಥ - ೧. ಕಲಿಯುಗದಲ್ಲಿ ಶ್ರೀಹರಿಯು ಸರ್ವೇಶ್ವರನಾಗಿದ್ದಾನೆಂಬ ವಿಷಯವು ಗೂಢವಾಗಿ ಉಳಿಯುತ್ತದೆ. ಏಕೆಂದರೆ ಕಲಿಯುಗದಲ್ಲಿ ಇವನಿಗೆ ಅವತಾರವೇ ಇರುವುದಿಲ್ಲ. ಮತ್ತು ನಾಸ್ತಿಕರು ಜಗತ್ತಿಗೆ ಒಡೆಯನಾದ ಈಶ್ವರನೇ ಇರುವುದಿಲ್ಲವೆಂದು ಹೇಳುತ್ತಾರೆ. ಹೀಗೂ ಸಹ ಈಶ್ವ... ಗೂಢನಾಗಿ ಉಳಿದಿದ್ದಾನೆ. ಪರಮಾತ್ಮನೇ ಜಗತ್ತಿಗೆ ಈಶ್ವರನಾಗಿದ್ದಾನೆ ಎಂದು ತಿಳಿಸಲು ...ರನೆಯ ಮಧ್ವಾವತಾರವನ್ನು ವಾಯುದೇ...ವು ಮಾಡಿರುತ್ತಾರೆ.

ವಿಷ್ಣುಪಾರಮ್ಯ ಸಮರ್ಥನೆ

**तत्वप्रदीपः –**
**तेन विष्णोस्तु वर्पाख्यान् गुणानज्ञासिषुः परान् ।**
**ईशानासः सूरयश्च निगूढान्निर्गुणोक्तिभिः ।।**

'ವರ್ಪಸ ಈಶಾನಾಸಃ ಶವಸಾ ಕ್ರಂತ ಸೂರಯಃ' ಎಂಬ ಶ್ರುತಿಯ ಅರ್ಥವನ್ನು ಹೇಳುತ್ತಿದ್ದಾರೆ. ಶ್ರೀಮದಾಚಾರ್ಯರು ವಿಷ್ಣುವಿನಲ್ಲಿರುವ ಶ್ರೇಷ್ಠವಾದ ಗುಣಗಳನ್ನು ಎಲ್ಲೆಡೆ ಪ್ರಚಾರ ಮಾಡಿದರು. ರುದ್ರಾದಿ ದೇವತೆಗಳು ಹಾಗೂ ಋಷಿಗಳು ಪರಮಾತ್ಮನಲ್ಲಿ ಇರುವ ಶ್ರೇಷ್ಠಗುಣಗಳನ್ನು ಅನಾಯಾಸವಾಗಿ ತಿಳಿದರು. ಶ್ರುತಿಯಲ್ಲಿ ಪರಮಾತ್ಮನು ನಿರ್ಗುಣನಾಗಿದ್ದಾನೆಂದು ಆಪಾತತಃ ತೋರುವ ವಾಕ್ಯಗಳಿಂದಲೂ ಪರಮಾತ್ಮನು ಪ್ರಾಕೃತ ಗುಣಗಳಿಂದ ರಹಿತನಾಗಿ ಸದ್‌ಗುಣಗಳಿಂದ ಪರಿಪೂರ್ಣನಾಗಿದ್ದಾನೆಂದು ತಿಳಿದರು.

ಇಂಥ ಮಧ್ವರನ್ನು ನೀಡಿದ ವಿಷ್ಣುವಿಗೆ ನಮೋ ನಮಃ

**तत्वप्रदीपः –**
**त्रेतायां द्वापरे चैव कलौ चैते क्रमात् त्रयः ।**
**एतेषां परमो विष्णुर्नेता सर्वेश्वरेश्वरः ।**
**स्वयम्भुब्रह्मसंज्ञोऽसौ परस्मै ब्रह्मणे नमः ।।''**
**इति च यजुःसंहितायाम् ।**

ತ್ರೇತಾಯುಗ, ದ್ವಾಪರಯುಗ ಹಾಗೂ ಕಲಿಯುಗಗಳಲ್ಲಿ ಕ್ರಮವಾಗಿ ಹನುಮ, ಭೀಮ, ಮಧ್ವ ಎಂಬ ರೂಪದಿಂದ ವಾಯುದೇವರು ಅವತರಿಸಿ ವಿಷ್ಣುವೇ ಸರ್ವೋತ್ತಮನಾಗಿದ್ದಾನೆಂದು ಸಮರ್ಥನೆ ಮಾಡಿದರು. ಇವರೇ ಮುಂದೆ ಚತುರ್ಮುಖಬ್ರಹ್ಮ ಪದವಿಯನ್ನು ಪಡೆಯುತ್ತಾರೆ. ಇಂಥ ವಾಯುದೇವರನ್ನು ಮೂರು ಅವತಾರಗಳಿಂದ ನೀಡಿರುವ ಪರಬ್ರಹ್ಮನಿಗೆ ನಮಸ್ಕಾರ. ಹೀಗೆ ಯಜುಃಸಂಹಿತೆಯಲ್ಲಿ ಹೇಳಲಾಗಿದೆ.

ಇನ್ನು ಅನೇಕ ಶ್ರುತಿಗಳಿಂದ ಮಧ್ವರು ಪ್ರತಿಪಾದ್ಯರು

**तत्वप्रदीपः – अविप्रलम्बकत्वं चास्यावगम्यते । ''यद्वै किं च मनुरवदतद् तत् भेषजम्'' ''त्वा दूतासो मनुवद्वद् वदेम'' इत्यादिश्रुतेः । ''ते वायवे मनवे बाधिताय'' इति च ।**

ಮಧ್ವರಲ್ಲಿ ವಂಚನೆ ಗೊಳಿಸುವ ಬುದ್ಧಿ ಲವಲೇಶವೂ ಇರುವುದಿಲ್ಲ. ಶ್ರುತಿಯಿಂದ ಈ ವಿಷಯವು ಸಿದ್ಧವಾಗಿದೆ.

'ಯದ್ ವೈ ಕಿಂಚ ಮನುರವದತ್ ತದ್ ಭೇಷಜಮ್'

ಎಂಬ ಶ್ರುತಿಯು ಮನುನಾಮಕರಾದ ವಾಯುದೇವರ ಮಾತು ಔಷಧಿಯಂತೆ ದುಃಖ-ಪರಿಹಾರಕ.

'ತ್ವಾ ದೂತಸೋ ಮನುವದ್ ವದೇಮ'

'ವಾಯುದೇವರಂತೆ ನಾನೂ ಸಹ ನಿನ್ನ ದೂತನಾಗಿ ನಿನ್ನ ಸಂದೇಶವನ್ನು ಸಜ್ಜನರಿಗೆ ತಲುಪಿಸುವೆ'.

'ತೇ ವಾಯುವೇ ಮನವೇ ಬಾಧಿತಾಯ'

'ವಾಯುದೇವರಿಂದ ಉಪದೇಶ ಪಡೆದ ದೇವತೆಗಳು ದುಃಖಿಗಳಿಂದ ಶರಣ್ಯರಾದ ಮನುನಾಮಕರಾದ ವಾಯುದೇವರನ್ನು ಆರಾಧಿಸಿದರು'

ಹೀಗೆ ಶ್ರುತಿಗಳು ವಾಯುದೇವರ ಉಪದೇಶವು ಆತ್ಯಂತಿಕವಾಗಿ ಉದ್ಧಾರಕವೆಂದು ಹೊಗಳುತ್ತಿವೆ. ಆದ್ದರಿಂದ ವಾಯುದೇವರು ಅವಿಪ್ರಲಂಭಕರಾಗಿದ್ದಾರೆಂದು ದೃಢವಾಗುತ್ತದೆ.

ವಾಯುದೇವರು ಆಪ್ತತರರು

**तत्वप्रदीपः –**

**''ब्रह्माविष्णू हि सर्वस्य लोकेष्वाप्ततमौ मतौ ।**
**आप्तास्तदितरे ज्ञेया देवा मुनय एव च ।।'' इति विष्णुसंहितायाम् ।**

**वायुरेव हि ब्रह्मा भवति । ''वायुर्ह्येव प्रजापतिः । तदुक्तमृषिणा, पवमानः प्रजापतिः'' इति**

ಜ್ಞಾನಿಗಳ ಲೋಕದಲ್ಲಿ ಸಜ್ಜನರಿಗೆ ವಿಷ್ಣು ಆಪ್ತತಮನಾಗಿರುವನು, ಬ್ರಹ್ಮನು ಆಪ್ತತರನಾಗಿರುವನು. ಉಳಿದ ದೇವತೆಗಳು ಹಾಗೂ ಮುನಿಗಳು ಆಪ್ತರಾಗಿರುವರು. ಹೀಗೆ ವಿಷ್ಣುಸಂಹಿತೆಯು ವಾಯುದೇವರು ಬಲುಆಪ್ತರಾಗಿರುವುದರಿಂದ ಅವಿಪ್ರಲಂಭಕರೆಂದು ಹೇಳುತ್ತಿದೆ. ವಾಯುದೇವರನ್ನು ವಿಷ್ಣುಸಂಹಿತೆಯು ಬ್ರಹ್ಮಪದದಿಂದ ಕರೆದಿದೆ. ಮಂತ್ರದ್ರಷ್ಟಾರರಾದ ಋಷಿಗಳು ವಾಯುದೇವರನ್ನು ಬ್ರಹ್ಮ ಎಂದು ತಿಳಿದಿದ್ದಾರೆ. 'ಪವಮಾನಃ ಪ್ರಜಾಪತಿಃ' ಪವಮಾನನೇ ಪ್ರಜಾಪತಿಯಾಗಿದ್ದಾನೆಂದು ಪವಮಾನ ಸೂಕ್ತವು ಹೇಳುತ್ತಿದೆ.

ವಾಯುದೇವರೇ ಜೀವೋತ್ತಮರು

**तत्वप्रदीपः –**

**''य आत्मदा बलदा यस्य विश्वे उपासते प्रशिषं यस्य देवाः ।**
**ततो देवानां समवर्ततासुरेकः कस्मै देवाय हविषा विधेम ।।''**
**इत्यादिश्रुतिः ।।**

'ಯಾವ ವಾಯುದೇವರು ಜ್ಞಾನದ ಮೂಲಕ ಪರಮಾತ್ಮನನ್ನು ತಿಳಿಸಿರುವರೋ ಸಾಧನೆಗಾಗಿ ಶಕ್ತಿಯನ್ನು ನೀಡಿರುವರೋ ಅಂಥ ವಾಯುದೇವರ ಅಧೀನರಾಗಿ ಸಕಲಜೀವರು ಬದುಕಿರುವರು. ಈ ವಾಯುದೇವರನ್ನು ದೇವತೆಗಳೆಲ್ಲರೂ ಉಪಾಸನೆಗೈವರು' ಎಂಬುದಾಗಿ ಹಿರಣ್ಯಗರ್ಭಸೂಕ್ತವು ವಾಯುದೇವರನ್ನು ತತ್ವಜ್ಞಾನಪ್ರದರೆಂದು ಪ್ರಶಂಸಿಸುತ್ತಿದೆ. ಇದೇ ಸೂಕ್ತವು ಪುನಃ ಮುಂದೆ ಹೀಗೆ

ಹೇಳಿದೆ - 'ತತೋ ದೇವಾನಾಂ ಸಮವರ್ತತಾಸುರೇಕಃ ಕಸ್ಮೈ ದೇವಾಯ ಹವಿಷಾ ವಿಧೇಮ' ದೇವತೆಗಳ ಮಧ್ಯದಲ್ಲಿ ವಾಯುದೇವರೊಬ್ಬರೇ ಉತ್ತಮರಾಗಿದ್ದಾರೆ. ಆದ್ದರಿಂದ ಆ ವಾಯುದೇವರಿಗೆ ಈ ಹವಿಸ್ಸನ್ನು ಸಮರ್ಪಿಸುತ್ತಿದ್ದೇನೆ ಇತ್ಯಾದಿಯಾಗಿ ಹೇಳಿದೆ.

### ವಿಷ್ಣು ಬುದ್ಧಾವತಾರದಲ್ಲಿ ಮೋಸ ಮಾಡಿಲ್ಲ

**तत्वप्रदीपः – नच बुद्धरूपे विप्रलम्भकत्वं विष्णोः शङ्क्यम् । तत्र श्रोतॄणामसुराणामयोग्यत्वादन्यथामतिर्जाता, नान्यथावचननिमित्ता ।**

ಪ್ರಶ್ನೆ - ಬುದ್ಧಾವತಾರದಲ್ಲಿ ವಿಷ್ಣು ಮೋಸ ಮಾಡಿರುವುದು ಪ್ರಸಿದ್ಧವಾಗಿದೆ. ಆಪ್ತತಮನಾದ ವಿಷ್ಣುವೇ ಮೋಸ ಮಾಡಿದ ಮೇಲೆ ವಿಷ್ಣುವಿಗಿಂತಲೂ ಕಡಿಮೆ ಸ್ಥಾನದಲ್ಲಿ ಆಪ್ತರಾದ ವಾಯುದೇವರೂ ಕೂಡ ಮೋಸ ಮಾಡಿರಬಹುದಲ್ಲವೇ?

ಉತ್ತರ - ವಿಷ್ಣು ಬುದ್ಧವತಾರದಲ್ಲಿ ಸರ್ವಥಾ ಮೋಸ ಮಾಡಿರುವುದಿಲ್ಲ. ಅಸುರರು ಅಯೋಗ್ಯರಾಗಿರುವ ಕಾರಣ ಅನ್ಯಥಾ ಜ್ಞಾನವನ್ನು ಪಡೆದರು. ಅಸುರರು ಪಡೆದ ಅನ್ಯಥಾ ಜ್ಞಾನಕ್ಕೆ ವಕ್ತೃವಿನಲ್ಲಿರುವ ವಂಚಕತ್ವವು ಕಾರಣವಲ್ಲ. ತಮ್ಮಲ್ಲಿರುವ ಬುದ್ಧಿದೋಷವೇ ಕಾರಣವಾಗಿದೆ. ರಾಗ-ದ್ವೇಷಗಳಿಂದ ಕೂಡಿದ ಅಸುರರಿಗೆ ಬುದ್ಧನ ಮಾತುಗಳೆಲ್ಲವೂ ಅಪಾರ್ಥವಾದವು.

### ಬುದ್ಧನ ಮಾತುಗಳೇ ಪ್ರಶಾಂತವಿದ್ಯೆ ಎನಿಸಿದವು

**तत्वप्रदीपः – इतरेषां रागादिमत्त्वादन्यथा मतिर्युक्ता । विष्णोस्तु तदभावश्रुतेर्न वक्तृदोषकृतो मोहः । स एव हि तानि सूत्राणि तत्त्वविषयाणि प्रशान्तसंहितायामञ्जसा देवेभ्यो व्याचख्यौ ।**

ವಿಷ್ಣುವಿನಲ್ಲಿ ರಾಗ-ದ್ವೇಷ ಮೊದಲಾದ ಯಾವುದೇ ದೋಷಗಳಿಲ್ಲದ ಕಾರಣ ವಕ್ತೃದೋಷವನ್ನು ಕಲ್ಪನೆ ಮಾಡಬಾರದು. ಏಕೆಂದರೆ ಅದೇ ವಿಷ್ಣುವೇ ಅಸುರರಿಗೆ ಯಾವ ಸೂತ್ರಗಳನ್ನು ಉಪದೇಶಿಸಿದನೋ ಅದೇ ಸೂತ್ರಗಳನ್ನು ದೇವತೆಗಳಿಗೂ ಉಪದೇಶಿಸಿದನು. ತತ್ವವನ್ನು ಪ್ರತಿಪಾದನೆ ಮಾಡುವ ಮೂಲಕ 'ಪ್ರಶಾಂತಸಂಹಿತೆ' ಎಂದು ಅದೇ ಸೂತ್ರಗಳು ಖ್ಯಾತಿ ಪಡೆದವು.

ವೇದವ್ಯಾಸದೇವರು ಯಾವ ಪುರಾಣದಲ್ಲಿಯೂ ಮೋಹಕ ಮಾತುಗಳನ್ನಾಡಿಲ್ಲ

**तत्वप्रदीपः – न च पुराणादिष्वन्यथोक्तिः । यतः सूत्रकर्ता भगवान् व्यास एव पुराणादिकर्ताऽपि । न च तद्वाक्यं कचिदप्रमाणमाशङ्क्यम् । आप्तिसाम्यात् । ''सर्वत्र भगवत्प्रमाणात् भगवद्वचनप्रामाण्यम्'' इति मूलश्रुतिः । पूर्वपक्षसिद्धान्तविभागापरिज्ञानकृतश्च तत्र मोहः स्यात् ।**

ಪ್ರಶ್ನೆ - ಬುದ್ಧಾವತಾರದಲ್ಲಿ ಮೋಸ ಮಾಡುವ ಮಾತುಗಳನ್ನು ವಿಷ್ಣು ಹೇಳದಿರಬಹುದು. ಆದರೆ ಕೆಲವು ಪುರಾಣಗಳಲ್ಲಿ ವಿಷ್ಣುವಿನ ಅವತಾರ ಸ್ವರೂಪರಾದ ವೇದವ್ಯಾಸದೇವರು ಮೋಹಕವಾದ ಮಾತುಗಳನ್ನು ಹೇಳಿದ್ದಾರಲ್ಲವೇ?

ಉತ್ತರ - ಸೂತ್ರಕಾರರಾದ ಭಗವಾನ್ ವೇದವ್ಯಾಸದೇವರೇ ಪುರಾಣಾದಿಗಳನ್ನು ಕೂಡ ರಚನೆ ಮಾಡಿರುವರು. ಸೂತ್ರಕಾರರಾದ ಇವರ ಮಾತು ಅಪ್ರಾಮಾಣವಾಗುತ್ತದೆಂದು ಎಂದೂ ಕೂಡ ಶಂಕೆ ಮಾಡಲೇ ಬಾರದು. ಸೂತ್ರಗಳು ಆಪ್ತೋಕ್ತಗಳಾದ್ದರಿಂದ ಪ್ರಮಾಣವೆಂದು ಒಪ್ಪಿದ ಮೇಲೆ ಪುರಾಣಾದಿಗಳೂ ಕೂಡ ಆಪ್ತೋಕ್ತವಾದ್ದರಿಂದ ಪ್ರಮಾಣವೆಂದು ಒಪ್ಪಿಕೊಳ್ಳಲೇ ಬೇಕು. ಈ ವಿಷಯದಲ್ಲಿ ಶ್ರುತಿಸಂವಾದವು ಹೀಗಿದೆ - ''ಸರ್ವತ್ರ ಭಗವತ್ ಪ್ರಮಾಣಾತ್ ಭಗವದ್ ವಚನಪ್ರಾಮಾಣ್ಯಮ್'' ಭಗವಂತನೇ ಸ್ವತಃ ಪ್ರಮಾಣನಾದ್ದರಿಂದ (ಭಗವಂತನು ಆಪ್ತತಮನಾದ್ದರಿಂದ) ಭಗವಂತನ ಮಾತುಗಳು ಪ್ರಮಾಣವಾಗಿವೆಂದು ಸಿದ್ಧವಾಯಿತು. ಪುರಾಣಗಳಲ್ಲಿ ಕೆಲವು ವಾಕ್ಯಗಳು ಪೂರ್ವಪಕ್ಷವನ್ನು ಮಂಡಿಸುತ್ತವೆ. ಇಂಥ ವಾಕ್ಯಗಳನ್ನು ಸಿದ್ಧಾಂತ ವಾಕ್ಯಗಳೆಂದು ಅಸುರರು ಭ್ರಮಿಸುವರು. ಹೀಗೆ ಪೂರ್ವಪಕ್ಷವಾಕ್ಯಗಳ ಹಾಗೂ ಸಿದ್ಧಾಂತವಾಕ್ಯಗಳ ಜ್ಞಾನವಿಲ್ಲದ ಅಸುರರು ಮೋಹಿತರಾಗುವರು.

ವೇದವ್ಯಾಸರ ಭಾಷೆಯನ್ನು ಅರ್ಥಮಾಡಿಕೊಳ್ಳದವರಿಗೆ ನರಕವೇ ಗತಿ

**तत्वप्रदीपः – तच्च भाषारीतिविशेषाज्ञानात् भवति । तथाच ब्राह्मे -**
**''भाषात्रयं न जानाति रीतीनां शतमेव च ।**
**पुराणार्थं वदन् याति नरकं नात्र संशयः ।।'' इति ।**

ಪುರಾಣಗಳಲ್ಲಿರುವ ಶ್ಲೋಕಗಳು ಪೂರ್ವಪಕ್ಷವನ್ನು ಹೇಳಲು ಹೊರಟಿವೆಯೋ ಅಥವಾ ಸಿದ್ಧಾಂತವನ್ನು ಹೇಳಲು ಹೊರಟಿವೆಯೋ ? ಈ ಗೊಂದಲ ಸಹಜ. ಇದನ್ನು ಗುರುತಿಸಲು ಪುರಾಣಗಳ ಭಾಷೆಯ ವಿಭಾಗಗಳನ್ನು ವಿಶೇಷವಾಗಿ ತಿಳಿದಿರಬೇಕು. ಅಂಥವರು ಮಾತ್ರ ಪುರಾಣಗಳನ್ನು ಓದಲು ನಿಜವಾದ ಅಧಿಕಾರಿಗಳೆಂಬುದನ್ನು ಬ್ರಾಹ್ಮಪುರಾಣವು ಸ್ಪಷ್ಟಪಡಿಸಿದೆ.

''ಭಾಷಾತ್ರಯಂ ನ ಜಾನಾತಿ ರೀತೀನಾಂ ಶತಮೇವ ಚ ।
ಪುರಾಣಾರ್ಥಂ ವದನ್ಯಾತಿ ನರಕಂ ನಾತ್ರ ಸಂಶಯಃ ॥''

ಪುರಾಣಗಳ ಮೂರು ಭಾಷೆಗಳನ್ನು ನೂರು ರೀತಿಗಳನ್ನು ಅರಿಯದೆ ಪುರಾಣಗಳ ಅರ್ಥಗಳನು ಹೇಳುವವನು ನರಕಕ್ಕೆ ಹೋಗುವುದರಲ್ಲಿ ಸಂಶಯವೇ ಇಲ್ಲ.

### ಶೈವಾದಿ ಪುರಾಣಗಳಲ್ಲಿಯೂ ಒಂದೇ ಒಂದು ಮಾತೂ ಷಹ ವೇದವಿರುದ್ಧವಲ್ಲ

**ತತ್ವಪ್रदीपः – न पुराणानां स्वतोऽन्योन्यं वा विरोधः । शैवादिपुराणेषु दर्शनभाषाप्राचुर्याद्वेदाननुसारित्वमिव प्रतीयते । नतु तदस्ति । तत्रापि विष्णोः सर्वोत्तमत्वमेव सिद्धान्तसारः ।**

ಪ್ರಶ್ನೆ - ಪುರಾಣಗಳಲ್ಲಿ ಪರಸ್ಪರ ವಿರೋಧವಿದೆ. ವ್ಯಾಹತವಾದ ಪುರಾಣವಾಕ್ಯಗಳನ್ನು ಪ್ರಮಾಣವೆಂದು ಹೇಗೆ ಒಪ್ಪುವುದು ? ಮಂದಮತಿಗಳಿಗಷ್ಟೇ ಪುರಾಣಗಳು ಪರಸ್ಪರ ವಿರುದ್ಧವಾದಂತೆ ತೋರುತ್ತವೆ. ಮೂರು ಭಾಷೆಗಳನ್ನು ಭಾಷೆಯ ನೂರು ರೀತಿಯನ್ನು ಯಾರು ತಿಳಿದಿರುತ್ತಾರೋ ಅವರಿಗೆ ಪರಸ್ಪರ ವಿರೋಧವು ತೋರುವುದೇ ಇಲ್ಲ. ಶೈವಪುರಾಣ, ಸ್ಕಾಂದಪುರಾಣ ಮೊದಲಾದವುಗಳಲ್ಲಿ ದರ್ಶನಭಾಷೆಯು ಹೆಚ್ಚು ಇರುವ ಕಾರಣ ವೇದವಿರುದ್ಧವಾಗಿ ಹೇಳಿದಂತೆ ಕಾಣಸುತ್ತದೆ. ಆದರೆ ಶೈವಾದಿ ಪುರಾಣಗಳಲ್ಲಿಯೂ ಕೂಡ ವೇದವಿರುದ್ಧವಾಗಿ ಒಂದೇ ಒಂದು ವಾಕ್ಯವು ಇರುವುದಿಲ್ಲ. ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡುವುದೇ ಈ ಪುರಾಣಗಳ ಸಿದ್ಧಾಂತ ಸಾರ.

ವಿಶೇಷ ವಿಚಾರ - ಮೂರುಭಾಷ್ಯಗಳ ಬಗ್ಗೆ ಶ್ರೀಮಹಾಭಾರತ ತಾತ್ಪರ್ಯನಿರ್ಣಯದ ಎರಡನೆಯ ಅಧ್ಯಾಯದಲ್ಲಿ ಶ್ರೀಮದಾಚಾರ್ಯರು ಸ್ಪಷ್ಟವಾಗಿ ತಿಳಿಸಿಕೊಟ್ಟಿದ್ದಾರೆ. ಅದನ್ನು ಪ್ರಾಸಂಗಿಕವಾಗಿ ಇಲ್ಲಿ ನೀಡಲಾಗಿದೆ.

ಉಕ್ತೋ ಯೋ ಮಹಿಮಾ ವಿಷ್ಣೋಃ ಸ ತೂಕ್ತೋ ಹಿ ಸಮಾಧಿನಾ ।
ಶೈವದರ್ಶನಮಾಲಂಬ್ಯ ಕ್ವಚಿತ್ ಶೈವೀ ಕಥೋದಿತಾ ॥

ತಾತ್ಪರ್ಯ - ಸ್ಪಷ್ಟವಾಗಿ ಹೇಳಿದ ವಿಷ್ಣುಮಹಿಮೆಯು ಸಮಾಧಿಭಾಷೆಯಿಂದಲೇ ಹೇಳಲ್ಪಟ್ಟಿದ್ದೆಂದು ತಿಳಿಯಬೇಕು. ಸಮಾಧಾನವುಳ್ಳ ಮನಸ್ಸಿನಿಂದ ಅಂದರೆ ಏಕಾಗ್ರತೆಯುಳ್ಳ ಮನಸ್ಸಿನಿಂದ ಹೇಳಲ್ಪಟ್ಟಿದ್ದು. ಆದ್ದರಿಂದ ಅದು ಸಮಾಧಿ ಭಾಷೆಯೆನಿಸುವುದು. ಶಿವನ ಉತ್ಕರ್ಷವನ್ನೂ ಕೆಲವು ಕಡೆ ಹೇಳಲಾಗಿದೆ. ಅದು ಶೈವದರ್ಶನ ಪ್ರಕಾರ ಹೇಳಿದ್ದೆಂದು ತಿಳಿಯಬೇಕು.

ವಿಶೇಷ ವಿಚಾರ :- ಸಮಾಹಿತ ಮನಸ್ಸಿನಿಂದ, ಅಂದರೆ ಚಿತ್ತೈಕಾಗ್ರತೆಯಿಂದ, ಹೇಳಿದ್ದು ಸಮಾಧಿ ಭಾಷೆ. ಉದಾಹರಣೆ - 'ನಾಸ್ತಿ ನಾರಾಯಣ ಸಮಂ' 'ರುದ್ರಂ ಸಮಾಶ್ರಿತಾ ದೇವಾಃ' 'ಸತ್ಯಂ ಸತ್ಯಂ ಪುನಃ ಸತ್ಯಂ' ಇವೇ ಮೊದಲಾದ ಶ್ಲೋಕಗಳು ಸಮಾಧಿಭಾಷೆಯಿಂದ ಹೇಳಲ್ಪಟ್ಟವೆ.

ಸಮಾಧಿಭಾಷಯೋಕ್ತಂ ಯತ್ ತತ್ ಸರ್ವಂ ಗ್ರಾಹ್ಯಮೇವ ಹಿ ।
ಅವಿರುದ್ಧಂ ಸಮಾಧೇಸ್ತು ದರ್ಶನೋಕ್ತಂ ಚ ಗೃಹ್ಯತೇ ॥

ತಾತ್ಪರ್ಯ - ಸಮಾಧಿಭಾಷೆಯಲ್ಲಿ ಹೇಳಿದ್ದೆಲ್ಲ ಗ್ರಾಹ್ಯವೇ ಆಗಿದೆ. ದರ್ಶನ ಭಾಷೆಯಿಂದ ಹೇಳಿದ್ದೂ ಕೂಡ ಸಮಾಧಿಭಾಷೆಯಿಂದ ಹೇಳಿದ ಪ್ರಮೇಯಕ್ಕೆ ಅವಿರುದ್ಧವಾಗಿದ್ದರೆ ಅದೂ ಗ್ರಾಹ್ಯವೇ.

ಆದ್ಯಂತಯೋರ್ವಿರುದ್ಧಂ ಯುದ್ದರ್ಶನೇ ತದುದಾಹೃತಮ್ ।
ದರ್ಶನಾಂತರಸಿದ್ಧಂ ಚ, ಗುಹ್ಯಭಾಷಾऽನ್ಯಥಾ ಭವೇತ್ ॥

ತಾತ್ಪರ್ಯ - ಯಾವುದೇ ಗ್ರಂಥದ ಆದಿ ಅಂತ್ಯಗಳಲ್ಲಿರುವ ಪ್ರಮೇಯಕ್ಕೆ ವಿರುದ್ಧವಾದ ಯಾವುದಾದರೂ ವಿಷಯವು ಮಧ್ಯದಲ್ಲಿ ಬಂದರೆ ಅದು ಇತರ ದರ್ಶನದಲ್ಲಿ ಸಿದ್ಧವಾದ ವಿಷಯವಾಗಿದ್ದರೆ, ಅದನ್ನು ದರ್ಶನಭಾಷೆಯಿಂದ ಹೇಳಲಾಗಿದೆ ಎಂದು ತಿಳಿಯಬೇಕು.

ಸ್ಪಷ್ಟಾರ್ಥಕವಾದ ಸಮಾಧಿಭಾಷೆಯೂ ಅಲ್ಲದೇ, ದರ್ಶನಭಾಷೆಯೂ ಅಲ್ಲದೇ ಬೇರೆ ಪ್ರಕಾರದಿಂದ ಹೇಳಿದ್ದರೆ ಅದು ಗುಹ್ಯಭಾಷೆ ಎಂದು ತಿಳಿಯಬೇಕು.

ವಿಶೇಷ ವಿಚಾರ - ಭಾರತದ ಆದಿಯಲ್ಲಿ ಹೇಳಿದ ಕೃಷ್ಣಮಹಿಮೆಗೂ ಮತ್ತು ಅಂತ್ಯದಲ್ಲಿ ಹೇಳಿದ ಕೃಷ್ಣನ ಉತ್ತಮತ್ವಕ್ಕೂ ಶ್ರೀಕೃಷ್ಣನು ರುದ್ರದೇವರನ್ನು ಪೂಜಿಸಿದ್ದಾನೆಂಬ ವಿರುದ್ಧವಾದ ಪ್ರಮೇಯ ಮಧ್ಯದಲ್ಲಿ ಬಂದಿದೆ. ಇದು ವೈಷ್ಣವದರ್ಶನಕ್ಕೆ ವಿರುದ್ಧವಾದ ಶೈವದರ್ಶನದಲ್ಲಿ ಸಿದ್ಧವಾದದ್ದು. ಇದನ್ನು ಭಾರತದಲ್ಲಿ ಅಜ್ಞಜನಮೋಹನಾರ್ಥವಾಗಿ ಹೇಳಿದ್ದಾರೆ. ಇದು ದರ್ಶನಭಾಷೆಯಿಂದ ಹೇಳಲ್ಪಟ್ಟಿದ್ದೆಂದು ಅಭಿಪ್ರಾಯ.

ಅಟ್ಟಶೂಲಾ ಜನಪದಾಃ ಶಿವಶೂಲಾಶ್ಚತುಷ್ಪಥಾಃ ।
ಪ್ರಮದಾಃ ಕೇಶಶೂಲಿನ್ಯೋ ಭವಿಷ್ಯಂತಿ ಕಲೌಯುಗೇ ॥

ಎಂದು ಗೂಢಾರ್ಥಕ ಪದಗಳನ್ನು ಸೇರಿಸಿ ಹೇಳಿದರೆ ಅದು ಗುಹ್ಯಭಾಷೆ ಎಂದರ್ಥ.

(ಈ ಶ್ಲೋಕದ ಅರ್ಥ :- ಕಲಿಯುಗದಲ್ಲಿ ಜನರು ಅನ್ನ ಮಾರಿ ಬದುಕುತ್ತಾರೆ. ಬ್ರಾಹ್ಮಣರು ವೇದ ವಿದ್ಯೆಯನ್ನು ಮಾರಿ ಬದುಕುತ್ತಾರೆ. ಸ್ತ್ರೀಯರು ದೇಹ ಮಾರಿ ಬದುಕುತ್ತಾರೆ)

[೧]ಸಮಾಧಿಭಾಷೆ, ದರ್ಶನಭಾಷೆ, ಗುಹ್ಯಭಾಷೆಗಳು ಮೂರರಂತೆ ವಿಂಗಡಣೆ ಹೊಂದಿ ಒಂಬತ್ತು ಬಗೆಗಳಾಗುತ್ತವೆ.

| | | |
|---|---|---|
| ೧. ಸಮಾಧಿಸಮಾಧಿಭಾಷಾ | ೨. ಸಮಾಧಿದರ್ಶನಭಾಷಾ | ೩. ಸಮಾಧಿಗುಹ್ಯಭಾಷಾ |
| ೪. ದರ್ಶನಸಮಾಧಿಭಾಷಾ | ೫. ದರ್ಶನದರ್ಶನಭಾಷಾ | ೬. ದರ್ಶನಗುಹ್ಯಭಾಷಾ |
| ೭. ಗುಹ್ಯಸಮಾಧಿಭಾಷಾ | ೮. ಗುಹ್ಯದರ್ಶನಭಾಷಾ | ೯. ಗುಹ್ಯಗುಹ್ಯಭಾಷಾ |

ಈ ಒಂಬತ್ತು ಭಾಷೆಗಳು ಪುನಃ ಮೂರರಂತೆ ವಿಂಗಡಣೆ ಹೊಂದಿ ಇಪ್ಪತ್ತೇಳು ಬಗೆಗಳಾಗುತ್ತವೆ.

| | | |
|---|---|---|
| ೧. ಸಮಾಧಿಸಮಾಧಿಸಮಾಧಿಭಾಷಾ | ೨. ಸಮಾಧಿಸಮಾಧಿದರ್ಶನಭಾಷಾ | ೩. ಸಮಾಧಿಸಮಾಧಿಗುಹ್ಯಭಾಷಾ |
| ೪. ಸಮಾಧಿದರ್ಶನಸಮಾಧಿಭಾಷಾ | ೫. ಸಮಾಧಿದರ್ಶನದರ್ಶನಭಾಷಾ | ೬. ಸಮಾಧಿದರ್ಶನಗುಹ್ಯಭಾಷಾ |
| ೭. ಸಮಾಧಿಗುಹ್ಯಸಮಾಧಿಭಾಷಾ | ೮. ಸಮಾಧಿಗುಹ್ಯದರ್ಶನಭಾಷಾ | ೯. ಸಮಾಧಿಗುಹ್ಯಗುಹ್ಯಭಾಷಾ |
| ೧೦. ದರ್ಶನಸಮಾಧಿಸಮಾಧಿಭಾಷಾ | ೧೧. ದರ್ಶನಸಮಾಧಿದರ್ಶನಭಾಷಾ | ೧೨.ದರ್ಶನಸಮಾಧಿಗುಹ್ಯಭಾಷಾ |
| ೧೩. ದರ್ಶನದರ್ಶನಸಮಾಧಿಭಾಷಾ | ೧೪. ದರ್ಶನದರ್ಶನದರ್ಶನಭಾಷಾ | ೧೫. ದರ್ಶನದರ್ಶನಗುಹ್ಯಭಾಷಾ |

(೧) ವಿದ್ವಾನ್ ಬನ್ನಂಜೆ ಗೋವಿಂದಾಚಾರ್ಯರು ಮೂರು ಭಾಷ್ಯಗಳ ವಿಗಂಡಣೆಯನ್ನು ತಮ್ಮ ನಿರ್ಣಯಭಾವಚಂದ್ರಿಕೆಯಲ್ಲಿ ನೀಡಿದ್ದಾರೆ. ಅದನ್ನು ಯಥಾವತ್ತಾಗಿ ಇಲ್ಲಿ ಮುದ್ರಿಸಲಾಗಿದೆ.

| | | |
|---|---|---|
| ೧೬. ದರ್ಶನಗುಹ್ಯಸಮಾಧಿಭಾಷಾ | ೧೭. ದರ್ಶನಗುಹ್ಯದರ್ಶನಭಾಷಾ | ೧೮. ದರ್ಶನಗುಹ್ಯಗುಹ್ಯಭಾಷಾ |
| ೧೯. ಗುಹ್ಯಸಮಾಧಿಸಮಾಧಿಭಾಷಾ | ೨೦. ಗುಹ್ಯಸಮಾಧಿದರ್ಶನಭಾಷಾ | ೨೧. ಗುಹ್ಯಸಮಾಧಿಗುಹ್ಯಭಾಷಾ |
| ೨೨. ಗುಹ್ಯದರ್ಶನಸಮಾಧಿಭಾಷಾ | ೨೩. ಗುಹ್ಯದರ್ಶನದರ್ಶನಭಾಷಾ | ೨೪. ಗುಹ್ಯದರ್ಶನಗುಹ್ಯಭಾಷಾ |
| ೨೫. ಗುಹ್ಯದರ್ಶನಸಮಾಧಿಭಾಷಾ | ೨೬. ಗುಹ್ಯಗುಹ್ಯದರ್ಶನಭಾಷಾ | ೨೭. ಗುಹ್ಯಗುಹ್ಯಗುಹ್ಯಭಾಷಾ |

ಈ ಇಪ್ಪತ್ತೇಳು ಭಾಷೆಗಳು ಪುನಃ ಮೂರರಂತೆ ವಿಂಗಡಣೆಯಾದಾಗ ಪುರಾಣದ ಭಾಷೆಗಳು ಎಂಬತ್ತೊಂದು ಬಗೆಗಳಾಗುತ್ತವೆ.

| | |
|---|---|
| ೧. ಸಮಾಧಿಸಮಾಧಿಸಮಾಧಿಸಮಾಧಿಭಾಷಾ | ೨. ಸಮಾಧಿಸಮಾಧಿಸಮಾಧಿದರ್ಶನಭಾಷಾ |
| ೩. ಸಮಾಧಿಸಮಾಧಿಸಮಾಧಿಗುಹ್ಯಭಾಷಾ | ೪. ಸಮಾಧಿಸಮಾಧಿದರ್ಶನಸಮಾಧಿಭಾಷಾ |
| ೫. ಸಮಾಧಿಸಮಾಧಿದರ್ಶನದರ್ಶನಭಾಷಾ | ೬. ಸಮಾಧಿಸಮಾಧಿದರ್ಶನಗುಹ್ಯಭಾಷಾ |
| ೭. ಸಮಾಧಿಸಮಾಧಿಗುಹ್ಯಸಮಾಧಿಭಾಷಾ | ೮. ಸಮಾಧಿಸಮಾಧಿಗುಹ್ಯದರ್ಶನಭಾಷಾ |
| ೯. ಸಮಾಧಿಸಮಾಧಿಗುಹ್ಯಗುಹ್ಯಭಾಷಾ | ೧೦. ಸಮಾಧಿದರ್ಶನಸಮಾಧಿಸಮಾಧಿಭಾಷಾ |
| ೧೧. ಸಮಾಧಿದರ್ಶನಸಮಾಧಿದರ್ಶನಭಾಷಾ | ೧೨. ಸಮಾಧಿದರ್ಶನಸಮಾಧಿಗುಹ್ಯಭಾಷಾ |
| ೧೩. ಸಮಾಧಿದರ್ಶನದರ್ಶನಸಮಾಧಿಭಾಷಾ | ೧೪. ಸಮಾಧಿದರ್ಶನದರ್ಶನದರ್ಶನಭಾಷಾ |
| ೧೫. ಸಮಾಧಿದರ್ಶನದರ್ಶನಗುಹ್ಯಭಾಷಾ | ೧೬. ಸಮಾಧಿದರ್ಶನಗುಹ್ಯಸಮಾಧಿಭಾಷಾ |
| ೧೭. ಸಮಾಧಿದರ್ಶನಗುಹ್ಯದರ್ಶನಭಾಷಾ | ೧೮. ಸಮಾಧಿದರ್ಶನಗುಹ್ಯಗುಹ್ಯಭಾಷಾ |
| ೧೯. ಸಮಾಧಿಗುಹ್ಯಸಮಾಧಿಸಮಾಧಿಭಾಷಾ | ೨೦. ಸಮಾಧಿಗುಹ್ಯಸಮಾಧಿದರ್ಶನಭಾಷಾ |
| ೨೧. ಸಮಾಧಿಗುಹ್ಯಸಮಾಧಿಗುಹ್ಯಭಾಷಾ | ೨೨. ಸಮಾಧಿಗುಹ್ಯದರ್ಶನಸಮಾಧಿಭಾಷಾ |
| ೨೩. ಸಮಾಧಿಗುಹ್ಯದರ್ಶನದರ್ಶನಭಾಷಾ | ೨೪. ಸಮಾಧಿಗುಹ್ಯದರ್ಶನಗುಹ್ಯಭಾಷಾ |
| ೨೫. ಸಮಾಧಿಗುಹ್ಯಗುಹ್ಯಸಮಾಧಿಭಾಷಾ | ೨೬. ಸಮಾಧಿಗುಹ್ಯಗುಹ್ಯದರ್ಶನಭಾಷಾ |
| ೨೭. ಸಮಾಧಿಗುಹ್ಯಗುಹ್ಯಗುಹ್ಯಭಾಷಾ | ೨೮. ದರ್ಶನಸಮಾಧಿಸಮಾಧಿಸಮಾಧಿಭಾಷಾ |
| ೨೯. ದರ್ಶನಸಮಾಧಿಸಮಾಧಿದರ್ಶನಭಾಷಾ | ೩೦. ದರ್ಶನಸಮಾಧಿಸಮಾಧಿಗುಹ್ಯಭಾಷಾ |
| ೩೧. ದರ್ಶನಸಮಾಧಿದರ್ಶನಸಮಾಧಿಭಾಷಾ | ೩೨. ದರ್ಶನಸಮಾಧಿದರ್ಶನದರ್ಶನಭಾಷಾ |
| ೩೩. ದರ್ಶನಸಮಾಧಿದರ್ಶನಗುಹ್ಯಭಾಷಾ | ೩೪. ದರ್ಶನಸಮಾಧಿಗುಹ್ಯಸಮಾಧಿಭಾಷಾ |
| ೩೫. ದರ್ಶನಸಮಾಧಿಗುಹ್ಯದರ್ಶನಭಾಷಾ | ೩೬. ದರ್ಶನಸಮಾಧಿಗುಹ್ಯಗುಹ್ಯಭಾಷಾ |
| ೩೭. ದರ್ಶನದರ್ಶನಸಮಾಧಿಸಮಾಧಿಭಾಷಾ | ೩೮. ದರ್ಶನದರ್ಶನಸಮಾಧಿದರ್ಶನಭಾಷಾ |
| ೩೯. ದರ್ಶನದರ್ಶನಸಮಾಧಿಗುಹ್ಯಭಾಷಾ | ೪೦. ದರ್ಶನದರ್ಶನದರ್ಶನಸಮಾಧಿಭಾಷಾ |
| ೪೧. ದರ್ಶನದರ್ಶನದರ್ಶನದರ್ಶನಭಾಷಾ | ೪೨. ದರ್ಶನದರ್ಶನದರ್ಶನಗುಹ್ಯಭಾಷಾ |

೪೩. ದರ್ಶನದರ್ಶನಗುಹ್ಯಸಮಾಧಿಭಾಷಾ
೪೪. ದರ್ಶನದರ್ಶನಗುಹ್ಯದರ್ಶನಭಾಷಾ
೪೫. ದರ್ಶನದರ್ಶನಗುಹ್ಯಗುಹ್ಯಭಾಷಾ
೪೬. ದರ್ಶನಗುಹ್ಯಸಮಾಧಿಸಮಾಧಿಭಾಷಾ
೪೭. ದರ್ಶನಗುಹ್ಯಸಮಾಧಿದರ್ಶನಭಾಷಾ
೪೮. ದರ್ಶನಗುಹ್ಯಸಮಾಧಿಗುಹ್ಯಭಾಷಾ
೪೯. ದರ್ಶನಗುಹ್ಯದರ್ಶನಸಮಾಧಿಭಾಷಾ
೫೦ ದರ್ಶಗುಹ್ಯದರ್ಶನದರ್ಶನಭಾಷಾ
೫೧. ದರ್ಶನಗುಹ್ಯದರ್ಶನಗುಹ್ಯಭಾಷಾ
೫೨. ದರ್ಶನಗುಹ್ಯಗುಹ್ಯಸಮಾಧಿಭಾಷಾ
೫೩. ದರ್ಶನಗುಹ್ಯಗುಹ್ಯದರ್ಶನಭಾಷಾ
೫೪. ದರ್ಶನಗುಹ್ಯಗುಹ್ಯಗುಹ್ಯಭಾಷಾ
೫೫. ಗುಹ್ಯಸಮಾಧಿಸಮಾಧಿಸಮಾಧಿಭಾಷಾ
೫೬. ಗುಹ್ಯಸಮಾಧಿಸಮಾಧಿದರ್ಶನಭಾಷಾ
೫೭. ಗುಹ್ಯಸಮಾಧಿಸಮಾಧಿಗುಹ್ಯಭಾಷಾ
೫೮. ಗುಹ್ಯಸಮಾಧಿದರ್ಶನಸಮಾಧಿಭಾಷಾ
೫೯. ಗುಹ್ಯಸಮಾಧಿದರ್ಶನದರ್ಶನಭಾಷಾ
೬೦. ಗುಹ್ಯಸಮಾಧಿದರ್ಶನಗುಹ್ಯಭಾಷಾ
೬೧. ಗುಹ್ಯಸಮಾಧಿಗುಹ್ಯಸಮಾಧಿಭಾಷಾ
೬೨. ಗುಹ್ಯಸಮಾಧಿಗುಹ್ಯದರ್ಶನಭಾಷಾ
೬೩. ಗುಹ್ಯಸಮಾಧಿಗುಹ್ಯಗುಹ್ಯಭಾಷಾ
೬೪. ಗುಹ್ಯದರ್ಶನಸಮಾಧಿಸಮಾಧಿಭಾಷಾ
೬೫. ಗುಹ್ಯದರ್ಶನಸಮಾಧಿದರ್ಶನಭಾಷಾ
೬೬. ಗುಹ್ಯದರ್ಶನಸಮಾಧಿಗುಹ್ಯಭಾಷಾ
೬೭. ಗುಹ್ಯದರ್ಶನದರ್ಶನಸಮಾಧಿಭಾಷಾ
೬೮. ಗುಹ್ಯದರ್ಶನದರ್ಶನದರ್ಶನಭಾಷಾ
೬೯. ಗುಹ್ಯದರ್ಶನದರ್ಶನಗುಹ್ಯಭಾಷಾ
೭೦. ಗುಹ್ಯದರ್ಶನಗುಹ್ಯಸಮಾಧಿಭಾಷಾ
೭೧. ಗುಹ್ಯದರ್ಶನಗುಹ್ಯದರ್ಶನಭಾಷಾ
೭೨. ಗುಹ್ಯದರ್ಶನಗುಹ್ಯಗುಹ್ಯಭಾಷಾ
೭೩. ಗುಹ್ಯಗುಹ್ಯಸಮಾಧಿಸಮಾಧಿಭಾಷಾ
೭೪. ಗುಹ್ಯಗುಹ್ಯಸಮಾಧಿದರ್ಶನಭಾಷಾ
೭೫. ಗುಹ್ಯಗುಹ್ಯಸಮಾಧಿಗುಹ್ಯಭಾಷಾ
೭೬. ಗುಹ್ಯಗುಹ್ಯದರ್ಶನಸಮಾಧಿಭಾಷಾ
೭೭. ಗುಹ್ಯಗುಹ್ಯದರ್ಶನದರ್ಶನಭಾಷಾ
೭೮. ಗುಹ್ಯಗುಹ್ಯದರ್ಶನಗುಹ್ಯಭಾಷಾ
೭೯. ಗುಹ್ಯಗುಹ್ಯಗುಹ್ಯಸಮಾಧಿಭಾಷಾ
೮೦. ಗುಹ್ಯಗುಹ್ಯಗುಹ್ಯದರ್ಶನಭಾಷಾ
೮೧. ಗುಹ್ಯಗುಹ್ಯಗುಹ್ಯಗುಹ್ಯಭಾಷಾ

ಭಾಷೆಗಳನ್ನು ಈ ಕ್ರಮದಲ್ಲಿ ವಿಭಾಗ ಮಾಡಬೇಕೆಂದು ಶ್ರೀಮದಾಚಾರ್ಯರು ಭಾಗವತ-ತಾತ್ಪರ್ಯನಿರ್ಣಯದಲ್ಲಿ ಹೇಳಿದ್ದಾರೆ -

ಗುಹ್ಯದರ್ಶನಭಾಷೇ ಚ ಭಾಷಾ ಚೈವ ಸಮಾಧಿಕಾ ।
ತಿಸ್ರಸ್ತು ಮೂಲಭಾಷಾಃ ಸ್ಯುರೇಕೈಕಾ ಚ ತ್ರಿಧಾ ಪುನಃ ॥
ಗುಹ್ಯದರ್ಶನಸಂಜ್ಞಾ ಚ ಗುಹ್ಯಗುಹ್ಯಾ ತಥಾಽಪರಾ ।
ಏವಮಾದಿಕ್ರಮೇಣ್ಯೆವ ತ್ವೇಕಾಶೀತಿವಿಭೇದಿತಾಃ ॥
ಭಾಷಾಃ ...................... ॥ (೧೧-೨೧-೪೦)

### ದುರ್ಜನರನ್ನು ಮೋಹಗೊಳಿಸುವುದು ದರ್ಶನಭಾಷೆಯ ರಹಸ್ಯ

**तत्वप्रदीपः – तत्र तत्र तदुक्तेः । पूर्वपक्षाधिक्यं दुर्जनमोहनार्थमिति दर्शनरहस्यम् ।**

ಶೈವಾದಿ ಪುರಾಣಗಳಲ್ಲಿ ವಿಷ್ಣು ಸರ್ವೋತ್ತಮತ್ವವನ್ನು ಪ್ರತಿಪಾದನೆ ಮಾಡಿರುವುದರಿಂದಲೇ ಶ್ರೀಮದಾಚಾರ್ಯರು ತಮ್ಮ ಗ್ರಂಥಗಳಲ್ಲಿ ಅನೇಕ ಕಡೆ ಅವುಗಳನ್ನು ಉಲ್ಲೇಖಿಸುತ್ತಾರೆ. ಪ್ರಕೃತದಲ್ಲಿಯೂ 'ತಚ್ಚೋಕ್ತಂ ಸ್ಕಾಂದೇ' ಎಂದಿದ್ದಾರೆ. ಪುರಾಣಗಳಲ್ಲಿ ಕೆಲವೆಡೆ ಅಧಿಕವಾದ ಪೂರ್ವಪಕ್ಷವನ್ನು ಹೇಳುವುದು ದುರ್ಜನರನ್ನು ಮೋಹಗೊಳಿಸುವುದಕ್ಕಾಗಿ ಮಾತ್ರ, ಇದೇ ದರ್ಶನ ಭಾಷೆಯ ರಹಸ್ಯ.

### ವ್ಯಾಸರ ಮತ್ತು ಮಧ್ವರ ಬಗ್ಗೆ ಸಂದೇಹ ಬೇಡ

**तत्वप्रदीपः – तस्मादयमाचार्य आप्ततम इति सिद्धम् । यदुक्तयः क्वापि नान्यथा दृश्यन्ते तत्राऽपि शङ्कमानाः कुत्र निश्चिन्वीरन्निति ।।**

ಸೂತ್ರಕಾರರಾದ ವೇದವ್ಯಾಸದೇವರು ಆಪ್ತತಮರಾಗಿದ್ದಾರೆಂದು ನಿಶ್ಚಯವಾಯಿತು. ಇವರ ಅನಂತರ ಶ್ರೀಮದಾಚಾರ್ಯರು ಆಪ್ತತರರಾಗಿದ್ದಾರೆಂದು ತಿಳಿಯಬೇಕು. ಸಮಗ್ರ ಮಾತುಗಳ ನಡುವೆ ಒಂದೇ ಒಂದು ಮಾತಿನಲ್ಲಿಯೂ ಅನ್ಯಥಾಪ್ರತೀತಿ ಬರುವಂತೆ ಮಾತನಾಡದ ಶ್ರೀಮದಾಚಾರ್ಯರ ವಿಷಯದಲ್ಲಿ 'ಆಪ್ತರಾಗಿದ್ದಾರೋ ಇಲ್ಲವೋ' ಎಂದು ಸಂದೇಹ ಪಡುವವನು ಜಗತ್ತಿನಲ್ಲಿ ಎಲ್ಲಿ ತಾನೇ ಆಪ್ತತ್ವವನ್ನು ನಿಶ್ಚಯ ಮಾಡಲು ಸಮರ್ಥನಾಗುತ್ತಾನೆ.

ವಿಶೇಷ ವಿಚಾರ - ತತ್ವಪ್ರದೀಪದಲ್ಲಿ ಶ್ರೀಮದಾಚಾರ್ಯರನ್ನು ಆಪ್ತತಮರೆಂದು ಹೇಳಿದ ಹೇಳಿದ್ದಾರೆ. ಆದರೆ ಅನುವಾದ ಮಾಡುವಾಗ ಆಪ್ತತರರೆಂದು ಉಲ್ಲೇಖಿಸಲಾಗಿದೆ. ಕಾರಣವಿಷ್ಟೇ - ಭಗವಂತನು ಆಪ್ತತಮನು, ವಾಯುದೇವರು ಆಪ್ತತರರು, ದೇವತೆಗಳು ಆಪ್ತರು. ಈ ತಾರತಮ್ಯವನ್ನು ಗಮನಿಸಬೇಕು. ಮತ್ತು ಇಲ್ಲಿ 'ತರಪ್' ಪ್ರತ್ಯಯವು ತಾರತಮ್ಯಕ್ಕೆ ಮಾತ್ರ ದ್ಯೋತಕ ಹೊರತು ಆಪ್ತತ್ವದಲ್ಲಿ ನ್ಯೂನತೆಯನ್ನು ಹೇಳುವುದಿಲ್ಲ.

ಗೌತಮ ಶಾಪದ ಕಥೆ

तत्वप्रदीपः – [१]गौतमस्य हि वदान्यस्यान्नवन्तमाश्रमं द्वादशवार्षिक्यमनावृष्टावृषयोऽध्यूषुः । तत्राहरहस्तेन समीहितहव्यकव्याभ्यवहार्यातिसर्जनेन सुकृतसमाधिस्वाध्यायप्रवचनाः समवर्तन्त । ततः सत्यां वृष्टौ प्रतिभयविपद्विमुक्ताः प्रतिष्ठासवस्ते महामुनिमनुज्ञापयाञ्चक्रुः । तेन विनिवारिताः सुहृत्तमं तममी स्नेहभङ्गभयान्नात्यवर्तन्त । तस्मिन् काले पतिशिरसः सपत्नीं निष्क्रामयन्त्या पार्वत्या प्रेषितो विनायको ब्रह्मचारिवेषप्रच्छन्नस्तानृषीनुपससार भगवन्तः, किमत्रभवतां तपोधनानां तपः क्षयकरेणातिचिरमेकपरान्नाशनेन । स्वं स्वमाश्रमं व्रजत । तत्र चोपायामाकर्णयत । तपोबलान्मायामयीं माहेयीं निर्मिमीध्वम् । तां तु गौतमः स्वकीयया तपःशक्त्याऽनुसवनं वर्षुकीकृतबलाहकावलीविगलितसलिलसंवर्धितसस्यग्रासिनीमपक्रामयितुं प्रयतिष्यते । सा ततः सहसा निपतिष्यति । तदा ब्राह्मणास्तं विब्रूत । यावदिमामशेषमातरं सौरभेयीं नोत्थापयिष्यति, तावन्न भावन् भोज्यान्नः । अतो हरशिरसः सुरसरितमवतीर्य तद्वारिणाऽऽसिच्य तमुज्जीवयतु भवानित्येवमनुतापिनं तमभिलप्यापसरतेत्युक्त्वा स व्रती स्वाश्रमं जगाम । ते चामुना सुनिपुणेन प्रणिगदितं प्रयाणोपायमुपश्रुत्यान्वतिष्ठन् । तेनैव च प्रातिष्ठन्त । ततस्तावदसौ मुनिवृषभश्चिरकालचीर्णया तपस्यया परितोषितात् पशुपतेर्मौलिमणि-

(೧) ಪಂಡಿತಾಚಾರ್ಯರು ಲೇಖನಶೈಲಿ ಎಲ್ಲೆಡೆ ಅದ್ಭುತ ! ರೋಮಾಂಚಕ ! ಸಂಸ್ಕೃತಭಾಷೆಯಲ್ಲಿ ಪರಿಣತಿ ಪಡೆದವರಷ್ಟೇ ಅವರ ಶೈಲಿಯನ್ನು ಅನುಭವಿಸಲು ಸಾಧ್ಯ. ಕನ್ನಡದ ಅನುವಾದವು ಕವಿತಾಶೈಲಿಯ ಸ್ವಾರಸ್ಯವನ್ನು ಮುಚ್ಚಿಬಿಡುವುದು. ಆದರೂ ಕನ್ನಡದ ಓದುಗರು ಸಂಸ್ಕೃತಶೈಲಿಯ ಸ್ವಾರಸ್ಯವನ್ನು ಸ್ವಲ್ಪವಾದರೂ ಅನುಭವಿಸಲಿ ಎಂಬ ದೃಷ್ಟಿಯಿಂದ ಇಲ್ಲಿ ಅನುವಾದ ಮಾಡದೆ ಪ್ರತಿಪದಾರ್ಥ ಬರೆಯಲಾಗಿದೆ. ಕಥೆ ತಿಳಿಯಬೇಕೆಂದರೆ ಭಾವದೀಪದ ಅನುವಾದ ನೋಡಬಹುದು.

मालायितां मन्दाकिनीमंशेन समानीय तद्धारिणा सुरभिमभिषिषेच । ततश्च सोत्तस्थौ । तद्गौतमेन गोदत्तं वारि गोदावरीति जगति प्रसिद्धिं लेभे । अथ तस्य चिन्ता समजनिष्ट । किमिह किल कारणं, यदनया भद्रया केवलान्मे कमण्डलूदकबिन्दुसंस्पर्शादपाति, सहसाचामोहि, अथ च गिरीशोत्तमाङ्गगत-सुरतरङ्गिणीतनुतरङ्गसङ्गमादेवचोदबोधि, झटिति चोदस्थायि, आश्चर्यमेतदिति। स विगताधिः समाधिं समाधत्त । प्रतिबुबोध चैतद् वृत्तं विबुधवरयोरम्बिकाहेरम्बयो वृथा विचेष्टितेन विचुक्रोध च तेभ्यः । अहो, अस्मत्तपोबलादतिमहतीं विपदमतितीर्णानामन्नपानादिभोगमत्तानां मुनीनां दुश्चिकित्सितमेतत् । अस्तु नाम । तेषां धर्ममूढानामस्मन्निमित्तादवाप्तं ज्ञानं विनश्यत्विति गौतमशापः ।

ದ್ವಾದಶವಾರ್ಷಿಕ್ಯಂ = ಹನ್ನೆರಡುವರ್ಷಗಳ ಕಾಲ, ಅನಾವೃಷ್ಟ್ಯಾ = ಬರಗಾಲವು ಬಂದಿದ್ದರಿಂದ, ಋಷಯಃ = ಋಷಿಗಳು, ವದಾನ್ಯಸ್ಯ = ಮಹಾಉದಾರಿಗಳಾದ, ಹಿ = ಪ್ರಸಿದ್ಧರಾದ, ಗೌತಮಸ್ಯ = ಗೌತಮ ಋಷಿಗಳ, ಅನ್ನವಂತಂ = ಸಮೃದ್ಧವಾದ ಅನ್ನವುಳ್ಳ, ಆಶ್ರಮಂ = ತಪೋಭೂಮಿಯನ್ನು (ಪ್ರವೇಶಿಸಿ,) ಅಧ್ಯೂಷುಃ = ಸುಖವಾಗಿ ವಾಸಿಸಿದರು.

ತತ್ರ = ಆ ಆಶ್ರಮದಲ್ಲಿ, ಅಹರಹಃ = ಅಹೋರಾತ್ರಿ, ತೇನ = ಆ ಗೌತಮ ಋಷಿಗಳಿಂದ, ಸಮೀಹಿತಹವ್ಯಕವ್ಯಾಭ್ಯವಹಾರ್ಯಾತಿಸರ್ಜನೇನ, ಸಮೀಹಿತ= ಅಪೇಕ್ಷಿಸಲ್ಪಟ್ಟ, ಹವ್ಯ = ದೇವತೆಗಳಿಗೆ ನೀಡುವ ಹವ್ಯವು, ಕವ್ಯ = ಪಿತೃಗಳಿಗೆ ನೀಡಬೇಕಾದ ಕವ್ಯವು, ಅಭ್ಯವಹಾರ್ಯ = ಬ್ರಾಹ್ಮಣರಿಗೆ ನೀಡುವ ಆಹಾರ ಪದಾರ್ಥವು ಇವುಗಳ, ಅತಿಸರ್ಜನೇನ = ಯಥೇಚ್ಛವಾದ ವಿತರಣೆಯಿಂದ ಸುಕೃತಸಮಾಧಿಸ್ವಾಧ್ಯಾಯಪ್ರವಚನಾಃ, ಸುಕೃತ = ವಿಧಿಪ್ರಕಾರವಾಗಿ ಮಾಡಲ್ಪಟ್ಟ, ಸಮಾಧಿ = ಅಂತರಂಗ ತಪಸ್ಸು, ಸ್ವಾಧ್ಯಾಯ = ಸ್ವಶಾಖಾಧ್ಯಯನ, ಪ್ರವಚನಾಃ = ಪ್ರವಚನ ಮೊದಲಾದವು, ಸಮವರ್ತಂತ = ಸಂತೋಷದಾಯಕವಾಗಿ ನಡೆಯುತ್ತಿದ್ದವು.

ತತಃ = ಕೆಲವು ದಿವಸಗಳ ಅನಂತರ, ವೃಷ್ಟ್ಯಾ ಸತ್ಯಾಂ = ಬರಗಾಲವು ಮುಗಿದು ಮಳೆಯು ಬಂದ ಮೇಲೆ, ಪ್ರತಿಭಯವಿಪದ್ವಿಮುಕ್ತಾಃ = ವಿಪತ್ತಿನ ಭಯದಿಂದ ವಿಮುಕ್ತರಾದ, ಪ್ರತಿಷ್ಠಾಶ್ರವಃ = ಸುಖವಾಗಿ ಗೌತಮರ ಆಶ್ರಮದಲ್ಲಿ ಆಶ್ರಯ ಪಡೆದ, ತೇ = ಋಷಿಗಳು, ಮಹಾಮುನಿಂ = ಮುನಿಶ್ರೇಷ್ಠರಾದ ಗೌತಮರನ್ನು, ಅನುಜ್ಞಾಪಯಾಂಚಕ್ರುಃ = ತೆರಳಲು ಅನುಜ್ಞೆಯನ್ನು ಕೇಳಿದರು.

ತೇನ = ಆ ಗೌತಮರಿಂದ, ವಿನಿವಾರಿತಾಃ = ತಡೆಯಲ್ಪಟ್ಟವರಾಗಿ, ಸುಹೃತ್ತಮಂ = ಸ್ವಚ್ಛಹೃದಯದ, ತಂ = ಗುರುಗೌತಮರನ್ನು, ಅಮೀ = ಈ ಋಷಿಗಳು, ಸ್ನೇಹಭಂಗಭಯಾತ್ = ಸ್ನೇಹವು ನಾಶವಾಗುತ್ತದೆಂಬ ಭಯದಿಂದ, ನ ಅತ್ಯವರ್ತಂತ = ಮಾತುಮೀರಿ ಹೊರಡಲಿಲ್ಲ.

ತಸ್ಮಿನ್‌ಕಾಲೇ = ಅದೇ ಸಂದರ್ಭದಲ್ಲಿ, ಪತಿಶಿರಸಃ = ಗಂಡನ ತಲೆಯ ಮೇಲೆ ಕುಳಿತ, ಸಪತ್ನೀಂ = ಸವತಿಯಾದ ಗಂಗೆಯನ್ನು, ನಿಷ್ಕಾಮಯಂತ್ಯಾ = ಕೆಳಗಿಳಿಸುವ ಉದ್ದೇಶವುಳ್ಳ, ಪಾರ್ವತ್ಯಾ = ಪಾರ್ವತೀದೇವಿಯಿಂದ, ಪ್ರೇಷಿತಃ = ಕಳುಹಿಸಲ್ಪಟ್ಟ, ವಿನಾಯಕಃ = ಗಣನಾಯಕನು ಬ್ರಹ್ಮಚಾರಿ-ವೇಷಪ್ರಚ್ಛನ್ನಃ = ಬ್ರಹ್ಮಚಾರಿಯ ವೇಷಧರಿಸಿದವನಾಗಿ, ತಾನ್ = ಆ ಗೌತಮರ ಆಶ್ರಮದಲ್ಲಿರುವ, ಋಷೀನ್ = ಋಷಿಗಳನ್ನು, ಉಪಸಸಾರ = ಸಮೀಪಿಸಿದನು.

ಭಗವಂತಃ = ಓ ಪೂಜ್ಯರೇ !, ಅತ್ರ = ಈ ಗೌತಮರ ಆಶ್ರಮದಲ್ಲಿ, ತಪೋಧನಾನಾಂ = ತಪಸ್ಸೇ ಸಂಪತ್ತಾಗಿವುಳ್ಳ, ಭವತಾಂ = ತಾವುಗಳು, ತಪಃ ಕ್ಷಯಕರೇಣ = ಸಂಪಾದಿಸಿದ ತಪಸ್ಸನ್ನು ನಾಶ ಮಾಡಿಕೊಳ್ಳುತ್ತಾ, ಅತಿಚಿರಂ = ಬಹುಕಾಲ, ಏಕಪರಾನ್ನಾಶನೇನ = ಕೇವಲ ಪರಾನ್ನವನ್ನು ಭುಂಜಿಸುತ್ತಾ, ಕಿಂ = ಏಕೆ ಕುಳಿತಿರುವಿರಿ?

ಸ್ವಂ ಸ್ವಂ = ತಮ್ಮ ತಮ್ಮ, ಆಶ್ರಮಮ್ = ಆಶ್ರಮವನ್ನು ಕುರಿತು, ಪ್ರಜತ = ತೆರಳಿರಿ, ತತ್ರ ಚ = ಈ ಸಂದರ್ಭದಲ್ಲಿ, ಉಪಾಯಂ = ಉಪಾಯವನ್ನು, ಆಕರ್ಣಯತ = ಕೇಳಿರಿ.

ತಪೋಬಲಾತ್ = ನಿಮ್ಮ ತಪಃಶಕ್ತಿಯನ್ನು ಉಪಯೋಗಿಸಿ, ಮಾಯಾಮಯೀಂ = ಮಾಯಾಮಯವಾದ, ಮಾಹೇಯೀಂ =

ಹಸುವನ್ನು, ನಿರ್ಮಿಮೀಧ್ವಂ = ನಿರ್ಮಿಸಿರಿ, ತಾಂ ತು = ಆ ಹಸುವನ್ನಾದರೂ, ಗೌತಮಃ = ಗೌತಮರು, ಸ್ವಕೀಯಯಾ = ತಾವು ಸಂಪಾದಿಸಿದ, ತಪಃಶಕ್ತ್ಯಾ = ತಪಸ್ಸಿನ ಪ್ರಭಾವದಿಂದ, ಅನುಸವನಂ = ಕಾಲಕ್ಕೆ ಸರಿಯಾಗಿ, ವರ್ಷುಕೀಕೃತಬಲಾಹಕಾವಲೀವಿಗಲಿತಸಲಿಲ-ಸಂವರ್ಧಿತಸಸ್ಯಗ್ರಾಸಿನೀಂ, ವರ್ಷುಕೀಕೃತ = ನೀರು ಸುರಿಸುವ ಸ್ವಭಾವವುಳ್ಳ, ಬಲಾಹಕ = ಮೋಡಗಳ, ಆವಲೀ = ಸಮೂಹದಿಂದ, ವಿಗಲಿತ = ಸುರಿಸಲ್ಪಟ್ಟ, ಸಲಿಲ = ನೀರಿನಿಂದ, ಸಂವರ್ಧಿತ = ಸಂಮೃದ್ಧವಾದ, ಸಸ್ಯ = ಧಾನ್ಯಗಿಡಗಳನ್ನು, ಗ್ರಾಸಿನೀಂ = ತಿನ್ನುತ್ತಿರುವ ಹಸುವನ್ನು, ಅಪಕ್ರಾಮಯಿತುಂ = ಓಡಿಸಲು, ಪ್ರಯತಿಷ್ಯತೇ = ಪ್ರಯತ್ನ ಪಡುವರು

ತತಃ = ಅನಂತರ, ಸಾ = ಆ ಹಸುವು, ಸಹಸಾ = ಕೂಡಲೇ, ನಿಪತಿಷ್ಯತಿ = ಮರಣವನ್ನಪ್ಪುತ್ತದೆ, ತದಾ = ಆ ಸಂದರ್ಭದಲ್ಲಿ, ಬ್ರಾಹ್ಮಣಾಃ = ಬ್ರಾಹ್ಮಣರಾದ, ನೀವು ತಂ = ಆ ಗೌತಮರನ್ನು ಕುರಿತು, ವಿಬ್ರೂತ = ಹೇಳಿರಿ.

ಅಶೇಷಮಾತರಂ = ಎಲ್ಲರಿಗೂ ತಾಯಿಯಾದ, ಇಮಾಂ ಸೌರಭೇಯೀಂ = ಈ ಹಸುವನ್ನು, ಯಾವತ್ = ಎಲ್ಲಿಯ ತನಕ, ನೋತ್ಥಾಪಯಿಷ್ಯತಿ = ಬದುಕಿಸುವುದಿಲ್ಲವೋ, ತಾವತ್ = ಅಲ್ಲಿಯ ತನಕ, ಭವಾನ್ = ತಾವು, ನ ಭೋಜ್ಯನ್ನಃ = ತಿನ್ನಲು ಯೋಗ್ಯವಾದ ಅನ್ನವುಳ್ಳವರಲ್ಲ, ಅತಃ = ಆದ್ದರಿಂದ, ಹರಶಿರಸಃ = ಶಿವನ ಮುಡಿಯಲ್ಲಿರುವ, ಸುರಸರಿತಂ = ದೇವಗಂಗೆಯನ್ನು, ಅವತೀರ್ಯ = ಕೆಳಗಿಳಿಸಿ, ತದ್ವಾರಿಣಾ = ಆ ಗಂಗೆಯಿಂದ, ತಂ = ಆ ಹಸುವನ್ನು, ಆಸಿಚ್ಯ = ಸೇಚನೆ ಮಾಡಿ, ಭವಾನ್ = ನೀವು, ಉಜ್ಜೀವಯತು = ಬದುಕಿಸಿರಿ.

ಇತ್ಯೇವಂ = ಈ ರೀತಿಯಾಗಿ, ಅನುತಾಪಿನಂ = ಗೋಹತ್ಯಾ ಪಾಪದಿಂದ ಪಶ್ಚಾತ್ತಾಪದಗ್ಧರಾದ, ತಂ = ಆ ಗೌತಮರನ್ನು ಕುರಿತು, ಅಭಿಲಪ್ಯ = ಹೇಳಿ, ಅಪಸರತ = ಗೌತಮರನ್ನು ಬಿಟ್ಟು ತೆರಳಿರಿ.

ಇತಿ = ಈ ಉಪಾಯವನ್ನು, ಉಕ್ತ್ವಾ = ಹೇಳಿ, ಸಃ ವ್ರತೀ = ಆ ಬ್ರಹ್ಮಚಾರಿಯಾದ ಗಣಪತಿಯು, ಸ್ವಾಶ್ರಮಂ = ತನ್ನ ಸ್ಥಳಕ್ಕೆ, ಜಗಾಮ = ಹೊರಟನು.

ಸುನಿಪುಣೇನ = ಬುದ್ಧಿಚತುರನಾದ, ಅಮುನಾ = ಈ ಗಣಪತಿಯಿಂದ, ಪ್ರಣಿಗದಿತಂ = ಹೇಳಲ್ಪಟ್ಟ, ಪ್ರಯಾಣೋಪಾಯಂ = ತೆರಳುವ ಉಪಾಯವನ್ನು, ಉಪಶ್ರುತ್ಯಾ = ಕೇಳಿ, ತೇ ಚ = ಆ ಋಷಿಗಳಾದರು, ಅನ್ವತಿಷ್ಠನ್ = ಹೊರಡಲು ಸಿದ್ಧರಾದರು, ತೇನೈವ ಚ = ಬ್ರಹ್ಮಚಾರಿ ಹೇಳಿದಂತೆ, ಪ್ರಾತಿಷ್ಠಂತ = ತೆರಳಿದರು.

ತತಃ = ಅನಂತರ, ಮುನಿವೃಷಭಃ = ಮುನಿಶ್ರೇಷ್ಠರಾದ, ಅಸೌ ತಾವತ್ = ಈ ಗೌತಮರಾದರೂ, ಚಿರಕಾಲಚೀರ್ಣಯಾ = ಬಹುಕಾಲದಿಂದ ಆಚರಿಸಲ್ಪಟ್ಟ, ತಪಸ್ಯಯಾ = ತಪಸ್ಸಿನಿಂದ, ಪರಿತೋಷಿತಾತ್ = ಸಂತೋಷಪಡಿಸಲ್ಪಟ್ಟ, ಪಶುಪತೇಃ = ರುದ್ರನ ದೆಸೆಯಿಂದ, ಮೌಲಿಮಣಿಮಾಲಾಯಿತಾಂ = ಮುಡಿಯಲ್ಲಿ ಮಣಿಮಾಲೆಯಂತೆ ಶೋಭಾಯಮಾನವಾದ, ಮಂದಾಕಿನೀಂ = ಗಂಗೆಯನ್ನು, ಅಂಶೇನ = ಒಂದು ಭಾಗದಿಂದ, ಸಮಾನೀಯ = ಕರೆಸಿ, ತದ್ವಾರಿಣಾ = ಆ ಗಂಗಾಜಲದಿಂದ, ಸುರಭಿಂ = ಹಸುವನ್ನು, ಅಭಿಷಿಷೇಚ = ಸ್ನಾನ ಮಾಡಿಸಿದರು.

ತತಶ್ಚ = ಆ ನೀರಿನಿಂದ, ಸಾ = ಆ ಹಸುವು, ಉತ್ತಸ್ಥೌ = ಮೇಲೆದ್ದಿತು, ತತ್ = ಹೀಗೆ, ಗೌತಮೇನ = ಗೌತಮ ಋಷಿಯಿಂದ, ಗೋದತ್ತಂ = ಹಸುವಿಗಾಗಿ ನೀಡಲ್ಪಟ್ಟ, ವಾರಿ = ನೀರು ಗೋದಾವರೀ, ಇತಿ = ಗೋದಾವರೀ ಎಂದು, ಜಗತಿ = ಜಗತ್ತಿನಲ್ಲಿ, ಪ್ರಸಿದ್ಧಿಂ = ಪ್ರಸಿದ್ಧಿಯನ್ನು, ಲೇಭೇ = ಪಡೆಯಿತು.

ಅಥ = ಅನಂತರ, ತಸ್ಯ = ಆ ಗೌತಮ ಋಷಿಗೆ, ಚಿಂತಾ = ಚಿಂತೆಯು, ಸಮಜನಿಷ್ಟ = ಉಂಟಾಯಿತು. ಕಿಮಿಹ ಕಿಲ ಕಾರಣಂ = ಹೀಗಾಗಲು ಏನು ಕಾರಣವಿರಬಹುದು, ಅನಯಾ = ಈ, ಭದ್ರಯಾ = ಮಂಗಳಕರವಾದ, ಮೇ = ನನ್ನ, ಕೇವಲಾತ್ ಕಮಂಡಲೂದಕಬಿಂದುಸಂಸ್ಪರ್ಶಾತ್ = ಕಮಂಡಲುವಿನಲ್ಲಿರುವ ನೀರಿನ ಹನಿಯ ಸ್ಪರ್ಶಮಾತ್ರದಿಂದ, ಯತ್ = ಯಾವ ಹಸುವು, ಅಪಾತಿ = ಬಿದ್ದಿತು, ಸಹಸಾ ಚ = ಕೂಡಲೇ, ಅಮೋಹಿ = ಮರಣ ಹೊಂದಿತು.

ಅಥ ಚ = ಅನಂತರ, ಗಿರೀಶೋತ್ತಮಾಂಗಗತಸುರತರಂಗಿಣೀತನುತರಂಗ-ಸಂಗಮಾದೇವ ಚ, ಗಿರೀಶ = ರುದ್ರನ, ಉತ್ತಮಾಂಗ = ಶಿರದಲ್ಲಿ, ಗತ = ಇರುವ, ಸುರತರಂಗಿಣೀ = ಗಂಗೆಯ, ತನು = ಶರೀರವೆಂಬ, ತರಂಗ =

ತರಂಗದ, ಸಂಗಮಾದೇವ = ಸಂಗದಿಂದಲೇ, ಉದಬೋಧಿ = ಎಚ್ಚರಗೊಂಡಿತು, ಚ = ಮತ್ತು, ಝಟಿತಿ = ಕೂಡಲೇ, ಉದಸ್ಥಾಯಿ = ಮೇಲೆದ್ದಿತು, ಏತತ್ = ಇದೆಲ್ಲವೂ, ಆಶ್ಚರ್ಯಂ = ಆಶ್ಚರ್ಯಕರವಾಗಿದೆ, ಇತಿ = ಹೀಗೆ ಆಲೋಚಿಸಿದರು.

ಸಃ = ಆ ಗೌತಮ ಋಷಿಯು, ವಿಗತಾಧಿಃ = ಮಾನಸಿಕವಾದ ಚಿಂತೆಯನ್ನು ತೊರೆದು, ಸಮಾಧಿಂ ಸಮಾಧತ್ತ = ಧ್ಯಾನ ತತ್ಪರರಾದರು.

ಚ = ಮತ್ತು, ವಿಬುಧವರಯೋಃ = ಬ್ರಾಹ್ಮಣಶ್ರೇಷ್ಠರ, ಅಂಬಿಕಾಹೇರಂಭಯೋಃ = ಪಾರ್ವತಿ ಹಾಗೂ ಗಣಪತಿಯರ, ವಿನಾ = ವ್ಯರ್ಥವಾದ, ವಿಚೇಷ್ಟಿತೇನ = ಪರಿಹಾಸದಿಂದ, ಏತದ್‌ವೃತ್ತಂ = ಈ ಘಟನೆ ನಡೆದಿದೆ ಎಂದು, ಪ್ರತಿಬುಬೋಧ = ತಿಳಿದುಕೊಂಡರು.

ಚ = ಮತ್ತು, ತೇಭ್ಯಃ = ಬ್ರಾಹ್ಮಣರ ವಿಷಯದಲ್ಲಿ, ಚುಕ್ರೋಧ = ಕುಪಿತರಾದರು, ಅಹೋ = ಏನಾಶ್ಚರ್ಯ !, ಅಸ್ಮಾತ್ತಪೋಬಲಾತ್ = ನಮ್ಮ ತಪಸ್ಸಿನ ಶಕ್ತಿಯಿಂದ, ಅತಿಮಹತೀಂ = ಬಹುದೊಡ್ಡದಾದ, ವಿಪದಂ = ಆಪತ್ತನ್ನು, ಅತಿತೀರ್ಣಾನಾಂ = ಪರಿಹರಿಸಿಕೊಂಡ, ಅನ್ನಪಾನಾದಿ-ಭೋಗಮತ್ತಾನಾಂ = ಅನ್ನ-ಪಾನಾದಿಗಳ ಭೋಗದಿಂದ ದೃಪ್ತರಾದ, ಮುನೀನಾಂ = ಮುನಿಗಳ, ದುಷ್ಚೇಷ್ಟಿತಂ ಏತತ್ = ಮಾಡಬಾರದ ಹೀನಕಾರ್ಯವಿದು.

ಅಸ್ತು ನಾಮ = ಇದಿರಲಿ, ತೇಷಾಂ = ಆ, ಧರ್ಮಮೂಢಾನಾಂ = ಧರ್ಮಪ್ರಜ್ಞೆಯಿಂದ ಮೂಢರಾದ ಬ್ರಾಹ್ಮಣರಿಗೆ, ಅಸ್ಮನ್ನಿಮಿತ್ತಾತ್ = ನಮ್ಮ ನಿಮಿತ್ತದಿಂದ, ಅವಾಪ್ತಂ = ದೊರಕಿರುವ, ಜ್ಞಾನಂ = ಜ್ಞಾನವು, ವಿನಶ್ಯತು = ನಾಶವಾಗಲಿ, ಇತಿ = ಇದು, ಗೌತಮಶಾಪಃ = ಗೌತಮ ಋಷಿಯ ಶಾಪವು.

### ಸೂತ್ರದ ಲಕ್ಷಣ

**तत्वप्रदीपः – ज्ञानेत्वज्ञानतां गते अज्ञानप्रतितिगोचरतां गते । महायोगी महाशक्तिः ।**

**अल्पाक्षरमसन्दिग्धं सारवद् विश्वतोमुखम् ।**
**अस्तोभमनवद्यं च सूत्रं सूत्रविदो विदुः ।।**

'ಜ್ಞಾನೇ ತು ಅಜ್ಞಾನತಾಂ ಗತೇ' ಎಂಬ ಭಾಷ್ಯದ ಮಾತಿಗೆ ಯಥಾರ್ಥಜ್ಞಾನವೇ ಅಯಥಾರ್ಥಜ್ಞಾನವೆಂಬ ಪ್ರತೀತಿಗೆ ವಿಷಯವಾಗುತ್ತಿರಲು ಎಂದರ್ಥ. 'ಮಹಾಯೋಗೀ' ಎಂದರೆ 'ಮಹಾಶಕ್ತಿಯುಳ್ಳ' ಎಂದರ್ಥ. ಸೂತ್ರದ ಲಕ್ಷಣ ಹೀಗಿದೆ -

ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ ।
ಅಸ್ತೋಭಂ ಅನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥

ಕಡಿಮೆ ಅಕ್ಷರಗಳಿರಬೇಕು, ಸಂದೇಹಕ್ಕೆ ಅವಕಾಶವಿರಬಾರದು, ಸಾರವನ್ನು ಹೇಳುತ್ತಿರಬೇಕು. ಬಹ್ವರ್ಥಗರ್ಭಿತವಾಗಿರಬೇಕು, ವ್ಯರ್ಥಾಕ್ಷರಗಳಿರಬಾರದು, ಯಾವುದೇ ದೋಷವಿರಬಾರದು ಇದನ್ನು ಸೂತ್ರದ ಲಕ್ಷಣವೆಂದು ಸೂತ್ರಲಕ್ಷಣದ ಬಗ್ಗೆ ಅರಿತಿರುವವರು ಹೇಳುವರು.

## 'ಅಲ್ಪಾಕ್ಷರಮ್' ಎಂಬುದರ ಅರ್ಥ

**तत्वप्रदीपः – यावद्भिरक्षरैर्विना विवक्षितार्थासिद्धिस्तावन्मात्राक्षरम् 'अल्पाक्षरम्'। तद्वचनं भाष्यव्यावृत्त्यर्थम् । विशेषाणान्तराणां भाष्येऽप्यनुवर्तनीयत्वात् ।**

ಎಷ್ಟು ಅಕ್ಷರಗಳಿಲ್ಲದೆ ವಿವಕ್ಷಿತವಾದ ಅರ್ಥವು ಸಿದ್ಧವಾಗುವುದಿಲ್ಲವೋ ಅಷ್ಟು ಅಕ್ಷರಗಳನ್ನು ಮಾತ್ರ ಹೇಳುವುದನ್ನು 'ಅಲ್ಪಾಕ್ಷರ' ಎಂದು ತಿಳಿಯಬೇಕು. ಸೂತ್ರದ ಲಕ್ಷಣದಲ್ಲಿ 'ಅಲ್ಪಾಕ್ಷರಂ' ಎಂದು ಹೇಳದಿದ್ದರೆ ಭಾಷ್ಯದಲ್ಲಿಯೂ ಸೂತ್ರದ ಲಕ್ಷಣ ಬರುವುದರಿಂದ ಅತಿವ್ಯಾಪ್ತಿಯು ಬರುತ್ತದೆ. ಭಾಷ್ಯದಲ್ಲಿ ಅಸಂದಿಗ್ಧತ್ವ, ಸಾರವತ್ವ, ವಿಶ್ವತೋಮುಖತ್ವ, ಅಸ್ತೋಭತ್ವ, ಅನವದ್ಯತ್ವಗಳು ಇರುತ್ತವೆ. ಇದರ ಪರಿಹಾರಕ್ಕಾಗಿ 'ಅಲ್ಪಾಕ್ಷರಂ' ಎಂಬ ವಿಶೇಷಣವನ್ನು ನೀಡಬೇಕು.

### 'ಅಸಂದಿಗ್ಧಂ' 'ಸಾರವತ್' ಎಂಬುದರ ಅರ್ಥ

**तत्वप्रदीपः – 'असन्दिग्धम्' निर्णीतार्थम् । निर्णयहेतुरहितवाक्याद् व्यावृत्त्यर्थम् । 'सारवत्' उत्तमार्थम् । कुशलपुरुषोक्तलोकवार्तादिव्यावृत्त्यर्थम् ।**

'ಅಸಂದಿಗ್ಧಂ' ಎಂದರೆ ನಿರ್ಣೀತವಾದ ಅರ್ಥವುಳ್ಳದ್ದು. ನಿರ್ಣಯ ಮಾಡಲು ಕಾರಣವಿಲ್ಲದೆ ಸಂದೇಹದಲ್ಲೇ ಉಳಿಯುವ ವಾಕ್ಯದಲ್ಲಿ ಅತಿವ್ಯಾಪ್ತಿಯನ್ನು ಪರಿಹರಿಸಲು ಈ ವಿಶೇಷಣವು ಸಾರ್ಥಕವಾಗಿದೆ.

'ಸಾರವತ್' ಎಂದರೆ ಶ್ರೇಷ್ಠವಾದ ಅರ್ಥ. ಲೋಕವಾರ್ತೆಯಲ್ಲಿ ಅತಿವ್ಯಾಪ್ತಿ ಪರಿಹಾರ ಮಾಡಲು ಈ ವಿಶೇಷಣವು ಸಾರ್ಥಕವಾಗಿದೆ.

### 'ವಿಶ್ವತೋಮುಖಂ' 'ಅಸ್ತೋಭಂ' ಎಂಬುದರ ಲಕ್ಷಣ

**तत्वप्रदीपः – 'विश्वतोमुखं' एकप्रयोजनं प्रत्यपेक्षितार्थस्य कृत्स्नस्य प्रतिपादकम् । एतदनुक्तौ भगवन्नाममन्त्रादेः सूत्रत्वं स्यात् । अर्थविवक्षयाऽल्पाक्षरत्वेऽपि वृथा स्तोभपदं वा पादपूरणार्थं वा मा भूदित्यस्तोभम् । अपशब्दार्थदोषव्यावृत्त्यर्थमनवद्यमिति ॥**

'ವಿಶ್ವತೋಮುಖ' ಎಂದರೆ ಒಂದು ಪ್ರಯೋಜನವನ್ನು ಉದ್ದೇಶಿಸಿ ಅಪೇಕ್ಷಿತವಾದ ಎಲ್ಲಾ ಅರ್ಥಗಳನ್ನು ಪ್ರತಿಪಾದನೆ ಮಾಡುವಿಕೆ. ಭಗವಂತನ ನಾಮಗಳಲ್ಲಿ ಹಾಗೂ ಮಂತ್ರಗಳಲ್ಲಿ ಅತಿವ್ಯಾಪ್ತಿ ಪರಿಹರಿಸಲು ಈ ವಿಶೇಷಣವು ಸಾರ್ಥಕವಾಗಿದೆ. ಅರ್ಥವಿವಕ್ಷೆಯಿಂದ ಅಲ್ಪಾಕ್ಷರವಾಗಿದ್ದರೂ ವ್ಯರ್ಥವಾದ ಪದಗಳಿಂದ ಪಾದಪೂರಣೆ ಮಾಡಲು ಉಪಯೋಗಿಸುವ ಪದಗಳಲ್ಲಿ ಅತಿವ್ಯಾಪ್ತಿ ಪರಿಹರಿಸಲು 'ಅಸ್ತೋಭಂ' ಎಂಬ ವಿಶೇಷಣವು ಸಾರ್ಥಕ. ಅಪಶಬ್ದದ ಅರ್ಥದಲ್ಲಿರುವ ದೋಷದ ವ್ಯಾವೃತ್ತಿಗೋಸ್ಕರ 'ಅನವದ್ಯಂ' ಎಂಬ ವಿಶೇಷಣವು ಸಾರ್ಥಕವಾಗಿದೆ.

## ಬ್ರಹ್ಮಸೂತ್ರಭಾಷ್ಯ

ಪ್ರಥಮಸೂತ್ರ ವ್ಯಾಖ್ಯಾನ

**ब्रह्मसूत्रभाष्यम् –**

**।। ॐ अथातो ब्रह्मजिज्ञासा ।।१।।**

**'अथ'शब्दो मङ्गलार्थोऽधिकारानन्तर्यार्थश्च । अतःशब्दो हेत्वर्थः ।**

ಅನುವಾದ - ಅತಃಶಬ್ದದ ಶ್ರವಣದಿಂದ ಮತ್ತು ಉಚ್ಚಾರಣೆಯಿಂದ ಮಂಗಳವು ಉಂಟಾಗುತ್ತದೆ. ಆದ್ದರಿಂದ ಸೂತ್ರಗಳ ಪ್ರಾರಂಭದಲ್ಲಿ ಅಥಶಬ್ದವನ್ನು ಪ್ರಯೋಗಿಸಲಾಗಿದೆ. ಇದಕ್ಕೆ ಅನಂತರ ಎಂದರ್ಥ. 'ಅತಃ' ಎಂಬ ಶಬ್ದವು ಪ್ರಯೋಜನ ಎಂಬರ್ಥವನ್ನು ತಿಳಿಸುತ್ತಿದೆ.

## ಸತ್ತರ್ಕದೀಪಾವಳಿ

**सत्तर्कदीपावळिः – अथातो ब्रह्मजिज्ञासा । तत्र तावत् प्रथमसूत्रं व्याख्यातुमुपादत्ते – अथेति ।। तत्राथातःशब्दौ व्याचष्टे – अथ शब्द इति ।।**

ಮೊದಲು ಪ್ರಥಮಸೂತ್ರವನ್ನು ವ್ಯಾಖ್ಯಾನಿಸಲು 'ಅಥ' ಎಂಬ ಭಾಷ್ಯವು ಹೊರಟಿದೆ. 'ಅಥ' ಮತ್ತು 'ಅತಃ' ಶಬ್ದಗಳನ್ನು 'ಅಥಶಬ್ದಃ' ಎಂಬುದರಿಂದ ಮೊದಲು ವ್ಯಾಖ್ಯಾನಿಸಿದ್ದಾರೆ.

## ಬ್ರಹ್ಮಸೂತ್ರಭಾಷ್ಯ

'ಅಥ' 'ಅತಃ' ಶಬ್ದಗಳ ಪ್ರಾಥಮ್ಯವಿಚಾರ

**ब्रह्मसूत्रभाष्यम् –**

**उक्तं च गारुडे—**

**अथातःशब्दपूर्वाणि सूत्राणि निखिलान्यपि ।**
**प्रारभन्ते नियत्यैव तत् किमत्र नियामकम् ।।**

**कश्चार्थस्तु तयोर्विद्वन् कथमुत्तमता तयोः ।**
**एतदाख्याहि मे ब्रह्मन् यथा ज्ञास्यामि तत्वतः ।।**

एवमुक्तो नारदेन ब्रह्मा प्रोवाच सत्तमः ।
आनन्तर्येऽधिकारस्य मङ्गलार्थे तथैव च ।।

अथशब्दस्त्वतश्शब्दो हेत्वर्थे समुदीरितः ।
परस्य ब्रह्मणो विष्णोः प्रसादादिति वा भवेत् ।
स हि सर्वमनोवृत्तिप्रेरकः समुदाहृतः ।।

ಅನುವಾದ - ಗರುಡಪುರಾಣದಲ್ಲಿ ಹೀಗೆ ಹೇಳಲಾಗಿದೆ -

''ಪ್ರತಿಯೊಂದು ಸೂತ್ರಗ್ರಂಥಗಳ ಪ್ರಾರಂಭದಲ್ಲಿ ನಿಯಮೇನ 'ಅಥ' ಮತ್ತು 'ಅತಃ' ಶಬ್ದಗಳನ್ನು ಉಚ್ಚರಿಸುತ್ತಾರೆ. ಈ ಶಬ್ದಗಳನ್ನೇ ಉಚ್ಚರಿಸಲು ಏನು ಕಾರಣ? ಇವುಗಳ ಅರ್ಥವೇನು? ಇವುಗಳ ಪ್ರಾಶಸ್ತ್ಯವೇನು? ಈ ವಿಷಯದ ಬಗ್ಗೆ ನನಗೆ ತಿಳಿಸಿ. ತತ್ವಜ್ಞಾನವನ್ನು ದಯಪಾಲಿಸಿರಿ'' ಎಂದು ಬ್ರಹ್ಮದೇವರನ್ನು ಕುರಿತು ನಾರದರು ಪ್ರಾರ್ಥಿಸಿದರು. ಅಂತಹ ನಾರದರಿಗೆ ಬ್ರಹ್ಮದೇವರು ಹೀಗೆ ಉತ್ತರಿಸುತ್ತಾರೆ -

'ಅಥ'ಶಬ್ದಕ್ಕೆ 'ಅಧಿಕಾರವನ್ನು ಹೊಂದಿದ ಮೇಲೆ' ಎಂದರ್ಥ. ಇದು ಮಂಗಳಸೂಚಕವೂ ಆಗಿದೆ. 'ಅತಃ' ಎಂಬ ಶಬ್ದವು 'ಕಾರಣ' ಎಂಬರ್ಥದಲ್ಲಿ ಹೇಳಲ್ಪಟ್ಟಿದೆ. ಅಥವಾ 'ಅಕಾರವಾಚ್ಯನಾದ ಗುಣಪೂರ್ಣನಾದ ಪರಮಾತ್ಮನ ಅನುಗ್ರಹದಿಂದ' ಎಂದರ್ಥ. ಅಂತಹ ವಿಷ್ಣುವೇ ಎಲ್ಲ ವಿಧವಾದ ಚೇತನರ ಮನೋವ್ಯಾಪಾರಕ್ಕೆ ನಿಯಾಮಕನಾಗಿದ್ದಾನೆ. ಆದ್ದರಿಂದ ವಿಷ್ಣುವಿನ ಅನುಗ್ರಹವಿದ್ದರೆ ಮಾತ್ರ ಶ್ರವಣ-ಮನನಾದಿಗಳನ್ನು ಮಾಡಲು ಸಾಧ್ಯ. ಹೀಗೆ ಗ್ರಂಥಾರಂಭದಲ್ಲಿ ಅವಶ್ಯ ತಿಳಿಯಬೇಕಾದ ವಿಚಾರಗಳನ್ನು 'ಅಥ' ಮತ್ತು 'ಅತಃ' ಶಬ್ದಗಳು ತಿಳಿಸುತ್ತಿವೆ.

ಓಂ, ಅಥ, ಅತಃ ಶಬ್ದಗಳ ವೈಶಿಷ್ಟ್ಯ

ब्रह्मसूत्रभाष्यम् –

सिसृक्षोः परमाद् विष्णोः प्रथमं द्वौ विनिः सृतौ ।।
ओङ्कारश्चाथशब्दश्च तस्मात् प्राथमिकौ क्रमात् ।
तद्धेतुत्वं वदंश्चापि तृतीयोऽत उदाहृतः ।।
अकारस्सर्ववागात्मा परब्रह्माभिधायकः ।

**तथौ प्राणात्मकौ प्रोक्तौ व्याप्तिस्थितिविधायकौ ।।**
**अतश्च पूर्वमुच्चार्याः सर्व एते सतां मताः ।**
**अथातश्शब्दयोरेवं वीर्यमाज्ञाय तत्वतः ।**
**सूत्रेषु तु महाप्राज्ञास्तावेवादौ प्रयुञ्जते' इति ।।**

ಅನುವಾದ - ಸೃಷ್ಟಿಯನ್ನು ಮಾಡಲು ಬಯಸಿದ ಪರಮಾತ್ಮನ ಮುಖಕಮಲದಿಂದ 'ಓಂ' ಮತ್ತು 'ಅಥ' ಎಂಬ ಎರಡು ಶಬ್ದಗಳು ಪ್ರಥಮವಾಗಿ ಹೊರಹೊಮ್ಮಿದವು. ಆದ್ದರಿಂದ ಸಕಲಶಬ್ದಪ್ರಪಂಚದಲ್ಲಿ ಈ ಎರಡು ಶಬ್ದಗಳು ಬಹಳ ಪ್ರಧಾನವಾಗಿವೆ. ಆದ್ದರಿಂದಲೇ ಸೂತ್ರದ ಮೊದಲು ಓಂಕಾರದ ನಂತರ ಅಥಶಬ್ದವನ್ನು ಪ್ರಯೋಗಿಸಿದ್ದಾರೆ. ಪರಮಾತ್ಮನ ಜಿಜ್ಞಾಸೆಯ ಕಾರಣವನ್ನು ಹೇಳುವ 'ಅತಃ' ಎಂಬ ಶಬ್ದವು ಮೂರನೆಯದಾಗಿ ಪ್ರಯೋಗಿಸಲ್ಪಟ್ಟಿದೆ. ಆದ್ದರಿಂದ ಓಂಕಾರ ಮತ್ತು ಅಥಶಬ್ದಗಳ ಅನಂತರ 'ಅತಃ' ಎಂಬ ಶಬ್ದವನ್ನೇ ಪ್ರಯೋಗಿಸಿದ್ದಾರೆ.

ಅಷ್ಟೇ ಅಲ್ಲದೆ, ಸಕಲಶಬ್ದಪ್ರಪಂಚದ ಅರ್ಥವೆನಿಸಿದ ಗುಣಪೂರ್ಣತ್ವವನ್ನು ಅಕಾರವು ಪ್ರತಿಪಾದಿಸುತ್ತಿದೆ. ಅತಃ ಎಂಬಲ್ಲಿರುವ 'ತ'ಕಾರಕ್ಕೆ, 'ಅಥ' ಎಂಬಲ್ಲಿರುವ 'ಥ'ಕಾರಕ್ಕೆ ವಿಷ್ಣುವು ದೇವತೆ. ಪರಮಾತ್ಮನ ವ್ಯಾಪ್ತಿಯನ್ನು ಮತ್ತು ಸ್ಥಿತಿಕರ್ತೃತ್ವವನ್ನು ಈ ಎರಡು ಅಕ್ಷರಗಳು ಹೇಳುತ್ತವೆ. ಆದ್ದರಿಂದ ಅಥ ಮತ್ತು ಅತಃಶಬ್ದಗಳನ್ನು ಎಲ್ಲಾ ಸೂತ್ರಗ್ರಂಥಗಳ ಪ್ರಾರಂಭದಲ್ಲಿ ಮೊದಲು ಉಚ್ಚರಿಸಬೇಕೆಂದು ಸಜ್ಜನರಿಗೆ ಸಮ್ಮತವಾಗಿದೆ.

ಹೀಗೆ 'ಅತಃ', 'ಅಥ' ಎಂಬೆರೆಡು ಶಬ್ದಗಳು ಶಬ್ದಸ್ವರೂಪದಿಂದ ಮತ್ತು ಸ್ವಾರ್ಥ-ಪ್ರತಿಪಾದಕವೆಂದು ನಿಶ್ಚಯವಾಗಿ ತಿಳಿದು ಸೂತ್ರಕಾರರಾದ ಎಲ್ಲಾ ಪ್ರಾಜ್ಞರು ತಮ್ಮ ಸೂತ್ರಗ್ರಂಥಗಳ ಪ್ರಾರಂಭದಲ್ಲಿ ಈ ಎರಡು ಶಬ್ದಗಳನ್ನೇ ಪ್ರಯೋಗಿಸುತ್ತಾರೆ.

## ಸತ್ತರ್ಕದೀಪಾವಳಿ

**सत्तर्कदीपावलिः –**

**उक्तार्थे गारुडवचनमुदाहरति – अथात इति ।।**

**ओंकारश्चाथशब्दश्च द्वावेतौ ब्रह्मणः पुरा ।**
**कण्ठं भित्वा विनिर्यातौ तस्मान्माङ्गलिकावुभौ ।।**

**इत्यादिवचनात् श्रुतमात्रेणाप्यथशब्देन मङ्गळाचरणं भवतीति ज्ञायते । अत्र अकाराद्यर्थकथनम् अथातःशब्दयोः प्राशस्त्यज्ञापनार्थम् । सर्ववागात्मकत्वं 'त'कारस्य तत्प्रतिपाद्यविष्णुवाचित्वात् । तकारथकारौ 'विष्णोर्व्याप्तिस्थिति-वाचिनौ' इत्यर्थः ।**

ತಾವು ಹೇಳಿದ ವಿಷಯದಲ್ಲಿ ಗಾರುಡವಚನವನ್ನು 'ಅಥಾತಃ' ಎಂಬುದರಿಂದ ಉದಾಹರಿಸಿದ್ದಾರೆ. ''ಓಂಕಾರಶ್ಚಾಥಶಬ್ದಶ್ಚ'' ಎಂಬ ಮಾತಿನಂತೆ ಅಥಶಬ್ದವು ಕಿವಿಗೆ ಬಿದ್ದ ಮಾತ್ರದಿಂದ ಮಂಗಳಾಚರಣೆಯನ್ನು ಮಾಡಿದಂತಾಯಿತು. 'ಅಥ' ಮತ್ತು 'ಅತಃ'ಶಬ್ದಗಳ ಪ್ರಾಶಸ್ತ್ಯವನ್ನು ತೋರಿಸುವುದಕ್ಕಾಗಿ ಅಕಾರಾದಿಗಳ ಅರ್ಥವನ್ನು ನಿರೂಪಿಸಿದ್ದಾರೆ. ತಕಾರವು ವಿಷ್ಣುವನ್ನು ಪ್ರತಿಪಾದಿಸುವುದರಿಂದ ಸರ್ವವಾಗಾತ್ಮಕತ್ವವನ್ನು ಹೇಳಿದಂತಾಯಿತು. ತಕಾರ ಹಾಗೂ ಥಕಾರಗಳು ವಿಷ್ಣುವಿನ ವ್ಯಾಪ್ತಿ ಹಾಗೂ ಸ್ಥಿತಿಗಳನ್ನು ಹೇಳುತ್ತಿವೆ.

## ತತ್ವಪ್ರದೀಪ

### ಅಥಶಬ್ದವು ಪರಮಮಂಗಳ ವಾಚಕ

**तत्वप्रदीपः –**

**ॐ अथातो ब्रह्मजिज्ञासा ।। अथशब्दः श्रवणकीर्तनाभ्यां मङ्गळफलः । विष्णोः परममङ्गळस्य वाचकत्वेनातिप्रियत्वात् ।**

ಸೂತ್ರದಲ್ಲಿರುವ 'ಅಥ' ಎಂಬ ಶಬ್ದವನ್ನು ಕೇಳುವುದರಿಂದ ಹಾಗೂ ಹೇಳುವುದರಿಂದ ಮಂಗಳ ಉಂಟಾಗುತ್ತದೆ. ಪರಮಮಂಗಳ ಸ್ವರೂಪನಾದ ವಿಷ್ಣುವನ್ನು ಪ್ರತಿಪಾದನೆ ಮಾಡುವುದರಿಂದ ಪ್ರಿಯವಾಗಿದೆ.

ವಿಶೇಷ ವಿವರಣೆ - ಬ್ರಹ್ಮಮೀಮಾಂಸಾಶಾಸ್ತ್ರವು 'ಅಥ' ಎಂಬ ಶಬ್ದದಿಂದ ಪ್ರಾರಂಭವಾಗುತ್ತಿದೆ. ಈ ಶಬ್ದವನ್ನೇ ಮೊದಲು ಪ್ರಯೋಗಿಸಲು ಮುಖ್ಯವಾದ

ಕಾರಣವಿದೆ ಎಂಬುದನ್ನು ಭಾಷ್ಯಕಾರರು ಸಮರ್ಥಿಸುತ್ತಿದ್ದಾರೆ. ಬೇರೆ ಶಬ್ದಗಳನ್ನು ಉಚ್ಚರಿಸಿದಾಗಲೂ ಮಂಗಳವಾಗುತ್ತದೆ. ಆದರೆ 'ಅಥ' ಶಬ್ದವನ್ನು ಕೇಳಿದರೂ, ಹೇಳಿದರೂ ಪರಮಮಂಗಳವುಂಟಾಗುತ್ತದೆ. ಅಷ್ಟೇ ಅಲ್ಲ 'ಮಂಗಳ' ಎಂಬ ಅರ್ಥವನ್ನು ಕೂಡ ಹೊಂದಿದೆ. ಏಕೆಂದರೆ 'ಅಥ' ಎಂಬ ಶಬ್ದವು ಭಗವಂತನ ನಾಮಗಳಲ್ಲಿ ಅಗ್ರಪಂಕ್ತಿಯನ್ನು ಪಡೆದಿದೆ. 'ಅ' ಎಂಬ ಅಕ್ಷರವು 'ಪರಬ್ರಹ್ಮ' ಎಂಬರ್ಥವನ್ನು ಹೇಳಿದರೆ 'ಥ' ಎಂಬ ಅಕ್ಷರವು ಅಂತರ್ಯಾಮಿಯಾಗಿದ್ದಾನೆಂಬರ್ಥವನ್ನು ಹೇಳುತ್ತದೆ. ಬ್ರಹ್ಮನು ಎಲ್ಲೆಡೆ ವ್ಯಾಪ್ತನಾಗಿದ್ದಾನೆಂಬ ಪರಮಾತ್ಮನ ಮಹಿಮೆಯನ್ನು ಹೇಳುವ ಕಾರಣ ಇದು ಹರಿನಾಮವಾಗಿದೆ. ಆದ್ದರಿಂದ ಪರಮಾತ್ಮನಿಗೆ 'ಅಥ' ಎಂಬ ಶಬ್ದವು ಅತ್ಯಂತ ಪ್ರೀತಿಕರವಾಗಿದೆ.

'ಅಥ' ಎಂಬ ಪದಕ್ಕೆ 'ಅಧಿಕಾರದ ಅನಂತರ' ಎಂಬುದು ಮತ್ತೊಂದು ಅರ್ಥ. ಭಾಷ್ಯದಲ್ಲಿ 'ಅಧಿಕಾರಾನಂತರ್ಯಾರ್ಥಶ್ಚ' ಎಂಬುದಾಗಿ 'ಚ' ಎಂಬ ಪದವನ್ನು ಪ್ರಯೋಗ ಮಾಡಿರುವುದರಿಂದ, ಮಂಗಳವು 'ಅಥ'ಶಬ್ದದ ಪ್ರಯೋಜನ ಹಾಗೂ ಶಬ್ದಾರ್ಥ ಎಂದು ತಿಳಿಸಿದ್ದಾರೆ.

'ಅಥ' ಎಂಬ ಪದವನ್ನು ಆರಂಭಾರ್ಥದಲ್ಲಿಯೂ ಪ್ರಯೋಗಿಸಬೇಕು. 'ಆರಂಭ ಮಾಡಬೇಕು' ಎಂಬರ್ಥದಲ್ಲಿ ಪ್ರಯೋಗಿಸುವುದು ತಪ್ಪು. ಆದ್ದರಿಂದ ವಲ್ಲಭಾಚಾರ್ಯರು 'ಅಥ' ಎಂಬ ಪದದಿಂದಲೇ 'ಆರಂಭ ಮಾಡಬೇಕು' ಎಂಬರ್ಥವು ದೊರೆಯುವುದರಿಂದ 'ಕರ್ತವ್ಯಾ' ಎಂಬ ಪದವನ್ನು ಅನುವೃತ್ತಿ ಮಾಡಬೇಕಾಗಿಲ್ಲ ಎಂಬ ವಾದವನ್ನು ಮಾಡಿರುವುದು ಅಸಾಧುವಾಗಿದೆ.

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಿಂದ ಅನುಬಂಧ ಚತುಷ್ಟಯವನ್ನು ಸೂತ್ರಕಾರರು ತಿಳಿಸಿದ್ದಾರೆ. 'ಅಥ' ಎಂಬ ಪದಕ್ಕೆ 'ಅಧಿಕಾರವನ್ನು ಹೊಂದಿದ ಅನಂತರ' ಎಂದು ವ್ಯಾಖ್ಯಾನಿಸಿದ್ದರಿಂದ ಅಧಿಕಾರವನ್ನು ತಿಳಿದಂತಾಯಿತು. ('ಅಧಿಕಾರದ ಅನಂತರ' ಎಂಬ ಮತ್ತೊಂದು ಅರ್ಥವನ್ನು ಭಾಷ್ಯದಲ್ಲಿ 'ಅಧಿಕಾರಾನಂತರ್ಯಾರ್ಥಶ್ಚ' ಎಂದು ಹೇಳಿದ್ದಾರೆ. 'ಚ' ಶಬ್ದದಿಂದ ಮಂಗಳಾರ್ಥವನ್ನು ಸಮುಚ್ಚಯ ಮಾಡಿದ್ದಾರೆ.) 'ಅತಃ' ಪದದಿಂದ ಮೋಕ್ಷವೆಂಬ ಪ್ರಯೋಜನವನ್ನು ತಿಳಿಸಿದ್ದಾರೆ. ಬ್ರಹ್ಮಪದದಿಂದ ವಿಷಯವನ್ನು ತಿಳಿಸಿದ್ದಾರೆ. ಇವುಗಳಿಗೆ ಸಹಜವಾಗಿರುವ ಪರಸ್ಪರ ಸಂಬಂಧವನ್ನು ಕೂಡ ತಿಳಿಸಿದ್ದಾರೆ. ಹೀಗೆ ಅನುಬಂಧ ಚತುಷ್ಟಯನ್ನು ಪ್ರಾರಂಭದಲ್ಲಿ ಅನುಸಂಧಾನ ಮಾಡಬೇಕು.

ನಮ್ಮ ಮನಸ್ಸಿನಲ್ಲಿರುವುದನ್ನೇ 'ಅತಃ' ಎಂಬ ಪದವು ಅನುವಾದ ಮಾಡುತ್ತಿದೆ

**तत्वप्रदीपः – अतःशब्दो हेत्वर्थः । सर्वस्य हि, 'दुःखं मा भूत् सुखमेव मे स्यात्' इति निःशेषदुःखनिवृत्तिः परमसुखावाप्तिश्चेच्छाविषयत्वेन सदा हृदि कृताऽत इत्युच्यते । यस्माद् ब्रह्मजिज्ञासां विना ते न सिध्यतः, तया सिध्यतश्चातः सा कर्तव्या ।**

'ಅತಃ' ಎಂಬ ಶಬ್ದವು ಹೇತ್ವರ್ಥದಲ್ಲಿದೆ. ಆ ಹೇತು ಹೀಗಿದೆ - ಪ್ರತಿಯೊಬ್ಬರಿಗೂ 'ದುಃಖ ಬೇಡವೇ-ಬೇಡ ಸುಖವೇ ಆಗಲಿ' ಎಂಬ ಅಪೇಕ್ಷೆ ಇರುತ್ತದೆ. ಆದ್ದರಿಂದ ಸಮಸ್ತ ದುಃಖದ ನಿವೃತ್ತಿ ಹಾಗೂ ಪರಮಸುಖದ ಅವಾಪ್ತಿಯು ಪ್ರತಿಯೊಬ್ಬರ ಇಚ್ಛೆಗೆ ವಿಷಯವಾದ್ದರಿಂದ ಯಾವಾಗಲೂ ಮನಸ್ಸಿನಲ್ಲೇ ಇರುತ್ತದೆ. ಇದು ದೊರೆಯಬೇಕಾದರೆ ಬ್ರಹ್ಮಜಿಜ್ಞಾಸೆ ಮಾಡಬೇಕೆಂಬುದು 'ಅತಃ' ಎಂಬ ಪದದ ಅಭಿಪ್ರಾಯ. ಬ್ರಹ್ಮಜಿಜ್ಞಾಸೆಯನ್ನು ಮಾಡದಿದ್ದರೆ ದುಃಖದ ಪರಿಹಾರ ಮತ್ತು ಸುಖದ ಅವಾಪ್ತಿಯು ದೊರೆಯಲು ಸಾಧ್ಯವಿಲ್ಲ. ಬ್ರಹ್ಮಜಿಜ್ಞಾಸೆಯನ್ನು ಮಾಡುವುದರಿಂದ ನಿಶ್ಶೇಷವಾಗಿ ದುಃಖನಿವೃತ್ತಿ ಹಾಗೂ ಪರಮಸುಖದ ಅವಾಪ್ತಿಯು ದೊರೆಯುತ್ತದೆ. ಆದ್ದರಿಂದ ಅವಶ್ಯವಾಗಿ ಬ್ರಹ್ಮನ ಜಿಜ್ಞಾಸೆಯನ್ನು ಮಾಡಬೇಕು.

ವಿಶೇಷ ವಿಚಾರ - ಸೂತ್ರದಲ್ಲಿ 'ಅತಃ' 'ಆದ್ದರಿಂದ' ಎಂದಷ್ಟೇ ಹೇಳಿದ್ದಾರೆ. ಈ ಅರ್ಥದಲ್ಲಿ ಬಹಳ ಸ್ವಾರಸ್ಯವಿದೆ. ಪ್ರತಿಯೊಬ್ಬರಿಗೂ ನಿರಂತರವಾಗಿ ಮನಸ್ಸಿನಲ್ಲಿ 'ನನಗೆ ಸುಖವಾಗಬೇಕು; ದುಃಖವಾಗಬಾರದು' ಎಂಬ ಅಪೇಕ್ಷೆ ಇದ್ದೇ ಇರುತ್ತದೆ. ಅವರ ಮನಸ್ಸಿನಲ್ಲಿರುವ ಅಪೇಕ್ಷೆಯನ್ನು ವಿವಕ್ಷಿಸಿ ಇದನ್ನು ಹೊಂದಲೇ ಬೇಕೆಂದರೆ 'ಬ್ರಹ್ಮಜಿಜ್ಞಾಸೆಯನ್ನು ಮಾಡು' ಎಂಬುದಾಗಿ 'ಅತಃ' ಎಂಬ ಪದವು ಹೇಳುತ್ತಿದೆ. ಆದ್ದರಿಂದ 'ಅತಃ' ಎಂಬ ಪದದಿಂದ ಬುದ್ಧಿಸ್ಥವಾದ ಅರ್ಥವನ್ನು ವಿವಕ್ಷಿಸಬೇಕು.

ಭಾಷ್ಯದಲ್ಲಿ 'ಉಕ್ತಂ ಚ ಗಾರುಡೇ' ಎಂದು ಹೇಳಿದ್ದಾರೆ. 'ಚ' ಶಬ್ದವು ಅವಧಾರಣಾರ್ಥದಲ್ಲಿದೆ. ಆದ್ದರಿಂದ ಭಾಷ್ಯಕಾರರು ಯಾವ ಅರ್ಥವನ್ನು ಸೂತ್ರಕ್ಕೆ ಹೇಳಿದ್ದಾರೋ ಅದು 'ಪೂರ್ವಮೇವ ಉಕ್ತಮ್ ಗಾರುಡೇ' 'ಮೊದಲೇ ಗರುಡ ಪುರಾಣದಲ್ಲಿ ಸಿದ್ಧವಾದ ವಿಚಾರ' ಎಂದು ಇದರ ಅಭಿಪ್ರಾಯ. ನಾವು ಹೇಳಿರುವ ವಿಚಾರ ಸ್ವಕಪೋಲಕಲ್ಪಿತವಲ್ಲ. ಅಥವಾ ಹೊಸವಿಚಾರವೂ ಅಲ್ಲ. ಪ್ರಾಚೀನರು ಸೂತ್ರಕ್ಕೆ

ಇದೇ ರೀತಿಯಲ್ಲಿ ವ್ಯಾಖ್ಯಾನ ಮಾಡಿದ್ದಾರೆ. ಮೊದಲೇ ಈ ಸೂತ್ರಾರ್ಥವು ಸಿದ್ಧವಾಗಿದೆ ಎಂಬ ಅಭಿಪ್ರಾಯವನ್ನು ಭಾಷ್ಯಕಾರರು ವಿವಕ್ಷಿಸಿ ಸೂತ್ರಗಳನ್ನು ವ್ಯಾಖ್ಯಾನ ಮಾಡುವಾಗ ಶ್ರುತಿಸ್ಮೃತಿಗಳನ್ನು ಆಧಾರವನ್ನಾಗಿ ನೀಡುತ್ತಾರೆ.

ಗರುಡ ಪುರಾಣದಲ್ಲಿ 'ಓಂ' ಕಾರ 'ಅಥ' ಮತ್ತು 'ಅತಃ' ಶಬ್ದಗಳು ಮೊದಲು ಹುಟ್ಟಿವೆ. ಆದ್ದರಿಂದ 'ಓಂ' ಕಾರ ಮತ್ತು ಅಥಶಬ್ದಗಳು ಮೊದಲು ಉಚ್ಚಾರ ಮಾಡಲು ಅರ್ಹವಾಗಿವೆಯೆಂದು ಹೇಳಲಾಗಿದೆ.

ಸೂತ್ರದ ಆದಿಯಲ್ಲಿ ಉಚ್ಚರಿಸಲ್ಪಡುವ 'ಓಂ' ಕಾರವು ಸೂತ್ರದ ಅವಯವವಾಗುತ್ತದೆಂದು ಕೆಲವರು ಹೇಳುತ್ತಾರೆ. ಸೂತ್ರದ ಅವಯವ ಆಗುವುದಿಲ್ಲವೆಂದು ಕೆಲವರು ಹೇಳುತ್ತಾರೆ. ಈ ವಿಷಯದಲ್ಲಿ ಬಹಳಷ್ಟು ಗೊಂದಲವಿದೆ. ನ್ಯಾಯಸುಧೆಯಲ್ಲಿ ಹೇಳಿದ್ದನ್ನು ಇಲ್ಲಿ ಯಥಾವತ್ತಾಗಿ ನೀಡಲಾಗಿದೆ -

ಓಂಕಾರವು ಸೂತ್ರದ ಆದಿಯಲ್ಲಿ ಇದೆ ಎಂದು ಅನುವ್ಯಾಖ್ಯಾನದಲ್ಲಿ ಹೇಳುತ್ತಾರೆ. ಆದರೆ ಸೂತ್ರದ ಆದಿಯಲ್ಲಿ ಓಂಕಾರವೇ ಇಲ್ಲ. ವಸ್ತುತಸ್ತು ಸೂತ್ರವನ್ನು ಪಠಿಸುವ ಪ್ರತಿಯೊಬ್ಬ ಮಹನೀಯರೂ ಸೂತ್ರದ ಮೊದಲಿಗೆ ಓಂಕಾರವನ್ನು ಪಠಿಸುವುದು ಪ್ರತ್ಯಕ್ಷಸಿದ್ಧವಾಗಿದೆ. ಇದರೂ ಕೂಡ ಈ ಓಂಕಾರ ಸೂತ್ರಾವಯವವಾದ ಓಂಕಾರವಲ್ಲ. ಇದನ್ನು ಅನುಮಾನದಿಂದ ಹೀಗೆ ಸಾಧಿಸಬಹುದು. 'ಸೂತ್ರಾದೌ ಶ್ರೂಯಮಾಣ ಓಂಕಾರಃ ನ ಸೂತ್ರಾವಯವಃ ಲಕ್ಷಣಾಂತರಭಾವೇ ಸತ್ಯಸಂಹಿತತಯಾ ಅಖಿಲೈಃ ಸಂಪಾಠೇ ಪಠ್ಯಮಾನತ್ವಾತ್ । ವೇದಾಧ್ಯಯನೋಪಕ್ರಮೇ ಅಧ್ಯೇತೃಭಿರುಚ್ಚಾರ್ಯಮಾಣೋಂಕಾರವತ್' ಎಂದು. ಇದರ ಅಭಿಪ್ರಾಯ ಹೀಗಿದೆ -

ವೇದದ ಅಧ್ಯಯನವನ್ನು ಆರಂಭ ಮಾಡುವಾಗ 'ಶ್ರೀಗುರುಭ್ಯೋ ನಮಃ ಹರಿಃ ಓಂ' ಎಂದು ಎಲ್ಲರೂ ಪಠಿಸುತ್ತಾರೆ. ಅಲ್ಲಿ ಪಠಿಸಿದ ಓಂಕಾರ ಮಂತ್ರದ ಅವಯವವಲ್ಲ. ಅಲ್ಲಿ ಓಂಕಾರವನ್ನು ಪ್ರತ್ಯೇಕವಾಗಿ ಅಂದರೆ ಸಂಧಿ ಮಾಡದೇ ಉಚ್ಚಾರ ಮಾಡಬೇಕು ಎಂಬುದಕ್ಕೆ ಯಾವ ಪ್ರತ್ಯೇಕ ನಿಮಯವೂ ಇಲ್ಲ. ಹಾಗಿದ್ದರೂ ಪ್ರತ್ಯೇಕವಾಗಿ ಪಾಠ ಮಾಡುವುದರಿಂದ ಅದು ಮಂತ್ರಾವಯವವಲ್ಲ. ಅದರಂತೆ ಸೂತ್ರದ ಆದಿಯಲ್ಲಿ ಉಚ್ಚಾರ ಮಾಡುವ ಓಂಕಾರವನ್ನೂ ಕೂಡ ಸಂಹಿತತಯಾ ಉಚ್ಚಾರ ಮಾಡುವುದಿಲ್ಲ. ಅಸಂಹಿತತಯಾ ಉಚ್ಚಾರ ಮಾಡಬೇಕು ಎನ್ನುವುದಕ್ಕೆ ವಿಶೇಷ ನಿಯಮವೇನೂ ಇಲ್ಲ. ಆದುದರಿಂದ ಈ ಓಂಕಾರವು ಸೂತ್ರಾವಯವವಲ್ಲ. ಒಂದು ವೇಳೆ ಸೂತ್ರಾವಯವವಾಗದಿದ್ದರೆ ಅಥಶಬ್ದದಂತೆ ಒಟ್ಟಿಗೆ

ಹೇಳಬೇಕಿತ್ತು. ಆದುದರಿಂದ ಸೂತ್ರದ ಆದಿಯಲ್ಲಿ ಅವಯವವಾದ ಓಂಕಾರವೇ ಇಲ್ಲ ಎಂದು ಅನುಮಾನದಿಂದ ಸಿದ್ಧವಾಗುತ್ತದೆ. ಇಲ್ಲೊಂದು ಆಕ್ಷೇಪ - ದೃಷ್ಟಾಂತದಲ್ಲಿರುವ ಓಂಕಾರವೂ ಕೂಡ ಮಂತ್ರದ ಅವಯವವೇ ಆಗಿದೆ. ಆದುದರಿಂದ ಅನುಮಾನಕ್ಕೆ ಸಾಧ್ಯವೈಕಲ್ಯದೋಷ ಬರುತ್ತದೆ ಎಂದು. ಆದರೆ ಇದು ಸರಿಯಲ್ಲ. ಪ್ರತಿದಿನವೂ ವೇದಾಧ್ಯಯನ ಮಾಡುವಾಗ ಪ್ರತಿದಿನವೂ ಒಂದೇ ಕಡೆ ಓಂಕಾರ ಉಚ್ಚಾರಣೆ ಮಾಡುವುದಿಲ್ಲ. ಈ ದಿನ ಬಿಟ್ಟ ಭಾಗದಿಂದ ಮುಂದೆ ಅಧ್ಯಯನ ಮಾಡುವಾಗ ಬೇರೆ ಬೇರೆ ಕಡೆಗಳಲ್ಲಿ ಓಂಕಾರ ಮಾಡುವುದಿದೆ. ಪ್ರತಿದಿನವೂ ಬೇರೆ ಬೇರೆ ಕಡೆಗಳಲ್ಲಿ ನಿಲ್ಲಿಸಿ, ಆರಂಭಿಸುವಾಗ ಪಠಿಸುವ ಓಂಕಾರ ಮಂತ್ರಾವಯವವಾಗುವುದಾದರೆ 'ಓಮಿತಿ ಬ್ರಹ್ಮ' ಮುಂತಾದ ಕಡೆ ಇರುವಂತೆ ಆಯಾಯಾ ಸ್ಥಳಗಳಲ್ಲಿ ನಿಯತವಾಗಿ ಓಂಕಾರಪಠಣ ಮಾಡಬೇಕಿತ್ತು. ಹಾಗೇ ನಿಯತ ಸ್ಥಳದಲ್ಲಿ ಓಂಕಾರ ಉಚ್ಚಾರಣೆ ಇಲ್ಲದ ಪ್ರಯುಕ್ತ ಇದು ಮಂತ್ರಾವಯವವಲ್ಲ. ಹಾಗಾದರೆ ಸೂತ್ರದ ಆರಂಭದಲ್ಲಿ ಮತ್ತು ವೇದಾಧ್ಯಯನದ ಆರಂಭದಲ್ಲಿ ಓಂಕಾರಪಠಣ ಏಕೆ ಎಂದರೆ ಅದು ಒಂದು ನಿಯಮ. ಯಾವ ರೀತಿ ಪೂರ್ವಕ್ಕೆ ಮುಖ ಮಾಡಿ ಅಧ್ಯಯನ ಮಾಡಬೇಕು ಮುಂತಾದವುಗಳು ಅಧ್ಯಯನ ನಿಯಮಾಂತರ್ಗತವೋ ಅದರಂತೆ ಆದಿಯಲ್ಲಿ ಓಂಕಾರವಿರಬೇಕು ಎಂಬುದೂ ಒಂದು ನಿಯಮ ಎಂದೂ ಹೇಳಲು ಬರುವ ಪ್ರಯುಕ್ತ ಸೂತ್ರಾದಿಯಲ್ಲಿ ಮಂಗಲಕ್ಕೋಸ್ಕರ ಓಂಕಾರವನ್ನು ಸೂತ್ರಕಾರರು ನಿಬಂಧನೆ ಮಾಡಿದ್ದಾರೆ ಎನ್ನುವುದು ಅಸಂಗತ ಎಂದು ಪೂರ್ವಪಕ್ಷ. ಈ ಆಕ್ಷೇಪಕ್ಕೆ ಉತ್ತರವನ್ನು 'ಸರ್ವತ್ರಾನುಗತತ್ವೇನ' ಎಂಬ ಅನುವ್ಯಾಖ್ಯಾನ ಮೂಲದಲ್ಲಿ ಕೊಡಲಾಗಿದೆ. ಸೂತ್ರದಲ್ಲಿ ಓಂಕಾರವನ್ನು ಪ್ರತ್ಯೇಕವಾಗಿ ಉಚ್ಚಾರ ಮಾಡುವ ಕಾರಣದಿಂದ ಅದನ್ನು ಸೂತ್ರಾವಯವವಲ್ಲ ಎಂದು ಸಾಧಿಸಲು ಬರುವುದಿಲ್ಲ. ಅದಕ್ಕೆ ಕಾರಣ ಬೇರೆಯೇ ಇದೆ. ಈ ಓಂಕಾರ ಮುಂದಿನ ಎಲ್ಲಾ ಸೂತ್ರಗಳಲ್ಲಿ ಅನುವೃತ್ತಿಯನ್ನು ಹೊಂದಲಿ ಎಂಬ ವಿಷಯವನ್ನು ಸೂಚಿಸುವುದಕ್ಕಾಗಿ. ಹೀಗೆ ಅಸಂಹಿತತಯಾ ಓಂಕಾರದ ಉಚ್ಚಾರಣೆಗೆ ಬೇರೆ ಪ್ರಯೋಜನ ಇರುವುದರಿಂದ ಅದರಿಂದ ಸೂತ್ರಾವಯವವಲ್ಲ ಎಂದು ಸಾಧನೆ ಮಾಡಲು ಬರುವುದಿಲ್ಲ.

ಪ್ರತಿಯೊಂದು ಸೂತ್ರವೂ ಕೂಡ ಅನೇಕ ವೇದವಾಕ್ಯಗಳನ್ನು ವಿಚಾರ ಮಾಡುವುದರಿಂದ ಎಲ್ಲವೂ ಪ್ರತ್ಯೇಕ ಅವಾಂತರ ಬ್ರಹ್ಮವಿದ್ಯೆಗಳಾಗಿವೆ. ಬ್ರಹ್ಮವಿದ್ಯೆಯ ಆದ್ಯಂತಗಳಲ್ಲಿ ಓಂಕಾರವಿರಬೇಕು ಎಂಬುದು ಶ್ರೌತ ಅರ್ಥವಾದದಿಂದ ಸಿದ್ಧವಾಗುತ್ತದೆ. 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚವಿಶೀರ್ಯತೇ ।' ಎಂದು ಅರ್ಥವಾದ ವಾಕ್ಯ. ಇದರ ಅರ್ಥ - ಆದಿಯಲ್ಲಿ ಓಂಕಾರವಿಲ್ಲದಿದ್ದರೆ ಪುಣ್ಯ ಸೋರಿ ಹೋಗುತ್ತದೆ. ನಂತರ

ಓಂಕಾರವಿಲ್ಲದಿದ್ದರೆ ಪುಣ್ಯ ನಶಿಸುತ್ತದೆ. ಆದುದರಿಂದ ಓಂಕಾರ ಪ್ರತಿಯೊಂದು ಸೂತ್ರದ ಆದ್ಯಂತಗಳಲ್ಲಿಯೂ ಇದೆ ಎಂದೂ ಊಹೆ ಮಾಡಬೇಕು. ಹೀಗೆ ಊಹ್ಯವಾದ ಶಬ್ದವು ವಾಕ್ಯದಿಂದ ಭಿನ್ನ ಎಂದು ಹೇಳಬಾರದು. ಅದೂ ಕೂಡ ವಾಕ್ಯಘಟಕವೇ ಆಗಿದ್ದು, ಇತರ ಪದಾರ್ಥಗಳೊಂದಿಗೆ ಅನ್ವಯವನ್ನು ಹೊಂದುತ್ತದೆ. 'ಇಷೇ ತ್ವಾ' ಇತ್ಯಾದಿ ಮಂತ್ರಗಳಲ್ಲಿ 'ಛಿನತ್ತಿ' ಮುಂತಾದ ಪದಗಳ ಅಧ್ಯಾಹಾರ ಮಾಡುತ್ತೇವೆ. ಇಲ್ಲಿ 'ಛಿನತ್ತಿ' ಎಂಬ ಪದಕ್ಕೆ ಮಂತ್ರಾವಯತ್ವವನ್ನು ಒಪ್ಪಲೇಬೇಕು. ಹೀಗೆ ಪ್ರತಿಸೂತ್ರದಲ್ಲಿಯೂ ಓಂಕಾರ ಅನಿವಾರ್ಯವಾಗಿ ಬೇಕೇ ಬೇಕು. ಆದರೆ ಎಲ್ಲೆಡೆ ಓಂಕಾರ ಉಚ್ಚಾರ ಮಾಡಿದರೆ ಗೌರವ ಬರುತ್ತದೆ. ಅದಕ್ಕಾಗಿ ಮುಂದಿನ ಎಲ್ಲ ಸೂತ್ರಗಳಲ್ಲಿ ಅನುವೃತ್ತಿ ಮಾಡುವ ಅಭಿಪ್ರಾಯದಿಂದ ಮೊದಲೇ ಓಂಕಾರ ಉಚ್ಚಾರಣೆ ಮಾಡುತ್ತಾರೆ. ವ್ಯಾಕರಣಸೂತ್ರದಲ್ಲಿ ಅಧಿಕೃತಪದಗಳನ್ನು ಸ್ವರಿತಸ್ವರದಿಂದ ಉಚ್ಚಾರಮಾಡುವಂತೆ. ಆದುದರಿಂದ ಈ ಓಂಕಾರವನ್ನು ಸಂಧಿಮಾಡಿ ಅಥಶಬ್ದದ ಹಾಗೆ ಒಟ್ಟಿಗೆ ಹೇಳಿದ್ದರೆ ಇದು ಪ್ರಥಮಸೂತ್ರ ಅವಯವ ಮಾತ್ರ . ದ್ವಿತೀಯಾದಿ ಸೂತ್ರಗಳಿಗೆ ಸಂಬಂಧಪಟ್ಟಿಲ್ಲ ಎಂಬ ಭ್ರಾಂತಿ ಬರುತ್ತಿತ್ತು. ಅಂತಹ ಭ್ರಾಂತಿಯನ್ನು ಹೋಗಲಾಡಿಸುವುದಕ್ಕಾಗಿ ಅಸಂಹಿತತಯಾ ಓಂಕಾರವನ್ನು ಪ್ರಥಮಸೂತ್ರದಲ್ಲಿ ಉಚ್ಚರಿಸಿದ್ದಾರೆ. ಯದ್ಯಪಿ ವ್ಯಾಖ್ಯಾನ ಮಾಡುವಾಗ ಓಂಕಾರ ಎಲ್ಲಾ ಸೂತ್ರಗಳಲ್ಲಿ ಅನುವೃತ್ತಿ ಎಂದು ತಿಳಿಸಿದರೆ ಸಾಕು. ಪೃಥಕ್ಕಾಗಿ ಉಚ್ಚರಿಸುವುದು ವ್ಯರ್ಥ ಎಂಬ ಆಕ್ಷೇಪ ಬರಬಹುದು. ಆದರೆ ಅಂತರಂಗಜ್ಞಾಪಕವಿಲ್ಲದಾಗ ಬಹಿರಂಗಜ್ಞಾಪಕವನ್ನು ಹುಡುಕಬೇಕು. ವ್ಯಾಖ್ಯಾನ ಬಹಿರಂಗ. ಸೂತ್ರದಲ್ಲೇ ಅಧಿಕೃತತ್ವವನ್ನು ತಿಳಿಸುವ ಉಪಾಯವಿದ್ದಾಗ ವ್ಯಾಖ್ಯಾನದ ಆಕ್ಷೇಪ ಬೇಕಾಗಿಲ್ಲ. ಆದುದರಿಂದ ಬೇರೆಯಾಗಿ ಓಂಕಾರವನ್ನು ಹೇಳಿದ್ದಾರೆ. ಆದುದರಿಂದ ಪ್ರತ್ಯೇಕ ಉಚ್ಚಾರಣೆಗೆ ಬೇರೆ ಉದ್ದೇಶವಿದೆ. ಹೀಗಾಗಿ ಈ ಹೇತುವನ್ನು ಓಂಕಾರವನ್ನು ಸೂತ್ರಾವಯವವಲ್ಲ ಎಂದು ಸಾಧನ ಮಾಡಲು ಪ್ರಯೋಗಿಸಲು ಬರುವುದಿಲ್ಲ. ಹೇತುವು ಅನ್ಯಥಾಸಿದ್ಧ. ಪ್ರಕೃತಸಾಧ್ಯಸಾಧಕವಲ್ಲದಿದ್ದರೂ ಪಕ್ಷದಲ್ಲಿ ಕೂಡಬಹುದಾದ್ದರಿಂದ ತಥಾಚ ಓಂಕಾರವು ಸೂತ್ರಾವಯವ ಮತ್ತು ದ್ವಿತೀಯಾದಿ ಸೂತ್ರಗಳಲ್ಲಿ ಅದಕ್ಕೆ ಅನುವೃತ್ತಿ ಇದೆ ಎಂಬ ವಿಷಯ ಸಿದ್ಧವಾಗುತ್ತದೆ.

ಶ್ರೌತ ಅರ್ಥವಾದದಿಂದಾಗಿ ಆದ್ಯಂತಗಳಲ್ಲಿ ಓಂಕಾರದ ಊಹೆಯನ್ನು ಮಾಡಬೇಕೋ ಅಥವಾ ಪ್ರಾಙ್ಮುಖತ್ವಾದಿ ನಿಯಮದಂತೆ ಸೂತ್ರಾವಯವವಾಗದೆಯೇ ಉಚ್ಚರಿಸಬಹುದೋ

ಎಂಬ ಸಂಶಯವೇ ಬರುತ್ತದೆ. ಆದುದರಿಂದ ಅನ್ಯಥಾಸಿದ್ಧಿಯನ್ನು ಹೇಗೆ ಹೇಳೋಣ ಎಂಬ ಆಕ್ಷೇಪ ಇಲ್ಲಿ ಬರಬಹುದು. ಆದರೂ ಈ ಆಕ್ಷೇಪವನ್ನು ನಾವೂ ಒಪ್ಪುತ್ತೇವೆ. ಹಿಂದೆ ಹೇಳಿದ ಎರಡೂ ರೀತಿ ಸಮಂಜಸವೇ ಆದುದರಿಂದ ಸಂಶಯ ಸಹಜವಾಗಿಯೇ ಬರುತ್ತದೆ. ಆದರೂ ನಿಮ್ಮ ಅನುಮಾನವೇನೂ ನಿರ್ದುಷ್ಟವಲ್ಲ. ಏಕೆಂದರೆ ಅನುಮಾನಕ್ಕೆ ಸಂದಿಗ್ಧಾನ್ಯಥಾಸಿದ್ಧಿದೋಷ ಬರುತ್ತದೆ. ಆದುದರಿಂದ ಅನುಮಾನ ದುಷ್ಟವೇ ಆಗಿದೆ. 'ಓತತ್ವವಾಚೀ' ಎಂದು ಮುಂದೆ ಹೇಳುವಂತೆ ಈ ಓಂಕಾರವು ವಿಷಯ ಸಮರ್ಪಕವಾಗಿ ಪ್ರಥಮಸೂತ್ರವಾಕ್ಯಾರ್ಥದಲ್ಲಿ ಸಮನ್ವಯ ಹೊಂದುತ್ತದೆ ಎಂದು ಸಿದ್ಧವಾಗುವುದರಿಂದ ಈ ಓಂಕಾರ ಕೇವಲ ಪ್ರಾಙ್ಮುಖತ್ವಾದಿನಿಯಮದಂತೆ ಪ್ರಯುಕ್ತವಾಗಿಲ್ಲ. ಹೊರತು ಸೂತ್ರಾವಯವವೆಂದೂ ಸಿದ್ಧವಾಗುವುದರಿಂದ ಅನುಮಾನಕ್ಕೆ ಬಾಧದೋಷವೂ ಬರುತ್ತದೆ.

'ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇಽಖಿಲೈಃ' ಎಂಬ ಅನುವ್ಯಾಖ್ಯಾನದಿಂದ ಅನುಮಾನಕ್ಕೆ ಅನ್ಯಥಾಸಿದ್ಧಿದೋಷವನ್ನು ಹೇಳುವಂತೆ ವ್ಯಾಖ್ಯಾನ ಮಾಡಲಾಯಿತು. ಈಗ ಮತ್ತೊಂದು ರೀತಿಯಲ್ಲಿ ಈ ಮೂಲಕ್ಕೆ ವ್ಯಾಖ್ಯಾನ ಮಾಡುತ್ತಾರೆ. ಈ ಭಾಗದಿಂದ ಅನುಮಾನಕ್ಕೆ ಸಾಧ್ಯವೈಕಲ್ಯದೋಷ ಬರುತ್ತದೆ ಎಂದು ಸಮರ್ಥನೆ ಮಾಡಬಹುದು. ದೃಷ್ಟಾಂತ ವೇದದ ಓಂಕಾರ. ವೇದ ಅಧ್ಯಯನ ಮಾಡುವ ಪಾಠಕರು ಸ್ಥಾನವ್ಯತ್ಯಾಸ ಮಾಡಿ ಬೇರೆ ಬೇರೆ ಸ್ಥಳಗಳಲ್ಲಿ ಓಂಕಾರ ಉಚ್ಚಾರ ಮಾಡುತ್ತಾರೆಯೇ ಹೊರತು ಓಮಿತಿ ಬ್ರಹ್ಮ ಎಂಬ ನಿಯತಸ್ಥಳದಲ್ಲಿ ಪಠಿಸುವುದಿಲ್ಲ. ಆದುದರಿಂದ ಈ ಓಂಕಾರ ಮಂತ್ರಾವಯವವಲ್ಲ ಎಂದು ಉದಾಹರಣೆ. ಆದರೆ ಮಂತ್ರಪಾಠಕರು ಹಾಗೆ ಭಿನ್ನ ಭಿನ್ನ ಸ್ಥಾನದಲ್ಲಿ ಓಂಕಾರವನ್ನು ಪಠಿಸಲು ಬೇರೆ ಕಾರಣವಿದೆ. ಅಧ್ಯಾಪಕರು ಆದಿಯಲ್ಲಿ ಹೇಳಿಕೊಟ್ಟು ಉಚ್ಚರಿಸಿದ ಓಂಕಾರ ಸರ್ವತ್ರ ಅನುಗತವಾಗಿದೆ ಎಂಬ ಕಾರಣದಿಂದ ಪ್ರತಿಯೊಂದು ಕಡೆ ಉಚ್ಚರಿಸಬೇಕಿದ್ದರೂ ಕೂಡ ದಿನದ ಅಧ್ಯಯನದ ಆರಂಭದಲ್ಲಿ ಮಾತ್ರ ಉಚ್ಚಾರಣೆ ಮಾಡುತ್ತಾರೆ. ಆದರೆ ಸ್ರವಣಾದಿದೋಷಪರಿಹಾರಕ್ಕಾಗಿ ಉಚ್ಚಾರ ಮಾಡಿದ ಓಂಕಾರವು ಆಯಾಯ ಮಂತ್ರದಲ್ಲಿ ಉಕ್ತವಾದ ಅಗ್ನ್ಯಾದಿಶಬ್ದವಾಚ್ಯನಾದ ಭಗವಂತನಲ್ಲಿ ಗುಣಪೂರ್ಣತ್ವವನ್ನು ಹೇಳುವ ಮೂಲಕ ಮಂತ್ರಾವಯವವೇ ಆಗಿದೆ. ಆದುದರಿಂದ ದೃಷ್ಟಾಂತದಲ್ಲಿ ಅಮಂತ್ರಾವಯವತ್ವರೂಪಸಾಧ್ಯವು ಇಲ್ಲದಿದ್ದರೂ ಬೇರೆ ಪ್ರಯೋಜನಕ್ಕಾಗಿ ಭಿನ್ನಭಿನ್ನಸ್ಥಾನದಲ್ಲಿ ಉಚ್ಚರಿತವಾಗುವ ಕಾರಣ ಹೇತು ಅನ್ಯಥಾಸಿದ್ಧವಾಗುತ್ತದೆ.

ದೃಷ್ಟಾಂತದಲ್ಲಿ ಅಮಂತ್ರಾವಯವತ್ವರೂಪಸಾಧ್ಯವು ಬರುವುದಿಲ್ಲವಾದ್ದರಿಂದ ಸಾಧ್ಯವೈಕಲ್ಯರೂಪದೋಷವೂ ಬರುತ್ತದೆ. ಹೀಗೆ ಅನುಮಾನದಿಂದ ಆದಿಯಲ್ಲಿ ಉಚ್ಚರಿತವಾದ ಓಂಕಾರ ಸೂತ್ರಾವಯವ ಅಲ್ಲ ಎಂದು ಸಾಧಿಸಲು ಬರುವುದಿಲ್ಲ. ಆದುದರಿಂದ ಯಾವುದೇ ಬಾಧಕವಿಲ್ಲ. ಆದುದರಿಂದ ಆದಿಯಲ್ಲಿ ಉಚ್ಚರಿತ ಓಂಕಾರ ಪ್ರಥಮಸೂತ್ರಾವಯವ ಎಂದು ಸಿದ್ಧವಾಗುತ್ತದೆ. ಹೀಗಾಗಿ ''ತತ್ರ ತಾರಾಥಮೂಲತ್ವಂ'' ಎಂದು ಹೇಳಿದ್ದು ಸರಿಯಾಗಿಯೇ ಇದೆ.

## 'ಅಥ' ಮತ್ತು 'ಅತಃ' ಪದಗಳ ವ್ಯಾಖ್ಯಾನ

**तत्वप्रदीपः – ''व्याख्यानत्वात् सर्ववाचां सर्ववागात्मता भवेत्'' इति सामसंहितायाम् । तथौ प्राणात्मकौ प्रोक्तौ प्राणं प्रणेतारं विष्णुं वाचकत्वेनाऽसौ ।**

'ಅಕಾರವು ಸಕಲಶಬ್ದಗಳ ವ್ಯಾಖ್ಯಾನರೂಪವಾಗಿದೆ ಆದ್ದರಿಂದ ಶ್ರೇಷ್ಠವಾಗಿದೆ' ಎಂದು ಹೇಳಲಾಗಿದೆ. ಈ ವಿಷಯದಲ್ಲಿ ಸಾಮಸಂಹಿತೆಯ ಆಧಾರ ಹೀಗಿದೆ - 'ವ್ಯಾಖ್ಯಾನತ್ವಾತ್ ಸರ್ವವಾಚಾಮ್ ಸರ್ವವಾಗಾತ್ಮತಾ ಭವೇತ್' ಸಕಲ ಮಾತುಗಳು ಅಕಾರದ ವ್ಯಾಖ್ಯಾನ-ರೂಪವಾದ್ದರಿಂದ ಅಕಾರವು ಸರ್ವವಾಗಾತ್ಮಕವಾಗಿದೆ ಎಂದು.

'ತಥೌ ಪ್ರಾಣಾತ್ಮಕೌ ಪ್ರೋಕ್ತೌ' ಎಂಬ ಪುರಾಣದ ಮಾತಿಗೆ ಹೀಗರ್ಥ - 'ಅಥ' ಮತ್ತು 'ಅತಃ' ಎಂಬ ಎರಡು ಪದಗಳಲ್ಲಿರುವ ಅರ್ಥವು ಪರಮಾತ್ಮನನ್ನು ಕುರಿತು ಪ್ರತಿಪಾದನೆ ಮಾಡುತ್ತವೆ. 'ಅತಃ' ಎಂಬಲ್ಲಿರುವ 'ತ' ಕಾರವು ಬ್ರಹ್ಮಾಂಡದಲ್ಲಿ ಚೇಷ್ಟಾಪ್ರದನಾಗಿದ್ದಾನೆ ಎಂಬರ್ಥವನ್ನು ಹೇಳುತ್ತದೆ. ಅಥ ಎಂಬಲ್ಲಿರುವ 'ಥ' ಕಾರವು ಪಿಂಡಾಂಡದಲ್ಲಿದ್ದು ಚೇಷ್ಟಾಪ್ರದನಾಗಿದ್ದಾನೆ ಎಂಬ ಅರ್ಥವನ್ನು ಹೇಳುತ್ತದೆ. ಹೀಗೆ ಸರ್ವಚೇಷ್ಟಾಪ್ರದನಾಗಿದ್ದಾನೆಂದು ತಕಾರ ಮತ್ತು ಥಕಾರಗಳು ಹೇಳುತ್ತವೆ. ಹೀಗೆ 'ತ' ಮತ್ತು 'ಥ' ಕಾರವು ಪರಮಾತ್ಮನ 'ಸರ್ವಚೇಷ್ಟಾನಿಯಾಮಕ' ಎಂಬ ಗುಣವನ್ನು ಪ್ರತಿಪಾದನೆ ಮಾಡುತ್ತಿವೆ. ಆದ್ದರಿಂದ ವಿಷ್ಣು ವಾಚಕವಾಗಿದೆ.

## ಬ್ರಹ್ಮಸೂತ್ರಭಾಷ್ಯ

### ಬ್ರಹ್ಮಮೀಮಾಂಸಾಶಾಸ್ತ್ರವನ್ನು ಓದಲು ಯಾರಿಗೆ ಅಧಿಕಾರ ?

**भाष्यम् –**

**अधिकारश्चोक्तो भागवततन्त्रे –**

**मन्दमध्योत्तमत्वेन त्रिविधा ह्यधिकारिणः ।**
**तत्र मन्दा मनुष्येषु य उत्तमगणा मताः ॥**
**मध्यमा ऋषिगन्धर्वा देवास्तत्रोत्तमा मताः ।**
**इति जातिकृतो भेदस्तथाऽन्यो गुणपूर्वकः ॥**
**भक्तिमान् परमे विष्णौ यस्त्वध्ययनवान् नरः ।**
**अधमः शमादिसंयुक्तो मध्यमः स उदाहृतः ॥**
**आब्रह्मस्तम्बपर्यन्तमसारं चाप्यनित्यकम् ।**
**विज्ञाय जातवैराग्यो विष्णुपादैकसंश्रयः ॥**
**स उत्तमोऽधिकारी स्यात् सन्न्यस्ताखिलकर्मवान् ॥' इति ।**

ಅನುವಾದ - ಅಧಿಕಾರ ಎಂದರೆ ಏನು ? ಅಧಿಕಾರವು ಎಷ್ಟು ಬಗೆ ? ಇದರ ಬಗ್ಗೆ ಭಾಗವತತಂತ್ರ ವಿವರಿಸಿದೆ --

'ಅಧಮ, ಮಧ್ಯಮ, ಉತ್ತಮ ಎಂದು ಮೂರು ಬಗೆಯ ಅಧಿಕಾರಿಗಳಿದ್ದಾರೆ. ಮನುಷ್ಯೋತ್ತಮರು ಅಧಮಾಧಿಕಾರಿಗಳು; ಋಷಿಗಳು ಗಂಧರ್ವರು ಪಿತೃಗಳು ಚಕ್ರವರ್ತಿಗಳು ಮಧ್ಯಮಾಧಿಕಾರಿಗಳು; ದೇವತೆಗಳು ಉತ್ತಮಾಧಿಕಾರಿಗಳು' ಈ ವಿಂಗಡನೆಯು ಜಾತಿಮೂಲಕವಾದದ್ದು.

ಗುಣಕ್ಕೆ ಅನುಗುಣವಾದ ಅಧಿಕಾರಭೇದ ಮತ್ತೊಂದಿದೆ -- ಶಾಸ್ತ್ರಾಧ್ಯಯನದಲ್ಲಿ ಆಸಕ್ತನಾಗಿ ಸರ್ವೋತ್ತಮನಾದ ವಿಷ್ಣುವಿನಲ್ಲಿ ಭಕ್ತಿಯುಳ್ಳವನು ಅಧಮಾಧಿಕಾರಿ. ಈ ಗುಣಗಳಿದ್ದು ಹೆಚ್ಚಿನ ಶಮಾದಿಗುಣಗಳನ್ನು ಹೊಂದಿದ್ದರೆ ಮಧ್ಯಮಾಧಿಕಾರಿ. ಹಿಂದಿನ ಗುಣಗಳನ್ನು ಹೊಂದಿ 'ಬ್ರಹ್ಮನಿಂದ ಹಿಡಿದು ತೃಣಪರ್ಯಂತ ಸಕಲಜೀವರಾಶಿಗಳು ಸಾರವಿಲ್ಲದ್ದು ಮತ್ತು ಅನಿತ್ಯವಾದದ್ದೆಂದು ತಿಳಿದು ವೈರಾಗ್ಯಶಾಲಿಯಾಗಿ ಭಗವಂತನನ್ನೇ ಯಾರು ನಂಬಿ ಬದುಕುತ್ತಾನೋ ಅವನೇ ಉತ್ತಮಾಧಿಕಾರಿ.

ಅಂತಹವನು ಸಕಲಪ್ರವೃತ್ತಿಕರ್ಮಗಳನ್ನು ಬಿಟ್ಟು ಹರಿಪ್ರೀತಿಕರವಾದ ಕರ್ಮಗಳನ್ನಷ್ಟೇ ಆಚರಿಸುತ್ತಾನೆ.

## ಸತ್ತರ್ಕದೀಪಾವಳಿ

### ಭಾಗವತತಂತ್ರದಲ್ಲಿ ಅಧಿಕಾರಸ್ವರೂಪ

**सत्तर्कदीपावळिः –**

**यद् आनन्तर्यमथशब्दो ब्रवीति, तमधिकारं मन्दमध्यादिभेदेन त्रिधा विभज्य, भागवततन्त्रोक्त्या दर्शयति – मन्देति ।।**

ಯಾವುದರ ಆನಂತರ್ಯವನ್ನು ಅಥಶಬ್ದವು ಹೇಳುತ್ತಿದೆಯೋ ಅಂತಹ ಅಧಿಕಾರವನ್ನು ಅಧಮ, ಮಧ್ಯಮ ಇತ್ಯಾದಿ ಕ್ರಮದಿಂದ ಮೂರು ಬಗೆಯಲ್ಲಿ ವಿಭಾಗಿಸಿ, 'ಮಂದಮಧ್ಯೋತ್ತಮತ್ವೇನ' ಎಂದು ಭಾಗವತತಂತ್ರವನ್ನು ಉಲ್ಲೇಖಿಸುತ್ತಿದ್ದಾರೆ.

## ಬ್ರಹ್ಮಸೂತ್ರಭಾಷ್ಯ

### ಅನೇಕ ಶ್ರುತಿ ಸ್ಮೃತಿಗಳಿಂದ ಅರ್ಹತೆಯ ನಿರ್ಧಾರ

**ब्रह्मसूत्रभाष्यम् –**

**'अध्ययनमात्रवतः' 'नाविशेषात्' इति चोपरि ।**

ಅನುವಾದ -- ಸಕಲಶಾಖಾಧ್ಯಯನವನ್ನು ಯೋಗ್ಯತಾನುಸಾರ ಮಾಡಿದವನಿಗೆ ಮಾತ್ರ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಅಧಿಕಾರ. ಈ ಅಧಿಕಾರದಲ್ಲಿಯೂ ತಾರತಮ್ಯವಿದೆ. ಇದನ್ನು ಮುಂದೆ ಸೂತ್ರಕಾರರೇ ಮೂರನೆಯ ಅಧ್ಯಾಯದಲ್ಲಿ ಹೇಳುತ್ತಾರೆ

**ब्रह्मसूत्रभाष्यम् –**

**'शान्तो दान्त उपरतस्तितिक्षुः समाहितो भूत्वाऽऽत्मन्येवाऽऽत्मानं पश्येत्',**

ಹರಿನಿಷ್ಠನಾಗಿ, ಇಂದ್ರಿಯನಿಗ್ರಹವುಳ್ಳವನಾಗಿ, ವಿಷಯಭೋಗಗಳಲ್ಲಿ ಅನಾಸಕ್ತನಾಗಿ, ದ್ವಂದ್ವಾತೀತನಾಗಿ, ಯಥಾರ್ಥಜ್ಞಾನವನ್ನು ಪಡೆದು ತನ್ನ ಹೃದಯದಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಳ್ಳಬೇಕು.

**ब्रह्मसूत्रभाष्यम् –**

**'परीक्ष्य लोकान् कर्मचितान् ब्राह्मणो निर्वेदमायात् नास्त्यकृतः कृतेन ।**
**तद्विज्ञानार्थं स गुरुमेवाभिगच्छेत् समित्पाणिः श्रोत्रियं ब्रह्मनिष्ठम् ।'**

ಬ್ರಹ್ಮಜ್ಞಾನಕ್ಕೆ ಯೋಗ್ಯನಾದವನು ಕಾಮ್ಯಕರ್ಮಗಳಿಂದ ಲಭ್ಯವಾಗುವ ಸ್ವರ್ಗಾದಿಗಳನ್ನು ಅನಿತ್ಯವೆಂದು ತಿಳಿದು ಕಾಮ್ಯಕರ್ಮಗಳಲ್ಲಿ ಮತ್ತು ಅವುಗಳ ಫಲವಾದ ಸ್ವರ್ಗಾದಿಗಳಲ್ಲಿ ಅಲಂಬುದ್ಧಿಯನ್ನು ಕಾಣಬೇಕು. ಏಕೆಂದರೆ, ನಿತ್ಯವಾದ ಮೋಕ್ಷವು ಕೃತಕವಾದ ಯಜ್ಞಾದಿಕಾಮ್ಯ-ಕರ್ಮಗಳಿಂದ ದೊರೆಯದು.

ಆ ಕಾರಣದಿಂದಲೇ ಹೆಚ್ಚಿನ ಬ್ರಹ್ಮಜ್ಞಾನಕ್ಕಾಗಿ ಸಮಿತ್ತನ್ನು ಹಿಡಿದು (ಕೈಜೋಡಿಸಿ) ವೇದಾಧ್ಯಯನದಲ್ಲಿ ನಿಷ್ಣಾತನಾದ, ಬ್ರಹ್ಮನಿಷ್ಠನಾದ ಗುರುವನ್ನು ಶರಣಾಗಬೇಕು.

**ब्रह्मसूत्रभाष्यम् –**

**'यमेवैष वृणुते तेन लभ्यस्तस्यैष आत्मा विवृणुते तनूं स्वाम् ।'**

ಭಗವಂತನು ಯಾರನ್ನು ತನ್ನವನನ್ನಾಗಿ ಸ್ವೀಕರಿಸುತ್ತಾನೋ ಅಂತಹವನಿಂದಲೇ ಪರಮಾತ್ಮನು ಹೊಂದಲ್ಪಡುತ್ತಾನೆ. ಅಂತಹ ಅಧಿಕಾರಿಗೆ ಪ್ರಸನ್ನನಾದ ಪರಮಾತ್ಮನು ತನ್ನ ಸ್ವರೂಪವನ್ನು ಪ್ರಕಟಗೊಳಿಸುತ್ತಾನೆ.

**ब्रह्मसूत्रभाष्यम् –**

**'यस्य देवे परा भक्तिर्यथा देवे तथा गुरौ ।**
**तस्यैते कथिता ह्यर्थाः प्रकाशन्ते महात्मनः ।।' – इत्यादिश्रुतिश्च ।।**

ಯಾವ ಭಕ್ತರಿಗೆ ಕ್ರೀಡಾದಿಗುಣವಿಶಿಷ್ಟನಾದ ಪರಮಾತ್ಮನಲ್ಲಿ ನಿರವಧಿಕವಾದ ಭಕ್ತಿಯಿದೆಯೋ, ಹಾಗೂ ಗುರುಗಳಲ್ಲಿ ತಾರತಮ್ಯಾನುಸಾರಿಯಾದ ಭಕ್ತಿಯಿದೆಯೋ ಅವನಿಗೆ ಮಾತ್ರ ಗುರುಗಳು ಹೇಳಿದ ವಿಷಯವು ಮನಮುಟ್ಟುತ್ತದೆ.

ಇವೇ ಮೊದಲಾದ ಶ್ರುತಿಗಳಿಂದ ಅಧಿಕಾರಿಗಳಲ್ಲಿ ಇರುವ ಅರ್ಹತೆಯು ಸ್ಪಷ್ಟವಾಗುತ್ತದೆ.

## ಸತ್ತರ್ಕದೀಪಾವಳಿ

### ಶಾಸ್ತ್ರಾಧ್ಯಯನದ ಅಧಿಕಾರಿಗಳು ತ್ರಿವಿಧರು

**सत्तर्कदीपावळिः –**

**विष्णुभक्तिमत्वे सति अध्ययनवतामपि शमदमादिराहित्यसाहित्यवशात् मन्दमध्योत्तमभेदविशेषित एव जिज्ञासाधिकारो नाविशेषित इत्येतस्मिन्नुपरितनमपि सूत्रद्वयं दर्शयति – अध्ययनेति ।।**

**तथानेकशाखागतश्रुतिमप्यस्मिन्नर्थे दर्शयति – शान्त इत्यादिना ।। 'यमेवैष वृणुते' इत्यनेन व्रियमाणस्य भक्तत्वं सिद्ध्यति । न ह्यभक्तं कश्चित् स्वीकरोतीति । 'तेन लभ्यः' इत्यनेन स्वीकृतेन लभ्य इत्युच्यते । लब्धः परमात्मा किं करोति? इत्याकाङ्क्षायामुक्तम् – 'तस्यैष आत्मा विवृणुते तनूं स्वाम्' इति । तस्य स्वीकृतस्य एष परमात्मा स्वां तनूं वेदवाक्यैः विवृणुते प्रकाशयतीत्यर्थः । अनेन भक्त्या विष्णुं प्रसाद्य तस्मात् प्रसन्नात् तज्जिज्ञासा कर्तव्येत्युक्तं भवति । विष्ण्वादिकं नाम । इतिहासादितन्त्रम् ।**

ವಿಷ್ಣುಭಕ್ತಿ ಹಾಗೂ ಅಧ್ಯಯನಗಳು ಅಧಮಾಧಿಕಾರಿಯ ಲಕ್ಷಣ; ಇಂತಹವನಲ್ಲಿ ಶಮದಮಾದಿಗುಣಗಳೂ ಸಹ ಇರಬೇಕು. ಇಲ್ಲದಿದ್ದರೆ ಮುಂದಿನ ಎರಡು ಸೂತ್ರಗಳಿಂದ ವಿರೋಧ ಬರುತ್ತದೆಂದು ಅಧ್ಯಯನ ಎಂಬ ಭಾಷ್ಯವು ಹೊರಟಿದೆ. ಅನೇಕ ಶಾಖೆಗಳಲ್ಲಿರುವ ಶ್ರುತಿಯನ್ನೂ ಸಹ ಈ ಅರ್ಥದಲ್ಲಿ 'ಶಾಂತ' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. 'ಯಮೇವೈಷ ವೃಣುತೇ' ಎಂಬುದರಿಂದ ಸ್ವೀಕೃತನಾದವನಷ್ಟೇ ಭಕ್ತನೆಂದು ಸಿದ್ಧವಾಗುತ್ತದೆ. ಅಭಕ್ತನನ್ನು ಯಾರೂ ಸಹ ಸ್ವೀಕರಿಸುವುದಿಲ್ಲ. ಆದ್ದರಿಂದ ಲಭ್ಯಃ ಎಂಬುದಕ್ಕೆ ಸ್ವೀಕೃತನಿಂದ ಪರಮಾತ್ಮನು ದೊರೆಯುತ್ತಾನೆಂದು ಅರ್ಥ. ಲಬ್ಧನಾದ ಪರಮಾತ್ಮನು ಏನು ಮಾಡುತ್ತಾನೆ? ಎಂಬ ಆಕಾಂಕ್ಷೆಗೆ ತನ್ನನ್ನು ತೋರಿಸಿಕೊಳ್ಳುತ್ತಾನೆ ಎಂಬುದನ್ನು 'ತಸ್ಯೈಷ ಆತ್ಮಾ' ಎಂಬುದರಿಂದ ಹೇಳಿದ್ದಾರೆ. ಇದರಿಂದ ಏನು ತಿಳಿಯುತ್ತದೆಂದರೆ 'ಭಕ್ತಿಯಿಂದ ವಿಷ್ಣುವನ್ನು ಸಂತೋಷಪಡಿಸಿ, ಅವನ ಅನುಗ್ರಹದಿಂದ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕು' ಎಂದು.

## ತತ್ವಪ್ರದೀಪ

### ಅಧಿಕಾರ ತಾರತಮ್ಯ ನಿರೂಪಣೆ

**तत्वप्रदीपः – 'अध्ययनमात्रवतः' 'नाविशेषात्' इति चोपरि सूत्रकारो भगवान् व्यास एवाधिकारं तारतम्येन वक्ष्यति ।**

ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಮೂರು ಬಗೆಯ ಅಧಿಕಾರಿಗಳು ಇದ್ದಾರೆಂದು ಭಾಗವತತಂತ್ರದ ಆಧಾರದಿಂದ ಭಾಷ್ಯಕಾರರು ಸಮರ್ಥನೆ ಮಾಡಿದರು. ಭಾಗವತತಂತ್ರದಲ್ಲಿ ಹೇಳಿದ ವಿಷಯವನ್ನೇ ಸೂತ್ರಕಾರರು 'ಅಧ್ಯಯನಮಾತ್ರವತಃ' 'ನಾವಿಶೇಷಾತ್' ಎಂಬೆರಡು ಸೂತ್ರಗಳಿಂದ ಮೂರನೆಯ ಅಧ್ಯಾಯದಲ್ಲಿ ಸಮರ್ಥಿಸುತ್ತಾರೆ. ಆದ್ದರಿಂದ ಷಡ್ಗುಣೈಶ್ವರ್ಯಸಂಪನ್ನರಾದ ಸೂತ್ರಕಾರರಾದ ವೇದವ್ಯಾಸದೇವರು ಸ್ವತಃ ಅಧಿಕಾರದ ತಾರತಮ್ಯವನ್ನು ಹೇಳಿರುತ್ತಾರೆ.

ವಿಶೇಷ ವಿಚಾರ - 'ಭಾಗವತತಂತ್ರ' ಎಂಬ ಗ್ರಂಥವನ್ನು ಭಾಗವತ ತಾತ್ಪರ್ಯದಲ್ಲಿಯೂ ಅನೇಕ ಬಾರಿ ಆಚಾರ್ಯರು ಉದಾಹರಿಸಿದ್ದಾರೆ - ಇದು ಭಾಗವತದ ವಿಶದಗ್ರಂಥವಿರಬಹುದು. ಅಥವಾ ಪಂಚರಾತ್ರದ ಒಂದು ಭಾಗವನ್ನೇ ಭಾಗವತ ತಂತ್ರವೆಂದು ಕರೆದಿರಬಹುದು.

ಮೂರು ಬಗೆಯ ಅಧಿಕಾರಿಗಳನ್ನು ಭಾಗವತತಂತ್ರವು ಹೇಳುತ್ತಿದೆ. ಇದು ಸೂತ್ರಕಾರರಿಗೆ ಸಮ್ಮತವೆಂದು ಹೇಗೆ ನಿರ್ಣಯಿಸುತ್ತೀರಿ ? ಎಂಬ ಪ್ರಶ್ನೆಗೆ ಭಾಷ್ಯಕಾರರು 'ಅಧ್ಯಯನಮಾತ್ರವತಃ' ಎಂಬುದರಿಂದ ಉತ್ತರಿಸಿದ್ದಾರೆ. ಸ್ವತಃ ಸೂತ್ರಕಾರರೇ 'ಅಧ್ಯಯನ ಮಾತ್ರವತಃ' ಎಂಬ ಸೂತ್ರದಲ್ಲಿ ಮತ್ತು 'ನಾವಿಶೇಷಾತ್' ಎಂಬ ಸೂತ್ರದಲ್ಲಿ ಅಧಿಕಾರದ ತಾರತಮ್ಯವನ್ನು ನಿರೂಪಣೆ ಮಾಡಿದ್ದಾರೆ. 'ಅಧ್ಯಯನಮಾತ್ರವತಃ' ಎಂಬ ಸೂತ್ರಕ್ಕೆ ಅಧ್ಯಯನ ಮಾತ್ರವಿರುವ ಅಧಮಾಧಿಕಾರಿಯು ಕೂಡ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಓದಲು ಅರ್ಹನಾಗುತ್ತಾನೆಂದು. ಅಥವಾ 'ಮಾತ್ರ' ಶಬ್ದಕ್ಕೆ 'ಸಂಪೂರ್ಣ' ಎಂಬರ್ಥವನ್ನು ವಿವಕ್ಷಿಸಿದಾಗ ಸಂಪೂರ್ಣವಾಗಿ ಅಧ್ಯಯನ ಮಾಡಿದವನು ಬ್ರಹ್ಮಮೀಮಾಂಸಾಶಾಸ್ತ್ರವನ್ನು ಓದಲು ಅರ್ಹನಾಗುತ್ತಾನೆಂದೂ ಸೂತ್ರಾರ್ಥವನ್ನು ತಿಳಿಯಬಹುದು. ಅಂದಮಾತ್ರಕ್ಕೆ ಎಲ್ಲರಿಗೂ ಒಂದೇ ರೀತಿಯಲ್ಲಿ ಅಧ್ಯಯನದ ಅಧಿಕಾರವಿಲ್ಲ, ಅದರಲ್ಲಿಯೂ ಪರಸ್ಪರ ತಾರತಮ್ಯವಿದೆ ಎಂಬ ವಿಷಯವನ್ನು 'ನಾವಿಶೇಷಾತ್' ಎಂಬ ಸೂತ್ರವು ನಿರೂಪಣೆ ಮಾಡುತ್ತದೆ. ಹೀಗೆ ಅಧಿಕಾರದ ತಾರತಮ್ಯವನ್ನು ಈ ಎರಡು ಸೂತ್ರಗಳು ಹೇಳುತ್ತಿವೆ.

ಶಮ ಎಂದರೇನು ?

**तत्वप्रदीपः – शान्तो दान्त उपरतस्तितिक्षुः समाहित इति । ''शमो मन्निष्ठता बुद्धेः'' इति भागवते । वैष्णवसिद्धान्तादचलनमित्यर्थः ।**

ಬೃಹದಾರಣ್ಯಕೋಪನಿಷತ್ತಿನಲ್ಲಿ 'ಶಾಂತೋ ದಾಂತಃ' ಎಂಬ ಶ್ರುತಿಯಿದೆ. 'ಶಾಂತಃ' ಎಂಬ ಪದಕ್ಕೆ 'ಶಮ' ಎಂಬ ಗುಣವನ್ನು ಹೊಂದಿದವನು ಎಂದರ್ಥ. 'ಶಮೋ ಮನ್ನಿಷ್ಠತಾ ಬುದ್ಧೇಃ' ಎಂಬ ಭಾಗವತ ಹೇಳುವಂತೆ ವಿಷ್ಣುನಿಷ್ಠವಾದ ಬುದ್ಧಿಯೇ 'ಶಮ' ಎಂದು ಕರೆಸಿಕೊಳ್ಳುತ್ತದೆ. ವೈಷ್ಣವ ಸಿದ್ಧಾಂತದಲ್ಲಿ ದೃಢವಾದ ನಂಬಿಕೆ ಇರಬೇಕೆಂದು ಇದರ ಅಭಿಪ್ರಾಯ.

'ದಮ' ಎಂದರೇನು ?

**तत्वप्रदीपः – ''दम इन्द्रयनिग्रहः'' । 'उपरतिः' विष्णावेव मनोरतिः। 'तितिक्षा' द्वन्द्वसहिष्णुता । 'समाधानं' सदा हरौ चित्तस्यावस्थितिः ।**

'ದಾಂತ' ಎಂಬ ಪದಕ್ಕೆ 'ದಮ' ಎಂಬ ಗುಣವುಳ್ಳವನು ಎಂದರ್ಥ. 'ದಮ ಇಂದ್ರಿಯನಿಗ್ರಹಃ' ಎಂಬ ಭಾಗವತದ ಮಾತಿನಂತೆ 'ದಮ' ಶಬ್ದಕ್ಕೆ 'ಇಂದ್ರಿಯನಿಗ್ರಹ' ಎಂದರ್ಥ. 'ಉಪರತಃ' ಎಂಬ ಪದಕ್ಕೆ 'ಉಪರತಿ' ಎಂಬ ಗುಣವುಳ್ಳವನು ಎಂದರ್ಥ. 'ಉಪರತ' ಎಂದರೆ ವಿಷ್ಣುವಿನಲ್ಲಿ ರತಿವುಳ್ಳವನು ಎಂದು ಅಭಿಪ್ರಾಯ. 'ತಿತಿಕ್ಷು' ಎಂಬ ಪದಕ್ಕೆ ದ್ವಂದ್ವವನ್ನು ಸಹಿಸಿಕೊಳ್ಳುವವನು ಎಂದರ್ಥ. 'ಸಮಾಹಿತಃ' ಎಂಬ ಪದಕ್ಕೆ 'ಸಮಾಧಾನವುಳ್ಳವನು' ಎಂದರ್ಥ. 'ಸಮಾಧಾನ' ಎಂದರೆ 'ನಿರಂತರವಾಗಿ ಶ್ರೀಹರಿಯಲ್ಲಿ ಚಿತ್ತದ ಏಕಾಗ್ರತೆ ಇರುವಿಕೆ' ಎಂದರ್ಥ.

'ಯಮೇವೈಷ ವೃಣುತೇ' ಎಂಬುದರ ವ್ಯಾಖ್ಯಾನ

**तत्वप्रदीपः – ''यमेवैष वृणुते तेन लभ्यस्तस्यैष आत्मा विवृणुते तनूं स्वाम्'' इति । यमेव परमात्मा भक्तिदानेन 'वृणुते' स्वीकरोति तेन प्राप्यः, यतस्तस्यैव स्वां तनुं प्रकाशयति ।**

'ಯಮೇವೈಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್' ಎಂಬ ಶ್ರುತಿಯು ಕಠೋಪನಿಷತ್ತಿನಲ್ಲಿದೆ. ಯಾವ ಭಕ್ತನನ್ನು ಪರಮಾತ್ಮನು ತನ್ನವನನ್ನಾಗಿ ಸ್ವೀಕರಿಸುತ್ತಾನೋ

ಅಂಥ ಭಕ್ತನು ಮಾತ್ರ ಆ ಪರಮಾತ್ಮನನ್ನು ಹೊಂದಲು ಅರ್ಹನಾಗುತ್ತಾನೆ. ಏಕೆಂದರೆ ತಾನು ಇಚ್ಛೆಪಟ್ಟರೆ ಮಾತ್ರ ತನ್ನ ಸಂಪೂರ್ಣಸ್ವರೂಪವನ್ನು ತೋರಿಸಿಕೊಳ್ಳುತ್ತಾನೆ.

ಭಕ್ತಿಯಿಂದಲೇ ವಿಷ್ಣುವಿನ ಪ್ರೀತಿ

**तत्वप्रदीपः –**

**''भक्त्यैव वृणुते विष्णुर्भक्त्या दद्यान्निजं पदम् ।**
**भक्त्यैव दृश्यते नित्यं भक्त्या भोगान् ददाति च ।।''**
**इति पाद्मे, जयोत्तरे च ।**

ಮಹಾವಿಷ್ಣುವು ಭಕ್ತಿಯಿಂದಲೇ ಭಕ್ತರನ್ನು ಸ್ವೀಕರಿಸುತ್ತಾನೆ. ಭಕ್ತಿಯಿಂದಲೇ ತನ್ನ ನಿಜವಾದ ಸ್ಥಾನವನ್ನು ನೀಡುತ್ತಾನೆ. ಭಕ್ತಿಯಿಂದಲೇ ತನ್ನನ್ನು ನಿತ್ಯವಾಗಿ ತೋರಿಸಿಕೊಳ್ಳುತ್ತಾನೆ. ಭಕ್ತಿಗೆ ಮೆಚ್ಚಿ ಸಕಲವಿಧವಾದ ಭೋಗಗಳನ್ನು ನೀಡುತ್ತಾನೆ. ಹೀಗೆ ಪಾದ್ಮಪುರಾಣ ಹಾಗೂ ಜಯೋತ್ತರವು ಹೇಳುತ್ತದೆ.

ಗೀತೆಯ ಆಧಾರ

**तत्वप्रदीपः –**

**''भक्त्या त्वनन्यया शक्य अहमेवं विधोऽर्जुन ।**
**ज्ञातुं द्रष्टुं च तत्वेन प्रवेष्टुं च परन्तप'' इत्यादिस्मृतिश्चशब्दात् गृह्यते ।।**

ಎಲೈ ಅರ್ಜುನನೇ ! ಅನನ್ಯವಾದ ಭಕ್ತಿಯಿಂದ ಮಾತ್ರ ನನ್ನನ್ನು ಕಾಣಲು ತಿಳಿಯಲು ಸಮರ್ಥನಾಗುತ್ತಾನೆ.

'ಇತ್ಯಾದಿ ಶ್ರುತಿಶ್ಚ' ಎಂಬಲ್ಲಿರುವ 'ಚ' ಶಬ್ದದಿಂದ ಪಾದ್ಮ, ಜಯೋತ್ತರ, ಗೀತೆ ಮೊದಲಾದ ಸ್ಮೃತಿಗಳನ್ನು ವಿವಕ್ಷಿಸಬೇಕು.

## ಬ್ರಹ್ಮಸೂತ್ರಭಾಷ್ಯ

### ಸ್ತ್ರೀಶೂದ್ರಾದಿಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ

**ब्रह्मसूत्रभाष्यम् –**

**व्योमसंहितायां च—**

**अन्त्यजा अपि ये भक्ता नामज्ञानाधिकारिणः ।**
**स्त्रीशूद्रब्रह्मबन्धूनां (तत्र) तन्त्रज्ञानेऽधिकारिता ।।**
**एकदेशे परोक्ते तु नच ग्रन्थपुरःसरे ।**
**त्रैवर्णिकानां वेदोक्ते सम्यग् भक्तिमतां हरौ ।।**
**आहुरप्युत्तमस्त्रीणामधिकारं तु वैदिके ।**
**यथोर्वशी यमी चैव शच्याद्याश्च तथाऽपराः ।। इति ।**

ಅನುವಾದ - ವ್ಯೋಮಸಂಹಿತಾಯಾಂ ಚ = ಶಾಸ್ತ್ರಾಧ್ಯಯನವಿಲ್ಲದವರಿಗೂ ಮೋಕ್ಷದಲ್ಲಿ ಅಂಗಿಕಾರವಿದೆಯೆಂದು ವ್ಯೋಮಸಂಹಿತೆ ಹೇಳುತ್ತಿದೆ.

ಕೊನೆಯ ವರ್ಣದವರಾದ ಶೂದ್ರರು ಭಕ್ತರಾಗಿದ್ದರೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲದಿದ್ದರೂ ಹರಿನಾಮಸ್ಮರಣೆಯಲ್ಲಿ ಅಧಿಕಾರಿಗಳಾಗಿರುತ್ತಾರೆ. ಆದರಿಂದಲೇ ಅವರಿಗೆ ಮೋಕ್ಷವು ದೊರೆಯುತ್ತದೆ. ಆದರಿಂದಲೇ ಅವರಿಗೆ ಮೋಕ್ಷವಾಗುತ್ತದೆ. ಸ್ತ್ರೀಯರಿಗೆ ಶೂದ್ರರಿಗೆ ಭ್ರಷ್ಟಬ್ರಾಹ್ಮಣರಿಗೆ ಮಹಾಭಾರತಾದಿ ಪೌರುಷೇಯಗ್ರಂಥಗಳಲ್ಲಿ, ಅಧಿಕಾರವಿದೆ. ವೇದದಲ್ಲಿ ಅಧಿಕಾರವಿಲ್ಲ. ಮಹಾಭಾರತಾದಿ-ಗ್ರಂಥಗಳಲ್ಲಿಯೂ ಸಂಪೂರ್ಣ ಅಧಿಕಾರವಿಲ್ಲ. ಗುರುಮುಖೇನ ಗ್ರಂಥಪುರಸ್ಸರವಾಗಿ ಸಂಪೂರ್ಣವಾಗಿ ಪಾಠಕೇಳುವ ಅಧಿಕಾರವೂ ಇಲ್ಲ. (ಉತ್ತಮರಿಗೆ ಹೇಳುವಾಗ ಹೇಳಿದ್ದನ್ನು ಕೇಳಿಸಿಕೊಳ್ಳಬೇಕು).

ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಇವರಿಗೆ ವೇದಾಧ್ಯಯನದಿಂದ ಬರುವ ಬ್ರಹ್ಮಜ್ಞಾನದಲ್ಲಿ ಅಧಿಕಾರವಿದೆ. ಆದರೆ ನಿಶ್ಚಲವಾದ ಅತ್ಯುತ್ತಮಭಕ್ತಿ ವಿಷ್ಣುವಿನಲ್ಲಿರಬೇಕು. ಮತ್ತು ಶಚೀದೇವಿ, ಊರ್ವಶೀ, ಶ್ಯಾಮಲಾ ಮೊದಲಾದ ದೇವತಾಸ್ತ್ರೀಯರು ಮನುಷ್ಯರಾಗಿ ಹುಟ್ಟಿದರೂ ವೇದವಿದ್ಯೆಯಲ್ಲಿ ಅಧಿಕಾರವಿದೆ.

ಅಂಥ ಭಕ್ತನು ಮಾತ್ರ ಆ ಪರಮಾತ್ಮನನ್ನು ಹೊಂದಲು ಅರ್ಹನಾಗುತ್ತಾನೆ. ಏಕೆಂದರೆ ತಾನು ಇಚ್ಛೆಪಟ್ಟರೆ ಮಾತ್ರ ತನ್ನ ಸಂಪೂರ್ಣಸ್ವರೂಪವನ್ನು ತೋರಿಸಿಕೊಳ್ಳುತ್ತಾನೆ.

ಭಕ್ತಿಯಿಂದಲೇ ವಿಷ್ಣುವಿನ ಪ್ರೀತಿ

**तत्वप्रदीपः –**

**''भक्त्यैव वृणुते विष्णुर्भक्त्या दद्यान्निजं पदम् ।**
**भक्त्यैव दृश्यते नित्यं भक्त्या भोगान् ददाति च ।।''**
**इति पाद्मे, जयोत्तरे च ।**

ಮಹಾವಿಷ್ಣುವು ಭಕ್ತಿಯಿಂದಲೇ ಭಕ್ತರನ್ನು ಸ್ವೀಕರಿಸುತ್ತಾನೆ. ಭಕ್ತಿಯಿಂದಲೇ ತನ್ನ ನಿಜವಾದ ಸ್ಥಾನವನ್ನು ನೀಡುತ್ತಾನೆ. ಭಕ್ತಿಯಿಂದಲೇ ತನ್ನನ್ನು ನಿತ್ಯವಾಗಿ ತೋರಿಸಿಕೊಳ್ಳುತ್ತಾನೆ. ಭಕ್ತಿಗೆ ಮೆಚ್ಚಿ ಸಕಲವಿಧವಾದ ಭೋಗಗಳನ್ನು ನೀಡುತ್ತಾನೆ. ಹೀಗೆ ಪಾದ್ಮಪುರಾಣ ಹಾಗೂ ಜಯೋತ್ತರವು ಹೇಳುತ್ತದೆ.

ಗೀತೆಯ ಆಧಾರ

**तत्वप्रदीपः –**

**''भक्त्या त्वनन्यया शक्य अहमेवं विधोऽर्जुन ।**
**ज्ञातुं द्रष्टुं च तत्वेन प्रवेष्टुं च परन्तप'' इत्यादिस्मृतिश्चशब्दात् गृह्यते ।।**

ಎಲೈ ಅರ್ಜುನನೇ ! ಅನನ್ಯವಾದ ಭಕ್ತಿಯಿಂದ ಮಾತ್ರ ನನ್ನನ್ನು ಕಾಣಲು ತಿಳಿಯಲು ಸಮರ್ಥನಾಗುತ್ತಾನೆ.

'ಇತ್ಯಾದಿ ಶ್ರುತಿಶ್ಚ' ಎಂಬಲ್ಲಿರುವ 'ಚ' ಶಬ್ದದಿಂದ ಪಾದ್ಮ, ಜಯೋತ್ತರ, ಗೀತೆ ಮೊದಲಾದ ಸ್ಮೃತಿಗಳನ್ನು ವಿವಕ್ಷಿಸಬೇಕು.

## ಬ್ರಹ್ಮಸೂತ್ರಭಾಷ್ಯ

### ಸ್ತ್ರೀಶೂದ್ರಾದಿಗಳಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ

**ब्रह्मसूत्रभाष्यम् –**

**व्योमसंहितायां च—**

**अन्त्यजा अपि ये भक्ता नामज्ञानाधिकारिणः ।**
**स्त्रीशूद्रब्रह्मबन्धूनां (तत्र) तन्त्रज्ञानेऽधिकारिता ।।**
**एकदेशे परोक्ते तु नच ग्रन्थपुरःसरे ।**
**त्रैवर्णिकानां वेदोक्ते सम्यग् भक्तिमतां हरौ ।।**
**आहुरप्युत्तमस्त्रीणामधिकारं तु वैदिके ।**
**यथोर्वशी यमी चैव शच्याद्याश्च तथाऽपराः ।। इति ।**

ಅನುವಾದ - ವ್ಯೋಮಸಂಹಿತಾಯಾಂ ಚ = ಶಾಸ್ತ್ರಾಧ್ಯಯನವಿಲ್ಲದವರಿಗೂ ಮೋಕ್ಷದಲ್ಲಿ ಅಧಿಕಾರವಿದೆಯೆಂದು ವ್ಯೋಮಸಂಹಿತೆ ಹೇಳುತ್ತಿದೆ.

ಕೊನೆಯ ವರ್ಣದವರಾದ ಶೂದ್ರರು ಭಕ್ತರಾಗಿದ್ದರೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲದಿದ್ದರೂ ಹರಿನಾಮಸ್ಮರಣೆಯಲ್ಲಿ ಅಧಿಕಾರಿಗಳಾಗಿರುತ್ತಾರೆ. ಅದರಿಂದಲೇ ಅವರಿಗೆ ಮೋಕ್ಷವು ದೊರೆಯುತ್ತದೆ. ಅದರಿಂದಲೇ ಅವರಿಗೆ ಮೋಕ್ಷವಾಗುತ್ತದೆ. ಸ್ತ್ರೀಯರಿಗೆ ಶೂದ್ರರಿಗೆ ಭ್ರಷ್ಟಬ್ರಾಹ್ಮಣರಿಗೆ ಮಹಾಭಾರತಾದಿ ಪೌರುಷೇಯಗ್ರಂಥಗಳಲ್ಲಿ, ಅಧಿಕಾರವಿದೆ. ವೇದದಲ್ಲಿ ಅಧಿಕಾರವಿಲ್ಲ. ಮಹಾಭಾರತಾದಿ-ಗ್ರಂಥಗಳಲ್ಲಿಯೂ ಸಂಪೂರ್ಣ ಅಧಿಕಾರವಿಲ್ಲ. ಗುರುಮುಖೇನ ಗ್ರಂಥಪುರಸ್ಸರವಾಗಿ ಸಂಪೂರ್ಣವಾಗಿ ಪಾಠಕೇಳುವ ಅಧಿಕಾರವೂ ಇಲ್ಲ. (ಉತ್ತಮರಿಗೆ ಹೇಳುವಾಗ ಹೇಳಿದ್ದನ್ನು ಕೇಳಿಸಿಕೊಳ್ಳಬೇಕು).

ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು ಇವರಿಗೆ ವೇದಾಧ್ಯಯನದಿಂದ ಬರುವ ಬ್ರಹ್ಮಜ್ಞಾನದಲ್ಲಿ ಅಧಿಕಾರವಿದೆ. ಆದರೆ ನಿಶ್ಚಲವಾದ ಅತ್ಯುತ್ತಮಭಕ್ತಿ ವಿಷ್ಣುವಿನಲ್ಲಿರಬೇಕು. ಮತ್ತು ಶಚೀದೇವಿ, ಊರ್ವಶೀ, ಶ್ಯಾಮಲಾ ಮೊದಲಾದ ದೇವತಾಸ್ತ್ರೀಯರು ಮನುಷ್ಯರಾಗಿ ಹುಟ್ಟಿದರೂ ವೇದವಿದ್ಯೆಯಲ್ಲಿ ಅಧಿಕಾರವಿದೆ.

## ಅಪರೋಕ್ಷಜ್ಞಾನಕ್ಕಾಗಿ ಬ್ರಹ್ಮಜಿಜ್ಞಾಸೆಯು ಆವಶ್ಯಕ

**ब्रह्मसूत्रभाष्यम् –**

**यतो नारायणप्रसादमृते न मोक्षः, न च ज्ञानं विनाऽत्यर्थप्रसादः, अतो ब्रह्मजिज्ञासा कर्तव्या ।**

ಅನುವಾದ - ನಾರಾಯಣನ ಪ್ರಸಾದವಿಲ್ಲದೇ ಮೋಕ್ಷವಾಗುವುದಿಲ್ಲ. ಅಪರೋಕ್ಷಜ್ಞಾನವಿಲ್ಲದೆ ಪ್ರಸಾದವಾಗುವುದಿಲ್ಲ. ಅಪರೋಕ್ಷಜ್ಞಾನಕ್ಕೋಸ್ಕರ ಬ್ರಹ್ಮವಿಚಾರವನ್ನು ಮಾಡಬೇಕು.

**ब्रह्मसूत्रभाष्यम् –**

**यत्रानवसरोऽन्यत्र पदं तत्र प्रतिष्ठितम् ।**
**वाक्यं वेति सतां नीतिः सावकाशे न तद् भवेत् ।। इति ब्रह्मसंहितायाम् ।**

''ಯಾವ ಪದವಿಲ್ಲದೆ ವಾಕ್ಯದ ಅರ್ಥವು ಪೂರ್ಣವಾಗುವುದಿಲ್ಲವೋ; ಅಂತಹ ಪದವನ್ನು ವಾಕ್ಯದಲ್ಲಿ ಅಧ್ಯಾಹಾರ ಮಾಡಬೇಕು. ಅದರಂತೆ ಎಲ್ಲಿ ಅವಾಂತರವಾಕ್ಯವನ್ನು ಅಧ್ಯಾಹಾರ ಮಾಡಿಕೊಳ್ಳದೇ ಮಹಾವಾಕ್ಯದ ಅರ್ಥವು ಪೂರ್ಣವಾಗುವುದಿಲ್ಲವೋ ಅಂತಹ ಅವಾಂತರವಾಕ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಆದರೆ ಪದ ಅಥವಾ ಅವಾಂತರವಾಕ್ಯಗಳು ಇಲ್ಲದಿದ್ದರೂ ವಾಕ್ಯವಾಗಲೀ ಮಹಾವಾಕ್ಯವಾಗಲೀ ಪರಿಪೂರ್ಣ ಅರ್ಥವುಳ್ಳದ್ದಾಗುವುದಾದರೆ ಆವಾಗ ಪದವನ್ನು ಅಥವಾ ವಾಕ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬಾರದು. ಹೀಗೆ ಜ್ಞಾನಿಗಳು ಹೇಳುತ್ತಾರೆ''. ಬೃಹತ್ಸಂಹಿತೆಯಲ್ಲಿ ಈ ನಿಯಮವು ಹೇಳಲ್ಪಟ್ಟಿರುವುದರಿಂದ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಥಮಸೂತ್ರದಲ್ಲಿ 'ಕರ್ತವ್ಯಾ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

## ಸತ್ತರ್ಕದೀಪಾವಳಿ

### ಪ್ರಥಮಸೂತ್ರ ವ್ಯಾಖ್ಯಾನ

**सत्तर्कदीपावळिः –**

**अतश्शब्दस्य हेत्वर्थं विवृणोति – यत इति ।। जिज्ञासाऽऽसादितब्रह्मज्ञानं विना विष्णुप्रसादद्वारकमोक्षासिद्धेः, ब्रह्मजिज्ञासा कर्तव्या' इत्यर्थः । नच**

'साङ्गादध्ययनादेव ब्रह्मज्ञानसिद्धेर्व्यर्था ब्रह्मजिज्ञासा' इति वाच्यम् । जिज्ञासामन्तरेण संशयविपर्ययरहितज्ञानासम्भवात् । न हि परस्परं विरुध्यमानवाक्यैर्निर्णायकन्यायव्युत्पादनमन्तरेण राम्यग्ज्ञानं ब्रह्मविषयकमुत्पद्यते । अत्र 'ब्रह्मजिज्ञासापदं स्वाकाङ्क्षितेन न्यायप्राप्तेन कर्तव्यमितिपदेन योजयितव्यम्' इत्येतद्धृदि निधाय, 'पदसापेक्षं वाक्यसापेक्षं वा यत्सूत्रं तत्र न्यायप्राप्तं पदादिकमश्रुतमप्यध्याहर्तव्यम्' इत्येतद् बृहत्संहितावचनेन दर्शयति – तत्रेति ।। न चाध्याहारस्य निरङ्कुशत्वादिदं पदमध्याहर्तव्यमिदं तु नेति नियमहेतुर्नास्तीति वाच्यम् । यत्र साकाङ्क्षवाक्ये यत्पदं विनान्यस्य पदस्यावकाशो न्यायबाधितः तत्र तदेव पदमध्याहार्यतया प्रतिष्ठितं न्यायवशादिति नियामकस्य वक्तुं शक्यत्वात् । अनेकपदानामविशेषेण अवकाशवति हि साकाङ्क्षावाक्ये इदमेव पदमध्याहार्यमिति नियमो न युज्यत इत्यर्थः ।

ಹೇತ್ವರ್ಥವುಳ್ಳ ಅತಃಶಬ್ದವನ್ನು 'ಯತಃ' ಎಂಬುದಾಗಿ ವಿವರಿಸುತ್ತಿದ್ದಾರೆ. ಬ್ರಹ್ಮಜಿಜ್ಞಾಸೆಯಿಂದ ದೊರೆಯುವ ಬ್ರಹ್ಮಜ್ಞಾನವಿಲ್ಲದೆ ವಿಷ್ಣುಪ್ರಸಾದವಾಗುವುದಿಲ್ಲ. ವಿಷ್ಣುಪ್ರಸಾದವಾಗದೆ ಮೋಕ್ಷವು ಸಿದ್ಧಿಸುವುದಿಲ್ಲ. ಅದಕ್ಕೋಸ್ಕರ ಬ್ರಹ್ಮಜಿಜ್ಞಾಸೆಯು ಕರ್ತವ್ಯವಾಗಿದೆಯೆಂದು ಇದರ ಅರ್ಥ. ಸಾಂಗವಾದ ವೇದಾಧ್ಯಯನದಿಂದಲೇ ಬ್ರಹ್ಮಜ್ಞಾನವು ದೊರೆಯುವಾಗ ಬ್ರಹ್ಮಜಿಜ್ಞಾಸೆಯ ಅನಿವಾರ್ಯತೆ ಏನು? ಎಂದು ಪ್ರಶ್ನಿಸಬಾರದು. ಬ್ರಹ್ಮಜಿಜ್ಞಾಸೆ ಮಾಡದೆ ಸಂಶಯ ಹಾಗೂ ವಿಪರೀತಜ್ಞಾನರಹಿತವಾದ ತತ್ವಜ್ಞಾನವು ಪ್ರಾಪ್ತವಾಗುವುದಿಲ್ಲ. ಪರಸ್ಪರವಿರುದ್ಧವಾದ ಎರಡು ವಾಕ್ಯಗಳಿಂದ ನಿರ್ಣಾಯಕ ನ್ಯಾಯಗಳ ವ್ಯುತ್ಪತ್ತಿಯಿಲ್ಲದೆ ಯಥಾರ್ಥಜ್ಞಾನವು ಬ್ರಹ್ಮವಿಷಯಕವಾಗುವುದಿಲ್ಲ. ಪ್ರಕೃತ ಬ್ರಹ್ಮಜಿಜ್ಞಾಸಾಪದಕ್ಕೆ 'ಕರ್ತವ್ಯಾ' ಪದದ ಆಕಾಂಕ್ಷೆಯು ಇರುತ್ತದೆ. ಆದ್ದರಿಂದ ಪ್ರಥಮಸೂತ್ರದಲ್ಲಿ 'ಕರ್ತವ್ಯಾ' ಎಂಬ ಪದವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು 'ತತ್ರ' ಎಂಬ ಭಾಷ್ಯದಿಂದ ಹೇಳುತ್ತಿದ್ದಾರೆ. ಪದ ಹಾಗೂ ವಾಕ್ಯವನ್ನು ಅಪೇಕ್ಷಿಸುವ ಸೂತ್ರದಲ್ಲಿ ನ್ಯಾಯಪ್ರಾಪ್ತವಾದ ಪದ ಹಾಗೂ ವಾಕ್ಯಗಳನ್ನು ಅಶ್ರುತವಾದರೂ ಅಧ್ಯಾಹಾರ

ಮಾಡಿಕೊಳ್ಳಬೇಕೆಂದು ಬೃಹತ್ಸಂಹಿತಾಪ್ರಮಾಣದಿಂದ ತೋರಿಸಿದ್ದಾರೆ. ಇಂತಹ ಪದವನ್ನೇ ಅಧ್ಯಾಹಾರ ಮಾಡಿಕೊಳ್ಳಬೇಕೆನ್ನಲು ಏನು ಗಮಕ? ಎಂದು ಪ್ರಶ್ನಿಸಬಹುದು. ಆದರೆ, ಯಾವ ಪದವಿಲ್ಲದೆ ಸಾಕಾಂಕ್ಷತವಾದ ವಾಕ್ಯವು ಪೂರ್ಣವಾಗುವುದಿಲ್ಲವೋ ಮತ್ತು ಬೇರೆ ಪದಗಳ ಅಧ್ಯಾಹಾರಕ್ಕೂ ಅವಕಾಶವಿಲ್ಲವೋ ಅಲ್ಲಿ ಅದೇ ಪದವನ್ನೇ ಅಧ್ಯಾಹಾರಮಾಡಿಕೊಳ್ಳಬೇಕೆಂಬ ನಿಯಮವೇ ಇಲ್ಲಿ ಪ್ರಮಾಣವಾಗಿದೆ. ಯಾವ ವಾಕ್ಯದಲ್ಲಿ ಇಂತಹ ಪದವನ್ನೇ ಅಧ್ಯಾಹಾರ ಮಾಡಿಕೊಳ್ಳಬೇಕೆಂಬ ಗಮಕವಿರುವುದಿಲ್ಲವೋ ಅಲ್ಲಿ ಮಾತ್ರ ಬೇರೆ ಪದಗಳನ್ನು ಅಧ್ಯಾಹಾರ ಮಾಡಿಕೊಳ್ಳಬಹುದು. ಇಂತಹ ಪದವನ್ನೇ ಅಧ್ಯಾಹಾರ ಮಾಡಿಕೊಳ್ಳಬೇಕೆಂಬ ನಿಯಮ-ವಿರುವುದಿಲ್ಲ.

## ತತ್ವಪ್ರದೀಪ

### ನಾರಾಯಣ-ಪ್ರಸಾದವಿಲ್ಲದೆ ಮೋಕ್ಷವಿಲ್ಲ

**तत्वप्रदीपः – ब्रह्मजिज्ञासाया मोक्षहेतुत्वं सूचितं, तत्कथमित्यत आह 'यतो नारायणप्रसादमृते न मोक्षः' इत्यादि ।**

ಬ್ರಹ್ಮಜಿಜ್ಞಾಸೆಯು ಮೋಕ್ಷಕ್ಕೆ ಹೇತುವಾಗಿದೆ ಎಂದು ಮೇಲಿನ ಪ್ರಮಾಣ ಶ್ಲೋಕಗಳಿಂದ ಸೂಚಿಸಿದ್ದಾರೆ. ಹೇಗೆ ಮೋಕ್ಷಹೇತುವಾಗುತ್ತದೆ ? ಎಂಬ ಪ್ರಶ್ನೆಗೆ ಶ್ರೀಮನ್ನಾರಾಯಣನ ಪ್ರಸಾದವಿಲ್ಲದೆ ಮೋಕ್ಷವಾಗುವುದಿಲ್ಲ ಇತ್ಯಾದಿಯಾಗಿ 'ನಾರಾಯಣಪ್ರಸಾದಮೃತೇ ನ ಮೋಕ್ಷಃ' ಎಂಬ ಮಾತಿನಿಂದ ಭಾಷ್ಯಕಾರರು ತಿಳಿಸಿದ್ದಾರೆ.

### ಬಂಧಮಿಥ್ಯಾತ್ವ ನಿರಾಕರಣೆ

**तत्वप्रदीपः – अत्राऽह, बन्धस्याज्ञानकार्यत्वेन मिथ्यात्वाज्ज्ञानादेव निवृत्तेर्न प्रसादान्मोक्ष इति । तदयुक्तम् । अज्ञानासम्भवात् । नहि परमात्मनः सर्वज्ञस्याज्ञानं सम्भवति । आश्रयविषयाभावात् ।**

ಈ ಸಂದರ್ಭದಲ್ಲಿ ಮಾಯಾವಾದಿಗಳ ಆಕ್ಷೇಪ ಹೀಗಿದೆ - ಸಂಸಾರಬಂಧನವು ಅಜ್ಞಾನಕಾರ್ಯ ಆಗಿರುವುದರಿಂದ ಮಿಥ್ಯಾಭೂತವಾಗಿದೆ ಜ್ಞಾನದಿಂದಷ್ಟೇ ಈ ಅಜ್ಞಾನ ಕಾರ್ಯವಾದ ಬಂಧನವು

ನಿವೃತ್ತವಾಗುತ್ತದೆ. ಹೀಗಿರುವಾಗ ನಾರಾಯಣನ ಪ್ರಸಾದದಿಂದ ನಿವೃತ್ತವಾಗುತ್ತದೆಂದು ಹೇಳುವುದು ಹೇಗೆ ಸರಿ? ಆದ್ದರಿಂದ ಪ್ರಸಾದದಿಂದ ಮೋಕ್ಷವೆಂಬ ಮಾತು ತಪ್ಪು.

ಪರಿಹಾರ - ಈ ವಿಚಾರ ಅಯುಕ್ತವಾಗಿದೆ. ಏಕೆಂದರೆ ಮಾಯಾವಾದಿಗಳ ಮತದಲ್ಲಿ ಅಜ್ಞಾನವೇ ಯುಕ್ತವಾಗುವುದಿಲ್ಲ. ಏಕೆಂದರೆ ಅಜ್ಞಾನಕ್ಕೆ ಆಶ್ರಯವೇ ಇಲ್ಲ. ಸರ್ವಜ್ಞನಾದ ಪರಮಾತ್ಮನಲ್ಲಿ ಅಜ್ಞಾನವನ್ನು ಒಪ್ಪಲಾಗದು. ಅಜ್ಞಾನಕ್ಕೆ ಆಶ್ರಯವಿಲ್ಲ ಎಂದಷ್ಟೇ ಅಲ್ಲ ವಿಷಯವೂ ಕೂಡ ಇರುವುದಿಲ್ಲ.

ಮಾಯಾವಾದಿಗಳ ಮತದಲ್ಲಿ ವಿಷಯಾದಿಗಳೇ ಕೂಡುವುದಿಲ್ಲ

**तत्वप्रदीपः – न च स्वयं प्रकाशमानस्याज्ञातत्वं, स्वज्ञातत्वात् ।**

ಅಜ್ಞಾನಕ್ಕೆ ವಿಷಯವಾದದ್ದು ಅಜ್ಞಾತ ಎನಿಸಿಕೊಳ್ಳುತ್ತದೆ, ಬ್ರಹ್ಮನು ಅಜ್ಞಾನಕ್ಕೆ ವಿಷಯ-ನಾಗುವುದಿಲ್ಲ. ಏಕೆಂದರೆ ಸ್ವಜ್ಞಾತನಾದ್ದರಿಂದ ಸ್ವಯಂಪ್ರಕಾಶನಾಗಿದ್ದಾನೆ.

ಕರ್ತೃಕರ್ಮಭಾವಕ್ಕೆ ವಿರೋಧವಿಲ್ಲ

**तत्वप्रदीपः – नन्वपराधीनप्रकाशत्वं ब्रूमो न स्वदृश्यत्वं, कर्तृकर्मत्वविरोधात् । तन्न । शृङ्गवत्त्वपुच्छवत्त्ववदविरोधात् ।**

ಆಕ್ಷೇಪ - ಆತ್ಮನು ಸ್ವಜ್ಞಾತನಲ್ಲ. ಆದರೆ ಅಪರಾಧೀನಪ್ರಕಾಶನಾಗಿದ್ದಾನೆ. ಸ್ವಜ್ಞಾತನೆಂದು ಹೇಳಿದರೆ ಕರ್ತೃಕರ್ಮಕ್ಕೆ ವಿರೋಧ ಬರುತ್ತದೆ. 'ಸ್ವಪ್ರಕಾಶ' ಎಂಬುದಕ್ಕೆ ತನ್ನನ್ನು ತಾನು ತಿಳಿಯುತ್ತಾನೆಂದು ಹೇಳಿದರೆ ತಾನೇ ಕರ್ತೃ ತಾನೇ ಕರ್ಮ ಆಗುತ್ತಾನೆ. ಒಂದೇ ವ್ಯಕ್ತಿಯಲ್ಲಿ ಕರ್ತೃಕರ್ಮಭಾವವು ಬರಲು ಸಾಧ್ಯವಿಲ್ಲ.

ಪರಿಹಾರ - ಇದು ತಪ್ಪು. ಒಂದು ಹಸುವಿನಲ್ಲಿ ಕೊಂಬು ಹಾಗೂ ಬಾಲ ಎರಡೂ ಇದೆ ಎಂದು ಹೇಳಿದರೆ ಹೇಗೆ ವಿರೋಧವಿಲ್ಲವೋ ಅದರಂತೆ ಒಬ್ಬನೇ ಆತ್ಮನಲ್ಲಿ ಕರ್ತೃ ಹಾಗೂ ಕರ್ಮಗಳು ಇವೆ ಎಂದು ಹೇಳಿದರೆ ವಿರೋಧ ಬರುವುದಿಲ್ಲ.

'ಸ್ವಪ್ರಕಾಶತ್ವ' ಎಂದರೇನು ?

**तत्वप्रदीपः – नच द्रष्टृदृश्यनिरपेक्षं दृग्रूपत्वं निरूपणीयम् । अतोऽपराधीनप्रकाशत्वं स्वाधीनप्रकाशत्वमेव ।**

ದ್ರಷ್ಟೃ ಹಾಗೂ ದೃಶ್ಯ ಈ ಎರಡರ ಅಪೇಕ್ಷೆಯಿಲ್ಲದೆ ದೃಗ್‌ರೂಪತ್ವವನ್ನು ನಿರೂಪಣೆ ಮಾಡಲು ಮಾಯಾವಾದಿಗಳಿಂದ ಸಾಧ್ಯವಿಲ್ಲ. ಆದ್ದರಿಂದ ಅಪರಾಧೀನಪ್ರಕಾಶತ್ವ ಎಂಬ ಪದಕ್ಕೆ ಸ್ವಾಧೀನಪ್ರಕಾಶತ್ವ ಎಂಬ ಅರ್ಥವನ್ನೇ ಹೇಳಬೇಕು. ಆವಾಗ ಕರ್ತೃಕರ್ಮಭಾವವನ್ನು ಒಬ್ಬನಲ್ಲೇ ಹೇಳುವುದು ಅನಿವಾರ್ಯ.

ಮಾಯಾವಾದಿಗಳು ಅಭಿನಿವೇಶ ಬಿಡಬೇಕು

**तत्वप्रदीपः – तस्मादेतदपि निर्विशेषत्वाभिनिवेशदोषदूषितशेमुषीणां दुष्प्रतिपादम् ।**

ಆದ್ದರಿಂದ ಮಾಯಾವಾದಿಗಳ ಈ ಕಲ್ಪನೆಯೂ ಕೂಡ ನಿರ್ವಿಶೇಷತ್ವದ ಅಭಿನಿವೇಶವೆಂಬ (ದುರಾಗ್ರಹವೆಂಬ) ದೋಷದಿಂದ ದೂಷಿತವಾದ್ದರಿಂದ ಪ್ರತಿಪಾದನೆ ಮಾಡಲು ಅಶಕ್ಯವಾಗಿದೆ.

ಆತ್ಮನು ನಿರ್ವಿಶೇಷನಲ್ಲ

**तत्वप्रदीपः – नचैकस्यैवाज्ञानाश्रयविषयत्वम् । निर्विशेषत्वादेव । सविशेषत्वेतु ''अहं मां न जानामि'' इत्युभयविधा प्रतीतिः सम्भवति ।**

ಒಬ್ಬನೇ ಆತ್ಮನು ಅಜ್ಞಾನಕ್ಕೆ ಆಶ್ರಯ ಮತ್ತು ವಿಷಯ ಎರಡೂ ಆಗಲು ಹೇಗೆ ಸಾಧ್ಯ ? ಏಕೆಂದರೆ ಆತ್ಮನು ನಿರ್ವಿಶೇಷಿತನಾಗಿದ್ದಾನೆ. ಒಂದು ವೇಳೆ ಸವಿಶೇಷಿತನಾಗಿದ್ದಾನೆಂದು ಹೇಳಿದರೆ 'ಅಹಂ ಮಾಂ ನ ಜಾನಾಮಿ' 'ನಾನು ನನ್ನನ್ನು ತಿಳಿದಿರುವುದಿಲ್ಲ' ಎಂಬುದಾಗಿ ಉಭಯವಿಧವಾದ ಪ್ರತೀತಿಯು ಬರಬೇಕಾದೀತು.

ವಿಶೇಷವನ್ನು ಒಪ್ಪುವುದರಿಂದ ದೊರೆಯುವ ಲಾಭ

**तत्वप्रदीपः – अतो यद्यपि स्वयम्प्रकाशत्वं नः, तथाऽपि सविशेषत्वादज्ञातत्वं, तथा ज्ञातज्ञातत्वे चेति नास्मत्पक्षे विरोधः ।**

ವಾಸ್ತವಿಕವಾಗಿ ನಮ್ಮ ಸಿದ್ಧಾಂತದಲ್ಲಿ ಆತ್ಮನನ್ನೂ ಸ್ವಯಂಪ್ರಕಾಶನೆಂದು ಒಪ್ಪಲಾಗಿದೆ. ಆದರೂ ಸಹ ವಿಶೇಷವನ್ನು ಒಪ್ಪಿರುವುದರಿಂದ ಅದೇ ಆತ್ಮನು ಅಜ್ಞಾತನೂ ಆಗುತ್ತಾನೆ. ಅದೇ ರೀತಿಯಾಗಿ ವಿಶೇಷದ ಬಲದಿಂದ ಒಬ್ಬನೇ ಆತ್ಮನು ಜ್ಞಾತನೂ ಆಗುತ್ತಾನೆ. ಅಜ್ಞಾತನೂ ಆಗುತ್ತಾನಾದ್ದರಿಂದ ವಿರೋಧಕ್ಕೆ ನಮ್ಮಲ್ಲಿ ಅವಕಾಶವಿಲ್ಲ.

ವಿಶೇಷಬಲದಿಂದ ದ್ವಿತ್ವವು ಯುಕ್ತವಾಗುತ್ತದೆ

**तत्वप्रदीपः – नच रूपयोर्भेदः, विशेषादेव द्वित्वाद्युपपत्तेः । ते चानन्ताः प्रतिवस्तु विशेषाः ।**

ಒಬ್ಬನೇ ಆತ್ಮನು ವಿಶೇಷಬಲದಿಂದ ಜ್ಞಾತನೂ. ಅಜ್ಞಾತನೂ ಆಗುತ್ತಾನೆಂದಮಾತ್ರಕ್ಕೆ ಆತ್ಮನ ಎರಡು ರೂಪಗಳಿಗೆ ಭೇದವನ್ನು ಹೇಳಬಾರದು. ವಿಶೇಷಬಲದಿಂದ ಒಬ್ಬನಲ್ಲೇ ದ್ವಿತ್ವವು ಉಪಪನ್ನವಾಗುತ್ತದೆ. ಆ ವಿಶೇಷಗಳೂ ಕೂಡ ಪ್ರತಿವಸ್ತುಗಳಲ್ಲಿಯೂ ಅನಂತವಾಗಿವೆ.

ಸಿದ್ಧವಿಷಯದಲ್ಲಿ ಪ್ರಮಾಣ ಬೇಡ

**तत्वप्रदीपः – विशेषविशेषिणोर्विशेषाणां च विशेषः स्वयमेव । एवम्भूते विशेषे किं प्रमाणमिति चेन्न प्रमाणप्रश्नः, सिद्धार्थत्वात् ।**

'ವಿಶೇಷ' ಎಂಬ ಪದಾರ್ಥಕ್ಕೂ ವಿಶೇಷಿಯಾದ ಪದಾರ್ಥಕ್ಕೂ ಮತ್ತೊಂದು ವಿಶೇಷವನ್ನು ಒಪ್ಪುವ ಅವಶ್ಯಕತೆಯಿಲ್ಲ. ಈ ವಿಶೇಷವೇ ಸ್ವಯಂ ನಿರ್ವಾಹಕವಾಗುತ್ತದೆ. ಇಂಥ ವಿಶೇಷವನ್ನು ಒಪ್ಪಲು ಏನು ಪ್ರಮಾಣ ? ಎಂದು ಪ್ರಶ್ನಿಸಬಹುದು. ಸಿದ್ಧವಾದ ವಿಷಯದಲ್ಲಿ ಪ್ರಮಾಣ ಪ್ರಶ್ನೆಯೇ ತಪ್ಪು.

ವಿಶೇಷವು ಬಲು ಪ್ರಸಿದ್ಧ

**तत्वप्रदीपः – एवम्भूतत्वं न विशेषात् भिन्नं, सामानाधिकरण्योक्तेः, अन्यथाऽनवस्थानाच्च । न च तयोः पर्यायत्वम् । अतस्तत्र तत्र प्रसिद्धो विशेषः ।**

ಸಾಮಾನಾಧಿಕರಣ್ಯಪ್ರಯೋಗವಿರುವುದರಿಂದ ವಿಶೇಷದಲ್ಲಿರುವ ಸ್ವಯಂನಿರ್ವಾಹಕತ್ವವು ವಿಶೇಷಕ್ಕಿಂತ ಭಿನ್ನವಾಗಿಲ್ಲ. ಒಂದು ವೇಳೆ ವಿಶೇಷಕ್ಕೆ ಮತ್ತೊಂದು ವಿಶೇಷವನ್ನು ಒಪ್ಪಿದರೆ ಅನವಸ್ಥಾ ದೋಷವು ಬರುತ್ತದೆ. ವಿಶೇಷ ಮತ್ತು ವಿಶೇಷಿಗಳಿಗೆ ಐಕ್ಯವನ್ನು ಒಪ್ಪಿದಾಗ ಪರ್ಯಾಯತ್ವ-ದೋಷಕ್ಕೂ ಅವಕಾಶವಿಲ್ಲ. ವಿಶೇಷವೇ ಈ ದೋಷವನ್ನು ಪರಿಹರಿಸುತ್ತದೆ. ಆದ್ದರಿಂದಲೇ ಎಲ್ಲೆಡೆಯೂ ವಿಶೇಷವು ಪ್ರಸಿದ್ಧವಾಗಿದೆ.

### ನಿರ್ವಿಶೇಷವಾದಿಗಳಿಗೆ ವ್ಯಾಹತಿ ದೋಷ

**तत्वप्रदीपः – ननु न वयं निर्विशेषत्ववादिनो विशेषमङ्गीकुर्महे । न । निर्विशेषत्वविशेषाङ्गीकारात् ।**

ಆಕ್ಷೇಪ - ಮಾಯಾವಾದಿಗಳಾದ ನಾವು ವಿಶೇಷವನ್ನು ಒಪ್ಪುವುದಿಲ್ಲ. ಆದ್ದರಿಂದಲೇ ನಾವು ನಿರ್ವಿಶೇಷವಾದಿಗಳಾಗಿದ್ದೇವೆ.

ಪರಿಹಾರ - ಇದು ತಪ್ಪು. 'ನಿರ್ವಿಶೇಷತ್ವ' ಎಂಬ ವಿಶೇಷವನ್ನೇ ಅಂಗೀಕರಿಸಿರುವಿರಿ. ಪುನಃ ವಿಶೇಷವನ್ನು ಒಪ್ಪಿರುವುದಿಲ್ಲ ಎಂದು ಹೇಳಿದರೆ ವ್ಯಾಹತಿ ದೋಷವು ಬರುತ್ತದೆ.

### ನಿರ್ವಿಶೇಷತ್ವಸಮರ್ಥನೆಗೂ ವಿಶೇಷ ಬೇಕು

**तत्वप्रदीपः – नच तन्मिथ्या । सविशेषत्वप्रसङ्गात् । अथ कथं तर्हि सविशेषत्वपरिहाररूपेण निर्विशेषत्वोक्तेन सविशेषत्वप्रसङ्ग इति चेत् कथं वाचालत्वपरिहाररूपेण ''अहं मौनी'' इतिवचनावर्तनेनामौनित्वम् ।**

ಆಕ್ಷೇಪ - ನಿರ್ವಿಶೇಷತ್ವವು ಮಿಥ್ಯಾಭೂತವಾಗಿದೆ ಎನ್ನುತ್ತೇವೆ.

ಪರಿಹಾರ - ನಿರ್ವಿಶೇಷತ್ವವು ಮಿಥ್ಯಾಭೂತವಾದರೆ ಸವಿಶೇಷತ್ವವು ಸತ್ಯವೆಂದಾಯಿತು.

ಆಕ್ಷೇಪ - ಸವಿಶೇಷತ್ವದ ಪರಿಹಾರರೂಪವಾದ ನಿರ್ವಿಶೇಷತ್ವವನ್ನು ಒಪ್ಪುವುದರಿಂದ ಸವಿಶೇಷತ್ವ ಪ್ರಸಂಗಕ್ಕೆ ಅವಕಾಶವಿಲ್ಲ. (ನಿರ್ವಿಶೇಷತ್ವವು ಸವಿಶೇಷತ್ವವನ್ನು ನಿರಾಕರಿಸಿಯೇ ಬರುತ್ತದೆ)

ಪರಿಹಾರ - ಇದು ಹೇಗಾಯಿತೆಂದರೆ 'ನೀನು ವಾಚಾಳಿ' ಎಂದು ಆಕ್ಷೇಪಿಸಿದಾಗ ತಾನು ಮೌನಿ ಎಂದು ಸಮರ್ಥಿಸಿಕೊಳ್ಳಲು 'ಅಹಂ ಮೌನೀ' 'ಅಹಂ ಮೌನೀ' ಎಂದು ಬೊಬ್ಬೆ ಹೊಡೆದಂತಾಯಿತು. (ಮಾತನಾಡದ ವ್ಯಕ್ತಿ ಎಂಬುದನ್ನು ತೋರಿಸಿಕೊಳ್ಳಲು ಬಾಯಿಮುಚ್ಚಿ ಸುಮ್ಮನೆ ಕುಳಿತುಕೊಳ್ಳಬೇಕೇ ಹೊರತು, 'ನಾನು ಮೌನೀ' ಎಂದು ಮಾತನಾಡಬಾರದು. ಆದರಂತೆ ಬ್ರಹ್ಮನಲ್ಲಿ ವಿಶೇಷವಿಲ್ಲವೆಂಬುದನ್ನು ನೀನು ಸಮರ್ಥಿಸಬೇಕೆಂದರೆ ಬಾಯಿಮುಚ್ಚಿ ಸುಮ್ಮನೇ ಕುಳಿತುಕೋ ಬಾಯಿಬಿಟ್ಟು ನಿರ್ವಿಶೇಷ ಎಂದು ಹೇಳಬೇಡ ಎಂದಭಿಪ್ರಾಯ.)

ಔಪಾಧಿಕ ಭೇದವುಂಟಾಗದು

**तत्वप्रदीपः – सर्वज्ञस्याप्यज्ञत्वमज्ञातत्वं च परमात्मन एकस्यैवौपाधिक-भेदात् सम्भवतीति चेत्, कस्योपाधिरिति वक्तव्यम् । न तावच्छुद्धस्य । सर्वज्ञत्वात् । अज्ञानकार्योह्युपाधिः ।**

ಆಕ್ಷೇಪ - ಬ್ರಹ್ಮನು ಸರ್ವಜ್ಞನಾಗಿದ್ದರೂ ಕೂಡ ಅಜ್ಞತ್ವ ಹಾಗೂ ಅಜ್ಞಾತತ್ವಗಳು ಬರುತ್ತವೆ. ಒಬ್ಬನೇ ಬ್ರಹ್ಮನಲ್ಲಿ ಔಪಾಧಿಕಭೇದವಿರುವುದರಿಂದ ಒಬ್ಬನು ಅಜ್ಞಾನಿಯಾಗುತ್ತಾನೆ ಮತ್ತೊಬ್ಬನು ಅಜ್ಞಾತಕ್ಕೆ ವಿಷಯನಾಗುತ್ತಾನೆ.

ಪರಿಹಾರ - ಹಾಗಾದರೆ ಉಪಾಧಿಯನ್ನು ಯಾರಲ್ಲಿ ಹೇಳುತ್ತಿರುವಿ? ಶುದ್ಧಬ್ರಹ್ಮನಲ್ಲಿ ಹೇಳಲಾಗದು, ಆವನು ಸರ್ವಜ್ಞನಾಗಿದ್ದಾನೆ. ಉಪಾಧಿಯು ಅಜ್ಞಾನಕಾರ್ಯವಾಗಿದೆ. ಸರ್ವಜ್ಞನಾದ ಶುದ್ಧಬ್ರಹ್ಮನಲ್ಲಿ ಅಜ್ಞಾನಕಾರ್ಯವಾದ ಉಪಾಧಿಯನ್ನು ಹೇಳಲು ಸಾಧ್ಯವಿಲ್ಲ.

ಅಶುದ್ಧಬ್ರಹ್ಮನನ್ನು ಒಪ್ಪಿ ಅನವಸ್ಥಾ ಅನ್ಯೋನ್ಯಾಶ್ರಯ ದೋಷಗಳಿಂದ ನೀನೂ ಅಶುದ್ಧನಾಗುವಿ

**तत्वप्रदीपः – अशुद्धस्य चेदनवस्था, परस्पराश्रयत्वं वा, अज्ञानसिद्धौ तत्कार्योपाधिसिद्धिस्तत्सिद्धौ चाज्ञासिद्धिरिति ।**

ಅಶುದ್ಧ ಬ್ರಹ್ಮನಲ್ಲಿ ಉಪಾಧಿಯನ್ನು ಹೇಳಿದರೆ ಅನವಸ್ಥಾ ಬರುತ್ತದೆ. ಉಪಾಧಿಯು ಅಶುದ್ಧನಲ್ಲಿ ಆಶ್ರಿತವಾಗಿ ಸಿದ್ಧವಾಗುತ್ತದೆ. ಆದ್ದರಿಂದ ಉಪಾಧಿಯು ಸಿದ್ಧವಾಗಬೇಕಾದರೆ ಮೊದಲು ಅಶುದ್ಧ ಬ್ರಹ್ಮನು ಸಿದ್ಧನಾಗಬೇಕು. ಈ ಅಶುದ್ಧ ಬ್ರಹ್ಮನು ಶುದ್ಧ ಬ್ರಹ್ಮನಿಗಿಂತ ಭಿನ್ನನಾಗಿದ್ದಾನೆಂದು ಸಿದ್ಧವಾಗಲು ಉಪಾಧಿಯು ಬೇಕು. ಹೀಗೆ ಅನ್ಯೋನ್ಯಾಶ್ರಯ ದೋಷವು ಪ್ರಾಪ್ತವಾಗುತ್ತದೆ.

ವಿಶೇಷ ಒಪ್ಪದಿದ್ದರೆ ಅನ್ಯೋನ್ಯಾಶ್ರಯ ದೋಷವು ತಪ್ಪಿದ್ದಲ್ಲ

**तत्वप्रदीपः – न च बीजाङ्कुरवदुपपत्तिः । मूलबीजस्य प्रकृतिकार्यत्वादवस्थितेः । दृष्टा च सा बीजाङ्कुरपरम्परा । नचात्र किञ्चिन्मानम् ।**

ಆಕ್ಷೇಪ - ಬೀಜಕ್ಕೆ ಅಂಕುರ ಬೇಕು. ಅಂಕುರಕ್ಕೆ ಬೀಜ ಬೇಕು. ಆದರೂ ಅಲ್ಲಿ ಅನ್ಯೋನ್ಯಾಶ್ರಯದೋಷವು ಇರುವುದಿಲ್ಲ. ಆದರಂತೆ ಅಜ್ಞಾನ ಹಾಗೂ ಅಜ್ಞಾನಕಾರ್ಯಗಳಲ್ಲಿ ಅನ್ಯೋನ್ಯಾಶ್ರಯದೋಷವು ಬರುವುದಿಲ್ಲ.

ಪರಿಹಾರ - ಬೀಜ ಮತ್ತು ಅಂಕುರಗಳ ಪರಂಪರೆಯಲ್ಲಿ ಮೂಲವಾದ ಬೀಜವು ಪ್ರಕೃತಿಕಾರ್ಯವೆಂದು ಸಿದ್ಧವಾಗಿದೆ. ಮತ್ತು ಬೀಜಾಂಕುರಪರಂಪರೆಯು ಅನುಭವಸಿದ್ಧವಾಗಿದೆ, ಆದರಂತೆ ಅಜ್ಞಾನ ಹಾಗೂ ಅಜ್ಞಾನಕಾರ್ಯಗಳ ವಿಷಯದಲ್ಲಿ ನಿಮ್ಮಿಂದ ಪ್ರಮಾಣವನ್ನು ಹೇಳಲು ಸಾಧ್ಯವಿಲ್ಲ.

ಅದ್ವೈತಮತದಲ್ಲಿ ಅಜ್ಞಾನ ಹಾಗೂ ಅಜ್ಞಾನಕಾರ್ಯಗಳು ದುರ್ಘಟವಾದವು

**तत्वप्रदीपः – अतो दुर्घटमिदमज्ञानकल्पितो बन्ध इति । अतस्त्वत्पक्षस्याविद्यामूलत्वमनुपपन्नम् । उपपन्नश्चेत् सत्यः स्यात् । उपपन्नोऽपि मिथ्या चेद् ब्रह्मणः मिथ्यात्वप्रसङ्गः ।**

ಆದ್ದರಿಂದ ಅದ್ವೈತಮತದಲ್ಲಿ ಅಜ್ಞಾನವೇ ದುರ್ಘಟವಾಗಿರುವುದರಿಂದ ಅಜ್ಞಾನಕಲ್ಪಿತವಾದ ಬಂಧವೂ ಕೂಡ ದುರ್ಘಟವಾಯಿತು. ಆದ್ದರಿಂದ ಅದ್ವೈತಪಕ್ಷಕ್ಕೆ ಅವಿದ್ಯಾಮೂಲತ್ವವು ಅನುಪಪನ್ನವಾಯಿತು. ಒಂದು ವೇಳೆ ಅವಿದ್ಯಾಮೂಲತ್ವವು ಅನುಪಪನ್ನವಾಗುತ್ತದೆಂದು ಹೇಳಿದರೆ

ಸತ್ಯವೆಂದು ಒಪ್ಪಿಕೊಳ್ಳಬೇಕು. ಉಪಪನ್ನವಾದರೂ ಮಿಥ್ಯಾಭೂತವೆಂದು ಹೇಳಿದರೆ ಬ್ರಹ್ಮನಿಗೆ ಮಿಥ್ಯಾತ್ವವನ್ನು ಒಪ್ಪಿಕೊಳ್ಳಬೇಕಾಗುತ್ತದೆ.

### ದೌರ್ಘಟ್ಯವು ಭೂಷಣವಲ್ಲ

**तत्वप्रदीपः – नच जगतो दुर्घटत्वं, प्रत्यक्षादिप्रमाणदृष्टत्वात् । तस्मान्मिथ्यात्वं जगतो दुर्घटमतो न कल्पनीयम् । प्रमाणसिद्ध्यसिद्धी एवहि सौघठ्यदौर्घठ्ये ।**

ಪ್ರತ್ಯಕ್ಷಾದಿಪ್ರಮಾಣದಿಂದ ಸತ್ಯವೆಂದು ಸಿದ್ಧವಾದ ಜಗತ್ತಿನಲ್ಲಿ ದುರ್ಘಟತ್ವವನ್ನು ಹೇಳಬಾರದು. ಆದ್ದರಿಂದಲೇ ದುರ್ಘಟವಾದ ಮಿಥ್ಯಾತ್ವವನ್ನು ಜಗತ್ತಿಗೆ ಕಲ್ಪನೆ ಮಾಡಬಾರದು. ಯಾವುದು ಪ್ರಮಾಣದಿಂದ ಸಿದ್ಧವಾಗಿರುತ್ತದೋ ಅದು ಸುಘಟವಾಗುತ್ತದೆ. ಯಾವುದು ಪ್ರಮಾಣದಿಂದ ಸಿದ್ಧವಾಗುವುದಿಲ್ಲವೋ ಅದು ದುರ್ಘಟವಾಗುತ್ತದೆ. ಪ್ರಮಾಣದಿಂದ ಸಿದ್ಧವಾಗದ ಮಿಥ್ಯಾತ್ವವನ್ನು ಜಗತ್ತಿನಲ್ಲಿ ಹೇಳಿದರೆ ಅದು ದುರ್ಘಟವಾಗುತ್ತದೆ.

### ಶುಕ್ತಿರಜತದಂತೆ ಅಜ್ಞಾನಕಾರ್ಯವೂ ಕೂಡ ವ್ಯವಹಾರ ಯೋಗ್ಯವಲ್ಲ

**तत्वप्रदीपः – नच ब्रह्माविद्योत्थो घटादिर्घटादिव्यवहारयोग्यः स्यात् । नहि शुक्त्यज्ञानोत्थं रजतं रजतार्थक्रियाकारि कापि दृष्टम् ।**

ಆಕ್ಷೇಪ - ಬ್ರಹ್ಮನ ಅಜ್ಞಾನದಿಂದ ಘಟಾದಿಪದಾರ್ಥಗಳು ಉತ್ಪನ್ನವಾಗಿವೆ. ಈ ಘಟಾದಿ ಪದಾರ್ಥಗಳೇ ವ್ಯವಹಾರಕ್ಕೆ ಯೋಗ್ಯವಾಗಿವೆ ಹೀಗೆ ಹೇಳಿದರೆ ಏನು ತಪ್ಪು?

ಪರಿಹಾರ - ಶುಕ್ತಿಯ ಅಜ್ಞಾನದಿಂದ ಹುಟ್ಟಿದ ರಜತವು ಅರ್ಥಕ್ರಿಯಾಕಾರಿ ಆಗುವುದು ಎಲ್ಲಿಯೂ ಕಂಡಿಲ್ಲ. ಅದರಂತೆ ಅಜ್ಞಾನದಿಂದ ಹುಟ್ಟಿದ ಘಟಾದಿಗಳು ಶಬ್ದವ್ಯವಹಾರಕ್ಕೆ ಯೋಗ್ಯವಾಗಲು ಸಾಧ್ಯವಿಲ್ಲ.

### ಅಜ್ಞಾನಕಾರ್ಯವು ವ್ಯವಹಾರಯೋಗ್ಯವಲ್ಲವೆನ್ನಲು ಕಾರಣ

**तत्वप्रदीपः – नहि बाधानन्तरं कस्यचिदेतावन्तं कालमपि शुक्त्यज्ञानं नासीदिति प्रतीतिः, यथेदं रजतं नासीदिति ।**

ಮತ್ತು 'ನೇದಂ ರಜತಮ್ ಕಿಂತು ಶುಕ್ತಿರೇವ' ಎಂಬ ಬಾಧಜ್ಞಾನವು ಬಂದ ಮೇಲೆ ಯಾವ ಒಬ್ಬ ವ್ಯಕ್ತಿಗೂ ಕೂಡ ಇಲ್ಲಿಯತನಕ ನಾನು ಶುಕ್ತಿಯ ಅಜ್ಞಾನವನ್ನು ಹೊಂದಿರಲಿಲ್ಲ ಎಂಬ ಪ್ರತೀತಿ ಬರುವುದಿಲ್ಲ. 'ಇದಂ ರಜತಮ್ ನಾಸೀತ್' ಎಂಬ ಪ್ರತೀತಿ ಬರುವಂತೆ 'ಶುಕ್ತ್ಯಜ್ಞಾನಮಾಸೀತ್' ಎಂಬ ಪ್ರತೀತಿಯೇ ಬರುತ್ತದೆ.

### ಶುಕ್ತಿರಜತವು ಅನಿರ್ವಚನೀಯವಲ್ಲ

**तत्वप्रदीपः – नच रजतस्यानिर्वचनीयत्वम् । नहि बाधकज्ञानेऽनिर्वचनीयत्वप्रतीतिः, नास्ति रजतमिहेति सर्वोऽनुभवति ।**

ರಜತವನ್ನು ಅನಿರ್ವಚನೀಯವೆಂದು ಹೇಳಬಾರದು. ಹಾಗಾದಲ್ಲಿ ಬಾಧಕಜ್ಞಾನ ಬಂದ ಮೇಲೆ ಅನಿರ್ವಚನೀಯ ಎಂಬ ಪ್ರತೀತಿಯೇ ಬರಬೇಕಾಗುತ್ತದೆ. ಆದರೆ ಹಾಗೆ ಅನಿರ್ವಚನೀಯ ಪ್ರತೀತಿಯು ಬರುತ್ತಿಲ್ಲ. 'ಇಲ್ಲಿ ರಜತವು ಇರಲಿಲ್ಲ' ಎಂಬ ಪ್ರತೀತಿಯೇ ಪ್ರತಿಯೊಬ್ಬರಿಗೂ ಬರುತ್ತಿದೆ.

### ಅನಿರ್ವಚನೀಯತ್ವಕ್ಕೆ ಖ್ಯಾತಿಬಾಧಗಳ ಅನ್ಯಥಾನುಪಪತ್ತಿಯು ಕೂಡುವುದಿಲ್ಲ

**तत्वप्रदीपः – ख्यातिबाधान्यथानुपपत्त्याऽनिर्वचनीयत्वं कल्प्यत इति चेन्न । असतः ख्यातिनिषेधासम्भवात् ।**

ಆಕ್ಷೇಪ - ಖ್ಯಾತಿಬಾಧಗಳ ಅನ್ಯಥಾನುಪಪತ್ತಿಯಿಂದ ಅನಿರ್ವಚನೀಯತ್ವನ್ನು ಕಲ್ಪನೆ ಮಾಡುತ್ತೇವೆ. (ಸಚ್ಚೇತ್ ನ ಬಾಧ್ಯೇತ ಬಾಧ್ಯತೇ ಚ ಇದಂ ತಸ್ಮಾತ್ ನ ಸತ್. ಅಸಚ್ಚೇನ್ನ ಪ್ರತೀಯೇತ ಪ್ರತೀಯತೇ ಚ ಇದಂ ತಸ್ಮಾತ್ ನ ಅಸತ್' ಹೀಗೆ ಖ್ಯಾತಿಬಾಧಗಳ ಅನ್ಯಥಾನುಪಪತ್ತಿಯಿಂದ ಅನಿರ್ವಚನೀಯತ್ವವನ್ನು ಹೇಳಬೇಕೆಂದು ಅದ್ವೈತಿಗಳ ಪರಿಕಲ್ಪನೆ.)

ಪರಿಹಾರ - ಅಸತ್ ಪದಾರ್ಥಕ್ಕೆ ಪ್ರತೀತಿನಿಷೇಧವನ್ನು ಸಹ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಖ್ಯಾತಿ-ಬಾಧ-ಅನ್ಯಥಾನುಪಪತ್ತಿಯನ್ನು ಅಸತ್ತಾದ ರಜತದ ವಿಷಯದಲ್ಲಿ ಅನಿರ್ವಚಯ-ನೀಯತ್ವವನ್ನು ಹೇಳಲಾಗದು. ಅಸತ್ ಪದಾರ್ಥದಲ್ಲಿ ಖ್ಯಾತಿನಿಷೇಧವು ಕೂಡುವುದಿಲ್ಲ.

ಅಸತ್ ಪದಾರ್ಥದಲ್ಲಿ ಸತ್ವಪ್ರತೀತಿಯ ನಿಷೇಧವು ಸಾಧ್ಯವಿಲ್ಲ

**तत्वप्रदीपः – ननु नासतः ख्यातिर्निषिध्यते, अपित्वसतः सत्त्वप्रतीतिरेव । न । असतः सत्त्वप्रतीतिर्हि भ्रान्तिः । न ह्यनिर्वचनीयस्या-निर्वचनीयत्वं तवापि भ्रान्तौ प्रतीयते, सदिति प्रतिभानात् ।**

ಆಕ್ಷೇಪ - ಅಸತ್ ಪದಾರ್ಥದಲ್ಲಿ ನಾವು ಖ್ಯಾತಿಯನ್ನು ನಿಷೇಧ ಮಾಡುತ್ತಿಲ್ಲ. ಮತ್ತೇನೆಂದರೆ ಸತ್ವಪ್ರತೀತಿಯನ್ನು ನಿಷೇಧ ಮಾಡುತ್ತಿದ್ದೇವೆ.

ಪರಿಹಾರ - ಇದೂ ಸಹ ತಪ್ಪು. ಅಸತ್ತಿನಲ್ಲಿ ಸತ್ವಪ್ರತೀತಿ ಬರುವುದೇ ಭ್ರಾಂತಿಯಾಗಿದೆ. ಅನಿರ್ವಚನೀಯವಾದ ರಜತದಲ್ಲಿ ರಜತತ್ವದ ಪ್ರತೀತಿಯು ಭ್ರಾಂತ್ಯವಸ್ಥೆಯಲ್ಲೂ ಸಹ ನಿನಗೆ ಬರುತ್ತಿಲ್ಲ. 'ಸತ್' ಎಂಬುದಾಗಿಯೇ ಪ್ರತೀತಿ ಬರುತ್ತದೆ.

ಅನಿರ್ವಚನೀಯದಲ್ಲಿರುವ ಸತ್ವವು ಅನಿರ್ವಚನೀಯವಲ್ಲ

**तत्वप्रदीपः – न च तस्य सत्त्वमस्ति, सदसद्विलक्षणत्वात् । न चानिर्वचनीयस्य सत्त्वमनिर्वचनीयम्, अनवस्थानात् ।**

ಆಕ್ಷೇಪ - ಅನಿರ್ವಚನೀಯವಾದ ರಜತದಲ್ಲಿ ಸತ್ವವಿಲ್ಲ, ಸದಸದ್‌ವಿಲಕ್ಷಣತ್ವವಿದೆ ಎಂದು ಹೇಳಿದರೆ ಏನು ತಪ್ಪು?

ಪರಿಹಾರ - ಹಾಗೆ ಹೇಳಿದರೆ ಅನಿರ್ವಚನೀಯದಲ್ಲಿರುವ ಸತ್ವವನ್ನು ಅನಿರ್ವಚನೀಯವೆಂದು ಹೇಳಿದಂತಾಯಿತು. ಆಗ ಅನವಸ್ಥಾದೋಷವು ಬರುತ್ತದೆ.

ಅನಿರ್ವಚನೀಯ ವಾದಿಗಳಿಗೆ ಅನವಸ್ಥಾದೋಷ

**तत्वप्रदीपः – नचानिर्वचनीयत्वे नानावस्थादोषः, इति वाच्यम् । अनिर्वचनीयस्याद्याप्यसिद्धत्वात् । अन्ततो गत्वा येन रूपेण भ्रान्तौ प्रतीयते तेन रूपेण नास्त्येवेत्यङ्गीकार्यम् । अन्यथा न भ्रान्तित्वं स्यात् । अतो न बन्धो मिथ्या ।**

ಅನಿರ್ವಚನೀಯಸತ್ವವನ್ನು ಅನಿರ್ವಚನೀಯವೆಂದು ಹೇಳಿದರೆ ಅನವಸ್ಥಾದೋಷ ಬರುವುದಿಲ್ಲವೆಂದು ಹೇಳಬಾರದು. ಏಕೆಂದರೆ ಅನಿರ್ವಚನೀಯವು ಇನ್ನೂ ಸಹ ಸಿದ್ಧವೇ ಆಗಿರುವುದಿಲ್ಲ. ಆದ್ದರಿಂದ ಕೊನೆಯಲ್ಲಿ ಯಾವ ರೂಪದಿಂದ ಭ್ರಾಂತಿಯಲ್ಲಿ ಪ್ರತೀತವಾಗುತ್ತದೋ ಆ ರೂಪದಲ್ಲಿ ಆ ವಸ್ತುವು ಇರುವುದಿಲ್ಲವೆಂದೇ ಒಪ್ಪಬೇಕು. ಹೀಗೊಪ್ಪದಿದ್ದರೆ ಭ್ರಾಂತಿತ್ವವನ್ನೇ ಉಪಪಾದನೆ ಮಾಡಲು ಸಾಧ್ಯವಿಲ್ಲ. ಈ ಎಲ್ಲಾ ಕಾರಣಗಳಿಂದ ಸಂಸಾರಬಂಧನವನ್ನು ಮಿಥ್ಯಾಭೂತವೆಂದು ಮಾಯಾವಾದಿಗಳಿಂದ ಸಮರ್ಥಿಸಲು ಸಾಧ್ಯವಾಗುವುದಿಲ್ಲ.

ಮಾಯಾವಾದಿಗಳ ಮಾತು ಹುಚ್ಚರ ಸಂತೆ

**तत्वप्रदीपः – दुःख्यहमित्यबाधितानुभवस्य भ्रान्तित्वं प्रत्यक्षानुमानगम-विरुद्धस्य ब्रह्मास्मीति परोक्षावभासस्याभ्रान्तित्वमित्यहो महोन्मत्तानां प्रलापः । प्रत्यक्षतो हि दुःखित्वमनुभूयते । न च बाधो दृश्यते श्रूयते वा ।**

'ನಾನು ದುಃಖೀ' ಎಂಬ ಅನುಭವ ನಿರಂತರವಾಗಿ ಆಗುತ್ತಿದೆ. ಇದನ್ನು ಭ್ರಾಂತಿಯೆಂದು ಮಾಯಾವಾದಿಗಳು ಹೇಳುತ್ತಿದ್ದಾರೆ. ಮತ್ತು ಪ್ರತ್ಯಕ್ಷ, ಅನುಮಾನ, ಆಗಮ ಪ್ರಮಾಣಗಳಿಗೆ ವಿರುದ್ಧವಾದ 'ಅಹಂ ಬ್ರಹ್ಮಾಸ್ಮಿ' ಎಂಬ ಅನುಭವಕ್ಕೆ ದೂರವಾದ ಪರೋಕ್ಷಜ್ಞಾನವನ್ನು ಭ್ರಾಂತಿಯಲ್ಲಿ ಸತ್ಯವಾಗಿದೆ ಎಂದು ಹೇಳುತ್ತಿದ್ದಾರೆ. ಏನಾಶ್ಚರ್ಯ? ಇದು ಮಹಾಹುಚ್ಚರ ಜೊಳ್ಳುವಾದವಷ್ಟೇ, ಮತ್ತೇನೂ ಅಲ್ಲ. ಪ್ರತ್ಯಕ್ಷದಿಂದ ನಮಗೆ ದುಃಖದ ಅನುಭವ ಬರುತ್ತಿದೆ. ಎಂದೂ ಸಹ ದುಃಖವಾಗಿಲ್ಲವೆಂಬ ಬಾಧಜ್ಞಾನವು ನಮಗೆ ಬಂದಿಲ್ಲ. ಮತ್ತೊಬ್ಬರಿಗೆ ಬಂದಿರುವುದೂ ಸಹ ಕೇಳಿಲ್ಲ.

ಜೀವದ ಬಗ್ಗೆ ಪರಮಶ್ರುತಿ

**तत्वप्रदीपः –**
**''अहमित्येव यो वेद्यः स जीव इति कीर्तितः ।**
**स दुःखी स सुखी चैव स पात्रं बन्धमोक्षयोः'' इति परमश्रुतिः ।**

ಪರಮಶ್ರುತಿಯೂ ಕೂಡ ಸ್ಪಷ್ಟವಾಗಿ ಇದೇ ವಿಷಯವನ್ನು ಸಾರುತ್ತಿದೆ -

ಅಹಮಿತ್ಯೇವ ಯೋ ವೇದ್ಯಃ ಸ ಜೀವ ಇತಿ ಕೀರ್ತಿತಃ ।
ಸ ದುಃಖೀ ಸ ಸುಖೀ ಚೈವ ಸ ಪಾತ್ರಂ ಬಂಧಮೋಕ್ಷಯೋಃ ॥

'ಅಹಂ' ಎಂಬ ಅನುಭವವು ಯಾರಿಗೆ ಬರುತ್ತದೆಯೋ ಅವನೇ 'ಜೀವ' ಎಂದು ಕರೆಸಿಕೊಳ್ಳುತ್ತಾನೆ. ದುಃಖಕ್ಕೆ ಸುಖಕ್ಕೆ ಪಾತ್ರನಾದವನು ಸಂಸಾರಬಂಧನ ಹಾಗೂ ಮೋಕ್ಷಗಳಿಗೂ ಪಾತ್ರನಾಗುತ್ತಾನೆ.

ಮಾಯಾವಾದಿಗಳಿಗೆ ರಜ್ಜುಸರ್ಪದ ಹೆದರಿಕೆ

**तत्वप्रदीपः – न च मिथ्यादुःखित्वपरिहाराय विपश्चिच्छ्रवणादौ प्रवर्तेत। न खल्वाप्तवचनाधिगतरज्जुसर्वस्वरूपो रज्जुसर्पपरिहाराय विषविगमविद्यां चरति ।**

ಮಿಥ್ಯಾಭೂತವಾದ ಸಾಂಸಾರಿಕ ದುಃಖದ ಪರಿಹಾರಕ್ಕಾಗಿ ಬುದ್ಧಿವಂತನೂ ಸಹ ಅತ್ಯಂತ ಕಠಿಣವಾದ ಶ್ರವಣಾದಿಗಳಲ್ಲಿ ಪ್ರವೃತ್ತಿ ಮಾಡಲಾರ. ಆಪ್ತನ ಮಾತಿನಿಂದ ಇದು ಸರ್ಪವಲ್ಲ ಹಗ್ಗವೆಂದು ಜ್ಞಾನ ಪಡೆದ ವ್ಯಕ್ತಿಯು ಹಗ್ಗಸರ್ಪದ ವಿಷಪರಿಹಾರಕ್ಕಾಗಿ ವಿಷಪರಿಹಾರಕವಾದ ವಿದ್ಯೆಯನ್ನು ಕಲಿಯಲು ಪ್ರಯತ್ನಿಸಲಾರ. ಮಾಯಾವಾದಿಗಳ ಮಾತು ಮಿಥ್ಯಾಭೂತವಾದ ರಜ್ಜುಸರ್ಪದ ವಿಷದ ಬಾಧೆಗೆ ಹೆದರಿ ವಿಷಪರಿಹಾರಕ ವಿದ್ಯೆಯನ್ನು ಕಲಿತಂತೆ ಆಗುತ್ತಿದೆ.

ನಿರ್ಗುಣತತ್ವ ನಿಶ್ಚಯವಾದ ಮೇಲೆ ನಿಮಗೇಕೆ ದೇಹದ ಅಭಿಮಾನ?

**तत्वप्रदीपः – नापि श्रुतशास्त्रो भोजनादौ प्रयतेत, अशनायाद्यतीत-ब्रह्मात्मतानिश्चयात् । नहि प्रमाणान्तरनिश्चितदिग्विशेषोऽन्यथाऽनुभवन्नपि**

**तत्प्रयुक्तव्यवहारं करोति । दृश्यन्ते चैते स्वशरीरपोषणप्रयत्ता मायिनः सुनिश्चितनिर्गणात्मानः । अतस्तन्मतमत्यन्तहेयम् । अतश्शास्त्रार्थत्वाय बन्धः सत्यः ।**

ಸಂಸಾರಬಂಧನವು ಮಿಥ್ಯಾಭೂತವೆಂದು ಸಕಲ ಶಾಸ್ತ್ರಗಳು ಪ್ರತಿಪಾದನೆ ಮಾಡುವುದಾದರೆ ಶಾಸ್ತ್ರಾಧ್ಯಯನ ಮಾಡಿದ ವ್ಯಕ್ತಿಯು ಭೋಜನಾದಿಗಳಲ್ಲಿ ಪ್ರಯತ್ನವನ್ನೇ ಪಡಬಾರದು. ಏಕೆಂದರೆ ಊಟ, ನಿದ್ರೆ ಮೊದಲಾದವನ್ನು ಮೀರಿದ ಬ್ರಹ್ಮಾತ್ಮನ ತತ್ವವು ಅವನಿಗೆ ನಿಶ್ಚಯವಾಗಿರುತ್ತದೆ. ಸಂಸಾರವೆಲ್ಲವೂ ಮಿಥ್ಯಾಭೂತವೆಂಬ ಅರಿವು ಬಂದಿರುತ್ತದೆ. ಹೀಗಿರುವಾಗ ಪುನಃ ಭೋಜನಾದಿಗಳಲ್ಲಿ ಅವನೇಕೆ ಪ್ರವೃತ್ತಿ ಮಾಡಬೇಕು ? ಯಾವ ವ್ಯಕ್ತಿಗೆ ಇದೇ ಪೂರ್ವದಿಕ್ಕು ಎಂಬ ನಿಶ್ಚಯವು ಪ್ರಮಾಣಾಂತರದಿಂದ ಸಿದ್ಧ ಆಗಿರುತ್ತದೋ ಅವನಿಗೆ ಇದು ಪೂರ್ವದಿಕ್ಕು ಅಲ್ಲವೆಂಬ ಅನ್ಯಥಾ ಪ್ರತೀತಿ ಬಂದರೂ ಹಾಗೆ ವ್ಯವಹರಿಸಲಾರ. ಅದರಂತೆ ವೇದಾಂತ ತತ್ವದಿಂದ ಮಾಯಾವಾದಿಗಳಿಗೆ ಬ್ರಹ್ಮತತ್ವದ ನಿಶ್ಚಯವಾದ ಮೇಲೆ ಪುನಃ ಅಶನಾದಿಗಳಲ್ಲೇಕೆ ಪ್ರವೃತ್ತಿ ಮಾಡುತ್ತಾನೆ. ತತ್‌ಪ್ರಯುಕ್ತವಾದ ವ್ಯವಹಾರಗಳನ್ನಾದರೂ ಏಕೆ ಮಾಡುತ್ತಾನೆ? ಹೊಟ್ಟೆ ಹಸಿದು ತಿನ್ನಲು ಬಯಕೆ ಆಗುತ್ತಿದೆಯೆಂದು ಊಟ ಮಾಡಬಾರದು. ಮಾಯಾವಾದಿಗಳು ತಮ್ಮ ಶರೀರದ ಪೋಷಣೆಯಲ್ಲಿ ಆಸಕ್ತರಾಗಿರುವುದು ಕಣ್‌ಮುಂದೆ ಕಾಣಸುತ್ತಿದೆ. 'ನಿರ್ಗುಣಾತ್ಮನ ತತ್ವವು ನಮಗೆ ನಿಶ್ಚಯವಾಗಿದೆ' ಎಂದು ಬಾಯಿಯಲ್ಲಿ ಮಾತನಾಡುತ್ತಿದ್ದಾರೆ. ಬಾಯಲ್ಲಿ ಹೇಳುವುದೇ ಒಂದು, ಅನುಷ್ಠಾನವೇ ಮತ್ತೊಂದು. ಇವರ ಈ ಚರ್ಯೆಯನ್ನು ಗಮನಿಸಿದಾಗ ಇವರ ಮತವು ಕೇವಲ ದುರಾಗ್ರಹಪೀಡಿತವಾದ್ದರಿಂದ ಅತ್ಯಂತ ಹೇಯವಾದದ್ದೆಂದು ಮನದಟ್ಟಾಗುತ್ತದೆ. ಆದ್ದರಿಂದ ಸಂಸಾರಬಂಧವು ಸತ್ಯವಾಗಿದೆ ಎಂದು ಹೇಳಬೇಕು. ಶಾಸ್ತ್ರದ ಅರ್ಥವನ್ನು ತಿಳಿದು ಸತ್ಯವಾದ ಸಂಸಾರಬಂಧದ ನಿವಾರಣೆಗಾಗಿ ಹರಿಪ್ರಸಾದವನ್ನು ಪಡೆದು ಮೋಕ್ಷವನ್ನು ಹೊಂದಬೇಕು.

### ಸಂಸಾರಬಂಧನದ ನಿವೃತ್ತಿಗಾಗಿ ಹರಿಪ್ರಸಾದವೇ ಬೇಕು

**तत्वप्रदीपः – स च सदागमगीयमानस्वमानस्वातन्त्र्यसार्वज्ञादिगुरुतम-गुणगणपरिपूर्णपरमानन्दामृतमहार्णवस्य विष्णोः प्रसादमन्तरेण नोच्छिद्यते ।**

ಸಚ್ಛಾಸ್ತ್ರಗಳಿಂದ ಪ್ರತಿಪಾದ್ಯನಾದ, ಸ್ವತಃಪ್ರಮಾಣನಾದ, ಸ್ವಾತಂತ್ರ್ಯವೆಂಬ ಗುಣವುಳ್ಳ, ಸಾರ್ವಜ್ಞ್ಯ ಮೊದಲಾದ ಅತ್ಯಂತ ಶ್ರೇಷ್ಠವಾದ ಗುಣಗಳ ಸಮೂಹದಿಂದ ಪರಿಪೂರ್ಣನಾದ ಅತ್ಯುತ್ಕೃಷ್ಟವಾದ ಆನಂದವೆಂಬ ಅಮಿತಸಮುದ್ರನಾದ ಮಹಾವಿಷ್ಣುವಿನ ಪ್ರಸಾದವಿಲ್ಲದೆ ಸತ್ಯಭೂತವಾದ ಸಂಸಾರಬಂಧನವು ಪರಿಹಾರವಾಗುವುದಿಲ್ಲ. ಸಂಸಾರಬಂಧನದ ಪರಿಹಾರಕ್ಕಾಗಿ ಮಹಾವಿಷ್ಣುವಿನ ಪ್ರಸಾದವನ್ನು ಪಡೆಯಲೇಬೇಕು.

### ಹರಿಪ್ರಸಾದದಿಂದಲೇ ಮೋಕ್ಷ

**तत्वप्रदीपः –**

**''यस्य प्रसादात् परमार्तिरूपादस्मात् संसारान्मुच्यते नापरेण ।
नारायणोऽसौ परमो विचिन्त्यो मुमुक्षुभिः कर्मपाशादमुष्मात् ।।''
इति हि श्रुतिः ।।**

**''न तादृशी प्रीतिरीड्यस्य विष्णोर्गुणोत्कर्षज्ञातरि यादृशी स्यात् ।
तत्प्रीणनान्मोक्षमाप्नोति सर्वस्ततो वेदास्तत्पराः सर्व एव ।।'' इति च।।**

ಯಸ್ಯ ಪ್ರಸಾದಾತ್ಪರಮಾರ್ತಿರೂಪಾದಸ್ಮಾತ್ ಸಂಸಾರಾನ್ ಮುಚ್ಯತೇ ನಾಪರೇಣ ।
ನಾರಾಯಣೋಽಸೌ ಪರಮೋ ವಿಚಿಂತ್ಯೋ ಮುಮುಕ್ಷುಭಿಃ ಕರ್ಮಪಾಶಾದಮುಷ್ಮಾತ್॥

ಪರಮಾತ್ಮನ ಪ್ರಸಾದದಿಂದ ಪರಮದುಃಖಸ್ವರೂಪವಾದ ಈ ಸಂಸಾರದಿಂದ ಮುಕ್ತಿಯನ್ನು ಪಡೆಯುತ್ತಾನೆ. ಪ್ರಸಾದ ಬಿಟ್ಟು ಬೇರೆ ಯಾವ ಕಾರಣದಿಂದಲೂ ಮುಕ್ತಿ ಪಡೆಯಲು ಸಾಧ್ಯವಿಲ್ಲ. ಆದ್ದರಿಂದ ಮೋಕ್ಷವನ್ನು ಬಯಸಿ ಸಂಸಾರದ ಕರ್ಮಪಾಶದಿಂದ ಬಿಡುಗಡೆ ಪಡೆಯಲು ಅಂಥ ನಾರಾಯಣನ ಧ್ಯಾನವನ್ನು ನಿರಂತರವಾಗಿ ಮಾಡಬೇಕು. ಹೀಗೆ ಶ್ರುತಿಯು ಪರಮಾತ್ಮನ ಪ್ರಸಾದದಿಂದಲೇ ಮೋಕ್ಷವೆಂದು ಹೇಳುತ್ತಿದೆ.

ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋರ್ಗುಣೋತ್ಕರ್ಷಜ್ಞಾತರೀ ಯಾದೃಶೀ ಸ್ಯಾತ್ ।
ತತ್ಪ್ರೀಣನಾನ್ಮೋಕ್ಷಮಾಪ್ನೋತಿ ಸರ್ವಸ್ತತೋ ವೇದಾಸ್ತತ್ಪರಾ ಸರ್ವ ಏವ ॥

ತನ್ನನ್ನು ತಿಳಿದ ವ್ಯಕ್ತಿಯಲ್ಲಿ ಪರಮಾತ್ಮನು ಎಷ್ಟು ಪ್ರೀತನಾಗುತ್ತಾನೋ ಅಷ್ಟು ಪ್ರೀತಿಯನ್ನು ಬೇರೆ ಯಾರಲ್ಲಿಯೂ ಮಾಡಲಾರ. ಇಂಥ ಪರಮಾತ್ಮನ ಪ್ರೀತಿಯಿಂದಲೇ ಮೋಕ್ಷವನ್ನು ಪಡೆಯುತ್ತಾನೆ. ಆದ್ದರಿಂದಲೇ ವೇದಗಳೆಲ್ಲವೂ ಪರಮಾತ್ಮನನ್ನೇ ಕೊಂಡಾಡುತ್ತಿವೆ. ಹೀಗೆ ಶ್ರುತಿ ಹೇಳುತ್ತಿದೆ.

### ಹರಿಪ್ರಸಾದಕ್ಕಾಗಿ ಬ್ರಹ್ಮಜಿಜ್ಞಾಸೆ ಮಾಡಬೇಕು

**ತत्वप्रदीपः – तस्मात् सुष्ठूक्तं - यतो नारायणप्रसादमृते न मोक्षः, न च ज्ञानं विनाऽत्यर्थप्रसादः, अतो ब्रह्मजिज्ञासा कर्तव्येति ।। यत्रानवसरोऽन्यत्र अन्यस्य पदस्य वाक्यस्य वेत्यर्थः ।**

ಆದ್ದರಿಂದ ನಾರಾಯಣನ ಪ್ರಸಾದವಿಲ್ಲದೆ ಮೋಕ್ಷವಾಗಲು ಸಾಧ್ಯವಿಲ್ಲ. ನಾರಾಯಣನ ಪ್ರಸಾದಕ್ಕಾಗಿ ಜ್ಞಾನವನ್ನು ಸಂಪಾದನೆ ಮಾಡಬೇಕು. ಜ್ಞಾನದ ಸಂಪಾದನೆಗಾಗಿ ಬ್ರಹ್ಮಜಿಜ್ಞಾಸೆಯನ್ನು ಆಚರಣೆ ಮಾಡಬೇಕೆಂದು ಸಿದ್ಧವಾಯಿತು. 'ಯತ್ರ ಅನವಸರಃ ಅನ್ಯತ್ರ' ಇತ್ಯಾದಿ ಶ್ಲೋಕದಲ್ಲಿ 'ಅನ್ಯತ್ರ' ಎಂಬ ಪದವು 'ಅನ್ಯಸ್ಯ' ಎಂಬರ್ಥದಲ್ಲಿ ಪ್ರಯುಕ್ತವಾಗಿದೆ. ಷಷ್ಠ್ಯರ್ಥದಲ್ಲಿ 'ತ್ರಲ್' ಪ್ರತ್ಯಯವು ಬಂದಿದೆ ಎಂದು ತಿಳಿಯಬೇಕು.

## ಬ್ರಹ್ಮಸೂತ್ರಭಾಷ್ಯ

### ಶ್ರವಣಾದಿಗಳ ಬಗ್ಗೆ ಯಾಜ್ಞವಲ್ಕ್ಯರ ಉಪದೇಶ

**ब्रह्मसूत्रभाष्यम् –**

**'तमेवं विद्वानमृत इह भवति नान्यः पन्था अयनाय विद्यते', 'प्रियो हि ज्ञानिनोऽत्यर्थमहं स च मम प्रियः', 'यमेवैष वृणुते तेन लभ्यः', 'आत्मा वाऽरे द्रष्टव्यः श्रोतव्यो मन्तव्यो निदिध्यासितव्यः' इत्यादिश्रुतिस्मृतिभ्यः ।।**

ಅನುವಾದ - 'ಅಧಿಕಾರಿವರ್ಗದಲ್ಲಿ ಪರಮಾತ್ಮನನ್ನು ಸರಿಯಾಗಿ ತಿಳಿದ ಜ್ಞಾನಿಯು ಮೋಕ್ಷವನ್ನು ಹೊಂದುತ್ತಾನೆ. ಜ್ಞಾನವನ್ನು ಬಿಟ್ಟು ಮೋಕ್ಷಕ್ಕೆ ಬೇರೆ ಸಾಧನವಿಲ್ಲ.' 'ಜ್ಞಾನಿಗಳಿಗೆ ನಾನು ಮೋಕ್ಷಕ್ಕೋಸ್ಕರ ಅತ್ಯಂತಪ್ರಿಯನಾಗಿದ್ದೇನೆ. ನನಗೂ ಸಹ ಜ್ಞಾನಿಗಳೆಂದರೆ ಅತ್ಯಂತ ಪ್ರೀತ್ಯಾಸ್ಪದರು'.

'ಪರಮಾತ್ಮನು ಯಾರನ್ನು ಪ್ರಸನ್ನನಾಗಿ ಸ್ವೀಕರಿಸುತ್ತಾನೋ ಅಂತಹ ಭಕ್ತರಿಗೆ ಮಾತ್ರ ಪರಮಾತ್ಮನು ದೊರೆಯುತ್ತಾನೆ'. 'ಎಲೈ ಮೈತ್ರೇಯಿಯೇ ! ಪರಮಾತ್ಮನನ್ನು ಶಾಸ್ತ್ರದಿಂದ ತಿಳಿಯಬೇಕು, ಗುರುಮುಖದಿಂದ ಕೇಳಿ ತಿಳಿಯಬೇಕು. ಅವನ ಬಗ್ಗೆ ತಿಳಿದ ಜ್ಞಾನವನ್ನು ಯುಕ್ತಿಗಳಿಂದ ಮಥನ ಮಾಡಬೇಕು. ಅನಂತರ ಧ್ಯಾನ ಮಾಡಬೇಕು'. ಇವೇ ಮೊದಲಾದ ಶ್ರುತಿಸ್ಮೃತಿಗಳಿಂದ ಭಗವಂತನ ಜ್ಞಾನದಿಂದ ದೊರೆಯುವ ಪ್ರಸಾದವೇ ಮೋಕ್ಷಸಾಧನವೆಂದು ತಿಳಿಯುತ್ತದೆ.

## ಸತ್ತರ್ಕದೀಪಾವಳಿ

### ಹರಿಪ್ರಸಾದದಿಂದ ಮೋಕ್ಷ ನಿಶ್ಚಯ

**सत्तर्कदीपावळिः –**

**यतो नारायणप्रसादमृत इत्यादिनोक्तयमर्थं श्रुतिस्मृतिभिः समर्थयते – तमेवमित्यादिना । तं पुरुषोत्तममेवं विद्वान् तत्प्रीत्याऽमृतो भवति 'प्रियो हि ज्ञानिनोऽत्यर्थमहं स च मम प्रियः' इति भगवद्वचनात् । नचात्र ज्ञानिनि भगवतः प्रीतिप्रतीतावपि तत्प्रीतिसाध्यत्वं मोक्षस्य न प्रतीयते इति वाच्यम्। 'यमेवैष वृणुते तेन लभ्यः' इत्यत्र यमेष परमात्मा वृणुते तेनैव मोक्षदातृत्वेन लभ्यत इति मोक्षस्य विष्णुस्वीकारसाध्यत्वप्रतीतेः । न च तीर्थस्नानादिनैव ज्ञानसिद्धौ व्यर्था जिज्ञासेति वाच्यम् । 'आत्मा वा अरे द्रष्टव्यः श्रोतव्यो मन्तव्यो निदिध्यासितव्यः' इत्यादौ विष्णुज्ञानार्थं श्रवणादिविधान-विरोधादेवेत्यर्थः ।**

'ಯತೋ ನಾರಾಯಣಪ್ರಸಾದಮೃತೇ' ಇತ್ಯಾದಿಯಾಗಿ ಪ್ರತಿಪಾದಿಸಿದ ಅರ್ಥವನ್ನು ಶ್ರುತಿಸ್ಮೃತಿಗಳಿಂದ 'ತಮೇವಂ' ಇತ್ಯಾದಿ ಭಾಷ್ಯವು ಸಮರ್ಥಿಸುತ್ತಿದೆ. "ತಂ = ಪುರುಷೋತ್ತಮನನ್ನು, ಏವಂ ವಿದ್ವಾನ್ = ಹೀಗೆ ತಿಳಿದವನು, ತತ್ಪ್ರೀತ್ಯಾ = ಆ ಪುರುಷೋತ್ತಮನ ಪ್ರೀತಿಯಿಂದ, ಅಮೃತೋ ಭವತಿ = ಮೋಕ್ಷವನ್ನು ಹೊಂದುತ್ತಾನೆ" ಎಂದು ಇದರ ಅರ್ಥ. 'ಪ್ರಿಯೋ ಹಿ ಜ್ಞಾನಿನಃ' ಎಂಬ ಭಗವದ್ವಚನವೇ ಈ ವಿಷಯದಲ್ಲಿ ಆಧಾರವಾಗಿದೆ. ಭಗವಂತನನ್ನು

ತಿಳಿದವರಿಗೆ ಭಗವಂತನ ಪ್ರಸಾದವು ದೊರೆಯಬಹುದು ಆದರೆ ಆ ಪ್ರಸಾದದಿಂದ ಮೋಕ್ಷವು ದೊರೆಯುತ್ತದೆಂದು ತಿಳಿಯುವುದಿಲ್ಲವೆಂದು ಹೇಳಬಾರದು. 'ಯಮೇವೈಷ ವೃಣುತೇ ತೇನ ಲಭ್ಯಃ' 'ಯಾರನ್ನು ಪರಮಾತ್ಮನು ಸ್ವೀಕರಿಸುತ್ತಾನೋ ಅಂತಹವನಿಗೆ ಪರಮಾತ್ಮನು ಮೋಕ್ಷದಾಯಕನಾಗಿಯೇ ಪ್ರಾಪ್ತನಾಗುತ್ತಾನೆ' ಎಂದು ಈ ಶ್ರುತಿಯ ಅಭಿಪ್ರಾಯ. ಆದ್ದರಿಂದ ಭಗವಂತನ ಪ್ರಸಾದದಿಂದ ಮೋಕ್ಷವು ನಿಶ್ಚಿತವಾಗಿ ದೊರಕುತ್ತದೆ.

## ಬ್ರಹ್ಮಸೂತ್ರಭಾಷ್ಯ

### ಭಗವಂತನ ಉತ್ತಮಪ್ರಸಾದವೇ ಮೋಕ್ಷಸಾಧಕ

**ब्रह्मसूत्रभाष्यम् –**

**'कर्मणा त्वधमः प्रोक्तः प्रसादः, श्रवणादिभिः ।**
**मध्यमः, ज्ञानसम्पत्त्या प्रसादस्तूत्तमो मतः ।।**
**प्रसादात् त्वधमाद् विष्णोः स्वर्गलोकः प्रकीर्तितः ।**
**मध्यमाज्जनलोकादिः, उत्तमस्त्वेव मुक्तिदः ।।**
**श्रवणं मननं चैव ध्यानं भक्तिस्तथैव च ।**
**साधनं ज्ञानसम्पत्तौ प्रधानं नान्यदिष्यते ।**
**न चैतानि विना कश्चिज्ज्ञानमाप कुतश्चन ।।' इति नारदीये ।**

ಅನುವಾದ - ಸತ್ಕರ್ಮಾಚರಣೆಯಿಂದ ದೊರೆಯುವ ಭಗವಂತನ ಪ್ರಸಾದವು ಅಧಮ, ಶ್ರವಣಾದಿಗಳಿಂದ ದೊರೆಯುವ ಭಗವಂತನ ಪ್ರಸಾದವು ಮಧ್ಯಮ, ಅಪರೋಕ್ಷಜ್ಞಾನದಿಂದ ದೊರೆಯುವ ಪ್ರಸಾದವು ಉತ್ತಮ, ಅಧಮಪ್ರಸಾದದಿಂದ ಸ್ವರ್ಗಲೋಕವು, ಮಧ್ಯಮಪ್ರಸಾದದಿಂದ ಜನೋಲೋಕ ತಪೋಲೋಕ ಸತ್ಯಲೋಕಗಳು, ಉತ್ತಮಪ್ರಸಾದದಿಂದ ಮೋಕ್ಷವು ದೊರೆಯುತ್ತವೆ.

ಸಚ್ಛಾಸ್ತ್ರಶ್ರವಣವು, ಮನನವು, ಧ್ಯಾನವು ಮತ್ತು ಭಕ್ತಿ ಇವುಗಳು ಪರಮಾತ್ಮನ ಅಪರೋಕ್ಷಜ್ಞಾನವನ್ನು ಪಡೆಯಲು ಮುಖ್ಯವಾದ ಸಾಧನಗಳು. ಕರ್ಮವು ಮುಖ್ಯವಾದ ಸಾಧನವಲ್ಲ. ಈ ಶ್ರವಣಾದಿಗಳನ್ನು ಹೊಂದದೆ ಯಾರೂ ಸಹ ಇಲ್ಲಿಯ ತನಕ ಪರಮಾತ್ಮನ ಅಪರೋಕ್ಷಜ್ಞಾನವನ್ನು ಹೊಂದಿಲ್ಲ. ಹೀಗೆ ನಾರದೀಯಪುರಾಣದಲ್ಲಿ ಹೇಳಲ್ಪಟ್ಟಿದೆ.

## ಸತ್ತರ್ಕದೀಪಾವಳಿ

ಬ್ರಹ್ಮ ಎಂದರೆ ವಿಷ್ಣುವೇ ?

**सत्तर्कदीपावळिः –**

**'यज्ञादिकर्मणैव विष्णुप्रसादः' इत्येतामाशङ्कां नारदीयवचनेन परिहरति – कर्मणेति ।।**

ತೀರ್ಥಸ್ನಾನಾದಿಗಳಿಂದಲೇ ಭಗವಂತನ ಜ್ಞಾನವು ಲಭಿಸುವಾಗ ಬ್ರಹ್ಮಜಿಜ್ಞಾಸೆಯು ವ್ಯರ್ಥವಲ್ಲವೇ? ಎಂದು ಪ್ರಶ್ನಿಸಬಾರದು. ಏಕೆಂದರೆ 'ಆತ್ಮಾ ವಾ ಅರೇ' ಎಂಬ ಶ್ರುತಿಯಲ್ಲಿ ಭಗವಂತನ ಜ್ಞಾನಕ್ಕೋಸ್ಕರ ಶ್ರವಣಾದಿಗಳನ್ನು ವಿಧಾನಮಾಡಿದ್ದು ವ್ಯರ್ಥವಾಗಬೇಕಾದೀತು. ಯಜ್ಞಾದಿಕರ್ಮಗಳಿಂದಲೇ ವಿಷ್ಣುಪ್ರಸಾದವು ದೊರೆಯುತ್ತದೆಂಬ ಆಶಂಕೆಯನ್ನು ನಾರದೀಯ ಪುರಾಣವಾಕ್ಯದಿಂದ ಪರಿಹರಿಸುತ್ತಿದ್ದಾರೆ 'ಕರ್ಮಣಾ' ಇತ್ಯಾದಿಯಾಗಿ.

## ತತ್ವಪ್ರದೀಪ

ಜ್ಞಾನವು ಪ್ರಸಾದಕ್ಕೆ ಕಾರಣ

**तत्वप्रदीपः – 'प्रियो हि ज्ञानिनः' इति ज्ञानस्य प्रसादसाधनत्वे । 'तमेवं विद्वान्' इति प्रसादद्वारेण मोक्षसाधनत्वे, 'आत्मा वा अरे द्रष्टव्यश्श्रोतव्यः' इति जिज्ञासाया ज्ञानसाधनत्वे प्रमाणम् इति ।**

'ಪ್ರಿಯೋ ಹಿ ಜ್ಞಾನಿನಃ' ಎಂಬ ಗೀತೆಯ ಮಾತು ಜ್ಞಾನವು ಪ್ರಸಾದಕ್ಕೆ ಕಾರಣವೆಂದು ಹೇಳುತ್ತಿದೆ. 'ತಮೇವಂ ವಿದ್ವಾನ್' ಎಂಬ ಯಜುರ್ವೇದದ ಪುರುಷಸೂಕ್ತದ ಮಾತು ಪ್ರಸಾದದ ಮೂಲಕ ಜ್ಞಾನವು ಮೋಕ್ಷಸಾಧನವೆನ್ನುತ್ತಿದೆ. 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂಬ ಬೃಹದಾರಣ್ಯಕದ ಮಾತು ಜಿಜ್ಞಾಸೆಯು ಜ್ಞಾನಸಾಧನವಾಗಿದೆ ಎಂದು ಹೇಳುತ್ತಿದೆ.

ವಿಶೇಷ ವಿಚಾರ - ಜೀವರೇ ಬ್ರಹ್ಮ ಆಗಿರುವಾಗ ಬ್ರಹ್ಮನ ಪ್ರಸಾದವೇಕೆ ಬೇಕು ?

ಪ್ರಸಾದಕ್ಕೋಸ್ಕರ ಜಿಜ್ಞಾಸೆಯನ್ನು ಏಕೆ ಆಚರಿಸಬೇಕು ? ಜ್ಞಾನವು ಮೋಕ್ಷಸಾಧನವಾಗುತ್ತದೆ ಎಂದು ಹೇಗೆ ಹೇಳುವಿರಿ ? ಈ ಆಕ್ಷೇಪಕ್ಕೆ ಭಾಷ್ಯಕಾರರು ಉತ್ತರಿಸುತ್ತಿದ್ದಾರೆ -

'ಸಹಸ್ರಶೀರ್ಷ' ಇತ್ಯಾದಿಯಾಗಿ ಪುರುಷಸೂಕ್ತದಲ್ಲಿ ಪರಮಾತ್ಮನ ಅನಂತ ಮಹಿಮೆಯನ್ನು ನಿರೂಪಣೆ ಮಾಡಲಾಗಿದೆ. 'ತಮೇವಂ' ಇತ್ಯಾದಿ ವಾಕ್ಯಕ್ಕೆ ಹಿಂದೆ ಹೇಳಿದಂತೆ ಪರಮಾತ್ಮನ ಅನಂತ ಮಹಿಮೆಯನ್ನು ತಿಳಿದವನು ಅಮೃತನಾಗುತ್ತಾನೆ ಎಂದರ್ಥ. ಆದ್ದರಿಂದ ಜ್ಞಾನದಿಂದ ಮೋಕ್ಷವಾಗುತ್ತದೆ ಎನ್ನಲು ಈ ಶ್ರುತಿಯು ಆಧಾರವಾಗಿದೆ.

ಜ್ಞಾನದಿಂದ ಮೋಕ್ಷವಾಗುತ್ತದೆಂದಷ್ಟೇ ಶ್ರುತಿ ಹೇಳುತ್ತಿದೆ. ಆದರೆ ಜ್ಞಾನವು ನೇರವಾಗಿ ಮೋಕ್ಷಸಾಧನವಾಗುವುದಿಲ್ಲ. ಪ್ರಸಾದದ ಮೂಲಕವೇ ಮೋಕ್ಷಸಾಧನವಾಗುತ್ತದೆ ಎನ್ನಲು ಇತಿಹಾಸದ ಪ್ರಮಾಣವನ್ನು 'ಪ್ರಿಯೋ ಹಿ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಜ್ಞಾನಿಯು ನನಗೆ ಪ್ರಿಯನಾಗಿದ್ದಾನೆ ಎಂದರೆ ಜ್ಞಾನದಿಂದ ಭಗವತ್ ಪ್ರಸಾದವಾಗುತ್ತದೆಂದು ಇದರ ಅಭಿಪ್ರಾಯ. 'ತಮೇವಂ' ಎಂಬ ಶ್ರುತಿಯಲ್ಲಿ ಜ್ಞಾನದಿಂದ ಮೋಕ್ಷವಾಗುತ್ತದೆಂದು ಹೇಳಲಾಗಿದೆ. ಗೀತೆಯಲ್ಲಿ ಜ್ಞಾನಿಯು ನನಗೆ ಪ್ರಿಯನಾಗಿದ್ದಾನೆಂದು ಹೇಳಲಾಗಿದೆ. ಇದರಿಂದ ಜ್ಞಾನವು ಪ್ರಸಾದಕ್ಕೆ ಕಾರಣ. ಪ್ರಸಾದವು ಮೋಕ್ಷಕ್ಕೆ ಕಾರಣ ಎಂದು ಹೇಳಿದಂತಾಗುತ್ತದೆ.

ಪ್ರಸಾದವು ಮೋಕ್ಷಕ್ಕೆ ಹೇಗೆ ಕಾರಣವಾಗುತ್ತದೆ ? ಎಂಬ ಪ್ರಶ್ನೆಗೆ 'ಯಮೈವೇಷ' ಇತ್ಯಾದಿಯಾದ ಕಠೋಪನಿಷತ್ತನ್ನು ಉದಾಹರಿಸುತ್ತಿದ್ದಾರೆ. ಮತ್ತು ಜ್ಞಾನವು ಭಕ್ತಿಪೂರ್ವಕವೇ ಆಗಿರಬೇಕೆಂಬುದನ್ನೂ ಕೂಡ 'ಯಮೈವೇಷ ವೃಣುತೇ' ಎಂಬುದರಿಂದಲೇ ಸ್ಪಷ್ಟಪಡಿಸಿದ್ದಾರೆ. ಹಾಗಾದರೆ ಜ್ಞಾನದಿಂದಲೇ ಮೋಕ್ಷವು ದೊರೆಯುವಾಗ ಜಿಜ್ಞಾಸೆಯು ಏಕೆ ಬೇಕು ? ಎಂಬ ಪ್ರಶ್ನೆಗೆ 'ಆತ್ಮ ವಾ ಅರೇ!' ಎಂಬ ಬೃಹದಾರಣ್ಯಕದ ಆಧಾರದಿಂದ ಉತ್ತರಿಸುತ್ತಿದ್ದಾರೆ. ಈ ಶ್ರುತಿಯು ಶ್ರವಣ ಮನನ ನಿಧಿಧ್ಯಾಸನರೂಪವಾದ ಜಿಜ್ಞಾಸೆಯಿಂದ ಜ್ಞಾನವು ದೊರೆಯುತ್ತದೆಂದು ಹೇಳುತ್ತಿದೆ. ಜ್ಞಾನ ಶಬ್ದಕ್ಕೆ ಅಪರೋಕ್ಷಜ್ಞಾನವೆಂದೇ ಅರ್ಥಮಾಡಿಕೊಳ್ಳಬೇಕು. ಆದ್ದರಿಂದ 'ತಮೇವಂ ವಿದ್ವಾನ್ ಅಮೃತ' ಎಂಬಲ್ಲಿ ವಿದ್ವಾನ್ ಎಂಬ ಪದಕ್ಕೆ ಅಪರೋಕ್ಷಜ್ಞಾನ ಎಂಬರ್ಥವನ್ನು ವಿವಕ್ಷಿಸಬೇಕೆಂದು 'ಆತ್ಮ ವಾ ಅರೇ ! ದ್ರಷ್ಟವ್ಯಃ' ಎಂಬಲ್ಲಿರುವ 'ದ್ರಷ್ಟವ್ಯಃ' ಎಂಬ ಪದವು ವ್ಯಾಖ್ಯಾನ ಮಾಡುತ್ತಿದೆ.

ಸ್ಪಷ್ಟವಾಗಿ ಹೀಗೆ ತಿಳಿಯಬೇಕು - ಶ್ರವಣ ಮನನ ನಿಧಿಧ್ಯಾಸನ ರೂಪವಾದ ಜಿಜ್ಞಾಸೆಯಿಂದ ಜ್ಞಾನವು ದೊರೆಯುತ್ತದೆ. ಜ್ಞಾನವೆಂದರೆ ಅಪರೋಕ್ಷಜ್ಞಾನ ಎಂದರ್ಥ. ಹೀಗೆ

ಭಕ್ತಿ ಪೂರ್ವಕವಾದ ಅಪರೋಕ್ಷಜ್ಞಾನವು ಉಂಟಾದಾಗ ಭಗವಂತನ ಪ್ರಸಾದವಾಗುತ್ತದೆ. ಭಗವಂತನ ಪ್ರಸಾದದಿಂದ ಮೋಕ್ಷವು ದೊರೆಯುತ್ತದೆ.

ಕೆಲವೆಡೆ ಕರ್ಮದಿಂದ ಪ್ರಸಾದವಾಗುತ್ತೆಂದು ಹೇಳಿದ್ದಾರೆ. ಇನ್ನು ಕೆಲವೆಡೆ ಶ್ರವಣಾದಿಗಳಿಂದ ಪ್ರಸಾದವಾಗುತ್ತದೆಂದು ಹೇಳಲಾಗಿದೆ. ನೀವು ಜ್ಞಾನದಿಂದ ಪ್ರಸಾದ-ವಾಗುತ್ತದೆಂದು ಹೇಳುತ್ತಿದ್ದೀರಿ. ಈ ವಿರೋಧವನ್ನು ಹೇಗೆ ಪರಿಹರಿಸುವುದು ? ಎಂಬ ಪ್ರಶ್ನೆಗೆ 'ಕರ್ಮಣಾತ್ವಧಮಃ' ಇತ್ಯಾದಿಯಾದ ನಾರದೀಯ ಪುರಾಣದ ಮಾತಿನಿಂದ ಸ್ಪಷ್ಟವಾಗಿ ಉತ್ತರಿಸುತ್ತಿದ್ದಾರೆ.

## ಬ್ರಹ್ಮಸೂತ್ರಭಾಷ್ಯ

:

### ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಮುಖ್ಯವಾಗಿದೆ

**ब्रह्मसूत्रभाष्यम् — ब्रह्मशब्दश्च विष्णावेव ।**

ಅನುವಾದ - ಬ್ರಹ್ಮ ಎಂಬ ಶಬ್ದವಾದರೂ ವಿಷ್ಣುವಿನಲ್ಲೇ ಮುಖ್ಯವಾಗಿದೆ.

**ब्रह्मसूत्रभाष्यम् —**

**'यमन्तः समुद्रे कवयोऽवयन्ति यदक्षरे परमे प्रजाः ।**
**यतः प्रसूता जगतः प्रसूती तोयेन जीवान् व्यससर्ज भूम्याम्'**
**इत्याद्युक्त्वा**

**'तदेवर्तं तदु सत्यमाहुस्तदेव ब्रह्म परमं कवीनाम्' इति हि श्रुतिः।।**
**'तन्नो विष्णुः' इति वचनाद् विष್णुरेव हि तत्रोच्यते ।।**

ಏಕೆಂದರೆ "ಜ್ಞಾನಿಗಳು ಯಾರನ್ನು ಕ್ಷೀರಸಮುದ್ರದ ಮಧ್ಯದಲ್ಲಿ ತಿಳಿಯುತ್ತಾರೋ; ನಾಶರಹಿತನಾದ ಸರ್ವೋತ್ತಮನಲ್ಲಿ, ಬ್ರಹ್ಮಾದಿದೇವತೆಗಳು ಆಶ್ರಿತರಾಗಿದ್ದಾರೋ; ಸಮಸ್ತಜಗತ್ತಿಗೆ ತಾಯಿಯಾದ ಲಕ್ಷ್ಮೀದೇವಿಯೂ ಸಹ ಯಾರಿಂದ ಹುಟ್ಟಿದಳೋ; ನೀರು ಮೊದಲಾದ ಪಂಚಭೂತಗಳಿಂದ ಪೃಥಿವ್ಯಾದಿಲೋಕಗಳಲ್ಲಿ ವಿವಿಧವಾದ ಜೀವರಾಶಿಗಳನ್ನು ಸೃಷ್ಟಿ ಮಾಡಿದನೋ' ಎಂದು ವಿಷ್ಣುವಿನ ಅಸಾಧಾರಣಗುಣಗಳನ್ನು ಉಲ್ಲೇಖಿಸಿ, 'ಈ ಗುಣಗಳುಳ್ಳವನೇ ಋತಶಬ್ದವಾಚ್ಯ-

ನಾದವನು ಮತ್ತು ಸತ್ಯಶಬ್ದವಾಚ್ಯನಾದವನು' ಎಂದು ಹೇಳುತ್ತಾರೆ; 'ಅವನೇ ಕವಿಗಳಿಗೆ ಅತ್ಯಂತ ಶ್ರೇಷ್ಠನಾದ ಬ್ರಹ್ಮನು' ಎಂದು ವೇದವು ಹೇಳಿದೆ.

ಹೀಗೆ ಶ್ರುತಿಯು ಹೇಳುತ್ತಿರುವುದರಿಂದ ಬ್ರಹ್ಮಶಬ್ದವು ವಿಷ್ಣುವನ್ನೇ ಹೇಳುತ್ತದೆ.

## ಸತ್ತರ್ಕದೀಪಾವಳಿ

### ದೇವತೆಗಳ ನಾಮ ಹರಿನಾಮ

**सत्तर्कदीपावळिः –**

**'विष्णुजिज्ञासया विष्णुप्रसादो युक्तः न तु ब्रह्मजिज्ञासया' इत्यत आह – ब्रह्मेति ।। 'विष्णुरेव ब्रह्म' इत्यत्र तद्विषयत्वेन प्रसिद्धश्रुतिमाह – यमन्तरिति ।।**

ವಿಷ್ಣುವಿನ ಜಿಜ್ಞಾಸೆಯಿಂದಲೇ ವಿಷ್ಣುವಿನ ಪ್ರಸಾದವು ದೊರೆಯಬಹುದೇ ಹೊರತು ಬ್ರಹ್ಮಜಿಜ್ಞಾಸೆಯಿಂದ ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ 'ಬ್ರಹ್ಮ' ಎಂದು ಉತ್ತರಿಸಿದ್ದಾರೆ. ವಿಷ್ಣುವೇ ಬ್ರಹ್ಮನೆಂಬ ವಿಷಯದಲ್ಲಿ ಪ್ರಸಿದ್ಧಶ್ರುತಿಯನ್ನು 'ಯಮಂತಃ' ಇತ್ಯಾದಿಯಾಗಿ ಹೇಳಿದ್ದಾರೆ.

**सत्तर्कदीपावळिः – क्षीरसमुद्रशायित्वलिङ्गविशिष्टमन्तस्समुद्र इत्यादिनाऽनूद्य 'तदेव ब्रह्म परमं कवीनाम्' इति विधानात् । 'तन्नो विष्णुः प्रचोदयात्' इत्युत्तरत्र श्रवणाच्च । न च तत्रैव 'तन्नो रुद्र' इत्यादिश्रवणात् रुद्रादीनामपि ब्रह्मत्वप्राप्तिरिति वाच्यम् । 'तदेवाग्निस्तद्वायुस्तत्सूर्यस्तदुचन्द्रमाः' इत्यादिना क्षीरसमुद्रशायिन्येव इतरदेवतानाम्नां रुद्रादिशब्दानां च मुख्यनिष्ठत्वात् ।**

ಕ್ಷೀರಸಮುದ್ರಶಾಯಿತ್ವಲಿಂಗವಿಶಿಷ್ಟನನ್ನು 'ಅಂತಃಸಮುದ್ರೇ' ಎಂದು ಅನುವಾದ ಮಾಡಿ 'ತದೇವ ಬ್ರಹ್ಮ' ಎಂದು ಬ್ರಹ್ಮತ್ವವನ್ನು ಶ್ರುತಿಯು ವಿಧಿಸುತ್ತಿದೆ. ಮತ್ತು ಅದೇ ಪ್ರಕರಣದಲ್ಲಿ ಮುಂದೆ 'ತನ್ನೋ ವಿಷ್ಣುಃ ಪ್ರಚೋದಯಾತ್' ಎಂದು ಸ್ಪಷ್ಟವಾಗಿ ವಿಷ್ಣುವನ್ನೇ ಶ್ರುತಿಯು ಹೇಳಿದೆ. ಆದ್ದರಿಂದ ವಿಷ್ಣು ಹಾಗೂ ಬ್ರಹ್ಮರು ಬೇರೆಯಲ್ಲ.

'ತನ್ನೋ ರುದ್ರಃ' ಎಂಬುದಾಗಿಯೂ ಆ ಪ್ರಕರಣದಲ್ಲಿ ಕೇಳಿಸುತ್ತಿರುವುದರಿಂದ ರುದ್ರಾದಿಗಳೂ ಬ್ರಹ್ಮರಾಗಲಿ? ಎಂದು ಪ್ರಶ್ನಿಸಬಾರದು. 'ತದೇವಾಗ್ನಿಸ್ತದ್ವಾಯುಃ' ಎಂಬ ಶ್ರುತಿಯಂತೆ ಇತರ ಸಕಲದೇವತೆಗಳ ನಾಮಗಳು ರುದ್ರಾದಿಶಬ್ದಗಳೂ ಸಹ ಕ್ಷೀರಸಮುದ್ರಶಾಯಿಯನ್ನೇ ಮುಖ್ಯವಾಗಿ ಪ್ರತಿಪಾದಿಸುತ್ತಿವೆ.

## 'ನಾಮಾನಿ ವಿಶ್ವಾಭಿ' ಎಂಬ ಶ್ರುತ್ಯರ್ಥ

**सत्तर्कदीपावळिः – रुद्रादिनाममात्रवाच्यत्वे विष्णोः श्रुतिमाह – नामानीति ।। लोके तावत् सुरनरादिरूपे परमैश्वर्यादिप्रवृत्तिनिमित्ताभावाद् विश्वानीन्द्रानिनामानि अभितो मुख्यतो न सन्ति । अतोऽनृतस्य ब्रह्मव्यतिरिक्तस्य जगतः यस्मादैश्वर्यादिकं सर्वं मुख्यतो नामप्रवृत्तिनिमित्तम् आविरासीत् । तं च गुणसमुद्रं सर्वाणि नामानि आसमन्तात्परमुख्यतया विशन्ति तं विष्णुमेव परममुदाहरन्ति इत्यर्थः ।**

ಈ ವಿಷಯದಲ್ಲಿ 'ನಾಮಾನಿ' ಎಂಬ ಶ್ರುತಿಯು ಪ್ರಮಾಣವಾಗಿದೆ. ಲೋಕೇ = ದೇವತೆಗಳು ಹಾಗೂ ಮನುಷ್ಯವರ್ಗದಲ್ಲಿ ಪರಮೈಶ್ವರ್ಯಾದಿಪ್ರವೃತ್ತಿನಿಮಿತ್ತಗಳು ಇಲ್ಲದ ಕಾರಣ, ವಿಶ್ವಾನಿ = ಇಂದ್ರ ಮೊದಲಾದ ನಾಮಾತ್ಮಕಶಬ್ದಗಳು, ಅಭಿತಃ = ಮುಖ್ಯವಾಗಿ, ನ ಸಂತಿ = ಇರುವುದಿಲ್ಲ. ಆದ್ದರಿಂದ ಅನೃತಸ್ಯ = ಬ್ರಹ್ಮವ್ಯತಿರಿಕ್ತವಾದ ಜಗತ್ತಿಗೆ ಯಾರ ದೆಸೆಯಿಂದ ಐಶ್ವರ್ಯಾದಿಗಳು ದೊರೆತವೋ ಅಂತಹ ಗುಣಸಮುದ್ರನಾದ ಆ ಪರಮಾತ್ಮನಲ್ಲಿ ಸಕಲಶಬ್ದಗಳು ಪರಮ-ಮುಖ್ಯವೃತ್ತಿಯಿಂದ ಹೊರಟಿವೆ. ಅಂತಹ ವಿಷ್ಣುವನ್ನೇ ಸರ್ವೋತ್ತಮನೆಂದು ಜ್ಞಾನಿಗಳು ಹೇಳುತ್ತಾರೆ - ಇಷ್ಟು "ನಾಮಾನಿ" ಎಂಬ ಶ್ರುತಿಯ ಅರ್ಥ.

## ವಿಷ್ಣುವಿನನಾಮ ರುದ್ರನಾಮವಲ್ಲ

**सत्तर्कदीपावळिः – अन्येषामपि विष्णवादिनामवत्त्वं किं न स्यादित्येतत् श्रुत्या परिहरति – यो देवानामिति ।। अत्र विश्वकर्तृत्वात् विश्वकर्मनामा**

**त्रिष्णुरेवेति प्रतिपाद्यते न देववर्धक्यादिः । अजस्य नाभावध्येकमर्पितं यस्मिन्विश्वा भुवनानि तस्थुरिति पद्मनाभत्वाख्याविष्णुलिङ्गश्रवणविरोधात् ।**

ಬೇರೆ ರುದ್ರಾದಿಗಳಿಗೂ ವಿಷ್ಣು ಮೊದಲಾದ ಹೆಸರುಗಳು ಯಾಕಿರಬಾರದು? ಎಂಬ ಆಶಂಕೆಯನ್ನು 'ಯೋ ದೇವಾನಾಮ್' ಎಂಬ ಶ್ರುತಿಯಿಂದ ಪರಿಹರಿಸುತ್ತಿದ್ದಾರೆ. ಈ ಶ್ರುತಿಯಲ್ಲಿರುವ ವಿಶ್ವಕರ್ಮಶಬ್ದದಿಂದ ವಿಶ್ವಕರ್ತೃತ್ವವುಳ್ಳ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ. ಇತರ ದೇವತೆಯಲ್ಲ. ಹಾಗೇನಾದರೂ ಬೇರೆ ದೇವತೆಯು ಪ್ರತಿಪಾದ್ಯನಾದರೆ 'ಅಜಸ್ಯ ನಾಭಾವಧ್ಯೇಕಮರ್ಪಿತಂ' ಎಂಬ ಶ್ರುತಿಯ ವಿರೋಧವು ಬರುತ್ತದೆ.

ಪದ್ಮನಾಭತ್ವಲಿಂಗದಿಂದ ಸಮರ್ಥನೆ

**सत्तर्कदीपावळिः – ननु पद्मनाभवदन्योऽप्यर्थः सम्भवतीत्यत आह । न चेति ।। न हि सर्वभुवनाश्रयपद्माधारानाभिमान् इतः पद्मनाभादन्यः श्रुतिपुराणादि प्रसिद्धोस्तीत्यर्थः । एतामेव श्रुतिमुदाहृत्य पद्मनाभ-प्रतिपादकपुराणवचनमाह । अजस्येति । व्यस्ताः इन्द्रादीन् प्रति समस्ता एकीकृत्य दत्ता ब्रह्माणं प्रति विश्वविभूतिर्येन स तथोक्तः ।**

'ಅಜಸ್ಯ ನಾಭೌ' ಎಂಬ ಶ್ರುತಿಯಲ್ಲಿ ಪದ್ಮನಾಭತ್ವವನ್ನು ಸ್ಪಷ್ಟವಾಗಿ ಹೇಳಿರುವುದಿಲ್ಲ. ನಾಭಿಯಲ್ಲಿರುವ ವಸ್ತುವು ಬೇರೆಯೇ ಏಕಾಗಬಾರದು? ಎಂಬ ಪ್ರಶ್ನೆಗೆ 'ನಚ' ಎಂದು ಉತ್ತರಿಸಿದ್ದಾರೆ. ಚತುರ್ದಶಲೋಕಗಳಿಗೆ ಆಧಾರವಾದ ವಸ್ತು ಪದ್ಮವನ್ನು ಬಿಟ್ಟು ಬೇರೆ ವಸ್ತುವು ಯಾವ ಶ್ರುತಿಪುರಾಣಾದಿಗಳಲ್ಲೂ ಪ್ರಸಿದ್ಧವಾಗಿಲ್ಲ. ಹೀಗೆ ಪ್ರತಿಪಾದಿಸುವ ಶ್ರುತಿಯನ್ನು ಉದಾಹರಿಸಿ, ಪುರಾಣವನ್ನು 'ಅಜಸ್ಯ' ಎಂಬುದರಿಂದ ಉದಾಹರಿಸುತ್ತಿದ್ದಾರೆ.

ವಿಷ್ಣುಕರ್ಮಸೂಕ್ತದಿಂದ ವಿಷ್ಣುವೇ ಪ್ರತಿಪಾದ್ಯ

**सत्तर्कदीपावळिः – इतोपि विश्वकर्मसूक्ते प्रतिपादितो विष्णुरेव पर एना पृथिव्यैतावती महिना सम्बभूवेति परशब्दस्यावध्यपेक्षत्वात् । दिवेत्यादेर्वि-भक्तिविपरिणामः कार्यस्ततश्चैतदुक्तं भवति । दिवः पर एतस्याः**

**पृथिव्याश्च परो यः पुरुषोत्तमो निर्दिष्टो अस्य महिम्ना प्रभावेन अहमेतावती अहं रुद्रेभिर्वसुभिश्चरामीत्यारभ्य उक्तमाहात्म्यवती सम्बभूवेति । द्यावापृथिवीदेवता चात्र लक्ष्मीरेव द्विरूपा विवक्षिता । तेन द्यावापृथिवीपरत्वं नाम विष्णोः प्रकृतिपरत्वमेव ।**

ಇನ್ನೊಂದು ಕಾರಣದಿಂದಲೂ ವಿಶ್ವಕರ್ಮಸೂಕ್ತದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂದು ಹೇಳುತ್ತಿದ್ದಾರೆ. 'ಪರ ಏನಾ' ಎಂಬಲ್ಲಿ ಪರಶಬ್ದವು ಅವಧಿಯನ್ನು ಅಪೇಕ್ಷಿಸುವುದರಿಂದ, ದಿವಾ ಎಂಬಲ್ಲಿರುವ ತೃತೀಯಾವಿಭಕ್ತಿಯನ್ನು ಪಂಚಮ್ಯಂತವಾಗಿ ವಿಪರಿಣಾಮ ಮಾಡಿಕೊಳ್ಳಬೇಕು. 'ಪರೋ ದಿವಾ' ಎಂಬ ಶ್ರುತಿಯಲ್ಲಿ ದ್ಯಾವಾಪೃಥಿವಿಗಳಿಗಿಂತ ವಿಷ್ಣುವಿಗೆ ಉತ್ತಮತ್ವವನ್ನು ಹೇಳಿದ್ದಾರೆ. ಅದರಿಂದ ಲಕ್ಷ್ಮೀಗಿಂತಲೂ ಉತ್ತಮತ್ವವನ್ನು ಹೇಳಿದಂತಾಗುತ್ತದೆ.

### ಲಕ್ಷ್ಮೀದೇವಿಯಿಂದ ವಿಷ್ಣು ಸರ್ವೋತ್ತಮತ್ವ ಸ್ಥಾಪನೆ

**सत्तर्कदीपावळिः – न चात्रलक्ष्मीप्रभावकारणभूतः द्यावापृथिवीपरो विष्णुरेव कस्माद् ब्रह्मादिः किं न स्यादिति वाच्यम् । 'यं कामये तं तमुग्रं कृणोमि' इत्यादिना रुद्रब्रह्मादीनां स्वसृज्यत्वमुक्त्वा लक्ष्मीरेव 'मम योनिरप्स्वान्तः समुद्रः' इति क्षीरोदार्णवान्तःशयानस्य स्वप्रादुर्भावकारणस्य विष्णोर्निर्दिष्टत्वेन ब्रह्मादेर्लक्ष्मीच्छयासपदत्वेन विष्णोः प्रकृतिपरत्वेन सिद्धेः। ब्रह्मशब्देन चतुर्मुख इवात्र उग्रशब्देन रुद्र एवोच्यते ।**

ಲಕ್ಷ್ಮಿಯಿಂದ ಹುಟ್ಟಲ್ಪಟ್ಟ ದ್ಯಾವಾಪೃಥಿವೀಗಳನ್ನು ಈ ಶ್ರುತಿಯು ಹೇಳುತ್ತಿದೆ. ಇವುಗಳಿಂದ ಉತ್ತಮತ್ವವು ವಿಷ್ಣುವಿನಲ್ಲೇ ಏಕೆ ಸಿದ್ಧವಾಗಬೇಕು? ಬ್ರಹ್ಮಾದಿಗಳಲ್ಲಿ ಏಕೆ ಸಿದ್ಧವಾಗುವುದಿಲ್ಲ? ಎಂದು ಪ್ರಶ್ನಿಸಬಾರದು. 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ' ಇತ್ಯಾದಿಯಾಗಿ ಬ್ರಹ್ಮರುದ್ರಾದಿಗಳೆಲ್ಲರೂ ನನ್ನಿಂದ ಹುಟ್ಟುತ್ತಾರೆಂದು ಹೇಳಿ, ಅದೇ ಲಕ್ಷ್ಮಿಯೇ 'ಮಮ ಯೋನಿಃ' ಎಂಬ ವಾಕ್ಯದಿಂದ ತನ್ನ ಪ್ರಾದುರ್ಭಾವಕ್ಕೆ ಕ್ಷೀರಸಮುದ್ರಶಾಯಿ ಕಾರಣನಾಗಿದ್ದಾನೆಂದು ವಿಷ್ಣುವನ್ನು ನಿರ್ದೇಶಿಸಿದ್ದಾಳೆ. ಇದರಿಂದ ವಿಷ್ಣುವೇ ದ್ಯಾವಾಪೃಥಿವಿಗಳಿಗಿಂತಲೂ ಉತ್ತಮನೆಂದು ತಿಳಿಯುತ್ತದೆ. ಬ್ರಹ್ಮಶಬ್ದದಿಂದ ಚತುರ್ಮುಖನು, ಉಗ್ರಶಬ್ದದಿಂದ ರುದ್ರನು ಪ್ರತಿಪಾದ್ಯರಾಗಿದ್ದಾರೆ.

### ನೀರಿಗೆ ಆಶ್ರಯನಾದವನೇ ನಾರಾಯಣ

**सत्तर्कदीपावळिः – 'उग्रः कपर्दि' इति प्रसिद्धत्वात् । समुद्राप्स्वन्तर्योनि-शब्दार्थस्य निर्देशेन च नारायणपदयौगिकार्थस्य सूचितत्वात् प्रसिद्धत्वाच्च स एवात्र निर्दिश्यते । नाराः आपः अयनं यस्य सः नारायणः । तन्नामग्रहणं लक्ष्म्याः स्त्रीणां स्वभर्तृनामग्रहणम् अनुचितमिति ज्ञापयितुं न कृतम् ।**

'ಉಗ್ರಃ ಕಪರ್ದೀ' ಎಂಬಿತ್ಯಾದಿಯಾಗಿ ಪ್ರಸಿದ್ಧಿಯಿದೆ. 'ಸಮುದ್ರೇ ಅಪ್ಸ್ವಂತಃ' ಮತ್ತು 'ಯೋನಿಃ' ಎಂದು ಉಲ್ಲೇಖಿಸಿದ್ದರಿಂದ ನಾರಾಯಣಪದದ ಯೌಗಿಕಾರ್ಥವನ್ನು ಸೂಚಿಸಿದ್ದಾರೆ. ಮತ್ತು ನಾರಾಯಣನೇ ಕ್ಷೀರಸಮುದ್ರಶಾಯಿಯೆಂದು ಪ್ರಸಿದ್ಧವೂ ಇದೆ. ಏಕೆಂದರೆ 'ನಾರ' ಎಂದರೆ ನೀರು. ಆ ನೀರು ಯಾರಿಗೆ ಆಶ್ರಯವಾಗಿದೆಯೋ ಅವನು ನಾರಾಯಣನೇ. ಹಾಗಾದರೆ ಲಕ್ಷ್ಮಿಯು ನಾರಾಯಣನೆಂದೇ ಹೇಳಬಹುದಿತ್ತಲ್ಲ? ಎಂದು ಕೇಳಬಾರದು. ಸ್ತ್ರೀಯರಿಗೆ ತನ್ನ ಪತಿಯ ನಾಮಗ್ರಹಣವು ನಿಷಿದ್ಧವಾಗಿದೆಯೆಂದು ಇದರಿಂದ ತಿಳಿಸಿದ್ದಾರೆ.

### ಉಗ್ರಶಬ್ದದಿಂದ ರುದ್ರನೇ ಪ್ರತಿಪಾದ್ಯ

**सत्तर्कदीपावळिः – नचोग्रशब्देन रुद्रादन्य एव गौण्यावृत्त्योक्तः किं न स्यात्? इति वाच्यम् । असति बाधके प्रसिद्धपरित्यागासम्भवात् ।**

ಉಗ್ರಶಬ್ದದಿಂದ ರುದ್ರನೇ ಏಕೆ ಪ್ರತಿಪಾದ್ಯನಾಗಬೇಕು? ಎಂದು ಪ್ರಶ್ನಿಸಬಾರದು. ಬಾಧಕವಿಲ್ಲದಿದ್ದಾಗ ಪ್ರಸಿದ್ಧಾರ್ಥವನ್ನು ತ್ಯಾಗಮಾಡುವುದು ಅನುಚಿತ.

### ವಿಷ್ಣುವಿನಲ್ಲಿ ಶಿವಾದಿ ಶಬ್ದಗಳ ಪ್ರಯೋಗವಿದೆ

**सत्तर्कदीपावळिः – न चान्याधीनत्वे रुद्रस्य 'विश्वाधिको रुद्रो महर्षिः' इति श्रुतिविरोध इति वाच्यम् । तत् श्रुतेरुक्तरीत्या विष्णुपरत्वात् । 'शाश्वतं शिवमच्युतम्' इत्यादिश्रुतीतिहासादौ विष्णुविषयत्वेन शिवादिशब्दप्रयोगाच्च ।**

ರುದ್ರನು ಅನ್ಯಾಧೀನನಾದ ಮೇಲೆ 'ವಿಶ್ವಾಧಿಕೋ ರುದ್ರಃ' ಎಂಬ ಶ್ರುತಿಗೆ ಏನರ್ಥ? ಎಂದರೆ, ಆ ಶ್ರುತಿಯೂ ಸಹ ಹಿಂದೆ ಹೇಳಿದಂತೆ ವಿಷ್ಣುಪರವೇ ಆಗಿದೆ. 'ಶಾಶ್ವತಂ ಶಿವಮಚ್ಯುತಮ್' ಇತ್ಯಾದಿಯಾಗಿ ಶ್ರುತಿಇತಿಹಾಸಾದಿಗಳಲ್ಲಿ ವಿಷ್ಣುವಿನಲ್ಲಿ ಶಿವಾದಿಶಬ್ದಗಳನ್ನು ಪ್ರಯೋಗಿಸಲಾಗಿದೆ.

'ವೇದೇ ರಾಮಾಯಣೇ' ಎಂಬ ಶ್ಲೋಕ ವ್ಯಾಖ್ಯಾನ

**सत्तर्कदीपावळिः – एवं यत्र सर्वोत्तमत्वविषयतया प्रयोग इन्द्रादिशब्दानां 'विश्वस्मादिन्द्र उत्तरः' इत्यादिश्रुतीतिहासादौ तत्रोक्तवक्ष्यमाणन्यायैः विष्णुरेवोच्यते । तथाहि वचनम् । वेद इति । तदेतदाह – परो दिवेत्यादिना।**

ಹೀಗೆ ಯಾವ ಸಂದರ್ಭದಲ್ಲಿ ಸರ್ವೋತ್ತಮತ್ವವಿಷಯಕವಾದ ಪ್ರಯೋಗವು ಇಂದ್ರಾದಿಗಳಲ್ಲಿ ಕೇಳಿಸುತ್ತದೋ ಅವುಗಳನ್ನೆಲ್ಲಾ ವಿಷ್ಣುಪರವಾಗಿಯೇ ಸಮರ್ಥಿಸಬೇಕು. ಅದನ್ನೇ 'ವೇದೇ ರಾಮಾಯಣೇ' ಎಂಬ ಶ್ಲೋಕದಿಂದ ಹೇಳಿದ್ದಾರೆ.

## ಬ್ರಹ್ಮಸೂತ್ರಭಾಷ್ಯ

ಗುಣಪೂರ್ಣನಾದ ವಿಷ್ಣುವನ್ನೇ ಬ್ರಹ್ಮಶಬ್ದದಿಂದ ವಿವಕ್ಷಿಸಬೇಕು

**ब्रह्मसूत्रभाष्यम् –**

**न चेतरशब्दात् तत्प्राप्तिः ।।**

ವಸ್ತುತಃ ಬೃಹಧಾತುವಿನ ಆಧಾರದಿಂದ ಜೀವ, ಶಬ್ದರಾಶಿ, ಚತುರ್ಮುಖ ಮೊದಲಾದ ಅರ್ಥಗಳು ತಿಳಿದರೂ ಅವುಗಳನ್ನು ಇಲ್ಲಿ ವಿವಕ್ಷಿಸಬಾರದು. ಗುಣಪೂರ್ಣನಾದ ವಿಷ್ಣುವನ್ನೇ ವಿವಕ್ಷಿಸಬೇಕು. ಆದ್ದರಿಂದ ಶ್ರುತ್ಯುಕ್ತನಾದ ಬ್ರಹ್ಮನೇ ಜಿಜ್ಞಾಸ್ಯನಾಗಿದ್ದಾನೆ. ವಿಚಾರ ವಿಷಯನಾದ್ದರಿಂದ ಸೂತ್ರದಲ್ಲಿ ಹೇಳಿದ ಬ್ರಹ್ಮಶಬ್ದವು ವಿಷ್ಣುವನ್ನೇ ಹೇಳುತ್ತದೆ.

'ನಾರಾಯಣಾಯ ವಿದ್ಮಹೇ, ವಾಸುದೇವಾಯ ಧೀಮಹಿ, ತನ್ನೋ ವಿಷ್ಣುಃ ಪ್ರಚೋದಯಾತ್' (ನಮ್ಮೆಲ್ಲರನ್ನೂ ನಿರಂತರವಾಗಿ ಶುಭಕರ್ಮಗಳಲ್ಲಿ ಪ್ರೇರಿಸಲಿ) ಎಂಬ ವಿಷ್ಣುಶ್ರುತಿಯಲ್ಲಿ ವಿಷ್ಣು ಎಂಬ ಶಬ್ದವು ಸ್ಪಷ್ಟವಾಗಿ ಇರುವುದರಿಂದ ಋತ ಸತ್ಯಾದಿಗಳನ್ನು ಹೇಳಿದ ಶ್ರುತಿಯಲ್ಲಿಯೂ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

ಎಲ್ಲಾ ಹೆಸರುಗಳು ಮಹಾವಿಷ್ಣು ಪ್ರತಿಪಾದಕ

**ब्रह्मसूत्रभाष्यम् –**

**'नामानि विश्वाऽभि न सन्ति लोके यदाविरासीदनृतस्य सर्वम् ।**
**नामानि सर्वाणि यमाविशन्ति तं वै विष्णुं परममुदाहरन्ति ।।'**
**इति भाल्लवेयश्रुतेः।।**

'ತನ್ನೋ ರುದ್ರಃ ಪ್ರಚೋದಯಾತ್' ಎಂಬ ರುದ್ರಶ್ರುತಿಯೂ ಇರುವುದರಿಂದ ರುದ್ರಾದಿಗಳು ಏಕೆ ಪ್ರತಿಪಾದ್ಯರಾಗಬಾರದು? ಎಂಬ ಶಂಕೆ ಸರಿಯಲ್ಲ. ರುದ್ರನೆಂದರೆ ವಿಷ್ಣುವೇ ಆಗಿದ್ದಾನೆ. ಸಕಲನಾಮಗಳು ಬೇರೆಯವರಲ್ಲಿ ಮುಖ್ಯವಲ್ಲ. ಏಕೆಂದರೆ 'ವಿಷ್ಣುವಿಗಿಂತ ಅತಿರಿಕ್ತವಾದ ಸಮಸ್ತಜಗತ್ತಿನ ಸೃಷ್ಟ್ಯಾದಿಗಳೆಲ್ಲವೂ ವಿಷ್ಣುವಿನಿಂದಲೇ ಆಗುತ್ತವೆ. ಆದ್ದರಿಂದ ಎಲ್ಲ ಹೆಸರುಗಳು ಯಾರನ್ನು ಪ್ರತಿಪಾದಿಸುತ್ತವೋ ಅಂತಹ ವಿಷ್ಣುವನ್ನೇ ಸರ್ವೋತ್ತಮನೆಂದು ಜ್ಞಾನಿಗಳು ಹೇಳುತ್ತಾರೆ.

'ಅಜಸ್ಯ ನಾಭೌ' ಎಂಬ ಮಂತ್ರವು ವಿಷ್ಣುಪರ

**ब्रह्मसूत्रभाष्यम् –**

**'यो देवानां नामधा एक एव तं सम्प्रश्नं भुवनायन्त्यन्या' इति चैवशब्दात् नचान्येषां सर्वनामता । 'अजस्य नाभावध्येकमर्पितं यस्मिन् विश्वानि भुवनानि तस्थुः' इति तस्य हि लिङ्गम् । न च प्रसिद्धार्थं विनाऽन्यो युज्यते ।।**

**'अजस्य नाभाविति यस्य नाभेरभूच्छ्रुतेः पुष्करं लोकसारम् ।।**
**तस्मै नमो व्यस्तसमस्तविश्वविभूतये विष्णवे लोककर्त्रे' इति स्कान्दे ।**

'ಯಾರು ರುದ್ರಾದಿಸಕಲದೇವತೆಗಳ ಹೆಸರನ್ನು ಧರಿಸಿದ್ದಾನೋ, ಅವನು ಒಬ್ಬನೇ ಆಗಿದ್ದಾನೆ. ಅವನಲ್ಲಿ ಎಲ್ಲ ಲೋಕಗಳೂ ಲಯವನ್ನು ಹೊಂದುತ್ತವೆ' ಎಂಬ ಋಙ್ಮಂತ್ರದಿಂದ ಬ್ರಹ್ಮಾದಿದೇವತೆಗಳು ಸಕಲಶಬ್ದಪ್ರತಿಪಾದ್ಯರಲ್ಲವೆಂದು ತಿಳಿಯುತ್ತದೆ. ಮುಂದಿನ ಋಙ್ಮಂತ್ರ ಹೀಗಿದೆ. 'ಸಕಲಲೋಕಗಳು ಯಾವ ವಸ್ತುವಿನಲ್ಲಿ ಆಶ್ರಯ ಹೊಂದಿವೆಯೋ, ಅವು ಜನನರಹಿತನಾದ ಪರಮಾತ್ಮನ ನಾಭಿಯಲ್ಲಿವೆ' ಎಂದು. ಸಕಲಲೋಕಕ್ಕೆ ಆಧಾರವಾದ ಆ ವಸ್ತು ಕಮಲವೆಂದು ಪ್ರಸಿದ್ಧವಾಗಿದೆ. ಆದ್ದರಿಂದ ಜನನರಹಿತನ ನಾಭಿಯಲ್ಲಿ ಕಮಲ ಬಿಟ್ಟು ಬೇರೆ ವಸ್ತುವು ಇದೆಯೆಂಬ ಸಂದೇಹಕ್ಕೆ ಅವಕಾಶವಿಲ್ಲ.

ಸ್ಕಾಂದಪುರಾಣದಲ್ಲಿ ಹೀಗೆ ಹೇಳಿದೆ - 'ಅಜಸ್ಯ ನಾಭೌ' ಎಂಬ ಶ್ರುತಿಯಲ್ಲಿ ಹೇಳಿದಂತೆ ಯಾರ ನಾಭಿಯಿಂದ ಹದಿನಾಲ್ಕು ಲೋಕಗಳಿಗೆ ಆಶ್ರಯವಾದ ಕಮಲವು ಹುಟ್ಟಿತೋ ಅಂತಹ ಜೀವಜಡಗಳ ಸೃಷ್ಟ್ಯಾದಿಗಳಿಗೆ ಕಾರಣನಾದ ಜಗತ್ತಿಗೆ ಸ್ವಾಮಿಯಾದ ವಿಷ್ಣುವಿಗೆ ನಮಸ್ಕಾರವು. ಇದರಿಂದ ಅಜಸ್ಯ ನಾಭೌ ಎಂಬ ಋಙ್ಮಂತ್ರವು ವಿಷ್ಣುಪರವೆಂದು ನಿರ್ಣಯವಾಗುತ್ತದೆ.

### ವಿಶ್ವಕರ್ಮಸೂಕ್ತದಲ್ಲಿ ವಿಷ್ಣುಸರ್ವೋತ್ತಮತ್ವ ಸ್ಥಾಪನೆ

**ब्रह्मसूत्रभाष्यम् —**

**'परो दिवा पर एना पृथिव्या' इति च समाख्याश्रुतौ ।।**
**'यं कामये तं तमुग्रं कृणोमि तं ब्रह्माणं तमृषिं तं सुमेधाम्', इत्युक्त्वा 'मम योनिरप्स्वान्तःसमुद्रे' इत्याह ।**

ಮತ್ತು ವಿಶ್ವಕರ್ಮಸೂಕ್ತದಲ್ಲಿ ಹೀಗೆ ಹೇಳಿದೆ. 'ಪರೋ ದಿವಾ ಪರ ಯೇನಾ ಪೃಥಿವ್ಯಾ' ಎಂದು ಅದೇ ಋಙ್ಮಂತ್ರದ ಐದನೆಯ ಸೂಕ್ತ . ಅಂಭೃಣೀಸೂಕ್ತದಲ್ಲಿಯೂ ಹೀಗೆ ಹೇಳಿದೆ. 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ....' ಯಾರು ರುದ್ರನಾಗಬೇಕೆಂದು ನಾನು ಬಯಸುತ್ತೇನೋ ಅವನು ರುದ್ರನಾಗುತ್ತಾನೆ. ಬ್ರಹ್ಮನಾಗಬೇಕೆಂದು ಬಯಸಿದರೆ ಬ್ರಹ್ಮನಾಗುತ್ತಾನೆ. ಋಷಿಯಾಗುತ್ತಾನೆ. ಬಹುಮೇಧಾವಿಯೂ ಆಗುತ್ತಾನೆ' ಎಂದು ಬ್ರಹ್ಮಾದಿಗಳೂ ಸಹ ತನ್ನ ಅಧೀನರೆಂದು ಲಕ್ಷ್ಮೀದೇವಿಯು ಹೇಳಿದ್ದಾಳೆ. ಮುಂದೆ ಅಲ್ಲಿಯೇ ಏಳನೆಯ ಮಂತ್ರದಲ್ಲಿ 'ಇಂತಹ ನನಗೂ ಕಾರಣಪುರುಷನಾದವನು ಕ್ಷೀರಸಮುದ್ರಶಯನನಾದ ನಾರಾಯಣನು' ಎಂದು ಹೇಳಿ ಆ ಕ್ಷೀರಸಮುದ್ರಶಾಯಿಯ ಮಹಿಮೆಯನ್ನು 'ಪರೋ ದಿವಾ' ಎಂಬ ಕೊನೆಯ ಮಂತ್ರದಲ್ಲಿ ಹೇಳಿದ್ದಾಳೆ. ಆದ್ದರಿಂದ

'ನಾರಾಯಣಾಯ ವಿದ್ಮಹೇ, ವಾಸುದೇವಾಯ ಧೀಮಹಿ, ತನ್ನೋ ವಿಷ್ಣುಃ ಪ್ರಚೋದಯಾತ್' (ನಮ್ಮೆಲ್ಲರನ್ನೂ ನಿರಂತರವಾಗಿ ಶುಭಕರ್ಮಗಳಲ್ಲಿ ಪ್ರೇರಿಸಲಿ) ಎಂಬ ವಿಷ್ಣುಶ್ರುತಿಯಲ್ಲಿ ವಿಷ್ಣು ಎಂಬ ಶಬ್ದವು ಸ್ಪಷ್ಟವಾಗಿ ಇರುವುದರಿಂದ ಋತ ಸತ್ಯಾದಿಗಳನ್ನು ಹೇಳಿದ ಶ್ರುತಿಯಲ್ಲಿಯೂ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆ.

ಎಲ್ಲಾ ಹೆಸರುಗಳು ಮಹಾವಿಷ್ಣು ಪ್ರತಿಪಾದಕ

**ब्रह्मसूत्रभाष्यम् –**

**'नामानि विश्वाऽभि न सन्ति लोके यदाविरासीदनृतस्य सर्वम् ।**
**नामानि सर्वाणि यमाविशन्ति तं वै विष्णुं परममुदाहरन्ति ।।'**
**इति भाल्लवेयश्रुतेः।।**

'ತನ್ನೋ ರುದ್ರಃ ಪ್ರಚೋದಯಾತ್' ಎಂಬ ರುದ್ರಶ್ರುತಿಯೂ ಇರುವುದರಿಂದ ರುದ್ರಾದಿಗಳು ಏಕೆ ಪ್ರತಿಪಾದ್ಯರಾಗಬಾರದು? ಎಂಬ ಶಂಕೆ ಸರಿಯಲ್ಲ. ರುದ್ರನೆಂದರೆ ವಿಷ್ಣುವೇ ಆಗಿದ್ದಾನೆ. ಸಕಲನಾಮಗಳು ಬೇರೆಯವರಲ್ಲಿ ಮುಖ್ಯವಲ್ಲ. ಏಕೆಂದರೆ 'ವಿಷ್ಣುವಿಗಿಂತ ಅತಿರಿಕ್ತವಾದ ಸಮಸ್ತಜಗತ್ತಿನ ಸೃಷ್ಟ್ಯಾದಿಗಳೆಲ್ಲವೂ ವಿಷ್ಣುವಿನಿಂದಲೇ ಆಗುತ್ತವೆ. ಆದ್ದರಿಂದ ಎಲ್ಲ ಹೆಸರುಗಳು ಯಾರನ್ನು ಪ್ರತಿಪಾದಿಸುತ್ತವೋ ಅಂತಹ ವಿಷ್ಣುವನ್ನೇ ಸರ್ವೋತ್ತಮನೆಂದು ಜ್ಞಾನಿಗಳು ಹೇಳುತ್ತಾರೆ.

'ಅಜಸ್ಯ ನಾಭೌ' ಎಂಬ ಮಂತ್ರವು ವಿಷ್ಣುಪರ

**ब्रह्मसूत्रभाष्यम् –**

**'यो देवानां नामधा एक एव तं सम्प्रश्नं भुवनायन्त्यन्या' इति चैवशब्दात् नचान्येषां सर्वनामता । 'अजस्य नाभावध्येकमर्पितं यस्मिन् विश्वानि भुवनानि तस्थुः' इति तस्य हि लिङ्गम् । न च प्रसिद्धार्थं विनाऽन्यो युज्यते ।।**

**'अजस्य नाभाविति यस्य नाभेरभूच्छुतेः पुष्करं लोकसारम् ।।**
**तस्मै नमो व्यस्तसमस्तविश्वविभूतये विष्णवे लोककर्त्रे' इति स्कान्दे ।**

'ಯಾರು ರುದ್ರಾದಿಸಕಲದೇವತೆಗಳ ಹೆಸರನ್ನು ಧರಿಸಿದ್ದಾನೋ, ಅವನು ಒಬ್ಬನೇ ಆಗಿದ್ದಾನೆ. ಅವನಲ್ಲಿ ಎಲ್ಲ ಲೋಕಗಳೂ ಲಯವನ್ನು ಹೊಂದುತ್ತವೆ' ಎಂಬ ಋಙ್ಮಂತ್ರದಿಂದ ಬ್ರಹ್ಮಾದಿದೇವತೆಗಳು ಸಕಲಶಬ್ದಪ್ರತಿಪಾದ್ಯರಲ್ಲವೆಂದು ತಿಳಿಯುತ್ತದೆ. ಮುಂದಿನ ಋಙ್ಮಂತ್ರ ಹೀಗಿದೆ. 'ಸಕಲಲೋಕಗಳು ಯಾವ ವಸ್ತುವಿನಲ್ಲಿ ಆಶ್ರಯ ಹೊಂದಿವೆಯೋ, ಅವು ಜನನರಹಿತನಾದ ಪರಮಾತ್ಮನ ನಾಭಿಯಲ್ಲಿವೆ' ಎಂದು. ಸಕಲಲೋಕಕ್ಕೆ ಆಧಾರವಾದ ಆ ವಸ್ತು ಕಮಲವೆಂದು ಪ್ರಸಿದ್ಧವಾಗಿದೆ. ಆದ್ದರಿಂದ ಜನನರಹಿತನ ನಾಭಿಯಲ್ಲಿ ಕಮಲ ಬಿಟ್ಟು ಬೇರೆ ವಸ್ತುವು ಇದೆಯೆಂಬ ಸಂದೇಹಕ್ಕೆ ಅವಕಾಶವಿಲ್ಲ.

ಸ್ಕಾಂದಪುರಾಣದಲ್ಲಿ ಹೀಗೆ ಹೇಳಿದೆ - 'ಅಜಸ್ಯ ನಾಭೌ' ಎಂಬ ಶ್ರುತಿಯಲ್ಲಿ ಹೇಳಿದಂತೆ ಯಾರ ನಾಭಿಯಿಂದ ಹದಿನಾಲ್ಕು ಲೋಕಗಳಿಗೆ ಆಶ್ರಯವಾದ ಕಮಲವು ಹುಟ್ಟಿತೋ ಅಂತಹ ಜೀವಜಡಗಳ ಸೃಷ್ಟ್ಯಾದಿಗಳಿಗೆ ಕಾರಣನಾದ ಜಗತ್ತಿಗೆ ಸ್ವಾಮಿಯಾದ ವಿಷ್ಣುವಿಗೆ ನಮಸ್ಕಾರವು. ಇದರಿಂದ ಅಜಸ್ಯ ನಾಭೌ ಎಂಬ ಋಙ್ಮಂತ್ರವು ವಿಷ್ಣುಪರವೆಂದು ನಿರ್ಣಯವಾಗುತ್ತದೆ.

### ವಿಶ್ವಕರ್ಮಸೂಕ್ತದಲ್ಲಿ ವಿಷ್ಣುಸರ್ವೋತ್ತಮತ್ವ ಸ್ಥಾಪನೆ

**ब्रह्मसूत्रभाष्यम् –**

**'परो दिवा पर एना पृथिव्या' इति च समाख्याश्रुतौ ॥**
**'यं कामये तं तमुग्रं कृणोमि तं ब्रह्माणं तमृषिं तं सुमेधाम्', इत्युक्त्वा**
**'मम योनिरप्स्वान्तःसमुद्रे' इत्याह ।**

ಮತ್ತು ವಿಶ್ವಕರ್ಮಸೂಕ್ತದಲ್ಲಿ ಹೀಗೆ ಹೇಳಿದೆ. 'ಪರೋ ದಿವಾ ಪರ ಯೇನಾ ಪೃಥಿವ್ಯಾ' ಎಂದು ಅದೇ ಋಙ್ಮಂತ್ರದ ಐದನೆಯ ಸೂಕ್ತ . ಅಂಭೃಣೀಸೂಕ್ತದಲ್ಲಿಯೂ ಹೀಗೆ ಹೇಳಿದೆ. 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ....' ಯಾರು ರುದ್ರನಾಗಬೇಕೆಂದು ನಾನು ಬಯಸುತ್ತೇನೋ ಅವನು ರುದ್ರನಾಗುತ್ತಾನೆ. ಬ್ರಹ್ಮನಾಗಬೇಕೆಂದು ಬಯಸಿದರೆ ಬ್ರಹ್ಮನಾಗುತ್ತಾನೆ. ಋಷಿಯಾಗುತ್ತಾನೆ. ಬಹುಮೇಧಾವಿಯೂ ಆಗುತ್ತಾನೆ' ಎಂದು ಬ್ರಹ್ಮಾದಿಗಳೂ ಸಹ ತನ್ನ ಅಧೀನರೆಂದು ಲಕ್ಷ್ಮೀದೇವಿಯು ಹೇಳಿದ್ದಾಳೆ. ಮುಂದೆ ಅಲ್ಲಿಯೇ ಏಳನೆಯ ಮಂತ್ರದಲ್ಲಿ 'ಇಂತಹ ನನಗೂ ಕಾರಣಪುರುಷನಾದವನು ಕ್ಷೀರಸಮುದ್ರಶಯನನಾದ ನಾರಾಯಣನು' ಎಂದು ಹೇಳಿ ಆ ಕ್ಷೀರಸಮುದ್ರಶಾಯಿಯ ಮಹಿಮೆಯನ್ನು 'ಪರೋ ದಿವಾ' ಎಂಬ ಕೊನೆಯ ಮಂತ್ರದಲ್ಲಿ ಹೇಳಿದ್ದಾಳೆ. ಆದ್ದರಿಂದ

ಋಙ್ಮಂತ್ರದಲ್ಲಿರುವ ಮಂತ್ರಗಳಿಂದ ಪ್ರತಿಪಾದ್ಯನಾದವನು ಬ್ರಹ್ಮಾದಿಗಳಿಗಿಂತಲೂ ಉತ್ತಮನಾದ ವಿಷ್ಣುವೇ ಆಗಿದ್ದಾನೆ.

(ಓದುಗರ ಅನುಕೂಲಕ್ಕಾಗಿ ಸಂಪೂರ್ಣವಾದ ಅಂಭ್ರಿಣೀಸೂಕ್ತದ ಅರ್ಥವನ್ನು ನೀಡಲಾಗಿದೆ.)

ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವದೇವೈಃ ।
ಅಹಂ ಮಿತ್ರಾವರುಣೋಭಾ ಬಿಭರ್ಮ್ಯಹಮಿಂದ್ರಾಗ್ನೀ ಅಹಮಶ್ವಿನೋಭಾ ॥

ಏಕಾದಶರುದ್ರರ ಜೊತೆ ನಿಯಮನ ಮಾಡುತ್ತಾ ಅವರ ಜೊತೆ ಸಂಚರಿಸುವೆ. ಎಂಟುಮಂದಿ ವಸುಗಳ ಜೊತೆ ಇದ್ದು, ಅವರನ್ನು ನಿಯಮನ ಮಾಡುತ್ತಾ ಸಂಚರಿಸುವೆ. ಹನ್ನೊಂದುಮಂದಿ ಆದಿತ್ಯರ ಜೊತೆ, ಹತ್ತುಮಂದಿ ವಿಶ್ವೇದೇವರ ಜೊತೆ ನೆಲಸಿ, ಅವರನ್ನು ನಿಯಮನ ಮಾಡುತ್ತಾ ಸಂಚರಿಸುವೆ. ಹಗಲು ಮತ್ತು ರಾತ್ರಿಯ ದೇವತೆಗಳಾದ ಮಿತ್ರಾವರುಣರನ್ನು ಹೊತ್ತು ಸಲಹುವೆ. ಇಂದ್ರನನ್ನು ಮತ್ತು ಅಗ್ನಿಯನ್ನು ಮತ್ತು ನಾಸತ್ಯದಸ್ರರೆಂಬ ಅಶ್ವಿನಿದೇವತೆಗಳಲ್ಲಿ ನಾನೇ ನೆಲಸಿ ಆಯಾ ಕಾರ್ಯಗಳನ್ನು ಮಾಡಿಸುವೆ.

ಅಹಂ ಸೋಮಮಾ ಹನಸಂ ಬಿಭರ್ಮ್ಯಹಂ ತ್ವಷ್ಟಾರಮುತ ಪೂಷಣಂ ಭಗಮ್ ।
ಅಹಂ ದಧಾಮಿ ಹವಿಷ್ಮತೇ ಸುಪ್ರಾವ್ಯೇ ಯಜಮಾನಾಯ ಸುನ್ವತೇ ॥

ನಾನು ಚಂದ್ರನನ್ನು ಮತ್ತು ಮುಖ್ಯಪ್ರಾಣನನ್ನು ಧರಿಸಿದ್ದೇನೆ. ನಾನು ವೇದಾಭಿಮಾನಿಯಾದ ಗರುಡನನ್ನು ಮತ್ತು ವೇದಗಳಿಗೆ ಪೋಷಣೆ ನೀಡುವ ಶೇಷನನ್ನು ದೇಹಾಭಿಮಾನಿಯಾದ ರುದ್ರನನ್ನು ಧರಿಸಿದ್ದೇನೆ. ಯಾವ ಯಜಮಾನನು ಸೋಮರಸವನ್ನು ಅರ್ಪಣೆ ಮಾಡುವ ಮೂಲಕ ತೃಪ್ತಿಪಡಿಸುತ್ತಾನೋ ಅವನಿಗೆ ಅಪಾರವಾದ ಸಂಪತ್ತನ್ನು ನೀಡುತ್ತೇನೆ

ಅಹಂ ರಾಷ್ಟ್ರೀ ಸಂಗಮನೀ ವಸೂನಾಂ ಚಿಕಿತುಷೀ ಪ್ರಥಮಾ ಯಜ್ಞಿಯನಾಮ್ ।
ತಾಂ ಮಾ ದೇವಾ ವ್ಯದಧುಃ ಪುರುತ್ರಾ ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್॥

ನಾನು ಈ ಸಮಗ್ರ ವಿಶ್ವಕ್ಕೆ ನಿಯಾಮಕನು. ಎಲ್ಲಾ ಸಂಪತ್ತುಗಳನ್ನು ತಿಳಿದವಳು. ಮತ್ತು ನೀಡುವವಳು. ಈ ಸಮಸ್ತ ಜಗತ್ತಿನ ಮೊದಲು ಇದ್ದವಳು. ಒಂದೊಂದು ಕಡೆ ಒಂದೊಂದು ವಿಧವಾದ ರೂಪವನ್ನು ತಾಳಿದವಳು. ಇಂಥ ನನ್ನನ್ನು ವಿಧವಿಧವಾಗಿ ಭಕ್ತರು ಅನುಸಂಧಾನ ಮಾಡುವರು. ಜೀವ-ಜಡ ಪ್ರಪಂಚದಲ್ಲಿ ಆವಿಷ್ಟಳಾಗಿ ಎಲ್ಲವನ್ನೂ ಪ್ರೇರಣೆ ಮಾಡುವವಳು.

ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ ಯಃ ಪ್ರಾಣಿತಿ ಯ ಈಂ ಶ್ರುಣೋತ್ಯುಕ್ತಮ್।
ಆಮಂತವೋ ಮಾಂ ತ ಉಪಕ್ಷಿಯಂತಿ ಶ್ರುಧಿ ಶ್ರುತ ಶ್ರದ್ಧಿವಂತೇ ವದಾಮಿ ॥

ಜಗತ್ತಿನಲ್ಲಿರುವ ಪ್ರತಿಯೊಬ್ಬರೂ ನಾನು ನೀಡುವ ಅನ್ನವನ್ನೇ ತಿನ್ನುವರು. ನನ್ನಿಂದಲೇ ಬಗೆಬಗೆಯ ನೋಟಗಳನ್ನು ನೋಡುವರು. ಉಸಿರಾಟವೂ ಕೂಡ ನನ್ನಿಂದಲೇ, ಕೇಳುವುದೂ ಕೂಡ ನನ್ನಿಂದಲೇ. ನನ್ನನ್ನು ತಿಳಿಯದ ಕಿಡಿಗೇಡಿಗಳು ಜೀವನದಲ್ಲಿ ದುಃಖಿಕ್ಕೀಡಾಗುವರು. ಬಹಳಷ್ಟು ಕೇಳಿ ತಿಳಿದ ಜ್ಞಾನಿಯೇ ! ನಾನು ಹೇಳುತ್ತಿರುವ ಈ ವಿಷಯಗಳನ್ನು ಶ್ರದ್ಧೆಯಿಂದ ತಿಳಿದುಕೋ. ರಹಸ್ಯವನ್ನು ನಿನಗೆ ಹೇಳುತ್ತಿರುವೆನು.

ಅಹಮೇವ ಸ್ವಯಮಿದಂ ವದಾಮಿ ಜುಷ್ಟಂ ದೇವೇಭಿರುತ ಮಾನುಷೇಭಿಃ ।
ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ
ಸುಮೇಧಾಮ್ ॥೧॥

ಸ್ವತಃ ನಾನೇ ದೇವತೆಗಳಿಗೆ ಹಾಗೂ ಮನುಷ್ಯರಿಗೆ ಹೇಳುತ್ತಿದ್ದೇನೆ - ನಾನು ಯಾರನ್ನು ರುದ್ರಪದವಿಯಲ್ಲಿ ಕೂಡಿಸಬೇಕೆಂದು ಬಯಸುವೆನೋ, ಅವನಿಗೆ ರುದ್ರಪದವಿಯನ್ನು ನೀಡಬಲ್ಲೆ. ಯಾರಿಗೆ ಬ್ರಹ್ಮಪದವಿಯನ್ನು ನೀಡಬೇಕೆಂದು ಬಯಸುವೆನೋ, ಅವನಿಗೆ ಬ್ರಹ್ಮಪದವಿಯನ್ನು ನೀಡುವೆ. ಯಾರನ್ನು ಬೇಕಾದರೂ ಋಷಿಯನ್ನಾಗಿ ಮಾಡಬಲ್ಲೆ. ಯಾರನ್ನೂ ಬೇಕಾದರೂ ಮೇಧಾವಿಯನ್ನಾಗಿ ಮಾಡಬಲ್ಲೆ.

ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ ।
ಅಹಂ ಜನಾಯ ಸಮದಂ ಕೃಣೋಮ್ಯಹಂ ದ್ಯಾವಾಪೃಥಿವೀ ಆವಿವೇಶ ॥

ಚತುರ್ಮುಖನ ಐದನೆಯ ತಲೆಯನ್ನು ತೆಗೆದ ಸಂಹಾರಕನಾದ ರುದ್ರನನ್ನು ಕೊಲ್ಲಲು ಬಿಲ್ಲನ್ನು ಅಣಿಗೊಳಿಸುವೆ. ಸಜ್ಜನರಿಗೆ ಆನಂದಮಯವಾದ ಮೋಕ್ಷವನ್ನು ದಯಪಾಲಿಸುವೆ. ಸ್ವರ್ಗ, ಭೂಮಿಗಳಲ್ಲಿ ವ್ಯಾಪಿಸಿ ನಿಂತಿರುವೆ.

ಅಹಂ ಸುವೇ ಪಿತರಮಸ್ಯ ಮೂರ್ಧನ್ಮಮ ಯೋನಿರಪ್ಸ್ವಂತಃ ಸಮುದ್ರೇ ।
ತತೋ ವಿತಿಷ್ಠೇ ಭುವನಾನು ವಿಶ್ವೋತಾಮೂಂದ್ಯಾಂ ವರ್ಷ್ಮಣೋಪಸ್ಪೃಶಾಮಿ ॥

ನಾನು ಜಗತ್ತಿಗೆ ತಂದೆಯಾದ ಚತುರ್ಮುಖನನ್ನು ತಲೆಯಿಂದ ಹುಟ್ಟಿಸಿದೆ. (ಬೈತಲೆಯಿಂದ ಹುಟ್ಟಿಸಿದೆ) ನನಗೆ ಇಷ್ಟೆಲ್ಲಾ ಶಕ್ತಿಯು ಬರಲು ಮುಖ್ಯಕಾರಣ. ನೀರಿನ ಒಳಗಡೆ ಮಲಗಿರುವ

ನಾರಾಯಣನು. ಅವನಿಂದ ನಾನು ಈ ಎಲ್ಲಾ ಲೋಕಗಳಲ್ಲಿ ವ್ಯಾಪಿಸಿ ನಿಂತಿರುವೆ. ಮೇಲಿರುವ ದಿವ್ಯಲೋಕವನ್ನೂ ಕೂಡ ಬೆಳೆದು ವ್ಯಾಪಿಸಿರುವೆ.

ಅಹಮೇವ ವಾತ ಇವ ಪ್ರವಾಮ್ಯಾರಭಮಾಣಾ ಭುವನಾನಿ ವಿಶ್ವಾ।
ಪರೋ ದಿವಾ ಪರ ಏನಾ ಪೃಥಿವ್ಯೈ ತಾವತೀ ಮಹಿನಾ ಸಂಬಭೂವ ॥

ಸ್ವತಃ ನಾನೇ ಮುಖ್ಯಪ್ರಾಣನಲ್ಲಿ ನಿಂತು ಗಾಳಿಯಂತೆ ಬೀಸುತ್ತೇನೆ. ಸಮಗ್ರ ವಿಶ್ವವನ್ನು ನಿರ್ಮಿಸುವೆ. ಎಲ್ಲಾ ಲೋಕಗಳನ್ನು ಮೀರಿ, ಈ ಭೂಮಿಯನ್ನು ಮೀರಿ ನಿಂತಿರುವವಳು ನಾನು. ಇಂಥ ಮಹಿಮೆಯಿಂದ ಕೂಡಿದವಳು ನಾನು.

## ಬ್ರಹ್ಮಸೂತ್ರಭಾಷ್ಯ

**ब्रह्मसूत्रभाष्यम् –**

**उग्रो रुद्रः । समुद्रेऽन्तर्नारायणः। प्रसिद्धत्वात् सूचितत्वाच्चास्यार्थस्य । न चाविरोधे प्रसिद्धः परित्यज्यते । उक्तन्यायेन च श्रुतय एतमेव वदन्ति ।**

ಅಂಭ್ರಿಣೀಸೂಕ್ತದಲ್ಲಿ ಲಕ್ಷ್ಮೀದೇವಿಯ ಅಧೀನರೆಂದು ಹೇಳಲ್ಪಟ್ಟ ಉಗ್ರನೆಂದರೆ ರುದ್ರನೇ ಆಗುತ್ತಾನೆ. ಸಮುದ್ರಸ್ಥನಾದವನು ನಾರಾಯಣನೇ ಆಗಿದ್ದಾನೆ; ವಿಷ್ಣುಸಹಸ್ರನಾಮದಲ್ಲಿ 'ಮಹೋದಧಿಶಯೋಽಂತಕಃ' ಎಂದು ಹೇಳಲಾಗಿದೆ. ಮತ್ತು ನಾರಾಯಣಶಬ್ದದಲ್ಲಿಯೇ ನೀರು ಯಾರಿಗೆ ಆಶ್ರಯವಾಗಿದೆಯೋ? ಎಂಬರ್ಥವು ಸೂಚಿತವಾಗಿದೆ. ವಿರೋಧವಿಲ್ಲದಿದ್ದಾಗ ಆಯಾ ಶಬ್ದಗಳ ಪ್ರಸಿದ್ಧಾರ್ಥವನ್ನು ಬಿಡಬಾರದು.

**ब्रह्मसूत्रभाष्यम् –**

**'वेदे रामायणे चैव पुराणे भारते तथा ।**
**आदावन्ते च मध्ये च विष्णुः सर्वत्र गीयते' इति हरिवंशेषु ।।**

ಮೇಲೆ ಹೇಳಿದ ಯುಕ್ತಿಗಳಿಂದ ಸಕಲವೇದಗಳು ನಾರಾಯಣನಾದ ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಮತ್ತು 'ವೇದಗಳಲ್ಲಿ ಮೂಲರಾಮಾಯಣದಲ್ಲಿ ಅಷ್ಟಾದಶಪುರಾಣಗಳಲ್ಲಿ ಮತ್ತು ಮಹಾಭಾರತದಲ್ಲಿಯೂ ಆರಂಭ ಮಧ್ಯ ಕೊನೆಯಲ್ಲಿ ಪರಮಾತ್ಮನೇ ಪ್ರತಿಪಾದ್ಯನಾಗಿದ್ದಾನೆ' ಎಂದು ಹರಿವಂಶದ ಭಾಗತ್ರಯಗಳಲ್ಲಿ ಹೇಳಲ್ಪಟ್ಟಿದೆ.

## ತತ್ವಪ್ರದೀಪ

### ಬ್ರಹ್ಮಶಬ್ದವು ಮಹಾವಿಷ್ಣು ಪ್ರತಿಪಾದಕ

**तत्वप्रदीपः – ब्रह्मशब्दश्च विष्णावेवेत्यादेरयमर्थः ।**

**''सप्तार्धगर्भा भुवनस्य रेतो विष्णोस्तिष्ठन्ति प्रदिशा विधर्मणि ।।''**
**''ऋचोऽक्षरे परमे व्योमन् यस्मिन्देवा अधि विश्वे निषेदुः ।''**
**''अहं सुवे पितरमस्य मूर्धन्मम योनिरप्स्वन्तस्समुद्रे ।''**
**''समुद्रेऽन्तः कवयो विचक्षते मरीचीनां पदमिच्छन्ति वेधसः''।**

**इत्यैतरेयुश्रुत्यदितं विष्णुमेव हि ''अम्भस्यपारे भुवनस्य मध्य'' इत्याद्या तैत्तिरीयश्रुतिः, ''यस्मिन्देवा अधि विश्वे निषेदुः'', ''यमन्तः समुद्रे कवयोऽवयन्ति'', ''यत प्रसूता जगतः प्रसीति'' इति यच्छब्दैः परामृश्य ''विवेश भूतानि चराचराणि'' इति विष्णुशब्दयोगेन चानूद्य ''तदेव ब्रह्म'' इत्याह ।। ''तन्नो विष्णुः'' इति च स्पष्टं जगौ ।**

ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಪ್ರಸಿದ್ಧವಾಗಿದೆ ಎಂದು ಭಾಷ್ಯದಲ್ಲಿ ಹೇಳಿದ್ದಾರೆ ಇದರ ಅಭಿಪ್ರಾಯ ಹೀಗಿದೆ -

ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ ॥
ಋಚೋಽಕ್ಷರೇ ಪರಮೇ ವ್ಯೋಮನ್ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ ।
ಅಹಂ ಸುವೇ ಪಿತರಮಸ್ಯ ಮೂರ್ಧನ್ ಮಮ ಯೋನಿರಪ್ಸ್ವಂತಸ್ಸಮುದ್ರೇ ।
ಸಮುದ್ರೇಽಂತಃ ಕವಯೋ ವಿಚಕ್ಷತೇ ಮರೀಚೀನಾಂ ಪದಮಿಚ್ಛಂತಿ ವೇಧಸಃ ।

ಹೀಗೆ ಐತರೇಯಶ್ರುತಿಯಲ್ಲಿ ಯಾವ ವಿಷ್ಣುವನ್ನು ಹೇಳುತ್ತಿದೆಯೋ ಆ ವಿಷ್ಣುವೇ 'ಅಂಭಸ್ಯ ಪಾರೇ ಭುವನಸ್ಯ ಮಧ್ಯೇ' ಇತ್ಯಾದಿ ತೈತ್ತಿರೀಯಶ್ರುತಿಯಿಂದ ಪ್ರತಿಪಾದ್ಯನಾಗಿದ್ದಾನೆ. ಇಂಥ ವಿಷ್ಣುವನ್ನೇ 'ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ' 'ಯಮಂತಃ ಸಮುದ್ರೇ

ಕವಯೋಽವಯಂತಿ', 'ಯತ ಪ್ರಸೂತಾ ಜಗತಃ ಪ್ರಸೂತೀ' ಇವೇ ಮೊದಲಾದ ಶ್ರುತಿಗಳಲ್ಲಿ 'ಯತ್' ಎಂಬ ಶಬ್ದದಿಂದ ಪರಾಮರ್ಶ ಮಾಡಿ 'ವಿವೇಶ ಭೂತಾನಿ ಚರಾಚರಾಣೀ' ಎಂಬ ಶ್ರುತಿಯಿಂದ ವಿಷ್ಣುಶಬ್ದದ ಯೋಗಾರ್ಥವನ್ನು ಅನುವಾದ ಮಾಡಿ 'ತದೇವ ಬ್ರಹ್ಮ' ಎಂಬುದಾಗಿ ಹೇಳಲಾಗಿದೆ. ಈ ಎಲ್ಲ ಶ್ರುತಿಗಳನ್ನು ಮೊದಲಿನಿಂದ ಕೊನೆಯ ತನಕ ಅವಲೋಕಿಸಿದಾಗ ಮಹಾವಿಷ್ಣುವೇ ಬ್ರಹ್ಮ ಶಬ್ದದಿಂದ ಪ್ರತಿಪಾದ್ಯನೆಂಬುದು ಸ್ಪಷ್ಟವಾಗುತ್ತದೆ. ಮತ್ತು 'ತನ್ನೋ ವಿಷ್ಣುಃ' ಎಂಬ ಶ್ರುತಿಯು ಸ್ಪಷ್ಟವಾಗಿಯೇ ವಿಷ್ಣುವನ್ನು ಬ್ರಹ್ಮನೆಂದು ಹೇಳುತ್ತಿದೆ.

### ದೈವೀಮೀಮಾಂಸಾಶಾಸ್ತ್ರದ ಆಧಾರ

**तत्वप्रदीपः – यश्च देवतामीमांसान्ते ''विष्णुरेव हि तत् श्रुतेः'' ''तं ब्रह्मेत्याचक्षते तं ब्रह्मेत्याचक्षते'' इति सर्वदेवोत्तमत्वेन प्रतिज्ञातो ब्रह्मत्वेन चोक्तः, स एव ब्रह्मशब्देनोत्तरमीमांसायां विचार्यत्वेनोच्यते ।**

ವಿಷ್ಣುವೇ ಬ್ರಹ್ಮನೆಂಬುದಕ್ಕೆ ಮತ್ತೊಂದು ಪ್ರಬಲವಾದ ಕಾರಣವಿದೆ. ಬ್ರಹ್ಮಮೀಮಾಂಸಾ-ಗ್ರಂಥದ ಪೂರ್ವಶಾಸ್ತ್ರ ದೈವೀಮೀಮಾಂಸವಾಗಿದೆ. ಈ ದೈವೀಮೀಮಾಂಸಶಾಸ್ತ್ರದ ಕೊನೆಯ ಸೂತ್ರದಲ್ಲಿ 'ವಿಷ್ಣುರೇವ ಹಿ ತತ್ ಶ್ರುತೇಃ' 'ತಂ ಬ್ರಹ್ಮೇತ್ಯಾಚಕ್ಷತೇ ತಂ ಬ್ರಹ್ಮೇತ್ಯಾಚಕ್ಷತೇ' ಎಂಬುದಾಗಿ ವಿಷ್ಣುವನ್ನೇ ಬ್ರಹ್ಮ ಎನ್ನುತ್ತಾರೆಂದು ಹೇಳಲಾಗಿದೆ. ಸಕಲ ದೇವತೆಗಳಿಗಿಂತ ಉತ್ತಮನಾದ ವಿಷ್ಣುವೇ ಬ್ರಹ್ಮನಾಗಿದ್ದಾನೆಂದು ಹಿಂದಿನ ಶಾಸ್ತ್ರದ ಕೊನೆಯ ಸೂತ್ರಗಳಲ್ಲಿ ಹೇಳಿ ಮುಂದಿನ ಬ್ರಹ್ಮಮೀಮಾಂಸಾಶಾಸ್ತ್ರದ ಪ್ರಾರಂಭದಲ್ಲಿ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಹೇಳಿದಾಗ ವಿಷ್ಣುವೇ ಬ್ರಹ್ಮನೆಂಬುದು ಸ್ಪಷ್ಟವಾಗುತ್ತದೆ. ಹಿಂದೆ ಪ್ರಸಕ್ತವಾದ ವಿಷ್ಣುವೇ ಇಲ್ಲಿಯೂ ಸಹ ಬ್ರಹ್ಮ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ ಹೊರತು ಬೇರೆಯವರು ಪ್ರತಿಪಾದ್ಯರಾಗುವುದಿಲ್ಲ.

## ಬ್ರಹ್ಮಸೂತ್ರಭಾಷ್ಯ

### ವೈಷ್ಣವಶಾಸ್ತ್ರಗಳಿಗೆ ಶೈವಶಾಸ್ತ್ರಗಳ ವಿರೋಧವಿಲ್ಲ

**ब्रह्मसूत्रभाष्यम् – न चेतरग्रन्थविरोधः ।**

**'एष मोहं सृजाम्याशु यो जनान् मोहयिष्यति ।**
**त्वं च रुद्र महाबाहो मोहशास्त्राणि कारय ।।**
**अतथ्यानि वितथ्यानि दर्शयस्व महाभुज ।**
**प्रकाशं कुरु चात्मानमप्रकाशं च मां कुरु'इति वाराहवचनात् ।।**

**शैवे च स्कान्दे–**

**'श्वपचादपि कष्टत्वं ब्रह्मेशानादयः सुराः ।**
**तदैवाच्युत यान्त्येव यदैव त्वं पराङ्मुखः' इति ।।**

**ब्राह्मे च ब्रह्मवैवर्ते–**

**'नाहं न च शिवोऽन्ये च तच्छक्त्येकांशभागिनः ।**
**बालः क्रीडनकैर्यद्वत् क्रीडतेऽस्माभिरच्युतः' इति ।।**

**न च वैष्णवेषु तथा । तच्च 'एष मोहम्' इत्युक्तम् ।।**

**।। इति श्रीमदानन्दतीर्थभगवत्पादाचार्यविरचिते ब्रह्मसूत्रभाष್ये जिज्ञासाधिकरणम् ।।**

ಅನುವಾದ - ಈ ವಿಚಾರದಲ್ಲಿ ಬೇರೆ ಶೈವಾದಿಗ್ರಂಥಗಳ ವಿರೋಧವಿರುವುದಿಲ್ಲ.

ಏಕೆಂದರೆ ''ಎಲೈ ರುದ್ರನೇ! ನಾನು ಭಕ್ತರಲ್ಲದ ಜನರನ್ನು ಮೋಹಿಸುವುದಕ್ಕಾಗಿ ನಟನೆ ಮಾಡುತ್ತೇನೆ. ಮೋಹಕವಾದ ಮಾತುಗಳನ್ನಾಡುತ್ತೇನೆ. ನೀನೂ ಸಹ ಅನ್ಯಥಾಜ್ಞಾನವನ್ನು

ಉಂಟುಮಾಡುವ ಶಾಸ್ತ್ರಗಳನ್ನು ರಚನೆ ಮಾಡು; ಇತರ ಋಷಿಗಳಿಂದಲೂ ಅಂತಹ ಮೋಹಯುಕ್ತವಾದ ಶಾಸ್ತ್ರಗಳನ್ನು ರಚನೆ ಮಾಡಿಸು; ಸುಳ್ಳು ವಿಷಯಗಳನ್ನು ಪರಸ್ಪರ ವಿರುದ್ಧವಿಷಯಗಳನ್ನು ಆ ಶಾಸ್ತ್ರಗಳಲ್ಲಿ ತೋರಿಸು. ನಿನ್ನನ್ನು ಸರ್ವೋತ್ತಮನೆಂದು ನಿರೂಪಿಸು. ನನ್ನನ್ನು ಅಸಮರ್ಥನೆಂದು ಮರೆಮಾಚು'' ಎಂದು ವರಾಹಪುರಾಣದಲ್ಲಿ ಹೇಳಲಾಗಿದೆ.

ಶೈವಪುರಾಣ ಹಾಗೂ ಸ್ಕಾಂದಪುರಾಣಗಳಲ್ಲಿ ಹೀಗೆ ಹೇಳಿದೆ -- ಎಲೈ ನಾಶವಿಲ್ಲದ ವಿಷ್ಣುವೇ! ಯಾವ ಕ್ಷಣದಲ್ಲಿ ನಿನ್ನ ಅನುಗ್ರಹ ತಪ್ಪುತ್ತದೋ ಅದೇ ಕ್ಷಣದಲ್ಲಿಯೇ ಚತುರ್ಮುಖಬ್ರಹ್ಮ, ರುದ್ರ, ಇಂದ್ರ ಮೊದಲಾದ ದೇವತೆಗಳೂ ಸಹ ನಾಯಿಯನ್ನು ಬೇಯಿಸಿ ತಿನ್ನುವ ನಿರ್ಭಾಗ್ಯಶಾಲಿಗಿಂತಲೂ ಕಷ್ಟಸ್ಥಿತಿಯನ್ನು ನಿಶ್ಚಯವಾಗಿ ಹೊಂದುತ್ತಾರೆ'. ಎಂದು.

ಬ್ರಹ್ಮಪುರಾಣದಲ್ಲಿ ಮತ್ತು ಬ್ರಹ್ಮವೈವರ್ತಪುರಾಣದಲ್ಲಿಯೂ ''ಚತುರ್ಮುಖನಾದ ನಾನು, ರುದ್ರನೂ, ಮತ್ತು ಇತರ ಯಾರೇ ದೇವತೆಗಳಾಗಲೀ ಶ್ರೀಹರಿಯ ಅನಂತಶಕ್ತಿಯಲ್ಲಿ ಒಂದು ಶಕ್ತಿಯ ಅಂಶಕ್ಕೂ ಅರ್ಹರಲ್ಲ. ಆದರೂ ಬಾಲಕನು ಆಟದ ಸಾಮಗ್ರಿಗಳಿಂದ ಹೇಗೆ ಆಟವಾಡುತ್ತಾನೋ ಅದರಂತೆ ನಾಶರಹಿತನಾದ ಪರಮಾತ್ಮನು ನಮ್ಮೆಲ್ಲರ ಜೊತೆ ಆಟವಾಡುತ್ತಾನೆ'' ಎಂದು ಹೇಳಿರುವುದರಿಂದ ವೈಷ್ಣವಶಾಸ್ತ್ರಗಳಿಗೆ ಶೈವಶಾಸ್ತ್ರಗಳಿಂದ ವಿರೋಧವಿಲ್ಲ. ವೈಷ್ಣವಶಾಸ್ತ್ರಗಳಲ್ಲಿಯೂ ಪರಸ್ಪರವಿರೋಧಕ್ಕೆ ಅವಕಾಶವಿಲ್ಲ. ಕೆಲವೆಡೆ ಅಂತಹ ಪ್ರಸಂಗವಿದ್ದರೂ ಹಿಂದೆ ಹೇಳಿದಂತೆ ಅಯೋಗ್ಯಜನರನ್ನು ಮೋಹಪಡಿಸುವುದಕ್ಕಾಗಿ ಹೇಳಿದ ಮಾತು ಎಂದು ಈ ಹಿಂದೆಯೇ ಹೇಳಿದ್ದಾಗಿದೆ.

ಇಲ್ಲಿಗೆ ಶ್ರೀಮದಾಚಾರ್ಯರು ರಚಿಸಿದ ಬ್ರಹ್ಮಸೂತ್ರಭಾಷ್ಯದಲ್ಲಿ
ಜಿಜ್ಞಾಸಾಧಿಕರಣದ ಭಾವಾರ್ಥವು ಸಮಾಪ್ತವಾಯಿತು.

## ಸತ್ತರ್ಕದೀಪಾವಳಿ

### ಮೋಹಶಾಸ್ತ್ರ ಬರೆಯಲು ರುದ್ರನಿಗೆ ವಿಷ್ಣುವಿನ ಆದೇಶ

**सत्तर्कदीपावळिः –**

**नच वेदरामायणादिभिः विष्णुरेव सर्वोत्तमतया प्रतिपाद्यते चेत् पाशुपतादिग्रन्थैर्विरोधः तैस्तु रुद्रादेरेव सर्वैश्वर्यादितयेरणादिति वाच्यम् ।**

लोकव्यामोहनार्थं विष्णुनियुक्तरुद्रकृतत्वेनोक्तत्वात् तेषां वराहपुराणे । तदाह – न चेति ।। मुह्यति तथ्यमिति प्रतिपादितानीत्यर्थः । तथाच पाद्मे । 'आगमैः कल्पितैस्त्वंच जनान् मद्विमुखान् कुरु' इति ।

ननु वैष्णवेष्वेव पुराणेषु विष्णोः सर्वोत्तमत्वप्रतिपादनं नान्यत्रेत्यत आह । शैव इति । अतः शिवादेः सर्वोत्तमत्वप्रतिपादनं शैवपुराणेषु मोहार्थमेवेति मन्तव्यम् । न तु तद्वद्वैष्णवेषु विष्ण्वन्यस्य सर्वोत्तमत्व-प्रतिपादनमस्ति । यत्र क्वचित्सन्दिग्धमिव दृश्यते तदेष मोहं सृजामि इत्यत्र मोहार्थत्वेन परिहृतमित्यर्थः । (१।१।१)

।। इति श्रीपद्मनाभभट्टारकविरचितायां सत्तर्कदीपावळ्यां जिज्ञासाधिकरणम् ।।

'ವೇದರಾಮಾಯಣಾದಿಗಳಿಂದ ವಿಷ್ಣುವೇ ಸರ್ವೋತ್ತಮನೆಂದು ಪ್ರತಿಪಾದಿಸಿದರೆ ಪಾಶುಪತಾದಿಗ್ರಂಥಗಳ ವಿರೋಧ ಬರುತ್ತದೆ. ಪಾಶುಪತಾದಿಗ್ರಂಥಗಳಲ್ಲಿ ರುದ್ರಾದಿಗಳಿಗಷ್ಟೆ ಸರ್ವೋತ್ತಮತ್ವವನ್ನು ಪ್ರತಿಪಾದಿಸಿದ್ದಾರೆ' ಎಂದು ಹೇಳಬಾರದು. ಲೋಕವ್ಯಾಮೋಹಕ್ಕೋಸ್ಕರ ಭಗವಂತನಿಂದ ಆದಿಷ್ಟನಾದ ರುದ್ರದೇವರೇ ಹಾಗೆ ತಮಗೆ ಸರ್ವೋತ್ತಮತ್ವವನ್ನು ಪಾಶುಪತಾದಿ-ಶಾಸ್ತ್ರಗಳಲ್ಲಿ ಹೇಳಿಕೊಂಡಿರುತ್ತಾರೆ ಈ ವಿಷಯದಲ್ಲಿ ವರಾಹಪುರಾಣವೇ ಆಧಾರ. ಇದನ್ನು 'ನಚ' ಎಂಬ ಭಾಷ್ಯದಿಂದ ಸಮರ್ಥಿಸಿದ್ದಾರೆ. ಇದನ್ನೇ ಪದ್ಮಪುರಾಣದಲ್ಲಿಯೂ ಹೀಗೆ ಹೇಳಿದ್ದಾರೆ. 'ಆಗಮೈಃ ಕಲ್ಪಿತೈಃ ತ್ವಂ ಚ ಜನಾನ್ ಮದ್ವಿಮುಖಾನ್ ಕುರು' ಎಂದು.

ಕೇವಲ ವೈಷ್ಣವಪುರಾಣಗಳಲ್ಲಷ್ಟೇ ವಿಷ್ಣುವನ್ನು ಸರ್ವೋತ್ತಮ ಎನ್ನಲಾಗಿದೆ. ಬೇರೆ ಪುರಾಣಗಳಲ್ಲಿ ಹೇಳಿಲ್ಲವೆಂಬ ಪ್ರಶ್ನೆಗೆ 'ಶೈವೇ ಚ' ಎಂದು ಉತ್ತರಿಸಿದ್ದಾರೆ. ಶೈವ ಪುರಾಣಗಳಲ್ಲಿ ಶಿವಸರ್ವೋತ್ತಮತ್ವವು ಹೇಳಲ್ಪಟ್ಟಿದ್ದರೂ ಅದು ಕೇವಲ ಮೋಹಕ್ಕೋಸ್ಕರ. ಅದರಂತೆ ವೈಷ್ಣವಪುರಾಣಗಳಲ್ಲಿಯೂ ವಿಷ್ಣುಸರ್ವೋತ್ತಮತ್ವವು ಮೋಹಕ್ಕೋಸ್ಕರವೆಂದು ಏಕೆ ಹೇಳಬಾರದು?

ಎಂದು ಪ್ರಶ್ನಿಸಬಾರದು. ಎಲ್ಲಿ ಸಂದೇಹಕ್ಕೆ ಅವಕಾಶವಿರುತ್ತದೋ ಅಲ್ಲಿ ಮಾತ್ರ 'ಏಷ ಮೋಹಂ ಸೃಜಾಮಿ' ಎಂಬ ವಾಕ್ಯದಂತೆ ಉತ್ತರವನ್ನು ನೀಡಿ ವಿರೋಧವನ್ನು ಪರಿಹರಿಸಬೇಕು.

ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ
ಸತ್ತರ್ಕದೀಪಾವಳಿಯ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

## ತತ್ವಪ್ರದೀಪ

### ಬ್ರಹ್ಮಶಬ್ದದಿಂದ ಅಗ್ನ್ಯಾದಿಗಳು ಪ್ರತಿಪಾದ್ಯರು

**तत्वप्रदीपः – न चेतरशब्दात्तत्प्राप्तिः । न च ''तदेवाग्निस्तद्वायस्तद् चन्द्रमा'' इत्यादिशब्दात् तत्रतत्र रुद्रादिशब्दाच्च तेषां ब्रह्मत्वप्राप्तिः । विश्वानि नामानि लोकेऽभितो न सन्ति मुख्यतो न सन्ति, न मुख्यतो लोकवाचकानि। किन्तु यतो विष्णोरस्य जगतोऽनृतस्य जन्मलयादिकं सर्वमाविरासीत्, यश्च वाचकत्वेन नामानि 'आ' समन्तात् विशन्ति तं विष्णुमुत्तमं वदन्ति ।।**

'ನ ಚ ಇತರ ಶಬ್ದಾತ್ ತತ್‌ಪ್ರಾಪ್ತಿಃ' ಎಂಬ ಭಾಷ್ಯದ ಅಭಿಪ್ರಾಯ ಹೀಗಿದೆ - 'ತದೇವಾಗ್ನಿಸ್ತದ್ವಾಯುಸ್ತದು ಚಂದ್ರಮಾಃ' ಇತ್ಯಾದಿಯಾಗಿ ಅಗ್ನಿ, ವಾಯು, ಚಂದ್ರ ಮೊದಲಾದ ಶಬ್ದಗಳೂ ಕೂಡ ಅದೇ ಶ್ರುತಿಯ ಪ್ರಕರಣದಲ್ಲಿ ಕೇಳಿಸುತ್ತಿವೆ. ಆದ್ದರಿಂದ ಅಗ್ನಿ, ರುದ್ರ ಮೊದಲಾದವರೂ ಕೂಡ ಬ್ರಹ್ಮ ಶಬ್ದದಿಂದ ಪ್ರತಿಪಾದ್ಯರಾಗಬಹುದಲ್ಲವೆ ? ಎಂಬ ಪ್ರಶ್ನೆಗೆ 'ನ ಚ ಇತರಶಬ್ದಾತ್ ತತ್‌ಪ್ರಾಪ್ತಿಃ' ಎಂದು ಉತ್ತರಿಸುತ್ತಿದ್ದಾರೆ. ಅಗ್ನಿ, ರುದ್ರ ಮೊದಲಾದ ಶಬ್ದಗಳೆಲ್ಲವೂ ವಿಷ್ಣುವಾಚಕವೇ ಆಗಿವೆ. ಇತರ ದೇವತಾವಾಚಕವಾಗಿರುವುದಿಲ್ಲ. ಏಕೆಂದರೆ 'ನಾಮಾನಿ ವಿಶ್ವಾನಿ ನ ಸಂತಿ ಲೋಕೇ' ಎಂಬ ಶ್ರುತಿಯು ಸಕಲ ಶಬ್ದಗಳು ಪರಮಾತ್ಮವಾಚಕವಾಗಿವೆಯೆಂದು ಹೇಳುತ್ತವೆ ಶ್ರುತ್ಯರ್ಥ ಹೀಗಿದೆ -

ವಿಶ್ವಾನಿ = ಎಲ್ಲಾ ವಿಧವಾದ, ನಾಮಾನಿ = ನಾಮಗಳು, ಲೋಕೇ = ಲೋಕದಲ್ಲಿ, ಅಭಿ = ಮುಖ್ಯವಾಗಿ, ನ ಸಂತಿ = ಪ್ರತಿಪಾದ್ಯ-

ವಾಗುವುದಿಲ್ಲ. ಮತ್ತೇನೆಂದರೆ, ಯದಾ = ಯಾವಾಗ, ಆವಿರಾಸೀತ್ = ಶಬ್ದಗಳು ಹೊರಹೊಮ್ಮಿದವೋ, ಸರ್ವಂ = ಆ ಎಲ್ಲ ಶಬ್ದಗಳು, ವಿಷ್ಣೋಃ = ವಿಷ್ಣುವಿನಿಂದ, ಅಸ್ಯ = ಪ್ರತ್ಯಕ್ಷಸಿದ್ಧವಾದ, ಜಗತ್ತಿನ ಅನೃತಸ್ಯ = ಜನ್ಮ, ಲಯಾದಿಗಳು, ಸರ್ವಂ = ಎಲ್ಲವೂ, ಆವಿರಾಸೀತ್ = ನಡೆಯುತ್ತವೋ, ಯಂ ಚ = ಯಾವ ವಿಷ್ಣುವನ್ನು, ನಾಮಾನಿ ಸರ್ವಾಣಿ = ಸಕಲ ನಾಮಾತ್ಮಕವಾದ ಶಬ್ದಗಳು ವಾಚಕವಾಗಿ, ಆ = ಮುಖ್ಯವಾಗಿ ವಿಶಂತಿ = ಪ್ರತಿಪಾದನೆ ಮಾಡುತ್ತವೋ, ತಂ ವಿಷ್ಣುಂ = ಆ ವಿಷ್ಣುವನ್ನು, ಪರಮಂ = ಸರ್ವೋತ್ತಮನೆಂದು, ವದಂತಿ = ಹೇಳುತ್ತಾರೆ.

'ಅನೃತಸ್ಯ' ಎಂಬುದರ ವ್ಯಾಖ್ಯಾನ

**तत्वप्रदीपः –**

**''ऋगताविति‌धातोस्तु पूर्वावगतवत् सदा ।**
**स्थितेर्ब्रह्मर्तमित्युक्तमनृतं परिणामतः ।।**
**प्रकृतिप्राकृतं प्रोक्तमसत् तदशुभत्वतः ।**
**असतां बुद्धिगम्यत्वादसत्यमिति चोच्यते ।।'' इति व्यासस्मृतिः ।**

'ಅನೃತಸ್ಯ' ಎಂಬ ಪದಕ್ಕೆ ಜಗತ್ತಿನ ಸೃಷ್ಟಿ-ಸ್ಥಿತ್ಯಾದಿಗಳೆಂದು ಅರ್ಥೈಸಲಾಯಿತು. ಈ ವಿಷಯದಲ್ಲಿ ವ್ಯಾಸ ಸ್ಮೃತಿಯ ಆಧಾರವಿದೆ -

ಋಗಾತಾವಿತಿಧಾತೋಸ್ತು ಪೂರ್ವಾವಗತವತ್ ಸದಾ
ಸ್ಥಿತೇರ್ಬ್ರಹ್ಮರ್ತಮಿತ್ಯುಕ್ತಮನೃತಂ ಪರಿಣಾಮತಃ ।।
ಪ್ರಕೃತಿಪ್ರಾಕೃತಂ ಪ್ರೋಕ್ತಮಸತ್ ತದಶುಭತ್ವತಃ ।
ಅಸತಾಂ ಬುದ್ಧಿಗಮ್ಯತ್ವಾದಸತ್ಯಮಿತಿ ಚೋಚ್ಯತೇ ।।

'ತದೇವರ್ತಂ' ಇತ್ಯಾದಿ ಶ್ರುತಿಗಳಲ್ಲಿ ಪರಮಾತ್ಮನನ್ನು 'ಋತ' ಎಂದು ಕರೆಯಲಾಗಿದೆ. ಈ ಋತ ಶಬ್ದಕ್ಕೆ ಸತ್ಯ ಎಂಬರ್ಥವನ್ನು ವಿವಕ್ಷಿಸಬಾರದು. ಇದರಂತೆ 'ಅನೃತೇನ ಹಿ ಪ್ರತ್ಯೂಢಾಃ' ಇತ್ಯಾದಿ ಶ್ರುತಿಗಳಲ್ಲಿ 'ಅನೃತ' ಎಂಬ ಪದಕ್ಕೆ ಸುಳ್ಳು ಎಂದರ್ಥವಲ್ಲ. ಋತ ಎಂಬ ಶಬ್ದವು

'ಋಗತೌ' ಎಂಬ ಧಾತುವಿನ ಮೇಲೆ 'ಕ್ತ' ಪ್ರತ್ಯಯ ಬಂದು ನಿಷ್ಪನ್ನವಾಗಿದೆ. ಗತ್ಯರ್ಥಕವಾದ ಧಾತುಗಳು ಜ್ಞಾನಾರ್ಥವನ್ನು ನೀಡುತ್ತವೆ. ಆದ್ದರಿಂದ ಅನಾದಿಕಾಲದಿಂದಲೂ ಮುಖ್ಯವಾಗಿ ತಿಳಿಯಲ್ಪಡುವವನಾದ್ದರಿಂದ ಪರಮಾತ್ಮನಿಗೆ 'ಋತ' ಎಂದು ಹೆಸರು. 'ಕ್ತ' ಪ್ರತ್ಯಯವು ಭೂತಕಾಲವನ್ನು ಮಾತ್ರ ಹೇಳುತ್ತದೆ. ಅವಧಿಯನ್ನು ಹೇಳುವುದಿಲ್ಲ. ಆದ್ದರಿಂದ ಅನಾದಿಕಾಲದಿಂದ ತಿಳಿಯಲ್ಪಡುವವನು ಎಂದು ಸಿದ್ಧವಾಗುತ್ತದೆ.

ಪ್ರಕೃತಿಯು ನಿರಂತರವಾಗಿ ಪರಿಣಾಮ ಹೊಂದುವ ಪದಾರ್ಥವಾಗಿದೆ. ಆದ್ದರಿಂದ ಅನಾದಿಕಾಲದಿಂದ ಏಕರೂಪವಾಗಿ ತಿಳಿಯಲು ಯೋಗ್ಯವಾಗಿಲ್ಲ. ಆದ್ದರಿಂದ ಪರಮಾತ್ಮನಂತೆ ಅದು ಋತವಲ್ಲ, ಅನೃತವಾಗಿದೆ. ಹೀಗೆ ಪರಮಾತ್ಮನು 'ಋತ'ಶಬ್ದದಿಂದ, ಪ್ರಕೃತಿಯು 'ಅನೃತ'ಶಬ್ದದಿಂದ ಶ್ರುತಿಗಳಲ್ಲಿ ಪ್ರತಿಪಾದ್ಯವಾಗಿದೆ.

ಪ್ರಕೃತಿ ಹಾಗೂ ಪ್ರಾಕೃತ ಪದಾರ್ಥಗಳು ಸಂಸಾರದಲ್ಲಿ ದುಃಖಕಾರಣವಾಗಿವೆ. ಆದ್ದರಿಂದಲೇ ಅಶುಭವಾದ್ದರಿಂದ 'ಅಸತ್' ಎಂದು ಕರೆಸಿಕೊಳ್ಳುತ್ತವೆ. ದುರ್ಜನರ ಮನಸ್ಸಿನಿಂದ ಆಕರ್ಷಿತ-ವಾದ್ದರಿಂದಲೂ ಪ್ರಾಕೃತ ಪದಾರ್ಥಗಳು 'ಅಸತ್' ಎಂದು ಕರೆಸಿಕೊಳ್ಳುತ್ತವೆ. ಪರಮಾತ್ಮನು ಸಂಸಾರದಲ್ಲಿ ಆನಂದದಾಯಕನಾದ್ದರಿಂದ ಮತ್ತು ಸಜ್ಜನರ ಮನಸ್ಸಿನಿಂದ ಆಕರ್ಷಿತನಾದ್ದರಿಂದಲೂ 'ಸತ್' ಎಂದು ಕರೆಸಿಕೊಳ್ಳುವನು.

### ಎಲ್ಲಾ ಶಬ್ದಗಳು ಹರಿನಾಮಗಳು

**तत्वप्रदीपः – ''एतेषां वेदानामेतेषां देवानामेतेषां कालानामेतासां नाडीनामन्यस्य च सर्वस्य यानि नामानि तानि नारायणस्य नामानि'' इति नारायणश्रुतिः ।**

'ಏತೇಷಾಂ ವೇದಾನಾಮೇತೇಷಾಂ ದೇವಾನಾಮೇತೇಷಾಂ ಕಾಲಾನಾಮೇತಾಸಾಂ ನಾಡೀನಾಮನ್ಯಸ್ಯ ಚ ಸರ್ವಸ್ಯ ಯಾನಿ ನಾಮಾನಿ ತಾನಿ ನಾರಾಯಣಸ್ಯ ನಾಮಾನಿ' ಸಕಲವೇದಗಳು ಸಕಲದೇವತಾವಾಚಕವಾದ ಪದಗಳು, ಸಕಲ ಕಾಲವಾಚಕವಾದ ಪದಗಳು, ಸಕಲನಾಡಿವಾಚಕವಾದ ಪದಗಳು, ನಾರಾಯಣನ ಹೆಸರುಗಳೇ ಆಗಿವೆ. ಹೀಗೆ ನಾರಾಯಣಶ್ರುತಿಯು ಹೇಳುತ್ತಿದೆ -

## ಪ್ರಸಿದ್ಧಾರ್ಥ ಬಿಡಬಾರದು

**तत्वप्रदीपः – नच प्रसिद्धार्थं विनाऽन्यो युज्यत इति । न च नाभ्यर्पितमेकं विश्वाधारभूतं पद्मादन्यद्युज्यते । नच नाभिपद्मवान्नारायणात् प्रसिद्धादन्यो युज्यते । अश्रुतकल्पनाप्रसङ्गात् । समस्तविश्वविभूतयो येन व्यस्ताः स 'व्यस्तसमस्तविश्वविभूतिः' अथवा व्यस्तास्समस्ताश्च विश्वविभूतयो येन ।**

'ನ ಚ ಪ್ರಸಿದ್ಧಾರ್ಥಂ ವಿನಾ ಅನ್ಯಾರ್ಥೋ ಯಜ್ಯತ ಇತಿ' ಎಂಬ ಭಾಷ್ಯದ ಅಭಿಪ್ರಾಯ ಹೀಗಿದೆ - ನಾಭಿಯಲ್ಲಿ ಇರುವ ಸಮಸ್ತ ವಿಶ್ವಕ್ಕೆ ಆಧಾರವಾದ ವಸ್ತು ಪದ್ಮವೇ ಹೊರತು ಮತ್ತೊಂದಲ್ಲ ನಾಭಿಯಲ್ಲಿ ಪದ್ಮವುಳ್ಳವನು ನಾರಾಯಣನೆಂದೇ ಪ್ರಸಿದ್ಧಿಯಿದೆ. ಇವನಿಗಿಂತ ಭಿನ್ನನಾದ ಮತ್ತೊಬ್ಬನು ಪದ್ಮನಾಭನಾಗಲು ಸಾಧ್ಯವಿಲ್ಲ. ಹಾಗೆ ಹೇಳಿದರೆ ಅಶ್ರುತಕಲ್ಪನಾದೋಷ ಬರುತ್ತದೆ. 'ವ್ಯಸ್ತಸಮಸ್ತವಿಶ್ವವಿಭೂತಯೇ' ಎಂಬುದಕ್ಕೆ ಎರಡರ್ಥ - 'ಸಮಸ್ತವಿಶ್ವವಿಭೂತಯಃ ಯೇನ ವ್ಯಸ್ತಾಃ ಸಃ ವ್ಯಸ್ತಮಸ್ತವಿಶ್ವವಿಭೂತಿಃ' ಎಂಬುದು ಒಂದು ಬಗೆಯ ಸಮಾಸ. 'ವ್ಯಸ್ತಾಃ ಸಮಸ್ತಾಶ್ಚ ವ್ಯಸ್ತಸಮಸ್ತಾಃ, ವ್ಯಸ್ತಸಮಸ್ತಾಃ ವಿಶ್ವವಿಭೂತಯಃ ಯೇನ ಸಃ ವ್ಯಸ್ತಸಮಸ್ತ ವಿಶ್ವವಿಭೂತಿಃ' ಎಂಬುದು ಮತ್ತೊಂದು ಬಗೆಯ ಸಮಾಸ. ಮೊದಲನೆಯ ಸಮಾಸದಲ್ಲಿ ಸಮಸ್ತವಾದ ಜಗತ್ತಿನ ಸೃಷ್ಟ್ಯಾದಿಗಳು ಯಾರಿಂದ ನಡೆಯುತ್ತವೆಯೋ ಅವನು ವ್ಯಸ್ತ-ಸಮಸ್ತ-ವಿಶ್ವ-ವಿಭೂತಿಯಾಗಿದ್ದಾನೆ ಎಂದರ್ಥ. ಎರಡನೆಯ ಸಮಾಸದಲ್ಲಿ ವ್ಯಸ್ತವಾದ ಹಾಗೂ ಸಮಸ್ತವಾದ ಸೃಷ್ಟ್ಯಾದ್ಯಷ್ಟಕಗಳು ಯಾರಿಂದ ನಡೆಯುತ್ತವೆಯೋ ಅವನು ವ್ಯಸ್ತ-ಸಮಸ್ತವಿಶ್ವವಿಭೂತಿ ಆಗಿದ್ದಾನೆ ಎಂದರ್ಥ. ಎರಡನೆಯ ಸಮಾಸ ಮಾಡಿದಾಗ 'ವ್ಯಸ್ತ' ಶಬ್ದಕ್ಕೆ ಸೃಷ್ಟ್ಯಾದ್ಯಷ್ಟಕಗಳಲ್ಲಿ ಸೃಷ್ಟಿ-ಸ್ಥಿತಿ ಸಂಹಾರಗಳು ಮಾತ್ರ ವಿವಕ್ಷಿತವಾಗುತ್ತವೆ. 'ಸಮಸ್ತ' ಎಂಬ ಪದದಿಂದ ಸೃಷ್ಟ್ಯಾದ್ಯಷ್ಟಕಗಳು ವಿವಕ್ಷಿತವಾಗುತ್ತವೆ.

## ಅಂಭ್ರಿಣೀ ಸೂಕ್ತವ್ಯಾಖ್ಯಾನ

**तत्वप्रदीपः – परो दिवेत्यादेरयमर्थः इतश्चैतस्मिन्सूक्ते विष्णुरेवोच्यते। इह हि द्यावापृथिव्योः पर इत्याख्या श्रूयते । श्रीसूक्ते चैतयाऽऽख्यया समाख्या**

**श्रूयते । तत्र हि ''यं कामये तं तमुग्रं कृणोमि तं ब्रह्माणं तमृषिं तं सुमेधाम्'' इति ब्रह्मादीनां देव्यधीनत्वमुक्त्वा ''मम योनिरप्स्वन्तः समुद्रे'' इति तस्य विष्ण्वधीनत्ववचनेन विष्णोः सर्वोत्तमत्वं प्रतिपाद्यते ।**

**'परो दिवा' इति पञ्चम्यर्थे तृतीया । द्यावापृथिव्योः श्रीभूम्योः परः समुद्रशायी । अहम् 'एतावती' यथोक्तप्रकारा महिम्ना नाधिकेति । नचाविरोधे प्रसिद्धः परित्यज्यते, श्रुतहानिप्रसङ्गात् । उक्तन्यायेन चेति । प्रत्यधिकरणं वक्ष्यमाणैश्च न्यायैरित्यर्थः ।**

'ಪರೋ ದಿವಾ' ಇತ್ಯಾದಿ ಶ್ರುತಿಯ ಅರ್ಥ ಹೀಗಿದೆ - ಮತ್ತೊಂದು ಕಾರಣದಿಂದಲೂ ತೈತ್ತಿರೀಯದಲ್ಲಿ ಪ್ರತಿಪಾದ್ಯನಾದವನು ಮಹಾವಿಷ್ಣುವೇ ಆಗಿದ್ದಾನೆಂದು ಹೇಳುತ್ತಿದ್ದಾರೆ. 'ಪರೋ ದಿವಾ' ಎಂಬ ಶ್ರುತಿಯಲ್ಲಿ ದ್ಯಾವಾಪೃಥಿವೀಗಳಿಗಿಂತ ಸರ್ವೋತ್ತಮನಾದವನೆಂದು ಹೇಳಲಾಗಿದೆ. ಶ್ರೀಸೂಕ್ತದಲ್ಲಿ ಹೇಳಿದ ಮಾತು ಸಮಾನವಾದ ಅರ್ಥವುಳ್ಳದ್ದಾಗಿದೆ. 'ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ' ಏನನ್ನು ಮಾಡಲು ಬಯಸುವೆನೊ ಅದನ್ನು ಸೃಷ್ಟಿ ಮಾಡುವೆ. ರುದ್ರನನ್ನು, ಬ್ರಹ್ಮನನ್ನು, ಋಷಿಯನ್ನು, ಜ್ಞಾನಿಯನ್ನು ಎಲ್ಲರನ್ನು ಸೃಷ್ಟಿ ಮಾಡುವ ಶಕ್ತಿ ನನಗಿದೆ. ಬ್ರಹ್ಮಾದಿಗಳು ಲಕ್ಷ್ಮಿಯ ಅಧೀನವೆಂದು ತಿಳಿಯುತ್ತದೆ. 'ಮಮ ಯೋನಿರಪ್ಸ್ವಂತಃಸಮುದ್ರೇ' ಎಂಬ ಶ್ರುತಿಯಲ್ಲಿ ಇಂಥ ಸಾಮರ್ಥ್ಯವುಳ್ಳ ಕಾರಣನಾದ ನಾರಾಯಣನು ಸಮುದ್ರದಲ್ಲಿ ಮಲಗಿದ್ದಾನೆಂದು ಲಕ್ಷ್ಮಿಯು ಹೇಳಿದ್ದಾಳೆ. ಇದರಿಂದ ವಿಷ್ಣುಸರ್ವೋತ್ತಮತ್ವವು ಪ್ರತಿಪಾದಿತವಾಗುತ್ತದೆ. 'ಪರೋ ದಿವಾ' ಎಂಬ ಶ್ರುತಿಯಲ್ಲಿರುವ ಪಂಚಮಿವಿಭಕ್ತಿಯ ಅರ್ಥದಲ್ಲಿ ತೃತೀಯಾವಿಭಕ್ತಿಯು ಇದೆ. ದ್ಯಾವಾಪೃಥಿವಿಗಳಿಗಿಂತ ಮತ್ತು ಶ್ರೀದೇವಿ-ಭೂದೇವಿಯರಿಗಿಂತಲೂ ಉತ್ತಮನಾದವನು ಸಮುದ್ರಶಾಯಿಯಾದ ನಾರಾಯಣ-ನಾಗಿದ್ದಾನೆಂದು ತಿಳಿಯಬೇಕು. 'ಏತಾವತೀ' ಎಂಬುದಾಗಿ ಶ್ರುತಿಯಲ್ಲಿ 'ನನಗೆ ಇಷ್ಟೇ ಮಹಿಮೆ, ಹೊರತು ಇದಕ್ಕಿಂತ ಹೆಚ್ಚಿನ ಮಹಿಮೆ ಇರುವುದಿಲ್ಲ' ಎಂದು ಲಕ್ಷ್ಮಿಯು ಹೇಳಿದ್ದಾಳೆ. ಯಾವುದೇ ವಿರೋಧ ಬಾರದಿದ್ದಾಗ ಪ್ರಸಿದ್ಧಾರ್ಥವನ್ನು ಪರಿತ್ಯಾಗ ಮಾಡಬಾರದು. ಹಾಗಾದಲ್ಲಿ ಶ್ರುತಹಾನದೋಷವು ಪ್ರಾಪ್ತವಾಗುತ್ತದೆ.

'ಉಕ್ತನ್ಯಾಯೇನ ಚ' ಎಂಬುದಾಗಿ ಭಾಷ್ಯದಲ್ಲಿ 'ಹಿಂದೆ ಹೇಳಿದ ಯುಕ್ತಿಗಳಿಂದ' ಎಂದಿದ್ದಾರೆ ಇದರ ಜೊತೆಗೆ 'ಮುಂದೆ ಪ್ರತಿಯೊಂದು ಅಧಿಕರಣದಲ್ಲಿ ಸಮರ್ಥಿಸುವ ನ್ಯಾಯಗಳಿಂದಲೂ ಕೂಡ' ಎಂಬುದನ್ನು ಉಪಲಕ್ಷಣಯಾ ವಿವಕ್ಷಿಸಬೇಕು.

### ಮೋಹಶಾಸ್ತ್ರ ಬರೆದವರು ರುದ್ರದೇವರು

**तत्वप्रदीपः – न च पाशुपतादिग्रन्थैर्विरोधः । तेषां मोहनार्थं सृष्टत्वात् । एष मोहं सृजामीति । मोहकारणं सृजामीति, जनानामनादिकर्मवासनानुरूपमिति यावत् । अतो न मोहशास्त्रवक्ता विष्णुराशङ्कनीयः । ''अजस्यावक्रचेतसः'' इति हि श्रुतिः । ''निरनिष्टो निरवद्यः'' इति च । त्वं च मोहशास्त्राणि कुरु अन्यैश्च कारय । अतथ्यानि अविद्यमानानि लिङ्गमूलमार्गणादीनि । वितथ्यानि ततो विगतत्वे सति तथ्यानि स्रष्टृत्वादीनि।**

ವಿಷ್ಣುಸರ್ವೋತ್ತಮತ್ವ ಪ್ರತಿಪಾದಕವಾದ ಶ್ರುತಿಗಳಿಗೆ ಪಾಶುಪತಾದಿಶ್ರುತಿಗಳಿಂದ ವಿರೋಧ ಬರುವುದಿಲ್ಲ. ಏಕೆಂದರೆ ಪಾಶುಪತಾದಿಶಾಸ್ತ್ರಗಳು ಅಸುರಜನಮೋಹನಕ್ಕೋಸ್ಕರ ರಚಿಸಲ್ಪಟ್ಟಿವೆ. ಈ ವಿಷಯದಲ್ಲಿ 'ಏಷ ಮೋಹಂ ಸೃಜಾಮಿ' ಎಂಬ ವರಾಹಪುರಾಣದ ಮಾತು ಆಧಾರವಾಗಿದೆ. 'ಮೋಹಂ' ಎಂಬ ಪದಕ್ಕೆ 'ಮೋಹಕಾರಣವಾದ ಗ್ರಂಥಗಳನ್ನು' ಎಂದರ್ಥ. ಮೋಹಶಾಸ್ತ್ರಗಳನ್ನು ರುದ್ರದೇವರು ಏಕೆ ರಚನೆ ಮಾಡಿದರೆಂದರೆ ಅನೇಕ ಜೀವರ ಅನಾದಿಕರ್ಮವಾಸನೆಗೆ ಅನುಗುಣವಾಗಿ ಮೋಹಶಾಸ್ತ್ರಗಳನ್ನು ರಚನೆ ಮಾಡಿದರು. ರುದ್ರದೇವರು ಮೋಹಶಾಸ್ತ್ರಗಳನ್ನು ರಚನೆ ಮಾಡಿರುವುದರಿಂದ ಮಹಾವಿಷ್ಣುವು ಮೋಹಶಾಸ್ತ್ರವನ್ನು ರಚನೆ ಮಾಡಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಮೋಹಶಾಸ್ತ್ರಗಳನ್ನು ರಚನೆ ಮಾಡಿದವನು ಮಹಾವಿಷ್ಣುವೆಂದು ಸರ್ವಥಾ ತಿಳಿಯಬಾರದು. 'ಅಜಸ್ಯಾವಕ್ರಚೇತಸಃ' 'ನಿರನಿಷ್ಟೋ ನಿರವದ್ಯಃ' ಇವೇ ಮೊದಲಾದ ಶ್ರುತಿಗಳು ಮೋಹಕವಾದ ಮಾತುಗಳನ್ನು ಮಹಾವಿಷ್ಣುವು ಎಂದೂ ಆಡುವುದಿಲ್ಲವೆಂದು ಹೇಳುತ್ತಿವೆ. 'ಮೋಹಶಾಸ್ತ್ರಾಣಿ ಕಾರಯ' ಎಂಬುದಕ್ಕೆ - 'ನೀನು ಮೋಹವನ್ನು ಉಂಟುಮಾಡುವ ಶಾಸ್ತ್ರಗಳನ್ನು ರಚನೆ ಮಾಡು ಮತ್ತು ಬೇರೆಯವರ ಮೂಲಕವೂ ಅಂಥ ಶಾಸ್ತ್ರಗಳನ್ನು ರಚನೆ ಮಾಡಿಸು' ಎಂದರ್ಥ. 'ಅತಥ್ಯಾನಿ' ಎಂಬುದಕ್ಕೆ 'ಅವಿದ್ಯಮಾನವಾದ ಕಥೆಗಳನ್ನು ಪುರಾಣಗಳಲ್ಲಿ

ಸೇರಿಸು' ಎಂದರ್ಥ. ವಿಷ್ಣು ಹಾಗೂ ಬ್ರಹ್ಮರು, ರುದ್ರನ ಲಿಂಗಮೂಲದ ಅನ್ವೇಷಣೆಯಲ್ಲಿ ತೊಡಗಿದ ಕಥೆಯು ಪುರಾಣದಲ್ಲಿ ಬರುತ್ತದೆ. ಇದು ಸುಳ್ಳು ಕಥೆಯೆಂದು ತಿಳಿಯಬೇಕು. 'ವಿತಥ್ಯಾನಿ' ಎಂಬ ಪದಕ್ಕೆ ವ್ಯಧಿಕರಣವಾಗಿ ಹೇಳಿದ ಪ್ರಮೇಯಗಳು ಎಂದರ್ಥ ಸರ್ವೋತ್ತಮತ್ವವನ್ನು ವಿಷ್ಣುವಿನಲ್ಲಿ ಹೇಳದೆ ವ್ಯಧಿಕರಣವಾಗಿ ರುದ್ರಾದಿಗಳಲ್ಲಿ ಹೇಳಿದರೆ 'ವಿತಥ್ಯ' ಎಂದು ಕರೆಸಿಕೊಳ್ಳುತ್ತದೆ.

### ಶೈವಪುರಾಣದಲ್ಲಿ ಶಿವಸರ್ವೋತ್ತಮತ್ವ ಹೇಳಿಲ್ಲ

**तत्वप्रदीपः – न च शैवादिपुराणविरोधोऽपीत्याह – शैवे चेति । यदि च शैवादिपुराणानां शिवाद्युत्तमत्वे तात्पर्यमिष्यते, तर्हि पूर्वापरविरोधादप्रामाण्यं स्यात् । तेष्वपि विष्णोः सर्वोत्तमत्वप्रतिपादनात् ।**

ಶೈವಾದಿಪುರಾಣಗಳ ವಿರೋಧವೂ ಕೂಡ ವಿಷ್ಣುಸರ್ವೋತ್ತಮತ್ವ ವಿಷಯದಲ್ಲಿ ಬರುವುದಿಲ್ಲವೆಂದು 'ಶೈವೇ ಚ' ಇತ್ಯಾದಿಯಾಗಿ ಹೇಳುತ್ತಿದ್ದಾರೆ. ಒಂದುವೇಳೆ ಶೈವಾದಿ ಪುರಾಣಗಳಿಗೆ ಶಿವಸರ್ವೋತ್ತಮತ್ವದಲ್ಲಿ ತಾತ್ಪರ್ಯವನ್ನು ಒಪ್ಪಿದರೆ ಪೌರ್ವಾಪರ್ಯದ ವಿರೋಧದಿಂದ ಅವುಗಳಿಗೆ ಅಪ್ರಾಮಾಣ್ಯವು ಬರಬೇಕಾದೀತು. ಏಕೆಂದರೆ ಶೈವಾದಿ ಪುರಾಣಗಳಲ್ಲಿಯೂ ವಿಷ್ಣುಸರ್ವೋತ್ತಮತ್ವದ ಪ್ರತಿಪಾದನೆ ಇರುತ್ತದೆ.

### ಅದು ದರ್ಶನಭಾಷೆ

**तत्वप्रदीपः – तस्मात् पाशुपतादिपरिकल्पितशिवाद्युत्तमत्वपरिपाटी पूर्वपक्षो दर्शनभाषया तेषूपन्यस्यत इत्यभिप्रायः । न च वैष्णवेषु पुराणेषु तथा विष्णोरन्यस्योत्तमत्वमुक्तम् ।**

ಆದ್ದರಿಂದ ಪಾಶುಪತಾದಿ ಶಾಸ್ತ್ರಗಳಿಂದ ಶಿವಸರ್ವೋತ್ತಮತ್ವವು ಪ್ರತಿಪಾದನೆ ಮಾಡಲ್ಪಟ್ಟಿದೆ ಎಂಬ ಯಾವ ಪರಿಕಲ್ಪನೆ ಇದೆಯೋ ಅಂಥ ಪೂರ್ವಪಕ್ಷವು ಕೇವಲ ದರ್ಶನಭಾಷೆಯಲ್ಲಿ ಹೇಳಲ್ಪಟ್ಟಿರುತ್ತದೆ. ಆದರೆ ವೈಷ್ಣವ ಪುರಾಣಗಳಲ್ಲಿ ವಿಷ್ಣುವನ್ನು ಬಿಟ್ಟು ಮತ್ತೊಬ್ಬರಿಗೆ ಸರ್ವೋತ್ತಮತ್ವವನ್ನು ಸರ್ವಥಾ ಹೇಳಿರುವುದಿಲ್ಲ.

### ವೈಷ್ಣವ ಪುರಾಣಗಳಲ್ಲಿ ಎಲ್ಲಿಯೂ ಶಿವಸರ್ವೋತ್ತಮತ್ವವಿಲ್ಲ

**तत्वप्रदीपः – यदिच यत्रक्वापि कस्यचित् समत्वादिकमुक्तमिव प्रतिभाति तद् बुद्धिकालुष्यात् पूर्वपक्षसिद्धान्तविभागापरिज्ञानादित्युक्तम् । तदेतदाह – तच्चैष मोहमित्युक्तमिति ।।**

**।। इति जिज्ञासाधिकरणम् ।।**

ಒಂದುವೇಳೆ ವೈಷ್ಣವಪುರಾಣಗಳಲ್ಲಿಯೂ ಶಿವಸರ್ವೋತ್ತಮತ್ವಕ್ಕೆ ಉಪಪಾದಕವಾದ ಯಾವುದಾದರೊಂದು ಮಾತುಗಳು ಕಂಡಿದೆ ಎಂದರೆ ಅದು ಕೇವಲ ಓದುವವನ ಬುದ್ಧಿಯ ಕಾಲುಷ್ಯದಿಂದ ಹುಟ್ಟಿದ ಜ್ಞಾನ ಮತ್ತು ಪೂರ್ವಪಕ್ಷ ಸಿದ್ಧಾಂತಗಳ ವಿಭಾಗದ ಅಪರಿಜ್ಞಾನದಿಂದ ಬಂದಿರುವ ಜ್ಞಾನ ಎಂಬುದು ಭಾಷ್ಯದ ಅಭಿಪ್ರಾಯವಾಗಿದೆ. ಇದನ್ನೇ 'ಏಷ ಮೋಹಂ' ಎಂಬುದರಿಂದ ಹೇಳಿರುತ್ತಾರೆ.

ಇಲ್ಲಿಗೆ ತತ್ವಪ್ರದೀಪದ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಮುಗಿಯಿತು.

* * * *

ತಂತ್ರದೀಪಿಕೆಯಲ್ಲಿ ಪ್ರಥಮಸೂತ್ರಾರ್ಥ

।। श्रीः ।।

**श्रीराघवेन्द्रतीर्थविरचिता**

# तन्त्रदीपिका

प्रणम्य गुणसम्पूर्णं दोषातीतं रमापतिम् ।
पूर्णबोधं गुरूनन्यान् कुर्मः सूत्रार्थसङ्ग्रहम् ।। १ ।।

ಪರಿಪೂರ್ಣನಾದ, ಸಕಲದೋಷವಿದೂರನಾದ ಲಕ್ಷ್ಮೀಪತಿಯನ್ನು ಮತ್ತು ಪೂರ್ಣಪ್ರಜ್ಞರನ್ನು ಇತರ ಗುರುಗಳನ್ನು ನಮಸ್ಕರಿಸಿ ಬ್ರಹ್ಮಸೂತ್ರಗಳ ಅರ್ಥವನ್ನು ಸಂಗ್ರಹಿಸುತ್ತೇವೆ.

गुरुपादकृतोऽप्यस्ति सङ्ग्रहो हृदयङ्गमः ।
प्रस्थानभेदप्रोक्तार्थसङ्ग्रहोऽथाप्ययं मम ।। २ ।।

ಗುರುಗಳಾದ ಶ್ರೀವಿಜಯೀಂದ್ರತೀರ್ಥರು ಮನೋಹರವಾದ ಸೂತ್ರಾರ್ಥಸಂಗ್ರಹವನ್ನು ಈಗಾಗಲೇ ಮಾಡಿದ್ದಾರೆ. ಆದರೂ ಬೇರೆ ಪ್ರಸ್ಥಾನಗಳಲ್ಲಿ ಹೇಳಲ್ಪಟ್ಟ ಅರ್ಥಗಳನ್ನು ಸಂಗ್ರಹಿಸುವುದಕ್ಕಾಗಿ ನನ್ನ ಪ್ರಯತ್ನ.

ब्रह्मरुद्रादिभिः ज्ञानार्थं अर्थितो नारायणः व्यासत्वेन अवतीर्य उत्सन्नान् वेदान् अभिव्याक्तिपूर्वकं अनेकधा विभज्य तदर्थनिर्णयाय ब्रह्मसूत्राणि व्यातेने ।।

तत्रेदमादिमं सूत्रम् –

।। अथातो ब्रह्मजिज्ञासा।। १-१-१

ತತ್ವಜ್ಞಾನಕ್ಕೋಸ್ಕರ ಚತುರ್ಮುಖಬ್ರಹ್ಮರುದ್ರಾದಿಗಳಿಂದ ಪ್ರಾರ್ಥಿಸಲ್ಪಟ್ಟ ನಾರಾಯಣನು ವೇದವ್ಯಾಸರೂಪದಿಂದ ಅವತರಿಸಿದನು. ಅಪಪಾಠಾದಿಗಳಿಂದ ತಿರೋಹಿತವಾದ ವೇದಗಳನ್ನು

ಅಭಿವ್ಯಕ್ತಿಗೊಳಿಸುವ ಮೂಲಕ ಅನೇಕ ಬಗೆಯಲ್ಲಿ ವಿಭಾಗಿಸಿದನು. ಆ ವೇದಗಳ ಅರ್ಥನಿರ್ಣಯಕ್ಕೋಸ್ಕರ ಬ್ರಹ್ಮಸೂತ್ರಗಳನ್ನು ರಚಿಸಿದನು.

ಆ ಬ್ರಹ್ಮಸೂತ್ರಗಳಲ್ಲಿ ಮೊದಲನೆಯ ಸೂತ್ರ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು.

अत्र नये चतुरध्यायत्मकैतच्छास्त्रस्य आरम्भणीयत्वोपयुक्ततया जिज्ञासाकर्तव्यत्वं समर्थ्यते । अत्र आद्यन्तयोः ओङ्कारः ''स्रवत्यनोङ्कृतं ब्रह्म परस्ताच्च विशीर्यते'' इति श्रुतिसिद्धः । आद्यः दृष्टादृष्टार्थः । अत एव एतत्सूत्रावयवत्वात् सर्वसूत्रेषु अनुषङ्गः न स्यात् इति सर्वसूत्रेषु अदृष्टमात्रार्थतयाऽऽदौ अनुषङ्गायासंहिततया पठ्यते । अन्त्यः अदृष्टमात्रार्थः। न सूत्रावयवः । अन्वयप्रतियोग्यसमर्पक इति यावत् ।

ಈ ಜಿಜ್ಞಾಸಾಧಿಕರಣದಲ್ಲಿ ನಾಕು ಅಧ್ಯಾಯಗಳನ್ನೊಳಗೊಂಡ ಬ್ರಹ್ಮಮೀಮಾಂಸಾಶಾಸ್ತ್ರದ ಆರಂಭಣೀಯತ್ವಕ್ಕೆ ಉಪಯುಕ್ತವಾಗುವ ಬ್ರಹ್ಮಜಿಜ್ಞಾಸೆಯ ಕರ್ತವ್ಯತ್ವವನ್ನು ಸಮರ್ಥಿಸಲಾಗಿದೆ.

ಪ್ರಥಮ ಸೂತ್ರದ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕೆಂದು 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ' ಎಂಬ ಶ್ರುತಿಯಿಂದ ಸಿದ್ಧವಾಗಿದೆ. ಮೊದಲನೆಯ ಓಂಕಾರಕ್ಕೆ ದೃಷ್ಟ ಹಾಗೂ ಅದೃಷ್ಟವೆಂಬ ಎರಡು ಬಗೆಯ ಪ್ರಯೋಜನವಿದೆ. ದೃಷ್ಟಪ್ರಯೋಜನವಿರುವುದರಿಂದ ಪ್ರಥಮಸೂತ್ರದ ಅವಯವವಾದ ಓಂಕಾರವು ಮುಂದಿನ ಎಲ್ಲ ಸೂತ್ರಗಳಲ್ಲಿಯೂ ಅನುವೃತ್ತಿಯನ್ನು ಹೊಂದುವುದಿಲ್ಲವೆಂಬ ಕಾರಣದಿಂದ ಪ್ರತಿಯೊಂದು ಸೂತ್ರಗಳಲ್ಲಿಯೂ ಕೇವಲ ಅದೃಷ್ಟಪ್ರಯೋಜನಕ್ಕಾಗಿ ಓಂಕಾರದ ಅನುವೃತ್ತಿಯನ್ನು ಮಾಡಿಕೊಳ್ಳಬೇಕೆಂದು ಸೂಚಿಸಲು ಸೂತ್ರದಲ್ಲಿ ಅಥಶಬ್ದದ ಜೊತೆಗೆ ಸೇರಿಸದೆ ಪ್ರತ್ಯೇಕವಾಗಿ ಉಚ್ಚರಿಸಿದ್ದಾರೆ. ಆದರೆ ಕೊನೆಯ ಓಂಕಾರಕ್ಕೆ ಅದೃಷ್ಟಪ್ರಯೋಜನವಷ್ಟೇ ಇದೆ. ಅದು ಸೂತ್ರದ ಅವಯವವಲ್ಲ. ಅಂದರೆ ಸೂತ್ರದಲ್ಲಿರುವ ಪದಾರ್ಥಗಳ ಜೊತೆಗೆ ಅನ್ವಯವನ್ನು ಹೊಂದಿಲ್ಲ ಎಂದರ್ಥ.

ओङ्काराथशब्दौ मङ्गलफलकौ क्रमात् गुणपूर्त्यानन्तर्यवाचकौ । ओमित्येतत् योग्यतया जिज्ञासागुणभूतब्रह्मविशेषणम् । अथेति योग्यतया अधिकारात् इत्यन्वेति । अत इति ''यस्य प्रसादात्'' इत्यादिनिर्णय-

**श्रुत्यादिस्थं फलादि परामृश्यते । ब्रह्मशब्दः गुणपूर्त्यर्थः सन् चिदचिद्विलक्षणविष्णुवाची । ''स विष्णुराह हि' 'तं ब्रह्मेत्याचक्षते'' इत्युक्तेः । ब्रह्मणो जिज्ञासा इति कर्मणि षष्ठ्या समासः ।**

ಓಂಕಾರ ಮತ್ತು ಅಥಶಬ್ದಗಳು ಮಂಗಲವೆಂಬ ಪ್ರಯೋಜನವುಳ್ಳವುಗಳು. ಮತ್ತು ಕ್ರಮವಾಗಿ ಗುಣಪೂರ್ಣತ್ವ ಮತ್ತು ಆನಂತರ್ಯವೆಂಬ ಅರ್ಥವುಳ್ಳವುಗಳು. 'ಓಂ' ಎಂಬ ಪದಕ್ಕೆ ಗುಣಪೂರ್ಣತ್ವ ಎಂದರ್ಥ. ಇದು ಜಿಜ್ಞಾಸಾವಿಷಯನಾದ ಸಮಾಸದಲ್ಲಿ ಗುಣಭೂತನಾದ ಬ್ರಹ್ಮನಲ್ಲಿ ಅನ್ವಯ-ಯೋಗ್ಯತೆಯನ್ನು ಪಡೆಟಿರುವ ಕಾರಣ ವಿಶೇಷಣವಾಗಿದೆ.

ಅಥ ಎಂಬ ಪದವು ಅಧಿಕಾರಾತ್ ಎಂಬಲ್ಲಿ ಅನ್ವಯಯೋಗ್ಯತೆಯನ್ನು ಪಡೆದಿರುವ ಕಾರಣ ವಿಶೇಷಣವಾಗಿದೆ.

ಅತ ಎಂಬ ಪದವು 'ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್' ಇತ್ಯಾದಿ ನಿರ್ಣಯಿಸಲ್ಪಡುವ ಶ್ರುತಿ ಮೊದಲಾದವುಗಳಲ್ಲಿ ಹೇಳಲ್ಪಟ್ಟ ಮೋಕ್ಷರೂಪವಾದ ಫಲ ಮೊದಲಾದವುಗಳನ್ನು ಪರಾಮರ್ಶ-ಮಾಡುತ್ತದೆ.

ಬ್ರಹ್ಮ ಎಂಬ ಪದವು ಗುಣಪೂರ್ಣತ್ವ ಎಂಬರ್ಥವನ್ನು ಹೇಳುವ ಮೂಲಕ ಚಿದಚಿದ್ವಿಲಕ್ಷಣನಾದ ವಿಷ್ಣುವನ್ನು ಪ್ರತಿಪಾದಿಸುತ್ತದೆ. 'ಸ ವಿಷ್ಣುರಾಹ ಹಿ' 'ತಂ ಬ್ರಹ್ಮೇತ್ಯಾಚಕ್ಷತೇ' ಎಂಬ ದೈವೀಮೀಮಾಂಸಾ-ಸೂತ್ರವು ಬ್ರಹ್ಮಶಬ್ದಕ್ಕೆ ವಿಷ್ಣು ಎಂಬರ್ಥವನ್ನು ಸಮರ್ಥಿಸಿದೆ.

'ಬ್ರಹ್ಮಣಃ ಜಿಜ್ಞಾಸಾ ಬ್ರಹ್ಮಜಿಜ್ಞಾಸಾ' ಎಂದು ಕರ್ಮಾರ್ಥವುಳ್ಳ ಷಷ್ಠೀವಿಭಕ್ತ್ಯಂತ ಪದದ ಜೊತೆಗೆ ಜಿಜ್ಞಾಸಾ ಪದವು ಸಮಾಸವನ್ನು ಹೊಂದಿದೆ.

ततश्च, अथ अध्ययनशमदमादिरूपाधिकारसम्पत्त्यनन्तरम्, अतः अकारवाच्यात् प्रसन्नात् ब्रह्मणः ज्ञानोत्थप्रसादजमोक्षाख्यफलसत्त्वात्, बन्धस्य सत्यत्वात्, आगमस्य प्रामाण्यात्, सिद्धार्थप्रमापकत्वात् वा । ॐ ब्रह्मणो गुणपरिपूर्णस्य विष्णोः जिज्ञासा कर्तव्या इति शेषः । ब्रह्मज्ञानाय सर्ववेदविषयकश्रवणमनननिदिध्यासनरूपा मननमात्ररूपा वा ''तद्विजिज्ञासस्व'' इत्यादिश्रुत्युक्ता कर्तव्या इत्यर्थः ।

ಆದ್ದರಿಂದ ಸೂತ್ರಗಳಲ್ಲಿರುವ ಪದಗಳಿಗೆ ಹೀಗೆ ಅರ್ಥ - ಅಥ = ಅಧ್ಯಯನ ಶಮದಮ ಮೊದಲಾದ ಅಧಿಕಾರಿಸಂಪತ್ತನ್ನು ಪಡೆದ ನಂತರ; ಅತಃ = ೧. ಅಕಾರವಾಚ್ಯನಾದ ಪ್ರಸನ್ನನಾದ ಬ್ರಹ್ಮನಿಂದ ದೊರೆಯುವ ಅಪರೋಕ್ಷಜ್ಞಾನದಿಂದ ಹುಟ್ಟುವ ಪ್ರಸಾದಜನ್ಯವಾದ ಮೋಕ್ಷವೆಂಬ ಫಲವಿರುವುದರಿಂದ, ೨. ಬಂಧವು ಸತ್ಯವಾದ್ದರಿಂದ, ೩. ಆಗಮಗಳು ಪ್ರಮಾಣವಾದ್ದರಿಂದ, ೪. ಆಗಮಗಳಿಗೆ ಸಿದ್ಧವಿಷಯದಲ್ಲಿ ಯಥಾರ್ಥಜ್ಞಾನವನ್ನುಂಟುಮಾಡುವ ಸಾಮರ್ಥ್ಯವಿರುವುದರಿಂದ; ಓಂ = ಗುಣಪರಿಪೂರ್ಣನಾದ, ಬ್ರಹ್ಮಣಃ = ವಿಷ್ಣುವಿನ, ಜಿಜ್ಞಾಸಾ = ವಿಚಾರವು, ಕರ್ತವ್ಯಾ = ಮಾಡಲ್ಪಡಬೇಕು. ಇಲ್ಲಿ 'ಕರ್ತವ್ಯಾ' ಎಂಬ ಪದವನ್ನು ಸೇರಿಸಿಕೊಳ್ಳಬೇಕು.

"ಬ್ರಹ್ಮಜ್ಞಾನಕ್ಕೋಸ್ಕರ ಸಕಲವೇದವಿಷಯಕವಾದ ಶ್ರವಣ, ಮನನ, ನಿದಿಧ್ಯಾಸನರೂಪವಾದ ಅಥವಾ ಕೇವಲ ಮನನರೂಪವಾದ 'ತದ್ವಿಜಿಜ್ಞಾಸಸ್ವ' ಇತ್ಯಾದಿಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮಜಿಜ್ಞಾಸೆಯು ಕರ್ತವ್ಯವಾಗಿದೆ" ಎಂದರ್ಥ.

ॐ ब्रह्मशब्दयोः यौगिकत्वेपि एकस्य रूढत्वमाश्रित्य विशेषवाचित्वेन ''आत्मेति तूपगच्छन्ति'' इत्यत्रेवान्वयो बोध्यः ।

ಓಂ ಹಾಗೂ ಬ್ರಹ್ಮ ಎಂಬ ಎರಡೂ ಶಬ್ದಗಳು ಯೌಗಿಕವಾಗಿವೆ. ಆದರೂ ಒಂದನ್ನು ರೂಢವೆಂದು ಪರಿಗಣಿಸಿ ವಿಶೇಷ್ಯವಾಚಕವೆನ್ನಬೇಕು. 'ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ' ಎಂಬ ಸೂತ್ರದಲ್ಲಿ ಅನ್ವಯ ಮಾಡಿದಂತೆ ಇಲ್ಲಿಯೂ ತಿಳಿಯಬೇಕು.

ब्रह्मशब्दात् विषयसिद्धावपि ओमित्युक्तिः न केवलं ब्रह्मशब्दात् विषयसिद्धिः ''ओमित्येतदक्षरं उद्गीथं उपासीत'' इत्यादौ गुणपूर्णार्थोङ्कारादपि इति युक्त्यन्तरसूचनाय । ब्रह्मणि किं मानं इत्यतः वेदरूपप्रमाणसूचनाय च । ओङ्कारवाच्यस्य ब्रह्मणः इत्युक्त्या व्याहृतिगायत्रिपुरुषसूक्तद्वारा सर्ववेदानां तद्व्याख्यानत्वात् वेदा एव तत्र मानमिति सिद्धेरिति भावः । तेन ब्रह्मणः प्रमितत्वेऽनुग्राह्यप्रमाणाभावात् जिज्ञासा न कर्तव्या इति न शङ्क्यम् ।

ಬ್ರಹ್ಮಶಬ್ದದಿಂದಲೇ ಶಾಸ್ತ್ರಕ್ಕೆ ವಿಷಯವು ಸಿದ್ಧವಾದ ಮೇಲೆ ಪುನಃ ಓಂಕಾರವೇಕೆ? ಎಂದು ಪ್ರಶ್ನಿಸಬಾರದು. ಬ್ರಹ್ಮಶಬ್ದದಿಂದ ವಿಷಯಸಿದ್ಧವಾದಂತೆ ಓಂಕಾರದಿಂದಲೂ 'ಓಮಿತ್ಯೇತದಕ್ಷರಂ ಉದ್ಗೀಥಮುಪಾಸೀತ' ಮೊದಲಾದ ಶ್ರುತಿಗಳಲ್ಲಿ ಹೇಳಲ್ಪಟ್ಟ ಗುಣಪೂರ್ಣವೆಂಬ ಅರ್ಥವಿರುವ ಓಂಕಾರಾದಿಗಳು ವಿಷಯವಾಗಿವೆ. ಈ ಯುಕ್ತ್ಯಂತರದ ಸೂಚನೆಗಾಗಿ ಓಂಕಾರವನ್ನು ಸೂತ್ರದಲ್ಲಿ ಸೇರಿಸಿದ್ದಾರೆ. ಮತ್ತು ಬ್ರಹ್ಮನ ವಿಷಯದಲ್ಲಿ ಪ್ರಮಾಣವೇನು? ಎಂಬ ಪ್ರಶ್ನೆಗೆ ವೇದಗಳೇ ಪ್ರಮಾಣವಾಗಿವೆ ಎಂದು ಸೂಚಿಸುವುದಕ್ಕಾಗಿಯೂ ಓಂಕಾರವನ್ನು ಸೂತ್ರದಲ್ಲಿ ಸೇರಿಸಿದ್ದಾರೆ. 'ಓಂಕಾರವಾಚ್ಯಸ್ಯ ಬ್ರಹ್ಮಣಃ' (ಓಂಕಾರವಾಚ್ಯನಾದ ಬ್ರಹ್ಮನ) ಎಂಬ ಮಾತಿನಂತೆ ವ್ಯಾಹೃತಿ ಗಾಯತ್ರೀ ಮತ್ತು ಪುರುಷಸೂಕ್ತಗಳ ಮೂಲಕ ಸಮಸ್ತವೇದಗಳು ಓಂಕಾರದ ವ್ಯಾಖ್ಯಾನಗಳಾಗಿವೆ. ಆದ್ದರಿಂದ ಬ್ರಹ್ಮನ ವಿಷಯದಲ್ಲಿ ವೇದಗಳೇ ಪ್ರಮಾಣಗಳೆಂದು ಸಿದ್ಧವಾಗುತ್ತವೆಂದು ಅಭಿಪ್ರಾಯ.

**गुरुपादास्तु ''ब्रह्म किं इत्यतः ॐ इत्युक्तम् । रक्षकस्य इत्यर्थः । अवतिरूपत्वात् । रक्षकश्च विष्णुः प्रसिद्धः'' इत्याहुः ।।**

ಗುರುಗಳಾದ ವಿಜಯೀಂದ್ರತೀರ್ಥರು ಬ್ರಹ್ಮನು ಯಾರು? ಎಂಬ ಪ್ರಶ್ನೆಗೆ ಓಂ ಎಂದು ಉತ್ತರಿಸಿದ್ದಾರೆ. ರಕ್ಷಕನಾದ ಎಂದು ಇದರ ಅರ್ಥ. ಏಕೆಂದರೆ ಅವ ಎಂಬ ಧಾತುವಿನಿಂದ ಓಂಕಾರವು ನಿಷ್ಪನ್ನವಾಗಿದೆ. ವಿಷ್ಣುವು ರಕ್ಷಕನೆಂದು ಪ್ರಸಿದ್ಧವಾದ ವಿಚಾರ ಎನ್ನುತ್ತಾರೆ.

**विभाषा गुण इति गुणशब्दस्य परतन्त्रमात्रार्थकत्वोक्तेः अत इति साधु । कृद्योगलक्षणा च षष्ठी समस्यत इत्युक्तेः ब्रह्मजिज्ञासा इति साधु । कर्तुः अनुपादानात् न उभयप्राप्तौ कर्मणीति षष्ठी । तेन कर्मणि च इति न निषेधः ।**

'ವಿಭಾಷಾ ಗುಣೇ' ಎಂಬ ಸೂತ್ರದಲ್ಲಿ ಗುಣಶಬ್ದಕ್ಕೆ ಕೃದಂತವಾದ ಪದದ ಜೊತೆಗೆ ಷಷ್ಠೀವಿಭಕ್ತ್ಯಂತಪದವು ಸಮಾಸ ಪಡೆಯುತ್ತದೆಂದು ಹೇಳಿದ್ದರಿಂದ ಬ್ರಹ್ಮಣಃ ಜಿಜ್ಞಾಸಾ ಬ್ರಹ್ಮಜಿಜ್ಞಾಸಾ ಎಂಬ ವ್ಯುತ್ಪತ್ತಿಯು ನಿರ್ದುಷ್ಟವಾಗಿದೆ. ಈ ಸೂತ್ರದಲ್ಲಿ ಕರ್ತೃವಾಚಕಪದವಿಲ್ಲದ ಕಾರಣ 'ಉಭಯಪ್ರಾಪ್ತೌ ಕರ್ಮಣಿ' ಎಂಬ ಸೂತ್ರದಿಂದ ಷಷ್ಠೀವಿಭಕ್ತಿಯು ಬರುವುದಿಲ್ಲ. ಆದ್ದರಿಂದ 'ಕರ್ಮಣಿ ಚ' ಎಂಬ ಸೂತ್ರವು ಷಷ್ಠೀತತ್ಪುರುಷಸಮಾಸವನ್ನು ನಿಷೇಧಿಸುವುದಿಲ್ಲ.

पूर्वेणाध्यायद्वयेन ब्रह्मशब्दार्थस्य उत्तरेण च साधनफलयोः उपपादनात् ब्रह्मणः अथ जिज्ञासा इति वाच्ये अथात इत्यादि अथातःशब्दयोः स्वरूपतः अर्थतश्च आधिक्यादिति सूचनाय । अत्र अथातोब्रह्मपदानि क्रमात् निरधिकारिकत्वनिष्फलत्वनिर्विषयत्वशङ्काव्युदासकानि ॥१॥

ಮೊದಲೆರಡು ಅಧ್ಯಾಯಗಳಲ್ಲಿ ಬ್ರಹ್ಮಶಬ್ದದ ಅರ್ಥವನ್ನು, ಮುಂದಿನ ಎರಡು ಅಧ್ಯಾಯಗಳಲ್ಲಿ ಸಾಧನ ಮತ್ತು ಫಲಗಳನ್ನು ವಿಚಾರ ಮಾಡಿದ್ದಾರೆ. ಆದ್ದರಿಂದ ಬ್ರಹ್ಮಣಃ ಅಥ ಜಿಜ್ಞಾಸಾ ಎಂದು ಸೂತ್ರದ ವಿನ್ಯಾಸವಿರಬೇಕಿತ್ತು. ಆದರೂ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ರಚಿಸಲು ಕಾರಣವಿದೆ. ಅಥ ಮತ್ತು ಅತಃ ಶಬ್ದಗಳಿಗೆ ಶಬ್ದಸ್ವರೂಪದಿಂದ ಹಾಗೂ ಅರ್ಥಸ್ವರೂಪದಿಂದಲೂ ಶ್ರೇಷ್ಠತ್ವವಿದೆ. ಇದನ್ನು ಸೂಚಿಸುವುದಕ್ಕಾಗಿ ಅಥಾತಃ ಎಂದೇ ಹೇಳಿದ್ದಾರೆ. ಸೂತ್ರದಲ್ಲಿರುವ ಅಥ ಅತಃ ಬ್ರಹ್ಮ ಎಂಬ ಪದಗಳು ಕ್ರಮವಾಗಿ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಅಧಿಕಾರಿ, ಫಲ, ವಿಷಯಗಳಿಲ್ಲವೆಂಬ ಶಂಕೆಗಳನ್ನು ಪರಿಹರಿಸುತ್ತಿವೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕೆಯ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

* * * * * * *

## ಅದ್ವೈತಮತದಲ್ಲಿ ಜಿಜ್ಞಾಸಾಧಿಕರಣ

## ಮತ್ತು

## ವಿಮರ್ಶೆ

'ನಾನು' ಎಂದು ಅನುಭವಸಿದ್ಧನಾದ ಜೀವಾತ್ಮನೇ ಬ್ರಹ್ಮ. ಅವನ ಬಗ್ಗೆ ಸಂದೇಹವಿಲ್ಲದುದರಿಂದ ವಿಚಾರ ಬೇಡ. ಜೀವಾತ್ಮನ ಜ್ಞಾನವಿದ್ದರೂ ಮೋಕ್ಷ ಉಂಟಾಗುತ್ತಿಲ್ಲ ಎಂದ ಮೇಲೆ ವಿಚಾರಕ್ಕೂ ಮೋಕ್ಷವೆಂಬ ಪ್ರಯೋಜನವೂ ಇಲ್ಲ. 'ಜೀವಾತ್ಮ ಕರ್ಮ ಮಾಡುತ್ತಾನೆ ಅದರ ಫಲ ಉಣ್ಣುತ್ತಾನೆ, ವೇದಾಂತದಲ್ಲಿ ಹೇಳುವ ಬ್ರಹ್ಮ ಹಾಗೆ ಮಾಡುವುದಿಲ್ಲ. ಅವನು ಶುದ್ಧ, ನಿರ್ಧರ್ಮಕ. ಅವನ ಬಗ್ಗೆ ವಿಚಾರಕ್ಕೆ ಅವಕಾಶವಿದೆ. ವಿಚಾರ ಮಾಡಿ ತಿಳಿದರೆ ಮೋಕ್ಷಫಲವೂ ಇದೆ' ಎನ್ನಬಾರದು. ಅನುಭವ

ಪ್ರಬಲ. ಅದಕ್ಕೆ ವಿರುದ್ಧವಾಗಿ ವೇದಾಂತ ಏನಾದರೂ ಹೇಳಿದರೆ ಗ್ರಾಹ್ಯವಾಗುವುದಿಲ್ಲ. ಅನುಭವಾನುಸಾರ ಅದಕ್ಕೆ ಬೇರೆ ಅರ್ಥ ಗ್ರಹಿಸಬೇಕು ಎಂದು ಪೂರ್ವಪಕ್ಷ. ವೇದಾಂತ ಅಪೌರುಷೇಯ, ನಿರ್ದೋಷ. ಅನುಭವ ಕೆಲವೊಮ್ಮೆ ತಪ್ಪಾಗುವುದಿದೆ. 'ನಾನು ದಪ್ಪ' ಎನ್ನುವ ಅನುಭವ ಇದಕ್ಕೆ ಉದಾಹರಣೆ. 'ನಾನು ದಪ್ಪ ಅಲ್ಲ, ನನ್ನ ಶರೀರ ದಪ್ಪ' ಎನ್ನುವುದು ಸರಿಯಾದ ಅನುಭವ. ಆದ್ದರಿಂದ ನಿರ್ದೋಷವಾದ ವೇದಾಂತವು ಹೇಳುವ ಶುದ್ಧಚೈತನ್ಯ ಸತ್ಯ. ಅದು ನಾನು ಎನ್ನುವ ಅನುಭವದಲ್ಲಿ ಕಾಣುವುದಿಲ್ಲ. ಅದನ್ನು ವಿಚಾರಿಸಬೇಕು. ಅದರ ಜ್ಞಾನದಿಂದ ಮೋಕ್ಷ ಎಂಬ ಪ್ರಯೋಜನವೂ ಇದೆ. - ಇದು ಭಾಮತಿಯಲ್ಲಿ ಕಾಣುವ ಜಿಜ್ಞಾಸಾಧಿಕರಣ.

### ಭಾಮತ್ಯಧಿಕರಣದಲ್ಲಿ ಅನುಪಪತ್ತಿ

ಶುದ್ಧ ಚೈತನ್ಯ ಅನುಭವದಲ್ಲಿ ಕಾಣುವುದಿಲ್ಲ ಎಂದು ಹೇಳುವುದೆ ತಪ್ಪು. ಶುದ್ಧತ್ವವೆಂದರೆ ಕರ್ತೃತ್ವ ಭೋಕ್ತೃತ್ವಾದಿಗಳ ಅಭಾವ, ಇದು ಅನುಭವದಲ್ಲಿ ಕಾಣುವುದಿಲ್ಲ ಚೈತನ್ಯ ಮಾತ್ರ ಕಾಣುತ್ತದೆ ಎಂದರೆ ಚೈತನ್ಯಕ್ಕಿಂತ ಬೇರೆಯಾಗಿ ಶುದ್ಧತ್ವವೆಂಬುದಿದೆ ಎಂದಂತಾಯಿತು. ಇದು ಅದ್ವೈತವಾಗುವುದಿಲ್ಲ. ಅದ್ವೈತದಲ್ಲಿ ಚೈತನ್ಯಕ್ಕಿಂತ ಬೇರೆ ಏನೂ ಇಲ್ಲ. ಇಲ್ಲದಿದ್ದರೂ ಅವಿದ್ಯೆಯಿಂದಾಗಿ ಇರುವಂತೆ ಭ್ರಾಂತಿಯಲ್ಲಿ ಭಾಸವಾಗುತ್ತದೆ ಎಂದರೆ ಹೇಗೆ ಭಾಸವಾಗುತ್ತದೆ? ಚೈತನ್ಯಸ್ವರೂಪವು ಸ್ವಪ್ರಕಾಶ ಅನುಭವದಲ್ಲಿ ಪ್ರಕಾಶಿಸುತ್ತಿರುವಾಗ ಭ್ರಾಂತಿಯಾದರೂ ಹೇಗೆ ಬರುತ್ತದೆ?

'ಅದ್ವೈತದಲ್ಲಿ ಚೈತನ್ಯಕ್ಕಿಂತ ಬೇರೆಯೂ ಇದೆ, ಆದರೆ ಅದು ಸತ್ಯವಲ್ಲ, ಮಿಥ್ಯೆ. ಅದು ಸತ್ಯವಾದ ಚೈತನ್ಯವನ್ನು ವೇದಾಂತದಿಂದ ತಿಳಿಯಲು ಉಪಲಕ್ಷಣವಾಗಿ ಬೇಕು. ಉಪಲಕ್ಷಿತವಾದ ಚೈತನ್ಯವೆ ವೇದಾಂತವೇದ್ಯ. ಅದು ಅನುಭವ ಗೋಚರವಲ್ಲ. ಅನುಭವ ಗೋಚರ ಶುದ್ಧ ಚೈತನ್ಯ. ಅದು ವೇದಾಂತ ವೇದ್ಯವಲ್ಲ' - ಹೀಗೂ ಕೆಲವರು ಹೇಳುತ್ತಾರೆ. ಆದರೆ ಇದೂ ಸರಿಯಲ್ಲ. ಅರುಂಧತೀನಕ್ಷತ್ರವನ್ನು ತೋರಿಸುವಾಗ ಮೊದಲಿಗೆ ಉಪಲಕ್ಷಣವಾಗಿ ಸಮೀಪದ ಒಂದು ದೊಡ್ಡ ನಕ್ಷತ್ರವನ್ನು ತೋರಿಸುವುದುಂಟು. ಹಾಗೆ ಪ್ರಕೃತದಲ್ಲಿ ಹೇಳಲಾಗುವುದಿಲ್ಲ. ಶುದ್ಧ ಚೈತನ್ಯ ಮೊದಲೇ ಅನುಭವಗೋಚರವಾಗಿರುವಾಗ ಅದನ್ನು ತಿಳಿಯಲು ಉಪಲಕ್ಷಣವೇಕೆ?

ಅನುಭವಗೋಚರವಲ್ಲವೆಂದರೆ 'ನಾನು ಅಜ್ಞ' ಎಂದು ಅವಿದ್ಯೆ ಕಾಣುವುದು ಆತ್ಮಾನುಭವವಲ್ಲ ಎಂದಾದೀತು. 'ಶುದ್ಧ ಚೈತನ್ಯವು ಅನುಭವವೇದ್ಯವೆ. ಆದರೂ ಅವಿದ್ಯೆಯ ಪ್ರಭಾವದಿಂದ ಅವೇದ್ಯವೆಂದು ಭ್ರಮಿಸುತ್ತೇವೆ. ಹೀಗಾಗಿ ಆತ್ಮಾನುಭವದಲ್ಲಿ ಅವಿದ್ಯೆ ಕಾಣುವುದೂ ಕೂಡುತ್ತದೆ. ಅವೇದ್ಯತ್ವ ಭ್ರಮನಿರಸನಕ್ಕಾಗಿ ವೇದಾಂತ ವಿಚಾರವೂ ಕೂಡುತ್ತದೆ' - ಎಂದೂ ಕೆಲವರು ಹೇಳುತ್ತಾರೆ.

ಇವರೂ ಕೂಡ ಆತ್ಮನ ನಿಜರೂಪ ಅನುಭವದಲ್ಲಿ ಕಾಣುತ್ತಿರುವಾಗ ಅವೇದ್ಯತ್ವಭ್ರಮೆ ಹೇಗೆ ಬರುತ್ತದೆ ಎನ್ನುವುದನ್ನು ಹೇಳಲಾರರು.

'ಅವೇದ್ಯತ್ವಭ್ರಮೆ ಬರುವುದು ಅವಿದ್ಯೆಯ ಪ್ರಭಾವದಿಂದ. ಅದನ್ನು ಓಡಿಸಲು ಅಂತಃಕರಣ ವೃತ್ತಿಬೇಕು. ಅದು ಹುಟ್ಟದ ತನಕ ಅವಿದ್ಯೆ ಇದ್ದೇ ಇರುತ್ತದೆ' ಎನ್ನುವುದು ಸರಿಯಲ್ಲ. ಘಟಪಟಾದಿಗಳನ್ನು ಪ್ರತ್ಯಕ್ಷ ಕಾಣುವ ಅಂತಃಕರಣವೃತ್ತಿ ಆ ಪದಾರ್ಥಗಳ ಜೊತೆಗೆ ಶುದ್ಧ ಚೈತನ್ಯವನ್ನೂ ಕಾಣುತ್ತಿದೆ ಎಂದು ಅದ್ವೈತಸಿದ್ಧಾಂತವಿದೆ. ಆದರಿಂದ ಅಂತಃಕರಣವೃತ್ತಿ ಹುಟ್ಟಿಲ್ಲ ಎನ್ನುವುದು ತಪ್ಪು. ಇನ್ನು ಈ ವೃತ್ತಿ ವೇದಾಂತಶ್ರವಣಾದಿ ಸಂಸ್ಕಾರದಿಂದ ಕೂಡಿಲ್ಲವಾದ್ದರಿಂದ ಅವಿದ್ಯೆಯನ್ನು ಓಡಿಸುತ್ತಿಲ್ಲ ಎನ್ನುವುದು ಅದ್ವೈತಕ್ಕೇ ವಿರುದ್ಧ. ಕೇವಲ ವೃತ್ತಿಯಿಂದ ದೂರವಾಗುವ ಶುಕ್ತಿಯ ಅಜ್ಞಾನ ಮಿಥ್ಯೆ. ಭ್ರಮರ ಧ್ಯಾನದಿಂದ ದೂರವಾಗುವ ಕೀಟತ್ವ ಸತ್ಯ. ಹಾಗೇ ಸಂಸ್ಕಾರ ಸಹಿತ ವೃತ್ತಿಯಿಂದಲೆ ಅವಿದ್ಯೆ ದೂರವಾಗುವುದಾದರೆ ಅದು ಸತ್ಯವಾಗಬೇಕಾದೀತು.

ಪ್ರತ್ಯಕ್ಷಾನುಭವ ಕೆಲವೊಮ್ಮೆ ತಪ್ಪಾಗುವುದರಿಂದ ದುರ್ಬಲ. ವೇದಾಂತ ಅಪೌರುಷೇಯ-ವಾದುದರಿಂದ ನಿರ್ದೋಷವಾಗಿದ್ದು ಪ್ರಬಲವಾಗಿದೆ ಎಂಬುದೂ ಸರಿಯಲ್ಲ. ವೇದಾಂತ ಅಪೌರುಷೇಯವಾದರೂ ಅದರ ತಾತ್ಪರ್ಯವನ್ನು ತಪ್ಪಾಗಿ ತಿಳಿಯುವ ಸಾಧ್ಯತೆ ಇರುವುದರಿಂದ ಅದರಿಂದ ಬರುವ ಜ್ಞಾನ ತಪ್ಪಾಗಿರಬಹುದು. ಯಜಮಾನನಿಗೆ ಪ್ರತಿನಿಧಿಯಾಗಿ ಯಾಗಶಾಲೆಯಲ್ಲಿ ಇಂಸುಪ ಮುಷ್ಟಿದರ್ಭೆಯನ್ನು ಯಜಮಾನ ಎಂದೇ ವೇದವು ಕರೆದಿದೆ. ಪ್ರತ್ಯಕ್ಷ ವಿರೋಧ-ವಿರುವುದರಿಂದಲೆ ದರ್ಭೆ ಯಜಮಾನನೆ ಅಲ್ಲ. ಅವನ ಪ್ರತಿನಿಧಿ ಎಂದು ಆ ವೇದ ವಾಕ್ಯಕ್ಕೆ ಬೇರೆ ಅರ್ಥ ಗ್ರಹಿಸುತ್ತಾರೆ. 'ತತ್ವಮಸಿ' ಎಂಬಲ್ಲಿ ಅಲ್ಪಜ್ಞ ಜೀವನು ನೀನು ಸರ್ವಜ್ಞ ಬ್ರಹ್ಮನೆ ಆಗಿರುವಿ ಎಂದು ಹೇಳುತ್ತಿದ್ದರೂ ಪ್ರತ್ಯಕ್ಷವಿರೋಧದಿಂದಲೆ ಈ ಮುಖ್ಯಾರ್ಥವನ್ನು ಬಿಟ್ಟು ಶುದ್ಧಚೈತನ್ಯಾಭೇದವೆಂಬ ಅಮುಖ್ಯಾರ್ಥ ಗ್ರಹಿಸುತ್ತಾರೆ ಅದ್ವೈತಿಗಳು. ಆದರಿಂದ ಪ್ರತ್ಯಕ್ಷ ಪ್ರಬಲವೆನ್ನುವುದು ಅವರ ಸಿದ್ಧಾಂತ. ಹೀಗಿದ್ದರೂ ಪ್ರತ್ಯಕ್ಷವನ್ನು ವೇದಾಂತ ಬಾಧಿಸುತ್ತದೆ ಎನ್ನುತ್ತಾರೆ. ಇದು ವಿರುದ್ಧ.

## ವಿವರಣ ಮತದಲ್ಲಿ ಜಿಜ್ಞಾಸಾಧಿಕರಣ

ಅಲ್ಪಜ್ಞನಾದ ಜೀವ ಮತ್ತು ಸರ್ವಜ್ಞಬ್ರಹ್ಮ ಇಬ್ಬರೂ ಒಂದಾಗಲಾರರು. ಒಂದೆನ್ನುವ ವೇದಾಂತ ಸುಳ್ಳು. ಅದರ ಬಗ್ಗೆ ವಿಚಾರ ಬೇಡ. ವಿಚಾರದಿಂದ ಪ್ರಯೋಜನವೂ ಇಲ್ಲ. ವಿಚಾರದಿಂದ ಬರುವುದು ಜ್ಞಾನ. ಅದು ಸುಳ್ಳಾದ ಕಲ್ಪನೆಗಳನ್ನು ದೂರ ಮಾಡೀತು ಹೊರತು ವಾಸ್ತವವಾದ ಸಂಸಾರವನ್ನು ಕಳೆಯಲಾರದು ಎಂದು ಪೂರ್ವಪಕ್ಷ. ಬ್ರಹ್ಮ ಒಂದೆ ಸತ್ಯ. ಪ್ರಪಂಚ ಮಿಥ್ಯೆ.

ಅಜ್ಞಾನದಿಂದಾಗಿರುವ ಸುಳ್ಳು ಕಲ್ಪನೆಯಷ್ಟೆ. ಆದರಿಂದ ಜೀವಬ್ರಹ್ಮರೊಳಗೆ ಕಾಣುವ ವ್ಯತ್ಯಾಸವೂ ಸುಳ್ಳು. ಐಕ್ಯವೆ ಸತ್ಯ. ವಿಚಾರದಿಂದ ಇದರ ಜ್ಞಾನ ಬಂದರೆ ಅವಾಸ್ತವವಾದ ಸಂಸಾರದ ಕಲ್ಪನೆ ಕರಗಿಹೋಗುತ್ತದೆ ಎಂದು ಸಿದ್ಧಾಂತ.

ವಿವರಣದ ಅಧಿಕರಣವೂ ಅಸಂಗತ

ಭಾಮತಿಯ ಅಧಿಕರಣದಲ್ಲಿ ಹೇಳಿದ ಅಸಂಗತಿ ಎಲ್ಲವೂ ವಿವರಣದ ಅಧಿಕರಣದಲ್ಲಿಯೂ ಇದೆ. ಜೊತೆಗೆ, ಜೀವಬ್ರಹ್ಮರೊಳಗಿನ ವ್ಯತ್ಯಾಸವನ್ನು ಅವಾಸ್ತವವೆಂದುದೂ ತಪ್ಪು. ಅವಾಸ್ತವವೆಂದೇಕೆ ಹೇಳಬೇಕು? ವಾಸ್ತವ ವ್ಯತ್ಯಾಸವಿರುವಾಗಲೆ ಅಭೇದವನ್ನು ಏಕೆ ವೇದಾಂತ ಹೇಳಬಾರದು? ಪ್ರತ್ಯಕ್ಷ ವಿರೋಧದ ಭಯವೆ? ಅದು ಅವಾಸ್ತವ ಭೇದವನ್ನು ತೋರಿಸುತ್ತದೆ, ವಾಸ್ತವ ಅಭೇದವನ್ನು ನಿರ್ದೋಷವಾದ ವೇದಾಂತ ಹೇಳುತ್ತದೆ ಎನ್ನೋಣ. ಈಗ ತತ್ ತ್ವಂ ಪದಗಳಿಗೆ ಶುದ್ಧಚೈತನ್ಯವೆಂಬ ಅಮುಖ್ಯಾರ್ಥ ಗ್ರಹಿಸಬೇಕಾಗಿಲ್ಲ. ಮತ್ತು, ಶುದ್ಧಚೈತನ್ಯದಲ್ಲಿ ಭೇದ ಪ್ರಸಕ್ತಿ ಇಲ್ಲದಿರುವಾಗ ಅಭೇದವನ್ನು ಏಕೆ ಹೇಳಬೇಕು? ಅದಕ್ಕಾಗಿ ಮುಖ್ಯಾರ್ಥವನ್ನು ಏಕೆ ಗ್ರಹಿಸಬೇಕು?

ಜ್ಞಾನದಿಂದ ವಾಸ್ತವವಾದ ಸಂಸಾರ ದೂರವಾಗದು ಎಂಬುದೂ ತಪ್ಪು. ರಾಮೇಶ್ವರ ಸೇತುದರ್ಶನದಿಂದ ವಾಸ್ತವವಾದ ಬ್ರಹ್ಮಹತ್ಯಾ ಪಾಪ ದೂರವಾಗುವುದು ತಾನೆ?

## ರಾಮಾನುಜಮತದಲ್ಲಿ ಜಿಜ್ಞಾಸಾಧಿಕರಣ

## ಮತ್ತು

## ವಿಮರ್ಶೆ

ಎಲ್ಲ ಶಬ್ದಗಳಿಗೂ ಏನಾದರೊಂದು ಅರ್ಥವನ್ನು ತಿಳಿಸುವುದೆ ಉದ್ದೇಶ. ವೇದಾಂತವೂ ಹಾಗೆಯೆ. ಅದು ಬ್ರಹ್ಮನಂಥ ಸಿದ್ಧವಸ್ತುವನ್ನು ಬೋಧಿಸಲಾರದು. ಆದರ ಬಗ್ಗೆ ವಿಚಾರ ಮಾಡುವ ಬ್ರಹ್ಮಸೂತ್ರವೂ ಗ್ರಾಹ್ಯವಾಗಲಾರದು ಎಂದು ಪೂರ್ವಪಕ್ಷ. ಭಾಷೆ ಕಲಿಯುವ ಮಕ್ಕಳು ಮೊದಲಿಗೆ ಅಪ್ಪ, ಅಮ್ಮ ಮುಂತಾದ ಸಿದ್ಧವಸ್ತು ಬೋಧಕಪದಗಳನ್ನೆ ತಿಳಿಯುವುದರಿಂದ ಅವುಗಳಂತೆ ಬೇರೆ ಶಬ್ದಗಳೂ ಸಿದ್ಧಪರವಾಗುವುದರಿಂದ ಬ್ರಹ್ಮನನ್ನು ವೇದಾಂತವು ಬೋಧಿಸಬಲ್ಲುದು. ಬ್ರಹ್ಮವಿಚಾರವನ್ನು ನಡೆಸಬಹುದು ಎಂದು ಸಿದ್ಧಾಂತ.

## ರಾಮಾನುಜರ ಅಧಿಕರಣ ಸೂತ್ರದಲ್ಲಿ ಇಲ್ಲ

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಕೃತ ಸೂತ್ರಕ್ಕೆ ಕರ್ಮವಿಚಾರ ಮಾಡಿದ ಬಳಿಕ, ಕರ್ಮವಿಚಾರ ಮಾಡಿ ಮುಗಿದಿರುವುದರಿಂದಲೆ ಬ್ರಹ್ಮವಿಚಾರ ಮಾಡಬೇಕು ಎಂದು ರಾಮಾನುಜರ ಪ್ರಕಾರ ಅರ್ಥ. ಇಲ್ಲಿ ಶಬ್ದಗಳು ಸಿದ್ಧಪರವಾಗುವುದರ ಬಗ್ಗೆ ಏನೂ ಹೇಳಿಲ್ಲ. ಆದರಿಂದ ಅಧಿಕರಣಕ್ಕೂ ಸೂತ್ರಕ್ಕೂ ಏನೂ ಸಂಬಂಧವಿಲ್ಲ. ಸಿದ್ಧಪರವಾದ ಬ್ರಹ್ಮಶಬ್ದ ಸೂತ್ರದಲ್ಲಿರುವುದರಿಂದಲೆ ಶಬ್ದಗಳು ಸಿದ್ಧಪರವೆಂದು ಸೂಚಿಸಿದಂತಾಗುತ್ತದೆ ಎನ್ನುವುದೂ ಸರಿಯಲ್ಲ. 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂದು ವಿಷಯವಾಕ್ಯದಲ್ಲಾಗಲಿ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಸೂತ್ರದಲ್ಲಾಗಲೀ 'ಬ್ರಹ್ಮವಿಚಾರ ಮಾಡಬೇಕು' ಎಂದು ಕಾರ್ಯವನ್ನೇ ಹೇಳಿರುವುದರಿಂದ ಬ್ರಹ್ಮಶಬ್ದ ಕಾರ್ಯಪರವೆ ಎಂದು ಪೂರ್ವಪಕ್ಷಿ ಹೇಳಿದರೆ ಏನು ಉತ್ತರ?

ರಾಮಾನುಜಮತದಲ್ಲಿ ಕರ್ಮಮೀಮಾಂಸೆ ದೇವಮೀಮಾಂಸೆ ಬ್ರಹ್ಮಮೀಮಾಂಸೆ ಇವು ಮೂರು ಒಂದೇ ಗ್ರಂಥದ ಮೂರು ಭಾಗಗಳು. ಅವುಗಳನ್ನು ಕ್ರಮವಾಗಿಯೆ ಅಧ್ಯಯನ ಮಾಡಬೇಕು. ದೇವಮೀಮಾಂಸೆ ಸಿದ್ಧಬೋಧಕ. ಶಬ್ದಗಳಿಗೆ ಸಿದ್ಧಪರತ್ವವನ್ನು ಒಪ್ಪದ ದೇವಮೀಮಾಂಸೆ ನಡೆಯಲಾರದು ಎಂದ ಮೇಲೆ ಮುಂದೆ ಅಧ್ಯಯನ ಮಾಡುವ ಬ್ರಹ್ಮಮೀಮಾಂಸೆಯಲ್ಲಿ ಸಿದ್ಧಪರತ್ವದ ಬಗ್ಗೆ ವಿವಾದ ಸಂಗತವಾಗುವುದೆ?

## ಶೈವಭಾಷ್ಯದಲ್ಲಿ ಜಿಜ್ಞಾಸಾಧಿಕರಣ

## ಮತ್ತು

## ವಿಮರ್ಶೆ

ಶೈವಭಾಷ್ಯದಲ್ಲಿ 'ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್' 'ವಿಚಾರಕ್ಕಾಗಿ ಗುರುವಿನ ಬಳಿಗೆ ಹೋಗಬೇಕು'ಎಂಬುದು ವಿಷಯವಾಕ್ಯ. 'ಅಯಮಾತ್ಮಾ ಬ್ರಹ್ಮ' ಎಂದು ವೇದಾಂತವು 'ನಾನು' ಎಂದು ಅನುಭವಸಿದ್ಧವಾದ ಜೀವಾತ್ಮನನ್ನೆ ಬ್ರಹ್ಮ ಎಂದು ಕರೆದಿದೆ. ಅದ್ವೈತಿಗಳು ಹೇಳುವ ಶುದ್ಧ ಚೈತನ್ಯಾಭೇದ ಇಲ್ಲಿ ಉಕ್ತವಾಗುವುದಿಲ್ಲ. ಅದನ್ನೊಪ್ಪಿದರೂ ಶುದ್ಧಚೈತನ್ಯ ನಿರ್ಧರ್ಮಕವಾದ್ದರಿಂದ ಅದನ್ನು ಶಬ್ದದಿಂದ ಹೇಳುವುದೆ ಅಶಕ್ಯ. ಮತ್ತು ಜೀವಾತ್ಮನಲ್ಲಿರುವ ಕರ್ತೃತ್ವಾದಿ ಧರ್ಮ ಮಿಥ್ಯೆ ಎನಿಸಲೂ ಸಾಧ್ಯವಿಲ್ಲ. ಸತ್ಯವೆಂದು ಪ್ರತ್ಯಕ್ಷಾನುಭವ ಹೇಳುತ್ತಿದೆ. ಆದರಿಂದ ಜೀವಬ್ರಹ್ಮಾಭೇದವನ್ನೇ

ಅಜ್ಞಾನದಿಂದಾಗಿರುವ ಸುಳ್ಳು ಕಲ್ಪನೆಯಷ್ಟೆ. ಆದರಿಂದ ಜೀವಬ್ರಹ್ಮರೊಳಗೆ ಕಾಣುವ ವ್ಯತ್ಯಾಸವೂ ಸುಳ್ಳು. ಐಕ್ಯವೆ ಸತ್ಯ. ವಿಚಾರದಿಂದ ಇದರ ಜ್ಞಾನ ಬಂದರೆ ಅವಾಸ್ತವವಾದ ಸಂಸಾರದ ಕಲ್ಪನೆ ಕರಗಿಹೋಗುತ್ತದೆ ಎಂದು ಸಿದ್ಧಾಂತ.

ವಿವರಣದ ಅಧಿಕರಣವೂ ಅಸಂಗತ

ಭಾಮತಿಯ ಅಧಿಕರಣದಲ್ಲಿ ಹೇಳಿದ ಅಸಂಗತಿ ಎಲ್ಲವೂ ವಿವರಣದ ಅಧಿಕರಣದಲ್ಲಿಯೂ ಇದೆ. ಜೊತೆಗೆ, ಜೀವಬ್ರಹ್ಮರೊಳಗಿನ ವ್ಯತ್ಯಾಸವನ್ನು ಅವಾಸ್ತವವೆಂದುದೂ ತಪ್ಪು. ಅವಾಸ್ತವವೆಂದೇಕೆ ಹೇಳಬೇಕು? ವಾಸ್ತವ ವ್ಯತ್ಯಾಸವಿರುವಾಗಲೆ ಅಭೇದವನ್ನು ಏಕೆ ವೇದಾಂತ ಹೇಳಬಾರದು? ಪ್ರತ್ಯಕ್ಷ ವಿರೋಧದ ಭಯವೆ? ಅದು ಅವಾಸ್ತವ ಭೇದವನ್ನು ತೋರಿಸುತ್ತದೆ, ವಾಸ್ತವ ಅಭೇದವನ್ನು ನಿರ್ದೋಷವಾದ ವೇದಾಂತ ಹೇಳುತ್ತದೆ ಎನ್ನೋಣ. ಈಗ ತತ್ ತ್ವಂ ಪದಗಳಿಗೆ ಶುದ್ಧಚೈತನ್ಯವೆಂಬ ಅಮುಖ್ಯಾರ್ಥ ಗ್ರಹಿಸಬೇಕಾಗಿಲ್ಲ. ಮತ್ತು, ಶುದ್ಧಚೈತನ್ಯದಲ್ಲಿ ಭೇದ ಪ್ರಸಕ್ತಿ ಇಲ್ಲದಿರುವಾಗ ಅಭೇದವನ್ನು ಏಕೆ ಹೇಳಬೇಕು? ಅದಕ್ಕಾಗಿ ಮುಖ್ಯಾರ್ಥವನ್ನು ಏಕೆ ಗ್ರಹಿಸಬೇಕು?

ಜ್ಞಾನದಿಂದ ವಾಸ್ತವವಾದ ಸಂಸಾರ ದೂರವಾಗದು ಎಂಬುದೂ ತಪ್ಪು. ರಾಮೇಶ್ವರ ಸೇತುದರ್ಶನದಿಂದ ವಾಸ್ತವವಾದ ಬ್ರಹ್ಮಹತ್ಯಾ ಪಾಪ ದೂರವಾಗುವುದು ತಾನೆ?

## ರಾಮಾನುಜಮತದಲ್ಲಿ ಜಿಜ್ಞಾಸಾಧಿಕರಣ

## ಮತ್ತು

## ವಿಮರ್ಶೆ

ಎಲ್ಲ ಶಬ್ದಗಳಿಗೂ ಏನಾದರೊಂದು ಕಾರ್ಯವನ್ನು ತಿಳಿಸುವುದೆ ಉದ್ದೇಶ. ವೇದಾಂತವೂ ಹಾಗೆಯೆ. ಅದು ಬ್ರಹ್ಮನಂಥ ಸಿದ್ಧವಸ್ತುವನ್ನು ಬೋಧಿಸಲಾರದು. ಅದರ ಬಗ್ಗೆ ವಿಚಾರ ಮಾಡುವ ಬ್ರಹ್ಮಸೂತ್ರವೂ ಗ್ರಾಹ್ಯವಾಗಲಾರದು ಎಂದು ಪೂರ್ವಪಕ್ಷ. ಭಾಷೆ ಕಲಿಯುವ ಮಕ್ಕಳು ಮೊದಲಿಗೆ ಅಪ್ಪ, ಅಮ್ಮ ಮುಂತಾದ ಸಿದ್ಧವಸ್ತು ಬೋಧಕಪದಗಳನ್ನೆ ತಿಳಿಯುವುದರಿಂದ ಅವುಗಳಂತೆ ಬೇರೆ ಶಬ್ದಗಳೂ ಸಿದ್ಧಪರವಾಗುವುದರಿಂದ ಬ್ರಹ್ಮನನ್ನು ವೇದಾಂತವು ಬೋಧಿಸಬಲ್ಲುದು. ಬ್ರಹ್ಮವಿಚಾರವನ್ನು ನಡೆಸಬಹುದು ಎಂದು ಸಿದ್ಧಾಂತ.

### ರಾಮಾನುಜರ ಅಧಿಕರಣ ಸೂತ್ರದಲ್ಲಿ ಇಲ್ಲ

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಕೃತ ಸೂತ್ರಕ್ಕೆ ಕರ್ಮವಿಚಾರ ಮಾಡಿದ ಬಳಿಕ, ಕರ್ಮವಿಚಾರ ಮಾಡಿ ಮುಗಿದಿರುವುದರಿಂದಲೆ ಬ್ರಹ್ಮವಿಚಾರ ಮಾಡಬೇಕು ಎಂದು ರಾಮಾನುಜರ ಪ್ರಕಾರ ಅರ್ಥ. ಇಲ್ಲಿ ಶಬ್ದಗಳು ಸಿದ್ಧಪರವಾಗುವುದರ ಬಗ್ಗೆ ಏನೂ ಹೇಳಿಲ್ಲ. ಆದರಿಂದ ಅಧಿಕರಣಕ್ಕೂ ಸೂತ್ರಕ್ಕೂ ಏನೂ ಸಂಬಂಧವಿಲ್ಲ. ಸಿದ್ಧಪರವಾದ ಬ್ರಹ್ಮಶಬ್ದ ಸೂತ್ರದಲ್ಲಿರುವುದರಿಂದಲೆ ಶಬ್ದಗಳು ಸಿದ್ಧಪರವೆಂದು ಸೂಚಿಸಿದಂತಾಗುತ್ತದೆ ಎನ್ನುವುದೂ ಸರಿಯಲ್ಲ. 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂದು ವಿಷಯವಾಕ್ಯದಲ್ಲಾಗಲಿ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಸೂತ್ರದಲ್ಲಾಗಲೀ 'ಬ್ರಹ್ಮವಿಚಾರ ಮಾಡಬೇಕು' ಎಂದು ಕಾರ್ಯವನ್ನೇ ಹೇಳಿರುವುದರಿಂದ ಬ್ರಹ್ಮಶಬ್ದ ಕಾರ್ಯಪರವೆ ಎಂದು ಪೂರ್ವಪಕ್ಷಿ ಹೇಳಿದರೆ ಏನು ಉತ್ತರ?

ರಾಮಾನುಜಮತದಲ್ಲಿ ಕರ್ಮಮೀಮಾಂಸೆ ದೇವಮೀಮಾಂಸೆ ಬ್ರಹ್ಮಮೀಮಾಂಸೆ ಇವು ಮೂರು ಒಂದೇ ಗ್ರಂಥದ ಮೂರು ಭಾಗಗಳು. ಅವುಗಳನ್ನು ಕ್ರಮವಾಗಿಯೆ ಅಧ್ಯಯನ ಮಾಡಬೇಕು. ದೇವಮೀಮಾಂಸೆ ಸಿದ್ಧಬೋಧಕ. ಶಬ್ದಗಳಿಗೆ ಸಿದ್ಧಪರತ್ವವನ್ನು ಒಪ್ಪದ ದೇವಮೀಮಾಂಸೆ ನಡೆಯಲಾರದು ಎಂದ ಮೇಲೆ ಮುಂದೆ ಅಧ್ಯಯನ ಮಾಡುವ ಬ್ರಹ್ಮಮೀಮಾಂಸೆಯಲ್ಲಿ ಸಿದ್ಧಪರತ್ವದ ಬಗ್ಗೆ ವಿವಾದ ಸಂಗತವಾಗುವುದೆ?

## ಶೈವಭಾಷ್ಯದಲ್ಲಿ ಜಿಜ್ಞಾಸಾಧಿಕರಣ

## ಮತ್ತು

## ವಿಮರ್ಶೆ

ಶೈವಭಾಷ್ಯದಲ್ಲಿ 'ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್' 'ವಿಚಾರಕ್ಕಾಗಿ ಗುರುವಿನ ಬಳಿಗೆ ಹೋಗಬೇಕು'ಎಂಬುದು ವಿಷಯವಾಕ್ಯ. 'ಅಯಮಾತ್ಮಾ ಬ್ರಹ್ಮ' ಎಂದು ವೇದಾಂತವು 'ನಾನು' ಎಂದು ಅನುಭವಸಿದ್ಧವಾದ ಜೀವಾತ್ಮನನ್ನೆ ಬ್ರಹ್ಮ ಎಂದು ಕರೆದಿದೆ. ಅದ್ವೈತಿಗಳು ಹೇಳುವ ಶುದ್ಧ ಚೈತನ್ಯಾಭೇದ ಇಲ್ಲಿ ಉಕ್ತವಾಗುವುದಿಲ್ಲ. ಅದನ್ನೊಪ್ಪಿದರೂ ಶುದ್ಧಚೈತನ್ಯ ನಿರ್ಧರ್ಮಕವಾದ್ದರಿಂದ ಅದನ್ನು ಶಬ್ದದಿಂದ ಹೇಳುವುದೆ ಅಶಕ್ಯ. ಮತ್ತು ಜೀವಾತ್ಮನಲ್ಲಿರುವ ಕರ್ತೃತ್ವಾದಿ ಧರ್ಮ ಮಿಥ್ಯೆ ಎನಿಸಲೂ ಸಾಧ್ಯವಿಲ್ಲ. ಸತ್ಯವೆಂದು ಪ್ರತ್ಯಕ್ಷಾನುಭವ ಹೇಳುತ್ತಿದೆ. ಆದರಿಂದ ಜೀವಬ್ರಹ್ಮಾಭೇದವನ್ನೇ

ಶ್ರುತಿ ಹೇಳುತ್ತದೆ. ಜೀವಾತ್ಮನ ವಿಷಯದಲ್ಲಿ ಸಂಶಯವಿಲ್ಲದ್ದರಿಂದ ವಿಚಾರ ಬೇಡ. ಬ್ರಹ್ಮನನ್ನು ಪೂರ್ತಿ ತಿಳಿಯುವುದು ಯಾರಿಗೂ ಶಕ್ಯವಿಲ್ಲ. ಅಲ್ಪಸ್ವಲ್ಪ ತಿಳಿದರೆ ಅದರಿಂದ ಮೋಕ್ಷಫಲವಿಲ್ಲ. ಅದರಿಂದಲೂ ಬ್ರಹ್ಮವಿಚಾರ ಬೇಡ. ಅದಕ್ಕಾಗಿ ಗುರುವಿನ ಬಳಿಗೆ ಹೋಗುವುದೂ ಬೇಡ ಎಂದು ಪೂರ್ವಪಕ್ಷ.

ಜೀವಬ್ರಹ್ಮ ಭೇದವನ್ನೂ ವೇದಾಂತದಲ್ಲಿ ಅಲ್ಲಲ್ಲಿ ಹೇಳಿರುವುದರಿಂದ ಭೇದವೆ ಅಭೇದವೆ ಎಂದು ಸಂದೇಹ ಬರುವುದರಿಂದ ವಿಚಾರ ಬೇಕು ಎಂದು ಸಿದ್ಧಾಂತ.

ಇಲ್ಲಿ ವಿಷಯವಾಕ್ಯವನ್ನು ಆರಿಸಿಕೊಳ್ಳುವುದರಲ್ಲಿಯೆ ತಪ್ಪಿದೆ. ಈ ವಿಷಯ ವಾಕ್ಯದಲ್ಲಿ ಅರ್ಥನಿರ್ಣಯಕ್ಕೆ ಯುಕ್ತಿಯೆ ಇಲ್ಲ. ಸಾಕ್ಷಾತ್ 'ಜಿಜ್ಞಾಸಾ' ಶಬ್ದದಿಂದಲೆ ಕೂಡಿದ ವಾಕ್ಯಗಳಿರುವಾಗ ಅವನ್ನು ಬಿಟ್ಟು ಸಂಬಂಧವೆ ಇಲ್ಲದ ಈ ವಿಷಯವಾಕ್ಯವೆತ್ತಿಕೊಂಡಿರುವುದು ಅಯುಕ್ತ. ಶ್ರುತಿ ಜೀವಬ್ರಹ್ಮೈಕ್ಯವನ್ನು ಹೇಳುವಾಗ ಪ್ರತ್ಯಕ್ಷವಿರೋಧ ಬಂದರೆ ಪ್ರತ್ಯಕ್ಷ ಅತತ್ತ್ವಾವೇದಕ, ದುರ್ಬಲವೆಂದು ಅದ್ವೈತಿಗಳಂತೆ ಈ ಶೈವರು ಹೇಳುವುದಿಲ್ಲ. ಆಗ ಶ್ರುತಿ ಐಕ್ಯವನ್ನು ಹೇಗೆ ಹೇಳುವುದು ಸಾಧ್ಯ? ಅಭೇದ ವಾಕ್ಯಗಳನ್ನು ತೋರಿಸುವ ಪೂರ್ವಪಕ್ಷ ಭೇದವಾಕ್ಯಗಳನ್ನು ನೋಡಿಯೆ ಇಲ್ಲವೆ? ಅವುಗಳಿಗೆ ಏನು ಗತಿ? ನಾನು ಎಂದು ಜೀವ ಅನುಭವಸಿದ್ಧನೇ ಆಗಿದ್ದರೂ ದೇಹಾದಿಗಳಿಗಿಂತ ಜೀವ ಭಿನ್ನನೆ ಅಭಿನ್ನನೆ ಎಂದು ವಿಚಾರ ಮಾಡಬಹುದು. ಬೇಡ ಏಕೆ? 'ಶುದ್ಧಚೈತನ್ಯಾಭೇದ ಒಪ್ಪಿದರೂ ಶಬ್ದದಿಂದ ಅದನ್ನು ಹೇಳಲಾಗದು' ಎನ್ನುವ ಮಾತೂ ಸ್ವವ್ಯಾಹತ. ಒಪ್ಪಬೇಕೆಂದರೆ ಅದನ್ನು ಹೇಳುವ ಶಬ್ದ ಬೇಕು. ಯಾವ ಶಬ್ದವೂ ಹೇಳದೆಂದು ಹೇಳುವುದು ಸರಿಯಲ್ಲ. ಬ್ರಹ್ಮನನ್ನು ಪೂರ್ತಿ ತಿಳಿಯುವುದು ಅಶಕ್ಯವೆಂದರೆ ಶಕ್ಯವಿದ್ದಷ್ಟು ತಿಳಿದರೆ ಮೋಕ್ಷ ಎಂದೇ ಒಪ್ಪಬೇಕಾಗುವುದರಿಂದ ಮೋಕ್ಷಫಲವಿಲ್ಲ ಎಂದುದೂ ಅಯುಕ್ತ. ಭೇದಾಭೇದ ಸಂದೇಹವಿದೆ ಎಂಬ ಸಿದ್ಧಾಂತ ಯುಕ್ತಿಗೆ ಸೂಚಕವಾದ ಯಾವ ಶಬ್ದವೂ ಸೂತ್ರದಲ್ಲಿಲ್ಲ. ಅದರಿಂದ ಈ ಅಧಿಕರಣ ಸೂತ್ರಕ್ಕೆ ಸಂಬಂಧಿಸಿಯೆ ಇಲ್ಲ.

* * * * * *

ಇಲ್ಲಿಗೆ ಜಿಜ್ಞಾಸಾಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ತ್ವಪ್ರದೀಪ ಇವುಗಳ ಅನುವಾದವು ಹಾಗೂ ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಜನ್ಮಾದ್ಯಧಿಕರಣ

## ಬ್ರಹ್ಮಸೂತ್ರಭಾಷ್ಯ
## ಸತ್ತರ್ಕದೀಪಾವಳಿ
## ತತ್ವಪ್ರದೀಪ

ವಿಶೇಷ ವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಜನ್ಮಾಧಿಕರಣ

# ಬ್ರಹ್ಮಸೂತ್ರ

**ब्रह्मसूत्रम् — ।। जन्माद्यस्य यतः ।।१-१-२।।**

ಸೂತ್ರಾರ್ಥ - ಪ್ರತ್ಯಕ್ಷಸಿದ್ಧವಾದ ಸಮಸ್ತ ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು ಯಾರಿಂದ ಉಂಟಾಗುತ್ತವೋ ಅವನೇ ಬ್ರಹ್ಮನಾಗಿದ್ದಾನೆ.

ಅಸ್ಯ = ಪ್ರಕೃತವಾದ ಜೀವಜಡಾತ್ಮಕವಾದ ಪ್ರಪಂಚಕ್ಕೆ, ಯತಃ = ಯಾರಿಂದ, ಜನ್ಮಾದಿ = ಸೃಷ್ಟ್ಯಾದ್ಯಷ್ಟಕಗಳು, ಆಗುತ್ತವೆಂದು ಶ್ರುತಿಸಿದ್ಧವಾಗಿದೆಯೋ ಅವನೇ ಜಿಜ್ಞಾಸ್ಯ ಬ್ರಹ್ಮ, ಬೇರೆಯವರಲ್ಲ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಜನ್ಮಾಧಿಕರಣವು ಸಮಾಪ್ತವಾಯಿತು ॥

* * * * * *

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

### ಜಿಜ್ಞಾಸ್ಯಬ್ರಹ್ಮನ ಲಕ್ಷಣ

**ब्रह्मसूत्रभाष्यम् – ब्रह्मणो लक्षणमाह –**

**।। जन्माद्यस्य यतः ।।२।।**

**सृष्टिस्थितिसंहारनियमनज्ञानाज्ञानबन्धमोक्षा यतः ।**

ಬ್ರಹ್ಮನ ಲಕ್ಷಣವನ್ನು ಸೂತ್ರಕಾರರು 'ಜನ್ಮಾದ್ಯಸ್ಯ ಯತಃ' ಎಂಬುದಾಗಿ ಹೇಳುತ್ತಿದ್ದಾರೆ.

'ಜಗತ್ತಿನ ಉತ್ಪತ್ತಿ, ಪಾಲನೆ, ನಾಶ, ಪ್ರೇರಣೆ, ಜ್ಞಾನ, ಅಜ್ಞಾನ, ಸಂಸಾರಬಂಧನ, ಸ್ವರೂಪಾನಂದಾವಿರ್ಭಾವಗಳು ಯಾರಿಂದ ಆಗುತ್ತವೋ' (ಅವನೇ ಬ್ರಹ್ಮನಾಗಿದ್ದಾನೆ.)

### ಸೃಷ್ಟ್ಯಾದ್ಯಷ್ಟಕರ್ತೃತ್ವವು ವಿಷ್ಣುವಿನಲ್ಲಿ ಮಾತ್ರ ಇದೆ

**ब्रह्मसूत्रभाष्यम् –**

**'उत्पत्तिस्थितिसंहारा नियतिर्ज्ञानमावृतिः ।**
**बन्धमोक्षौ च पुरुषायस्मात्स हरिरेकराट्' इति स्कान्दे ।**

'ಉತ್ಪತ್ತಿ, ಸಂರಕ್ಷಣೆ, ಪ್ರಳಯ, ಪ್ರೇರಣೆ, ಜ್ಞಾನ, ಅಜ್ಞಾನ, ಸಂಸಾರಬಂಧನ, ಮೋಕ್ಷ ಇವುಗಳು ಯಾರಿಂದ ಆಗುತ್ತವೋ ಅವನೇ ಶ್ರೀಹರಿಯು ಮತ್ತು ಸರ್ವತಂತ್ರಸ್ವತಂತ್ರನು.' ಹೀಗೆ ಸ್ಕಾಂದಪುರಾಣದಲ್ಲಿ ಹೇಳಲ್ಪಟ್ಟಿದೆ.

### ಬ್ರಹ್ಮನ ಈ ಲಕ್ಷಣಕ್ಕೆ ಅಸಂಭವದೋಷವಿಲ್ಲ

**ब्रह्मसूत्रभाष्यम् –**

**'यतो वा इमानि भूतानि जायन्ते । येन जातानि जीवन्ति ।**
**यत्प्रयन्त्यभिसंविशन्ति' 'तद्विजिज्ञासस्व तद्ब्रह्म' इति ।**

'ಯಾರಿಂದ ಪ್ರತ್ಯಕ್ಷಾದಿಪ್ರಮಾಣಗಳಿಂದ ಸಿದ್ಧವಾದ ಚೇತನರಾಶಿಗಳು ಹುಟ್ಟುತ್ತವೋ, ಜೀವಿಸುತ್ತವೋ, ಮತ್ತು ಪ್ರಳಯಕಾಲದಲ್ಲಿ ಯಾರನ್ನು ಪ್ರವೇಶಿಸುತ್ತವೋ, ಸಂಸಾರಾವಸ್ಥೆಯ ಅನಂತರ ಸ್ವೇಚ್ಛೆಯಿಂದ ವಿಹರಿಸುತ್ತವೋ ಆ ವ್ಯಕ್ತಿಯನ್ನೇ ವಿಚಾರ ಮಾಡಬೇಕು. ಅವನೇ ಬ್ರಹ್ಮಶಬ್ದವಾಚ್ಯ-ನಾಗಿದ್ದಾನೆ.'' ಹೀಗೆ ತೈತ್ತಿರೀಯಶ್ರುತಿಯಲ್ಲಿ ಹೇಳಿದೆ.

### ಲಕ್ಷಣಸಮುದಾಯವು ವಿಷ್ಣುವಿನ ಅಸಾಧಾರಣಲಕ್ಷಣವೆನ್ನಲು ಕೈಮುತ್ಯನ್ಯಾಯ

**ब्रह्मसूत्रभाष्यम् –**

**'य उ त्रिधातु पृथिवीमुत द्यामेको दाधार भुवनानि विश्वा ।'**
**'चतुर्भिस्साकं नवतिं च नामभिश्चक्रं न वृत्तं व्यतीँरवीविपत् ।**
**(ऋ-१-१५५-६)**

ಅನುವಾದ - 'ಯಾವ ಸಮರ್ಥನಾದ ಒಬ್ಬನೇ ವಿಷ್ಣುವು ಪ್ರಕೃತಿ, ಪುರುಷ, ಕಾಲಗಳಿಗೆ ಆಧಾರನಾಗಿ; ಭೂಮಿಯನ್ನು, ಆಕಾಶವನ್ನು, ಮತ್ತು ಸಮಸ್ತಲೋಕಗಳನ್ನು ಧರಿಸಿದ್ದಾನೋ ಅವನೇ ಗುಣಪೂರ್ಣನಾದ ಬ್ರಹ್ಮನು' ಎಂದು ಋಗ್ವೇದವು ಹೇಳುತ್ತದೆ.

ಮತ್ತು ವಾಸುದೇವ, ಸಂಕರ್ಷಣ, ಅನಿರುದ್ಧ, ಪ್ರದ್ಯುಮ್ನ ಎಂಬ ನಾಕು ರೂಪಗಳಿಂದ ವಸು, ರುದ್ರ, ಆದಿತ್ಯ, ಪ್ರಜಾಪತಿಗಳೆಂಬ ಹೆಸರುಗಳಿಂದ ಉತ್ತಮರಾದ ತೊಂಬತ್ತು ದೇವತೆಗಳನ್ನು ಚಕ್ರದಂತೆ ತಿರುಗಿಸುತ್ತಿರುವನೋ ಅವನೇ ಶ್ರುತ್ಯುಕ್ತನಾದ ಪರಬ್ರಹ್ಮನು - ಹೀಗೆ ಋಗ್ವೇದವು ಹೇಳಿದೆ.

### ಶ್ರುತಿಗಳ ಆಧಾರದಿಂದಲೇ ಅತಿವ್ಯಾಪ್ತಿಯ ಪರಿಹಾರ

**ब्रह्मसूत्रभाष्यम् –**

**'परो मात्रया तन्वा वृधान न ते महित्वमन्वश्नुवन्ति ।**
**न ते विष्णो जायमानो न जातो देव महिम्नः परमन्तमाप'।**

**'यो नः पिता जनिता यो विधाता धामानि वेद भुवनानि विश्वा'**
**इत्यादि च ।। २ ।।**

**।। इति जन्माधिकरणम् ।। २ ।।**

''ಎಲೈ ವಿಷ್ಣುವೇ ! ನೀನು ಅಳತೆಗೆ ಸಿಗುವವನಲ್ಲ. ನೀನು ದೇಹದಿಂದ ಪ್ರಪಂಚವನ್ನೇ ವ್ಯಾಪಿಸಿರುವಿ. ನಿನ್ನ ಸೃಷ್ಟ್ಯಾದಿಮಹಿಮೆಯನ್ನು ಮುಕ್ತರಾಗಲಿ, ಅಮುಕ್ತರಾಗಲಿ ಹೊಂದಲಾರರು. ಕ್ರೀಡಾದಿಗುಣ-ವಿಶಿಷ್ಟನಾದ ಸ್ವಾಮಿಯೇ ! ನಿನ್ನ ಈ ಅಗಾಧಮಹಿಮೆಯ ಕೊನೆಯನ್ನು ಇಲ್ಲಿಯ ತನಕ ಹುಟ್ಟಿದ ಬ್ರಹ್ಮಾದಿಗಳು, ಮುಂದೆ ಹುಟ್ಟುವ ಬ್ರಹ್ಮಾದಿಗಳಾಗಲೀ ಹೊಂದಲಿಲ್ಲ, ಈಗಲೂ ಹೊಂದಿಲ್ಲ ಮುಂದೆಯೂ ಹೊಂದಲು ಸಾಧ್ಯವಿಲ್ಲ'' ಹೀಗೆ ಋಗ್ವೇದದಲ್ಲಿ ಹೇಳಲ್ಪಟ್ಟಿದೆ.

'ಯಾವ ಬ್ರಹ್ಮನು ನಮ್ಮೆಲ್ಲರಿಗೆ ತಂದೆಯಂತೆ ಜನಕನಾಗಿದ್ದಾನೋ, ಧಾರಕನೂ, ಪೋಷಕನೂ ಆಗಿದ್ದಾನೋ, ಅವನು ಸಮಸ್ತಜಗತ್ತಿನಲ್ಲಿರುವುದನ್ನೆಲ್ಲ ಸಂಪೂರ್ಣವಾಗಿ ತಿಳಿದಿದ್ದಾನೆ' ಎಂದು.

ಈ ಎಲ್ಲ ಪ್ರಮಾಣಗಳೂ ಸೂತ್ರಕಾರರು ಹೇಳಿದ ಬ್ರಹ್ಮನ ಲಕ್ಷಣದ ವಿಷಯದಲ್ಲಿ ಆಧಾರವಾಗಿವೆ.

॥ ಇಲ್ಲಿಗೆ ಬ್ರಹ್ಮಸೂತ್ರಭಾಷ್ಯದಲ್ಲಿ ಜನ್ಮಾಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥

ಶ್ರೀಪದ್ಮನಾಭತೀರ್ಥಶ್ರೀಪಾದರಿಂದ ವಿರಚಿತವಾದ

# ಸತ್ತರ್ಕದೀಪಾವಳಿ

## ಜನ್ಮಾದಿಕರ್ತೃತ್ವವು ಸ್ವರೂಪಲಕ್ಷಣ

**सत्तर्कदीपावळिः – 'किं तद् ब्रह्म? यज्जिज्ञासा कर्तव्या' इत्यपेक्षायां जगज्जन्मादिकर्तृत्वाख्येन स्वरूपलक्षणेन विशिष्टब्रह्मप्रतिपादयत् सूत्रमवतारयति – ब्रह्मण इति ।। जन्माद्यस्येति व्याचष्टे – सृष्टीति ।। 'यज्जगज्जन्मादिकर्तृ तद् ब्रह्म' इति सूत्रार्थः ।**

ಪ್ರಥಮಸೂತ್ರದಲ್ಲಿ ಹೇಳಲ್ಪಟ್ಟ ಬ್ರಹ್ಮನು ಯಾರು? ಯಾರ ಜಿಜ್ಞಾಸೆಯನ್ನು ಮಾಡಬೇಕು? ಎಂಬ ಅಪೇಕ್ಷೆ ಬಂದರೆ ಜಗಜ್ಜನ್ಮಕರ್ತೃತ್ವವೆಂಬ ಸ್ವರೂಪಲಕ್ಷಣದಿಂದ ವಿಶಿಷ್ಟನಾದ ಬ್ರಹ್ಮನನ್ನು ಪ್ರತಿಪಾದಿಸುವ ಸೂತ್ರಕ್ಕೆ ಅವತಾರಿಕೆಯನ್ನು ''ಬ್ರಹ್ಮಣಃ'' ಇತ್ಯಾದಿಯಾಗಿ ನೀಡುತ್ತಿದ್ದಾರೆ.

'ಜನ್ಮಾದ್ಯಸ್ಯ' ಎಂಬ ಸೂತ್ರವನ್ನು 'ಸೃಷ್ಟಿ' ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಿದ್ದಾರೆ. ಯಾರು ಜಗಜ್ಜನ್ಮಾದಿಗಳಿಗೆ ಕಾರಣನಾಗಿದ್ದಾನೋ ಅವನೇ ಬ್ರಹ್ಮನೆಂದು ಸೂತ್ರಾರ್ಥ.

ಸೂತ್ರಪ್ರತಿಪಾದ್ಯನು ನಿರ್ಗುಣನಲ್ಲ

**सत्तर्कदीपावळिः** – **'ब्रह्मस्वरूपमात्रप्रश्नस्य उत्तरत्वेन जगत्कर्तृत्वादि-विशिष्टब्रह्माभिधानमसङ्गतम्' इति चेत् मैवम् । सर्वथानवगतस्य प्रश्नासम्भवात् बृहद् ब्रह्मेति ज्ञानमेव सर्वतो व्यावृत्ततया ज्ञातुं पृष्टत्वेन व्यावृत्तये लक्षणविशिष्टब्रह्माभिधानस्य सङ्गतत्वात् । निर्गुणं चेदत्र ब्रह्म विवक्षितम् 'जन्माद्यस्य न यतः' इति सूत्रं स्यात् । न हि कर्तृत्वादिधर्मरहितात् किञ्चिदुत्पद्यते ?**

ಕೇವಲ ಬ್ರಹ್ಮಸ್ವರೂಪದ ಬಗ್ಗೆ ಪ್ರಶ್ನಿಸಿದಾಗ ಅವನ ಸ್ವರೂಪವನ್ನಷ್ಟೇ ಪರಿಚಯಿಸಬೇಕು. ಜಗತ್ಕರ್ತೃತ್ವಾದಿವಿಶಿಷ್ಟನಾದ ಬ್ರಹ್ಮನ ಪ್ರತಿಪಾದನೆಯು ಅಸಂಗತವಲ್ಲವೇ? ಎಂದು ಪ್ರಶ್ನಿಸಬಾರದು. ಸರ್ವಥಾ ತಿಳಿಯದ ಪದಾರ್ಥದ ಬಗ್ಗೆ ಪ್ರಶ್ನೆಯನ್ನು ಮಾಡಲು ಸಾಧ್ಯವೇ ಇಲ್ಲ? ಆದ್ದರಿಂದ ಪ್ರಶ್ನಿಸಬೇಕಾದರೆ ಬ್ರಹ್ಮಸ್ವರೂಪವು ತಿಳಿದಿರಲೇ ಬೇಕು? ಆದ್ದರಿಂದ ಸರ್ವಪದಾರ್ಥಗಳಿಂದ ವ್ಯಾವೃತ್ತನಾದ ಬ್ರಹ್ಮನನ್ನು ತಿಳಿಯಲು ಪ್ರಶ್ನಿಸಿದ್ದರಿಂದ ಅಂತಹ ಜಗತ್ಕರ್ತೃತ್ವಾದಿ ವಿಶಿಷ್ಟ ಬ್ರಹ್ಮನನ್ನು ಸೂತ್ರದಲ್ಲಿ ಹೇಳಿದ್ದು ಅಸಂಗತವಾಗುವುದಿಲ್ಲ.

ಈ ಸೂತ್ರದಲ್ಲಿ ಪ್ರತಿಪಾದ್ಯನಾದ ಬ್ರಹ್ಮನು ನಿರ್ಗುಣನಾದಲ್ಲಿ 'ಜನ್ಮಾದ್ಯಸ್ಯ ನ ಯತಃ' ಎಂದು ಸೂತ್ರವಿರಬೇಕಾಗಿತ್ತು. ಏಕೆಂದರೆ ಕರ್ತೃತ್ವಾದಿಗುಣಗಳಿಲ್ಲದ ಬ್ರಹ್ಮನಿಂದ ಜನ್ಮಾದಿ-ಗಳಾಗಲು ಸಾಧ್ಯವೇ ಇಲ್ಲ.

ಶ್ರೀಹರಿಯೊಬ್ಬನೇ ಜಗಜ್ಜನ್ಮಾದಿಕಾರಣನು

**सत्तर्कदीपावळिः** – **'जगजन्मादिकर्ता च हरिरेव' इत्यत्र पुराणवचनमाह – उत्पत्तीति ।। 'भीषास्माद् वातः पवते' 'यः पृथिवीमन्तरो यमयति'**

इत्यादिश्रुतावपि विष्णुरेव जगज्जन्मादिकर्तोच्यते । 'तद् ब्रह्म' इति श्रवणात् ।

ಜಗಜ್ಜನ್ಮಾದಿಕಾರಣನು ಶ್ರೀಹರಿಯೇ ಆಗಿದ್ದಾನೆನ್ನಲು ಪುರಾಣವಚನವನ್ನು ಉಲ್ಲೇಖಿಸುತ್ತಿದ್ದಾರೆ. ''ಉತ್ಪತ್ತಿಸ್ಥಿತಿ' ಇತ್ಯಾದಿಯಾಗಿ. 'ಭೀಷಾಸ್ಮಾದ್ವಾತಃ ಪವತೇ' 'ಯಃ ಪೃಥಿವೀಮಂತರೋ ಯಮಯತಿ' ಇತ್ಯಾದಿ ಶ್ರುತಿಗಳಲ್ಲಿಯೂ ವಿಷ್ಣುವೇ ಜಗಜ್ಜನ್ಮಾದಿ-ಕಾರಣನೆಂದು ಹೇಳಲ್ಪಟ್ಟಿದೆ. ಇಂತಹ ವಿಷ್ಣುವೇ 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಇತ್ಯಾದಿ ಶ್ರುತಿಗಳಲ್ಲಿ ಪ್ರತಿಪಾದ್ಯನಾಗಿದ್ದಾನೆ.

**सत्तर्कदीपावलिः** – एतद्दार्ढ्याय विष्णुसूक्तगतश्रुती दर्शयति – य उ त्रिधात्वित्यादिना ।। अस्यार्थः – यः प्रकृतिपुरुषकालाधारत्वात् त्रिधातुशब्दोक्तः एक एव पृथिव्याद्याधारः, स हि विष्णुर्नम्यत्वेन नामपादोक्तैश्चतुर्भिर्वासुदेव-सङ्कर्षणप्रद्युम्नअनिरुद्धाख्यस्वरूपैः सहितः अष्टवस्वेकादशरुद्र विष्णुव्यतिरिक्तैका-दशादित्यहिरण्यगर्भादिदशप्रजापति पञ्चाशन्मरुदाख्यान्नवतिसङ्ख्याकान् विशेषेणार्तान् अधिकान् अन्यांश्च पदार्थान् वृत्तं चक्रमिव अवीविपत् विशेषेण सृष्ट्यादिना परिवर्तयामास – इत्यर्थः ।

ಅಂತಹ ವಿಷ್ಣುವೇ ಬ್ರಹ್ಮನಾಗಿದ್ದಾನೆ ಎಂಬ ನಿಶ್ಚಯಕ್ಕೋಸ್ಕರ ವಿಷ್ಣುಸೂಕ್ತದಲ್ಲಿರುವ ಶ್ರುತಿಯನ್ನೇ ''ಯ ಉ ತ್ರಿಧಾತು'' ಇತ್ಯಾದಿಯಾಗಿ ಉಲ್ಲೇಖಿಸುತ್ತಿದ್ದಾರೆ. ಶ್ರುತಿಗೆ ಹೀಗರ್ಥ - ಯಾವಾತನು ಪ್ರಕೃತಿ, ಪುರುಷ, ಕಾಲಗಳಿಗೆ ಆಧಾರನಾದ್ದರಿಂದ ತ್ರಿಧಾತುಶಬ್ದದಿಂದ ಪ್ರತಿಪಾದ್ಯ-ನಾಗಿದ್ದಾನೋ, ಅಂತಹ ಒಬ್ಬನೇ ಪುರುಷನು ಪೃಥಿವಿಯನ್ನು ಧರಿಸಿದ್ದಾನೆ, ಅಂತಹ ವಿಷ್ಣುವು ನಮಸ್ಕಾರಕ್ಕೆ ಅರ್ಹನಾಗಿದ್ದಾನೆ, ನಾಮಾತ್ಮಕಪಾದದಲ್ಲಿ ಹೇಳಿದಂತೆ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧಗಳೆಂಬ ನಾಕು ರೂಪಗಳಿಂದ ಸಹಿತನಾಗಿದ್ದಾನೆ. ಅಷ್ಟವಸುಗಳು, ಏಕಾದಶರುದ್ರರು, ವಿಷ್ಣುವನ್ನು ಬಿಟ್ಟು ಏಕಾದಶ ಆದಿತ್ಯರು, ಹಿರಣ್ಯಗರ್ಭರೇ ಮೊದಲಾದ ಹತ್ತು ಪ್ರಜಾಪತಿಗಳು, ಐವತ್ತು ಮರುದ್ದೇವತೆಗಳು ಹೀಗೆ ತೊಂಭತ್ತು ಮಂದಿ ದೇವತೆಗಳನ್ನು ಮತ್ತು ಇನ್ನೂ ಅನೇಕ ಪದಾರ್ಥಗಳನ್ನು ಚಕ್ರದಂತೆ ಸೃಷ್ಟಿಸ್ಥಿತಿಗಳಿಂದ ತಿರುಗಿಸುತ್ತಾನೆ.

**सत्तर्कदीपावळिः** – 'तदेतद् जगज्जन्मादिमाहात्म्यं विष्णोरन्ये न प्राप्नुवन्ति' इत्येतदुच्यते – पर इति ।। 'यतो मात्राया मितेः परः अपरिच्छिन्नः अवध्यतीतः तन्वा वृधान जगद्व्याप्त्या विष्णो ते तव महिमानमन्ये न प्राप्नुवन्ति' इत्यर्थः । 'महिमातारतम्यपरावधिभूतं विष्णोर्महित्वं यथेदानीन्तनो न प्राप्नोति तथा जातो नापि जनिष्यमाणो प्राप्स्यति' इत्युच्यते – न त इति ।। एतदेव महित्वं दृश्यते – यो न इति ।। '' यो विश्वकर्मनामा पद्मनाभो नः सुरनरादीनामस्माकम्, पिता इत्याद्यपि दत्तपुत्रादेरजनकोपि पिता दृष्ट इति तन्निवृत्त्यर्थं जनिता पितेति विशेषणम् । 'पाति' इति वा, पिता विशेषेण धाता विधारकः पोषको मुक्तानां तत्संपृच्छ्यत इति सम्प्रश्नं भुवनानि यन्ति'' इत्यन्वयः ।

।। इति श्रीपद्मनाभतीर्थविरचिता सत्तर्कदीपावळ्यां जन्माधिकरणम् ।।

ಇಂತಹ ಸೃಷ್ಟ್ಯಾದಿಮಹಿಮೆಯು ವಿಷ್ಣುವನ್ನು ಬಿಟ್ಟು ಬೇರೆ ಯಾರಲ್ಲಿಯೂ ಬರುವುದಿಲ್ಲವೆಂದು 'ಪರೋ ಮಾತ್ರಯಾ' ಎಂಬ ಶ್ರುತಿಯಿಂದ ಹೇಳುತ್ತಿದ್ದಾರೆ. ಈ ಶ್ರುತಿಗೆ ಹೀಗೆ ಅರ್ಥ -- ಯಾವ ಕಾರಣದಿಂದ ಅಪರಿಮಿತವಾದ ದೇಹವನ್ನು ಧರಿಸಿ ಜಗತ್ತನ್ನು ವ್ಯಾಪಿಸಿದ್ದೀಯೋ, ಅಂತಹ ಎಲೈ ವಿಷ್ಣುವೇ ! ನಿನ್ನ ಮಹಿಮೆಯನ್ನು ಬೇರಾರೂ ಹೊಂದಲಾರರು - ಎಂದು. ವಿಷ್ಣುವಿನ ಮಹಿಮೆಯನ್ನು ಯಾವಕಾರಣದಿಂದ ಈಗಿನ ಜನಗಳು ಹೊಂದಿಲ್ಲವೋ ಅದೇ ರೀತಿಯಾಗಿ ಹಿಂದಿನ ಜೀವಿಗಳು ಮತ್ತು ಮುಂದಿನ ಜೀವಿಗಳೂ ಸಹ ಹೊಂದಲಾರರೆಂದು ''ನ ತೇ ಮಹಿತ್ವಂ'' ಎಂಬುದರಿಂದ ಹೇಳುತ್ತಿದ್ದಾರೆ.

ಇಂತಹ ಮಹಿಮೆಯು ವಿಷ್ಣುವಿನಲ್ಲಿ ಸ್ಪಷ್ಟವಾಗಿ ಗೋಚರಿಸುತ್ತಿದೆಯೆಂದು 'ಯೋ ನಃ ಪಿತಾ' ಎಂಬ ಶ್ರುತಿಯಿಂದ ಹೇಳುತ್ತಿದ್ದಾರೆ. 'ಯಾವ ವಿಶ್ವಕರ್ಮನೆಂಬ ಪದ್ಮನಾಭನು ನಮಗೆ ಅಂದರೆ ದೇವತೆಗಳಿಗೆ ಮತ್ತು ಮನುಷ್ಯರಿಗೆ ತಂದೆಯಾಗಿದ್ದಾನೋ' ಇತ್ಯಾದಿ ಮಾತುಗಳಿಂದ ವಿಷ್ಣುವೇ ಇತರರಿಗೆ ಜನಕನೆಂದು ತಿಳಿಯುತ್ತದೆ. ದತ್ತಪುತ್ರಾದಿಗಳಿದ್ದಲ್ಲಿ ಜನಕನಾಗದಿದ್ದರೂ

ಕೆಲವೊಮ್ಮೆ ತಂದೆಯೆನ್ನಿಸಿಕೊಳ್ಳುತ್ತಾನೆ. ಆದರೆ ಅಂತಹ ಪಿತೃತ್ವವು ವಿಷ್ಣುವಿನಲ್ಲಿಲ್ಲವೆಂದು ನಿರಾಕರಿಸುವುದಕ್ಕಾಗಿ 'ಜನಿತಾ' ಎಂಬ ಪದವನ್ನು ಉಲ್ಲೇಖಿಸುತ್ತಿದ್ದಾರೆ. ರಕ್ಷಿಸುವುದರಿಂದ ತಂದೆಯೆಂದೂ, ವಿಶೇಷವಾಗಿ ಧಾರಣ ಮಾಡುವುದರಿಂದ ವಿಧಾರಕನೆಂದೂ, ಮುಕ್ತರಿಗೆ ಪೋಷಕನೆಂದೂ, ತಿಳಿಯಬೇಕು. ಶ್ರುತಿಯ ಪದಗಳಿಗೂ ಹೀಗೆ ಅನ್ವಯ ತಿಳಿಯಬೇಕು.

॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ರಚಿತವಾದ ಸತ್ತರ್ಕದೀಪಾವಳಿಯಲ್ಲಿ
ಜನ್ಮಾಧಿಕರಣದ ಕನ್ನಡಾನುವಾದವು ಮುಗಿಯಿತು ॥

### ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

## ತತ್ವಪ್ರದೀಪ

### ಬ್ರಹ್ಮನ ಲಕ್ಷಣ ಹೇಳಲು ಎರಡನೆಯ ಸೂತ್ರ

**तत्वप्रदीपः – ब्रह्मणो लक्षणमाहजन्माद्यस्य यतः । सा च विष्णोर्ब्रह्मत्वविधात्री तैत्तिरीयश्रुतिर्यानि तस्य लक्षणान्याह तान्यनेन सूत्रेण भगवानाह ।**

ಬ್ರಹ್ಮನ ಲಕ್ಷಣವನ್ನು 'ಜನ್ಮಾದ್ಯಸ್ಯ' ಎಂಬ ಸೂತ್ರದಿಂದ ಹೇಳುತ್ತಿದ್ದಾರೆ. 'ಬ್ರಹ್ಮಣೋ ಲಕ್ಷಣಮಾಹ ಜನ್ಮಾದ್ಯಸ್ಯ ಯತಃ' ಎಂಬ ಭಾಷ್ಯದ ಅಭಿಪ್ರಾಯ ಹೀಗಿದೆ -

ವಿಷ್ಣುವೇ ಬ್ರಹ್ಮನಾಗಿದ್ದಾನೆಂದು ಯಾವ ತೈತ್ತಿರೀಯ ಶ್ರುತಿಯು ಹೇಳುತ್ತಿದೆಯೋ ಆ ತೈತ್ತಿರೀಯದಲ್ಲೇ ಹೇಳಿದ ಬ್ರಹ್ಮನ ಲಕ್ಷಣವನ್ನು ಸೂತ್ರಕಾರರು 'ಜನ್ಮಾದ್ಯಸ್ಯ ಯತಃ' ಎಂಬುದರಿಂದ ಹೇಳುತ್ತಿದ್ದಾರೆ.

ವಿವರಣೆ - ಶ್ರುತಿಯು ವಿಷ್ಣುವನ್ನು ಬ್ರಹ್ಮನೆಂದು ಕರೆಯುತ್ತಿದೆಯೆಂದು ಜಿಜ್ಞಾಸಾಧಿಕರಣದ ಕೊನೆಯಲ್ಲಿ ಸಮರ್ಥಿಸಲಾಯಿತು. ಯಾವ ಶ್ರುತಿಯು ಬ್ರಹ್ಮನನ್ನು ವಿಷ್ಣುವೆಂದು ಹೇಳುತ್ತಿದೆಯೋ ಆ ಬ್ರಹ್ಮನ ಲಕ್ಷಣವನ್ನೇ ಸೂತ್ರಕಾರರು ಹೇಳುತ್ತಿದ್ದಾರೆಂಬುದು ಭಾಷ್ಯದ ಅಭಿಪ್ರಾಯ. 'ತದ್ ವಿಜಿಜ್ಞಾಸಸ್ವ' ಎಂಬ ತೈತ್ತಿರೀಯೋಪನಿಷತ್ತು ಯಾವ ಬ್ರಹ್ಮನನ್ನು ಹೇಳುತ್ತಿದೆಯೋ ಅದೇ ಬ್ರಹ್ಮನನ್ನು ನಾರಾಯಣೋಪನಿಷತ್ತು ಪ್ರತಿಪಾದನೆ ಮಾಡುತ್ತಿದೆ. ನಾರಾಯಣೋಪನಿಷತ್ತಿನಲ್ಲಿ ಬ್ರಹ್ಮನನ್ನು ವಿಷ್ಣುವೆಂದು ಹೇಳಲಾಗಿದೆ. ಅಂಥ ಬ್ರಹ್ಮನ ಲಕ್ಷಣವನ್ನೇ ಸೂತ್ರಕಾರರು ಈಗ ಹೇಳುತ್ತಿದ್ದಾರೆ -

ವಿಷ್ಣುವಿನಲ್ಲಿ ಗುಣಪೂರ್ಣತ್ವವೆಂಬ ಲಕ್ಷಣವನ್ನು ಹೇಳಬೇಕಿತ್ತು, ಸಕಲಜನ್ಮಾದಿಕರ್ತೃತ್ವವನ್ನು ಏಕೆ ಹೇಳುತ್ತಿದ್ದಾರೆ ? ಎಂಬ ಪ್ರಶ್ನೆ ಬರುತ್ತದೆ. ಈ ಪ್ರಶ್ನೆಗೆ ಉತ್ತರವನ್ನು ಹೀಗೆ ತಿಳಿಯಬೇಕು - ಯಾವ ವ್ಯಕ್ತಿಯು ಸಕಲಜನ್ಮಾದಿಕರ್ತೃವಾಗುತ್ತಾನೋ ಅವನೇ ಷಡ್ಗುಣೈಶ್ವರ್ಯಸಂಪನ್ನನಾಗಿ 'ಭಗವಾನ್' ಎಂದು ಕರೆಸಿಕೊಳ್ಳುತ್ತಾನೆ. ಆ ಭಗವಂತನೇ ಸಕಲಗುಣಪರಿಪೂರ್ಣನಾಗುತ್ತಾನೆ. ಆದ್ದರಿಂದ ಈ ಸೂತ್ರದಲ್ಲಿ ಸಕಲಗುಣಪರಿಪೂರ್ಣತ್ವದ ಸಮರ್ಥನೆಗೋಸ್ಕರವೇ ಜಗಜ್ಜನ್ಮಾದಿಕರ್ತೃತ್ವವನ್ನು ಹೇಳಿರುತ್ತಾರೆ.

ಈ ಸೂತ್ರದಲ್ಲಿ 'ಜನ್ಮಾದಿ' ಎಂಬಲ್ಲಿರುವ ಆದಿಪದದಿಂದ ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಇವುಗಳನ್ನು ವಿವಕ್ಷಿಸಬೇಕು. ಪರಮಾತ್ಮನಲ್ಲಿ ಕೇವಲ ಸೃಷ್ಟಿ-ಸಂಹಾರಗಳ ಕರ್ತೃತ್ವವನ್ನು ಮಾತ್ರ ಚಿಂತನೆ ಮಾಡಬಾರದು. ಜನ್ಮಾದ್ಯಷ್ಟಕರ್ತೃತ್ವವನ್ನು ಕೂಡ ಚಿಂತನೆ ಮಾಡಬೇಕು. ಕೆಲವರು ಸೃಷ್ಟಿ-ಸ್ಥಿತಿ-ಸಂಹಾರ ಕರ್ತೃತ್ವವನ್ನು ಮಾತ್ರ ತಿಳಿಯುತ್ತಾರೆ. ಇನ್ನು ಕೆಲವರು ಸೃಷ್ಟಿ, ಸ್ಥಿತಿ, ಸಂಹಾರ, ಮೋಕ್ಷಕಾರಣತ್ವವನ್ನು ಮಾತ್ರ ತಿಳಿಯುತ್ತಾರೆ. ಸೃಷ್ಟಿ, ಸ್ಥಿತಿ, ನಿಯಮನ, ಸಂಹಾರಗಳು ಜಡದಲ್ಲಿಯೂ ಕೂಡ ಸಾಧಾರಣವಾಗಿವೆ. ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು ಚೇತನರಲ್ಲಿ ಮಾತ್ರ ಇರುವ ಧರ್ಮಗಳಾಗಿವೆ. ನಮ್ಮಲ್ಲಿರುವ 'ಅಜ್ಞಾನವನ್ನು ಪರಿಹರಿಸಿ ಜ್ಞಾನವನ್ನು ದಯಪಾಲಿಸು' ಎಂಬ ಅನುಸಂಧಾನಕ್ಕಾಗಿ ಮತ್ತು 'ಸಂಸಾರಬಂಧನದಿಂದ ನಮ್ಮನ್ನು ಬಿಡುಗಡೆ ಮಾಡಿ ಮೋಕ್ಷವನ್ನು ದಯಪಾಲಿಸು' ಎಂಬ ಪ್ರಾರ್ಥನೆಗಾಗಿ ಪರಮಾತ್ಮನಲ್ಲಿ ಜ್ಞಾನ, ಅಜ್ಞಾನ, ಬಂಧ, ಮೋಕ್ಷಕರ್ತೃತ್ವವನ್ನು ಚಿಂತನೆ ಮಾಡಬೇಕು. 'ತಂ ಯಥಾ ಯಥಾ ಉಪಾಸತೇ ತದೇವ ಭವತಿ' ಎಂಬ ಶ್ರುತಿಯಂತೆ ಪರಮಾತ್ಮನು ಜ್ಞಾನ, ಅಜ್ಞಾನ, ಬಂಧ, ಮೋಕ್ಷಪ್ರದನೆಂದು ಚಿಂತನೆ ಮಾಡಿದರೆ ನಮ್ಮಲ್ಲಿರುವ ಅಜ್ಞಾನವು ಪರಿಹಾರವಾಗಿ ತತ್ವಜ್ಞಾನವು ಪ್ರಾಪ್ತವಾಗುತ್ತದೆ. ಬಂಧವು ಪರಿಹಾರವಾಗಿ ಮೋಕ್ಷವು ದೊರೆಯುತ್ತದೆ. ಒಂದು ವೇಳೆ ಸೃಷ್ಟಿ, ಸ್ಥಿತಿ, ಸಂಹಾರಗಳ ಕರ್ತೃತ್ವವನ್ನು ಮಾತ್ರ ಚಿಂತನೆ ಮಾಡಿದರೆ ತತ್ವಜ್ಞಾನವನ್ನು ಮತ್ತು ಮೋಕ್ಷವನ್ನು ಪಡೆಯಲು ಸಾಧ್ಯವಾಗುವುದಿಲ್ಲ.

ಮತ್ತೊಂದು ಮುಖ್ಯವಿಷಯ - ಭಗವಂತನ ಲಕ್ಷಣ ಎಂಟು ಗುಣಗಳು ಮಾತ್ರವಲ್ಲ. ಅನಂತ ಗುಣಗಳಿವೆ. ಆದರೆ ಮೋಕ್ಷದಾಯಕವಾದ ಗುಣಗಳು ಈ ಎಂಟು ಮಾತ್ರ. ಆದಕ್ಕಾಗಿ ಈ ಸೂತ್ರ ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನೇ ಹೇಳುತ್ತಿದೆ. ಇದು ಸ್ಕಾಂದಪುರಾಣದ ಮಾತಿನಿಂದ ಸ್ಪಷ್ಟವಾಗುತ್ತದೆಂದು ಭಾಷ್ಯದಲ್ಲಿ ಹೇಳಿದ್ದಾರೆ. ಸ್ಕಾಂದಪುರಾಣದಲ್ಲಿ ಹೇಳಿರುವ ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನು ಶ್ರುತಿಯೂ ಕೂಡ ಸಮರ್ಥಿಸುತ್ತಿದೆ.

### ಬ್ರಹ್ಮನು ಸೃಷ್ಟಿಕರ್ತಾ

**तत्वप्रदीपः – तथाहि - ''यतः प्रसूता जगतः प्रसूती'' ''सर्वे निमेषा जज्ञिरे विद्युतः पुरुषादधि'' इति प्रकृतिकालसृष्ट्यभिधानेन तस्मादेव सर्वसृष्टिरुक्ता । तदधीनत्वादितरसृष्टेः ।**

'ಯತಃ ಪ್ರಸೂತಾ ಜಗತಃ ಪ್ರಸೂತೀ' ಎಂಬ ಶ್ರುತಿಯು ಸಮಸ್ತ ಜಗತ್ತಿಗೆ ಪ್ರಕೃತಿಯು ಕಾರಣವಾಗಿದೆ, ಇಂಥ ಪ್ರಕೃತಿಗೆ ಪರಮಾತ್ಮನು ಕಾರಣನಾಗಿದ್ದಾನೆಂದು ಹೇಳುತ್ತಿದೆ. 'ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ' 'ಸೂರ್ಯಾದಿಭಾಸಕನಾದ ಪುರುಷಸೂಕ್ತ ಪ್ರತಿಪಾದ್ಯನಾದ ವಿಷ್ಣುವಿನ ದೆಸೆಯಿಂದ 'ನಿಮಿಷ' ಮೊದಲಾದ ಕಾಲಗಳು ಹುಟ್ಟಿದವು' ಹೀಗೆ ಶ್ರುತಿಯು ನಿಮಿಷ ಮೊದಲಾದ ಕಾಲವು. ಪರಮಾತ್ಮನಿಂದ ಹುಟ್ಟಿದೆ ಎಂದು ಹೇಳುತ್ತಿದೆ. ಸಮಸ್ತ ಜಗತ್ತಿಗೆ ಪ್ರಕೃತಿ ಹಾಗೂ ಕಾಲಗಳು ಕಾರಣವಾಗಿವೆ. ಇವುಗಳಿಗೂ ಪರಮಾತ್ಮನು ಕಾರಣನಾಗಿದ್ದಾನೆಂದು ಹೇಳಿದಾಗ ಸರ್ವಸೃಷ್ಟಿಕರ್ತೃತ್ವವು ಅವನಲ್ಲಿ ಸಿದ್ಧವಾಯಿತು.

### ಬ್ರಹ್ಮನು ಸ್ಥಿತಿ-ಸಂಹಾರ-ಜ್ಞಾನಕರ್ತಾ

**तत्वप्रदीपः – ''यस्मिन्निदं सं च विचैधि सर्वं यस्मिन् देवा अधि विश्वे निषेदुः'' इति स्थितिः । ''वेनस्तत् पश्यन् विश्वा भुवनानि विद्वान् यत्र विश्वं भवत्येकनीळम्'' इति ज्ञानं संहारश्च ।**

'ಯಸ್ಮಿನ್ನಿದಂ ಸಂಚ ವಿಚೈಧಿ ಸರ್ವಂ ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ' 'ಯಾವ ಪರಮಾತ್ಮನ ಆಶ್ರಯ ಪಡೆದು ಈ ಎಲ್ಲಾ ಸಕಲ ಜಗತ್ತು ಚೆನ್ನಾಗಿ ಅಭಿವೃದ್ಧಿ ಪಡೆದಿದೆಯೋ

ಅಧಿಪತಿಗಳಾದ ದೇವತೆಗಳೂ ಕೂಡ ಯಾರನ್ನು ಆಶ್ರಯಿಸಿದ್ದಾರೋ' ಎಂಬುದಾಗಿ ಪರಮಾತ್ಮನು ಸಕಲ ಜಗತ್ತಿನ ಹಾಗೂ ದೇವತೆಗಳ ಸ್ಥಿತಿಕಾರಣನಾಗಿದ್ದಾನೆಂದು ಹೇಳುತ್ತಿದೆ. 'ವೇನಸ್ತತ್ ಪಶ್ಯನ್ ವಿಶ್ವಾ ಭುವನಾನಿ ವಿದ್ವಾನ್ ಯತ್ರ ವಿಶ್ವಂ ಭವತ್ಯೇಕನೀಳಮ್' 'ವಿಷ್ಣುಸ್ವರೂಪನಾದ ಬ್ರಹ್ಮನನ್ನು ತಿಳಿದಿದ್ದರಿಂದಲೇ ವಾಯುದೇವನು ಸಮಗ್ರ ವಿಶ್ವವನ್ನು ತಿಳಿದನು. ಹಕ್ಕಿಗಳಿಗೆ ಗೂಡು ಹೇಗೆ ಆಶ್ರಯವೋ ಅದರಂತೆ ಸಮಸ್ತ ವಿಶ್ವಕ್ಕೆ ಪರಮಾತ್ಮನು ಪ್ರಳಯದಲ್ಲಿ ಆಶ್ರಯನಾಗಿದ್ದಾನೆ' ಎಂಬ ಶ್ರುತಿಯು ಜ್ಞಾನಪ್ರದತ್ವವನ್ನು ಹಾಗೂ ಸಂಹಾರ-ಕರ್ತೃತ್ವವನ್ನು ಭಗವಂತನಲ್ಲಿ ಹೇಳುತ್ತಿದೆ.

### ಬ್ರಹ್ಮನು ನಿಯಮನ-ಅಜ್ಞಾನ-ಬಂಧ-ಮೋಕ್ಷಕರ್ತಾ

**तत्वप्रदीपः – ''विवेश भूतानि चराचराणि'' इत्यर्थान्नियमनम् । ''येनाऽदित्यस्तपति तेजसा भ्राजसा च'' इति स्पष्टम् । ''ऋतस्य तन्तुं विततं विवृत्य तदपश्यत् तदभवत् प्रजासुवे'' इत्यज्ञानं बन्घश्च । ''य एनं विदुरमृतास्ते भवन्ति'' इति मोक्षः ।**

'ವಿವೇಶ ಭೂತಾನಿ ಚರಾಚರಾಣಿ' 'ಸಮಸ್ತ ಚರಾಚರಾತ್ಮಕ ಪದಾರ್ಥಗಳನ್ನು ಪ್ರವೇಶಿಸುತ್ತಾನೆ' ಎಂಬುದಾಗಿ ಶ್ರುತಿಯು ಪರಮಾತ್ಮನಿಗೆ ನಿಯಮನ ಮಾಡಲು ಸ್ವಲ್ಪವೂ ಆಯಾಸವಿಲ್ಲವೆಂದು ತಿಳಿಸಲು ಭೂತಪ್ರವೇಶವನ್ನು ಹೇಳುತ್ತಿರುವುದರಿಂದ ನಿಯಮನಕರ್ತೃತ್ವವು ಅರ್ಥಾತ್ ತಿಳಿಯುತ್ತದೆ. 'ಯೇನಾऽದಿತ್ಯಸ್ತಪತಿ ತೇಜಸಾ ಭ್ರಾಜಸಾ ಚ' ಯಾವ ಪರಮಾತ್ಮನಿಂದ ಸೂರ್ಯಚಂದ್ರರೆಲ್ಲ ಬೆಳಗುತ್ತಿದ್ದಾರೋ ಎಂಬ ಶ್ರುತಿಯು ಸ್ಪಷ್ಟವಾಗಿಯೇ ಪರಮಾತ್ಮನಲ್ಲಿ ನಿಯಮನಕರ್ತೃತ್ವವನ್ನು ಹೇಳುತ್ತಿದೆ. 'ಋತಸ್ಯ ತಂತುಂ ವಿತತಂ ವಿವೃತ್ಯ ತದಪಶ್ಯತ್ ತದಭವತ್ ಪ್ರಜಾಸುವೇ' 'ಪರಮಾತ್ಮನು ಬಲೆಯನ್ನು ಎಲ್ಲೆಡೆ ಎಸೆದು ಆ ಬಲೆಯಲ್ಲಿ ಎಲ್ಲರನ್ನು ಸಿಕ್ಕಿಸಿ ಕೊಂಡಿದ್ದಾನೆ' ಎಂಬುದಾಗಿ ಶ್ರುತಿಯು ಅಜ್ಞಾನ ಹಾಗೂ ಬಂಧಕರ್ತೃತ್ವವನ್ನು ಹೇಳುತ್ತಿದೆ. 'ಯ ಯೇನಂ ವಿದುರಮೃತಾಸ್ತೇ ಭವಂತಿ' 'ಯಾರು ಪರಮಾತ್ಮನನ್ನು ತಿಳಿಯುತ್ತಾನೋ ಅವನು ಮೋಕ್ಷವನ್ನು ಹೊಂದುತ್ತಾರೆ' ಎಂಬುದಾಗಿ ಈ ಶ್ರುತಿಯು ಮೋಕ್ಷಕರ್ತೃತ್ವವನ್ನು ಹೇಳುತ್ತಿದೆ. ಹೀಗೆ ಪರಮಾತ್ಮನ ಅಷ್ಟಕರ್ತೃತ್ವದ ವಿಷಯದಲ್ಲಿ ಶ್ರುತಿಗಳು ಆಧಾರವಾಗಿವೆ.

ಅಧಿಕರಣದ ವಿಷಯವಾಕ್ಯ ಬ್ರಹ್ಮನನ್ನೇ ಹೇಳುತ್ತಿದೆ

**तत्वप्रदीपः – ''यतो वा इमानि भूतानि जायन्ते, येन जातानि जीवन्ति, यत्प्रयन्त्यभिसंविशन्ति, तद्विजिज्ञासस्व, तद्ब्रह्म'' इति तैत्तिरीयश्रुतिः विष्णोरेवैतानि स्रष्टृत्वादीनि प्रसिद्धलक्षणानीत्याह – य उ त्रिधात्वित्यादि । प्रकृतिपुरुषकालधातृत्वात् 'त्रिधातु' । भूमिं श्रियं च दधार।**

'ಯತೋ ವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತಿ, ತದ್ವಿಜಿಜ್ಞಾಸಸ್ವ, ತದ್ ಬ್ರಹ್ಮ' ಎಂಬುದಾಗಿ ತೈತ್ತಿರೀಯ ಶ್ರುತಿಯು ವಿಷ್ಣುವಿನಲ್ಲಿಯೇ ಜನ್ಮಾದ್ಯಷ್ಟಕರ್ತೃತ್ವವನ್ನು ಹೇಳುತ್ತಿದೆ. ಈ ವಿಷಯವನ್ನು ಸ್ಪಷ್ಟವಾಗಿ ಋಗ್ ವೇದವು ಸಮರ್ಥಿಸುತ್ತಿದೆ. 'ಯ ಉ ತ್ರಿಧಾತು' ಇತ್ಯಾದಿಯಾಗಿ ಪ್ರಕೃತಿ ಪುರುಷ ಕಾಲ ಇವುಗಳನ್ನು ಧಾರಣೆ ಮಾಡಿರುವುದರಿಂದ 'ತ್ರಿಧಾತು' ಎಂದು ಕರೆಸಿಕೊಳ್ಳುತ್ತಾನೆ. ಭೂಮಿ ಮತ್ತು ಲಕ್ಷ್ಮಿಯನ್ನು ಕೂಡ ಧಾರಣೆ ಮಾಡಿದ್ದಾನೆ.

ತೊಂಬತ್ತುಮಂದಿ ದೇವತೆಗಳನ್ನು ಚಕ್ರದಂತೆ ತಿರುಗಿಸುತ್ತಾನೆ.

**तत्वप्रदीपः – चतुर्भिरिति । वासुदेवादिनामवद्भिः रूपैः 'व्यतीन्' विशेषतोऽधिकान् 'नवतिं' 'साकं' युगपदेव 'अवीविपत्' पर्यवर्तयत्; विप परिवर्तन इति धातोः, किमुतान्यान् । प्रधानवायुना सह पञ्चाशन्मरुतो, वसवो, रुद्रादित्या एकादश, प्रजापतयश्च ब्रह्मदशमा नवतिर्देवाः ।**

'ಚತುರ್ಭಿಸ್ಸಾಕಮ್' ಎಂಬ ಶ್ರುತಿಯು ಅಭಿಪ್ರಾಯ ಹೀಗಿದೆ - ಚತುರ್ಭಿಃ = ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಕು ನಾಮಗಳುಳ್ಳವನಾಗಿ, ನಾಕು ರೂಪಗಳನ್ನು ಹೊಂದಿ, ವ್ಯತೀನ್ = ವಿಶೇಷವಾಗಿ ಅಧಿಕವಾದ, ನವತಿಮ್ = ತೊಂಬತ್ತುಮಂದಿ ದೇವತೆಗಳನ್ನು ಸಾಕಂ = ಒಟ್ಟಿಗೆ, ಅವೀವಿಪತ್ = ತಿರುಗಿಸುತ್ತಾನೆ. 'ವಿ ಪರಿವರ್ತನೆ' ಎಂಬ ಧಾತುವಿನಿಂದ ಅವೀವಿಪತ್ ಎಂಬ ಶಬ್ದವು ನಿಷ್ಪನ್ನವಾಗಿದೆ. ಆದ್ದರಿಂದ ತಿರುಗಿಸುತ್ತಾನೆಂಬ ಅರ್ಥವು ದೊರೆಯುತ್ತದೆ. ತೊಂಬತ್ತು ಮಂದಿ ದೇವತೆಗಳನ್ನೇ ಚಕ್ರದಂತೆ ತಿರುಗಿಸುವಾಗ ಉಳಿದವರೂ ಕೂಡ ತಿರುಗುತ್ತಾರೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಮುಖ್ಯಪ್ರಾಣನ ಜೊತೆ ಐವತ್ತು ಮರುತ್‌ದೇವತೆಗಳು ಎಂಟು ವಸುಗಳು ಏಕಾದಶ ರುದ್ರರು, ಏಕಾದಶ ಆದಿತ್ಯರು, ದಶಪ್ರಜಾಪತಿಗಳು ಹೀಗೆ ಒಟ್ಟು ತೊಂಬತ್ತು ಮಂದಿ ದೇವತೆಗಳನ್ನು ತಿಳಿಯಬೇಕು.

ತೊಂಬತ್ನಾಕು ದೇವತೆಗಳನ್ನು ಚಕ್ರದಂತೆ ತಿರುಗಿಸುತ್ತಾನೆ

**तत्वप्रदीपः – चतुर्भिर्नामवद्भिः कीर्तिमद्भिर्देवैः साकं नवतिं देवान् पर्यवर्तयदिति वाऽन्वयः । तथाचोक्तम् -**

**''आदित्या वसवो रुद्रा मरुतश्चाश्विनावपि ।**
**बृहस्पतिश्च कामश्च मनुर्दक्षो विनायकः ।।**
**भृगुश्चैवानिरुद्धश्च धर्मो निरृतिरेव च ।**
**कुबेरसहिता देवा नवतिः सम्प्रकीर्तिताः ।।**
**अनन्तो गरुडो वायुश्चत्वारो ब्रह्मणा सह ।'' इति**

ಅಥವಾ ನಾಕು ಮಂದಿ ಪ್ರಸಿದ್ಧರಾದ ದೇವತೆಗಳ ಜೊತೆ ತೊಂಬತ್ತು ಮಂದಿ ದೇವತೆಗಳನ್ನು ತಿರುಗಿಸುತ್ತಾನೆಂಬ ಮತ್ತೊಂದು ಅರ್ಥವನ್ನು ತಿಳಿಯಬಹುದು. ಹಿಂದಿನ ಅರ್ಥದಲ್ಲಿ ಭಗವಂತನು ನಾಕು ರೂಪಗಳಿಂದ ತೊಂಬತ್ತು ಮಂದಿ ದೇವತೆಗಳನ್ನು ತಿರುಗಿಸುತ್ತಾನೆಂದು ಹೇಳಲಾಯಿತು. ಈಗ ಪರಮಾತ್ಮನು ಅನಂತರೂಪಗಳಿಂದ ತೊಂಬತ್ನಾಕು ಮಂದಿ ದೇವತೆಗಳನ್ನು ಚಕ್ರದಂತೆ ತಿರುಗಿಸುತ್ತಾನೆಂದು ತಿಳಿಯಬೇಕು.

ಆದಿತ್ಯಾ ವಸವೋ ರುದ್ರಾ ಮರುತಶ್ಚಾಶ್ವಿನಾವಪಿ ।
ಬೃಹಸ್ಪತಿಶ್ಚ ಕಾಮಶ್ಚ ಮನುರ್ದಕ್ಷೋ ವಿನಾಯಕಃ ।
ಭೃಗುಶ್ಚೈವಾನಿರುದ್ಧಶ್ಚ ಧರ್ಮೋ ನಿರ್ಋತಿರೇವ ಚ ।
ಕುಬೇರಸಹಿತಾ ದೇವಾ ನವತಿಃ ಸಂಪ್ರಕೀರ್ತಿತಾಃ ।
ಅನಂತೋ ಗರುಡೋ ವಾಯುಶ್ಚತ್ವಾರೋ ಬ್ರಹ್ಮಣಾ ಸಹ ।

ಏಕಾದಶ ಆದಿತ್ಯರು, ಎಂಟು ವಸುಗಳು, ಏಕಾದಶ ರುದ್ರರು, ನಲ್ವತ್ತೊಂಬತ್ತು ಮರುತ್ ದೇವತೆಗಳು, ಅಶ್ವಿನೀದೇವತೆಗಳು (ಅಶ್ವಿನೀದೇವತೆಗಳನ್ನು ಇಬ್ಬರು ಎಂದು ಇಲ್ಲಿ ಪರಿಗಣಿಸಬಾರದು.) ಒಟ್ಟು ಎಂಬತ್ತು ದೇವತೆಗಳನ್ನು ಹೇಳಿದಂತಾಯಿತು. ೧. ಬೃಹಸ್ಪತಿ, ೨. ಕಾಮ, ೩. ಮನು, ೪. ದಕ್ಷ, ೫. ವಿನಾಯಕ, ೬. ಭೃಗು, ೭. ಅನಿರುದ್ಧ, ೮. ಯಮಧರ್ಮ, ೯. ನಿರ್ಋತಿ, ೧೦. ಕುಬೇರ. ಈ ಹತ್ತು ದೇವತೆಗಳನ್ನು ಸೇರಿಸಿದರೆ ತೊಂಬತ್ತು ದೇವತೆಗಳಾಯಿತು. ಈ ತೊಂಬತ್ತು ದೇವತೆಗಳು ಸುಪ್ರಸಿದ್ಧರಾದ ನಾಕು ದೇವತೆಗಳಿಂದ ಕೂಡಿದ್ದಾರೆ. ೧. ಅನಂತ, ೨. ಗರುಡ, ೩. ವಾಯು, ೪. ಬ್ರಹ್ಮ, ಹೀಗೆ ತೊಂಬತ್ನಾಕು ಮಂದಿ ದೇವತೆಗಳನ್ನು ಚಕ್ರದಂತೆ ತಿರುಗಿಸುತ್ತಾನೆ.

ಪರೋ ಮಾತ್ರಯಾ ಎಂಬ ಶ್ರುತ್ಯರ್ಥ

**तत्वप्रदीपः – परो मात्रयेति । मात्रायाः 'परः' परिमाणातीतत्वं, तन्वा 'वृधान' वर्धमान, देहेन पूर्ण, इत्थम्भावे तृतीया । देहरूपेण पूर्ण इत्यर्थः । यतश्चिदानन्दात्मको विष्णोरभिन्नश्च देहः । ते महिमानं नानुभवन्ति न प्राप्नुवन्ति ।।**

'ಪರೋ ಮಾತ್ರಯಾ ತನ್ವಾ ವೃಧಾನ ನ ತೇ ಮಹಿತ್ವಮನ್ವಶ್ನುವಂತಿ । ('ಉಭೇ ತೇ ವಿದ್ಮ ರಜಸೇ ಪೃಥಿವ್ಯಾ ವಿಷ್ಣೋ ದೇವತ್ವಂ ಪರಮಸ್ಯ ವಿತ್ಸೇ । ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ । ಉದಸ್ತಭ್ನಾ ನಾಕಮೃಷ್ವಂ ಬೃಹಂತಂ ದಾಧರ್ಥ ಪ್ರಾಚೀಂ ಕಕುಭಂ ಪೃಥಿವ್ಯಾಃ' ಇದು ವಿಷ್ಣುಸೂಕ್ತ.)

ಇಷ್ಟೇ ಎಂಬ ಅವಧಿಗೆ 'ಮಾತ್ರಾ' ಎನ್ನುತ್ತಾರೆ. 'ಮಾತ್ರಯಾ ಪರಃ' = ಪರಿಮಾಣವನ್ನು ದಾಟಿದವನು. ದೇಶದಿಂದ, ಕಾಲದಿಂದ, ಗುಣದಿಂದ ಮತ್ತು ಶಕ್ತಿಯಿಂದ ಅಪರಿಮಿತನು. ಅಷ್ಟೇ ಅಲ್ಲದೇ 'ತನ್ವಾ ವೃಧಾನ' = ದೇಹದಿಂದಲೂ ಕೂಡ ಬೆಳೆದು ನಿಂತವನು ಪರಿಪೂರ್ಣನು ಎಂದರ್ಥ. ಇತ್ಥಂಭಾವಾರ್ಥದಲ್ಲಿ ತೃತೀಯಾವಿಭಕ್ತಿಯು ಪ್ರಾಪ್ತವಾಗಿದೆ. ದೇಹರೂಪದಿಂದ ಪೂರ್ಣನಾಗಿದ್ದಾನೆಂದು ಇದರ ಅರ್ಥ. ಚಿದಾನಂದಾತ್ಮಕವಾದ ಶರೀರದಿಂದ ಅಭಿನ್ನನಾಗಿರುವ

ಕಾರಣ ಹೀಗೆ ಇತ್ಥಂಭೂತಾರ್ಥದಲ್ಲಿಯೇ ತೃತೀಯಾ ವಿಭಕ್ತಿಯನ್ನು ಹೇಳಬೇಕು. ತೇ = ನಿನ್ನ, ಮಹಿತ್ವಂ = ಮಹಿಮೆಯನ್ನು, ನ ಅಶ್ನುವಂತಿ = ಹೊಂದಲಾರರು.

ವಿಶೇಷ ವಿಚಾರ - 'ಜಟಾಭಿಸ್ತಾಪಸಃ' ಎಂಬಲ್ಲಿ ತೃತೀಯಾವಿಭಕ್ತಿಯು 'ಇತ್ಥಂಭೂತಲಕ್ಷಣೇ ತೃತೀಯಾ' ಎಂಬ ಸೂತ್ರದಿಂದ ಪ್ರಾಪ್ತವಾಗಿದೆ. ಜಟೆ ಎಂಬ ಪ್ರಕಾರವನ್ನು ಹೊಂದಿರುವುದರಿಂದ ಜಟೆಗೂ ತಾಪಸನಿಗೂ ಬೇಧವು ಇಲ್ಲದಿರುವುದರಿಂದಲೂ ತೃತೀಯಾವಿಭಕ್ತಿಯು ಪ್ರಾಪ್ತವಾಗಿದೆ. ಆದರಂತೆ ಇಲ್ಲಿಯೂ ಸಹ ದೇಹವೆಂಬ ಪ್ರಕಾರವನ್ನು ಪರಮಾತ್ಮನು ಹೊಂದಿರುವುದರಿಂದ 'ತನು' ಶಬ್ದದ ಮೇಲೆ ತೃತೀಯಾವಿಭಕ್ತಿಯು ಬಂದು 'ತನ್ವಾ' ಎಂದಾಗಿದೆ. ದೇಹಕ್ಕೂ ವಿಷ್ಣುವಿಗೂ ಅಭೇದವಿರುವುದರಿಂದ ಇತಂಥ್ಭಾವಾರ್ಥ-ದಲ್ಲಿಯೇ ತೃತೀಯಾವಿಭಕ್ತಿಯನ್ನು ತಿಳಿಯಬೇಕು.

ನಿನ್ನ ಮಹಿಮೆಯನ್ನು ತಿಳಿಯುವವರು ಯಾರು !

**तत्वप्रदीपः – त्वदीयायाः 'पृथिव्याः' प्रकृतेः 'रजसी' पुण्यपापे 'विद्म'। प्रकृतेः रजसा हि पुण्यपापे सृज्येते । 'परमस्य' ते रूपं महिमानं वा त्वमेव वित्से ।**

ನಿನ್ನ ಅಧೀನವಾದ ಪ್ರಕೃತಿಯಿಂದ ಹುಟ್ಟಿದ ಪುಣ್ಯಪಾಪಗಳನ್ನು ನಾವು ತಿಳಿಯಬಹುದು. ಪ್ರಕೃತಿಯ ಸತ್ವಭಾಗದಿಂದ ಪುಣ್ಯವು, ತಮೋಭಾಗದಿಂದ ಪಾಪವು, ರಜೋಭಾಗದಿಂದ ಪುಣ್ಯ ಹಾಗೂ ಪಾಪಗಳೆರಡು ಹುಟ್ಟುತ್ತವೆ. (ಕಾರ್ಯವಾದ ಪುಣ್ಯಪಾಪಗಳಲ್ಲಿ ಕಾರಣವಾದ 'ರಜಸೀ' ಎಂಬ ಪದವನ್ನು ಔಪಚಾರಿಕವಾಗಿ ಪ್ರಯೋಗಿಸಲಾಗಿದೆ.) ನಿನ್ನ ರೂಪವನ್ನು ಮತ್ತು ಮಹಿಮೆಯ ಪರಾಕಾಷ್ಠೆಯನ್ನು ನೀನೊಬ್ಬನೇ ತಿಳಿಯಲು ಸಮರ್ಥ.

ವಿಶೇಷ ವಿಚಾರ - ''ಉಭೇ ತೇ ವಿದ್ಮ ರಜಸೀ ಪೃಥಿವ್ಯಾ ವಿಷ್ಣೋ ದೇವ ತ್ವಂ ಪರಮಸ್ಯ ವಿತ್ಸೇ '' ಈ ಶ್ರುತಿಯ ಅರ್ಥ ಹೀಗಿದೆ -

ವಿಷ್ಣೋ = ವಿಷ್ಣುವೆ, ತೇ = ನಿನ್ನ ಅಧೀನವಾದ, ಪೃಥಿವ್ಯಾಃ = ಪ್ರಕೃತಿಯ, ಉಭೇ ರಜಸೀ = ಪುಣ್ಯಹಾಗೂ, ಪಾಪಗಳನ್ನು, ವಿದ್ಮ = ತಿಳಿದಿರುತ್ತೇವೆ, (ನಾವು ಪ್ರಕೃತಿ ಬದ್ಧರಾಗಿದ್ದೇವೆ.) ದೇವ = ಸ್ವಾಮಿಯೇ, ತ್ವಂ = ನೀನೊಬ್ಬನೇ, ಪರಮಸ್ಯ = ನಿನ್ನ ಎಲ್ಲಾ ಮಹಿಮೆಗಳ ಕೊನೆಯನ್ನು, ವಿತ್ಸೇ = ಸಂಪೂರ್ಣವಾಗಿ ತಿಳಿದಿರುವಿ.

ನಿನಗೆ ಸರಿಸಾಟಿಯಾದವನು ಮೂರು ಕಾಲಗಳಲ್ಲಿ ಯಾರೂ ಇಲ್ಲ

**तत्वप्रदीपः – त्वमेव 'महिम्नो' महिमसमुदायस्यान्तः । ब्रह्मणःश्रियो वा महिमानमतिशयितो हि विष्णुमहिमा । अन्यमहिम्नां परमन्तं ते महिमानं न कश्चिदाप ।।**

ನೀನೊಬ್ಬನೇ ಎಲ್ಲಾ ಮಹಿಮೆಗಳ ಸಮೂಹದ ತುತ್ತತುದಿ. ಚತುರ್ಮುಖಬ್ರಹ್ಮನು ಜೀವರ ಮಹಿಮೆಯಲ್ಲಿ ಕೊನೆಯವನು. ಲಕ್ಷ್ಮಿಯು ಪರತಂತ್ರವರ್ಗದಲ್ಲಿ ಕೊನೆಯವಳು. ನೀನು ಎಲ್ಲಾ ಮಹಿಮೆಗಳ ಸಮುದಾಯದಲ್ಲಿ ಕೊನೆಯವನು. ಎಲ್ಲಾ ಮಹಿಮೆಗಳ ಕೊನೆಯುಳ್ಳ ನಿನ್ನ ಮಹಿಮೆಯನ್ನು ಯಾರಿಂದಲೂ ಹೊಂದಲು ಸಾಧ್ಯವಿಲ್ಲ.

ವಿಶೇಷ ವಿಚಾರ -'ನ ತೇ ವಿಷ್ಣೋ ಜಾಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪ' । ಈ ಶ್ರುತಿಯ ಅರ್ಥ ಹೀಗಿದೆ - ವಿಷ್ಣೋ = ಎಲೈ ವಿಷ್ಣುವೆ, ತೇ = ನಿನ್ನ, ಮಹಿಮ್ನಃ = ಮಹಿಮೆಯ, ಪರಮಂತಂ = ಪರಾಕಾಷ್ಠೆಯನ್ನು ಜಾತಃ = ಇಲ್ಲಿಯ ತನಕ ಹುಟ್ಟಿದ ಯಾರೇ ಒಬ್ಬ ವ್ಯಕ್ತಿಯೂ ಕೂಡ, ನ ಆಪ = ಹೊಂದಿಲ್ಲ, (ಜಾಯಮಾನಃ = ಈಗ ಹುಟ್ಟಿರುವ ವ್ಯಕ್ತಿಯು) ನ (ಆಪ್ನೋತಿ) = ಹೊಂದಿರುವುದಿಲ್ಲ. (ಜನಿಷ್ಯಮಾಣಃ = ಮುಂದೆ ಹುಟ್ಟುವವನೂ ಕೂಡ, ನ (ಆಪ್ಸ್ಯತಿ) = ಹೊಂದಲು ಸಾಧ್ಯವಿಲ್ಲ.)

ಸೃಷ್ಟ್ಯಾದ್ಯಷ್ಟಕಗಳಲ್ಲಿಯೇ ಸಕಲಮಹಿಮೆ

**तत्वप्रदीपः – यत्राकं नास्ति तत् नाकम्' । उच्चैरस्तम्भयः । 'ऋष्वं' प्रकाशरूपम् । 'पृथिव्याः' पृथिव्यात्मकस्य ब्रह्माण्डस्य प्राचीं दिशमुत्थापनेन 'दाधर्थ' इति सर्वधारणोपलक्षणम् । देवान् पर्यवर्तयदित्युक्त्यैव सृष्ट्यादयः स्पष्टोदिता अतिमहिमोक्त्याऽपि सन्दर्शिताः ।।**

'ಅಕ ' ಎಂದರೆ ದುಃಖ. ಎಲ್ಲಿ ದುಃಖ ಇರುವುದಿಲ್ಲವೊ ಅದು 'ನಾಕ' ಎಂದು ಕರೆಸಿಕೊಳ್ಳುತ್ತದೆ. ಆದ್ದರಿಂದ ಮೋಕ್ಷವನ್ನು ನಾಕ ಎಂದು ಕರೆಯಲಾಗಿದೆ. ಈ ಮೋಕ್ಷವನ್ನು ಉಚ್ಚಸ್ಥಾನದಲ್ಲಿ ನೀನು ಸ್ಥಾಪನೆ ಮಾಡಿರುವಿ. ಜ್ಞಾನಸ್ವರೂಪವಾದ ಪ್ರಕಾಶವುಳ್ಳವನಾಗಿರುವಿ.

ಪೃಥಿವ್ಯಾತ್ಮಕವಾದ ಬ್ರಹ್ಮಾಂಡದ ಪೂರ್ವದಿಕ್ಕನ್ನು ಧರಿಸಿರುವಿ. ಇದು ಉಪಲಕ್ಷಣಮಾತ್ರ, ಸಕಲವನ್ನೂ ಧಾರಣೆ ಮಾಡಿರುವಿ.

'ದೇವಾನ್ ಪರ್ಯವರ್ತಯತ್' 'ದೇವತೆಗಳನ್ನು ತಿರುಗಿಸುತ್ತಾನೆ' ಎಂಬ ಮಾತಿನಿಂದಲೇ ಸೃಷ್ಟಿ, ಸ್ಥಿತಿ, ಮೊದಲಾದವುಗಳಿಂದ ಸಂಸಾರಚಕ್ರದಲ್ಲಿ ತಿರುಗಿಸುತ್ತಾನೆ ಎಂಬರ್ಥವನ್ನು ತಿಳಿಸಿದಂತಾಯಿತು. ಇದರಿಂದ ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನು ಅತ್ಯಂತ ಸ್ಪಷ್ಟವಾಗಿ ಶ್ರುತಿಯು ತಿಳಿಸುತ್ತಿದೆ. ಈ ಸರ್ವಕರ್ತೃತ್ವದಿಂದ ಅನಂತ ಮಹಿಮೆಯನ್ನು ಶ್ರುತಿಯು ಪ್ರತಿಪಾದಿಸುತ್ತದೆ.

ವಿಶೇಷ ವಿಚಾರ - 'ಉದಸ್ತಭ್ನಾ ನಾಕಮೃಷ್ವಂ ಬೃಹಂತಂ ದಾಧರ್ಥ ಪ್ರಾಚೀಂ ಕಕುಭಂ ಪೃಥಿವ್ಯಾಃ' ಈ ಶ್ರುತಿಯ ಅರ್ಥ ಹೀಗಿದೆ - ನಾಕಮ್ = ಮೋಕ್ಷವನ್ನು, ಉದಸ್ತಭ್ನಾ = ಎಲ್ಲ ವಸ್ತುಗಳಿಗಿಂತ ಉಚ್ಚಸ್ಥಾನದಲ್ಲಿ ಸ್ಥಾಪನೆ ಮಾಡಿರುವಿ, ಋಷ್ವಂ = ಜ್ಞಾನಸ್ವರೂಪವಾದ ಪ್ರಕಾಶವುಳ್ಳವನಾಗಿರುವಿ, ಪೃಥಿವ್ಯಾಃ = ಬ್ರಹ್ಮಾಂಡದ, ಬೃಹಂತಂ = ವಿಶಾಲವಾದ, ಪ್ರಾಚೀಂ ಕಕುಭಂ = ಪೂರ್ವದಿಕ್ಕನ್ನು, ದಾಧರ್ಥ = ಧರಿಸಿರುವಿ.

ಓ ವಿಷ್ಣುವೇ ! ನೀನೇ ಎನ್ನ ತಂದೆ

**तत्वप्रदीपः – यो नः पिता पाता । ''स एव पितृसंस्थस्तु पातृत्वात् पितृनामकः'' इत्यैतरेयसंहितायाम् । विधाता धारणापोषणकर्ता, पोषणं ज्ञानमोक्षप्रदानेन ॥**

**॥ इति जन्माधिकरणम् ॥**

'ಯೋ ನಃ ಪಿತಾ ಜನಿತಾ ಯೋ ವಿಧಾತಾ' ಇತ್ಯಾದಿ ಶ್ರುತಿಯಲ್ಲಿರುವ ಪಿತಾ ಎಂಬ ಪದಕ್ಕೆ ನಮ್ಮನ್ನು ರಕ್ಷಣೆ ಮಾಡುವವನು ಎಂದರ್ಥ. (ಆದ್ದರಿಂದ ಜನಿತಾ ಎಂಬ ಪದದಿಂದ ಪಿತಾ ಎಂಬ ಪದವು ಪುನರುಕ್ತವಾಯಿತು ಎಂದು ಭ್ರಮಿಸಬಾರದು.) 'ಸ ಏವ ಪಿತೃಸಂಸ್ಥಾಸ್ತು ಪಾತೃತ್ವಾತ್ ಪಿತೃನಾಮಕಃ' ತಂದೆಯಲ್ಲಿ ನೆಲೆಸಿ ರಕ್ಷಣೆ ಮಾಡುತ್ತಾನಾದ್ದರಿಂದ ಆ ಪರಮಾತ್ಮನೇ 'ಪಿತಾ' ಎಂದು ಕರೆಸಿಕೊಳ್ಳುತ್ತಾನೆ. ಹೀಗೆ ಐತರೇಯಸಂಹಿತೆಯು ಹೇಳುತ್ತಿದೆ. ಶ್ರುತಿಯಲ್ಲಿರುವ 'ವಿಧಾತಾ' ಎಂಬ ಪದಕ್ಕೆ ಧಾರಣೆ ಮಾಡುವವನು ಹಾಗೂ ಪೋಷಣೆ ಮಾಡುವವನು ಎಂದರ್ಥ. ಪೋಷಣೆ ಎಂದರೆ ತತ್ವಜ್ಞಾನ ಹಾಗೂ ಮೋಕ್ಷಗಳನ್ನು ಕೊಡುತ್ತಾನೆಂದರ್ಥ.

ಇಲ್ಲಿಗೆ ತತ್ವಪ್ರದೀಪದ ಕನ್ನಡಾನುವಾದದಲ್ಲಿ ಜನ್ಮಾಧಿಕರಣವು ಮುಗಿಯಿತು.

ತಂತ್ರದೀಪಿಕೆಯಲ್ಲಿ ಹೇಳಿದಂತೆ ದ್ವಿತೀಯ ಸೂತ್ರಾರ್ಥ

श्रीराघवेन्द्रतीर्थविरचिता

# तन्त्रदीपिका

जन्माधिकरणम्

।। जन्माद्यस्य यतः ।।१-१-२

अत्र नये जिज्ञास्यब्रह्मणो लक्षणमुच्यते । यत इत्युक्तेः तदिति लभ्यते। जन्म आदिः यस्य स्थितिलयनियमनज्ञानाज्ञानबन्धमोक्षजातस्य तत् जन्मादि । अस्य प्रमितस्य चिदचिदात्मकस्य विश्वस्य जन्मादि यतः समासव्यासाभ्यां यथायोग्यं भवति तत् जन्मादिकारणं ब्रह्मेत्यर्थः । सृष्टिहेतुत्वादीनि प्रत्येकम् अष्टलक्षणानि वैभवादुक्तानीति बोध्यम् । लब्धजन्मनः स्थित्यादीति जन्मनः आदित्वोक्तिः । चिद्गतसुखादीनां अचिद्गतवृद्ध्यादीनां च सत्त्वेऽपि विचारविधायकेषु ''यतो वा'' इत्यादिनानावाक्येषु ''उत्पत्तिस्थिति'' इत्यादिस्मृतौ च सृष्ट्याद्यष्टकर्तृत्वस्यैव लक्षणत्वेन उक्तत्वात् ''सृष्टिरक्षाहृतिज्ञान'' इत्याद्युक्त्या विशिष्य सृष्ट्याद्यष्टकर्तृत्वस्यैव मुमुक्षुज्ञेयत्वादष्टकस्यैव ग्रहणम् । अस्येति चिदचितोरिव तत्सम्बन्धिज्ञानादेरपि नियमनसिद्धिः ।।२।।

ಅನುವಾದ – ಈ ಅಧಿಕರಣದಲ್ಲಿ ಜಿಜ್ಞಾಸ್ಯನಾದ ಬ್ರಹ್ಮನ ಲಕ್ಷಣವು ಹೇಳಲ್ಪಟ್ಟಿದೆ. ಸೂತ್ರದಲ್ಲಿ 'ಯತಃ' ಎಂದು ಹೇಳಿರುವುದರಿಂದ 'ತತ್' ಎಂಬ ಪದವು ದೊರೆಯುತ್ತದೆ. ಜನ್ಮವೇ ಆದಿಯಾಗಿ ಉಳ್ಳದ್ದು ಯಾವುದೆಂದರೆ ಸ್ಥಿತಿ, ಲಯ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಇವುಗಳ ಸಮೂಹವು ಜನ್ಮಾದಿ ಎನ್ನಿಸುತ್ತದೆ.

ಅಸ್ಯ = ಪ್ರಮಾಣಸಿದ್ಧವಾದ ಚಿದಚಿದಾತ್ಮಕ ಪ್ರಪಂಚಕ್ಕೆ, ಜನ್ಮಾದಿ = ಜನ್ಮವೇ ಮೊದಲಾದವುಗಳು, ಯತಃ = ಯಾರಿಂದ ಆಯಾಯ ವಸ್ತುಗಳ ಯೋಗ್ಯತೆಗೆ ತಕ್ಕಂತೆ ಸೃಷ್ಟ್ಯಾದ್ಯಷ್ಟಕಗಳು ಉಂಟಾಗುತ್ತವೋ, ತತ್ = ಆ ಜನ್ಮಾದಿಕಾರಣನು ಬ್ರಹ್ಮ = ವಿಷ್ಣುವೇ ಆಗಿದ್ದಾನೆ ಎಂದು ಸೂತ್ರಾರ್ಥ.

ಸೃಷ್ಟಿಹೇತುತ್ವವೇ ಮೊದಲಾದ ಎಂಟೂ ಸಹ ಪ್ರತ್ಯೇಕವಾಗಿ ಬ್ರಹ್ಮನ ಲಕ್ಷಣಗಳು; ವೈಭವಕ್ಕೋಸ್ಕರ ಪ್ರತ್ಯೇಕಲಕ್ಷಣವೆಂದು ತಿಳಿಯಬೇಕು. ಜನ್ಮವನ್ನು ಪಡೆದರೆ ಮಾತ್ರ ಸ್ಥಿತ್ಯಾದಿಗಳನ್ನು ಹೇಳಲು ಸಾಧ್ಯ. ಆದ್ದರಿಂದ ಜನ್ಮವನ್ನೇ ಪ್ರಥಮವಾಗಿ ಹೇಳಿದ್ದಾರೆ. ಚೇತನರಲ್ಲಿರುವ ಸುಖ ಮೊದಲಾದವು ಅಚೇತನಪದಾರ್ಥಗಳಲ್ಲಿರುವ ವೃದ್ಧಿ ಮೊದಲಾದವುಗಳು ಬ್ರಹ್ಮವಿಚಾರವನ್ನು ವಿಧಾನ ಮಾಡುವ 'ಯತೋ ವಾ' ಇತ್ಯಾದಿ ನಾನಾ ಶ್ರುತಿಗಳಲ್ಲಿ, ಹಾಗೆಯೇ 'ಉತ್ಪತ್ತಿಸ್ಥಿತಿ' ಇತ್ಯಾದಿ ಸ್ಮೃತಿಗಳಲ್ಲಿ ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನೇ ಲಕ್ಷಣತ್ವೇನ ಹೇಳಿರುವುದರಿಂದ, ಅಥವಾ 'ಸೃಷ್ಟಿರಕ್ಷಾಹೃತಿಜ್ಞಾನ' ಇತ್ಯಾದಿ ಪ್ರಮಾಣಗಳಿಂದ ಮೋಕ್ಷವನ್ನು ಬಯಸುವವರು ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನೇ ವಿಶೇಷವಾಗಿ ತಿಳಿಯಬೇಕೆಂದು ಹೇಳಿರುವುದರಿಂದಲೂ ಈ ಸೂತ್ರದಲ್ಲಿ ಸೃಷ್ಟಿ ಮೊದಲಾದ ಎಂಟನ್ನು ಮಾತ್ರ ಸ್ವೀಕರಿಸಿದ್ದಾರೆ. ಅಸ್ಯ ಎಂಬ ಶಬ್ದದಿಂದ ಚೇತನ ಮತ್ತು ಅಚೇತನ ಪದಾರ್ಥವನ್ನು ಸ್ವೀಕರಿಸುವಂತೆ ಅವುಗಳಿಗೆ ಸಂಬಂಧಿಸಿದ ಜ್ಞಾನಮೊದಲಾದವುಗಳನ್ನೂ ತೆಗೆದುಕೊಳ್ಳುವುದರಿಂದ ಜ್ಞಾನಾದಿಗಳ ನಿಯಮನವೂ ಸಹ ಬ್ರಹ್ಮನ ಲಕ್ಷಣವೆಂದು ನಿರ್ಣಯವಾಗುತ್ತದೆ.

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕೆಯ ಕನ್ನಡಾನುವಾದದಲ್ಲಿ ಜನ್ಮಾಧಿಕರಣವು ಸಮಾಪ್ತವಾಯಿತು.

## ಅದ್ವೈತಮತದಲ್ಲಿ ಜನ್ಮಾಧಿಕರಣ
## ಮತ್ತು
## ವಿಮರ್ಶೆ

'ಜನ್ಮಾದಿ' ಎಂದರೆ ಸೃಷ್ಟಿ, ಸ್ಥಿತಿ, ಲಯಗಳನ್ನಷ್ಟೇ ವಿವಕ್ಷಿಸಬೇಕೆಂದು ಅದ್ವೈತಿಗಳು ವ್ಯಾಖ್ಯಾನಿಸುತ್ತಾರೆ. ಆದರೆ ವಿಷಯವಾಕ್ಯವೆನಿಸಿದ 'ಯತೋ ವಾ' ಎಂಬ ಶ್ರುತಿಯು ಸೃಷ್ಟ್ಯಾದಿಗಳ ಜೊತೆಗೆ ಮೋಕ್ಷವನ್ನು ಹೇಳಿದ್ದರಿಂದ ಕೇವಲ ಮೂರನ್ನು ಮಾತ್ರ ವಿವಕ್ಷಿಸುವುದು ತಪ್ಪಾಗುತ್ತದೆ. ಅಷ್ಟೇ ಅಲ್ಲದೆ, 'ಯಸ್ಮಿನ್ ದ್ಯೌಃ' ಇತ್ಯಾದಿ ಶ್ರುತಿಗಳಲ್ಲಿ ಕೇವಲ ಒಂದೊಂದನ್ನೇ ಹೇಳಿದ್ದಾರೆ. ಮತ್ತು ಸ್ಕಾಂದ ಮೊದಲಾದ ಪುರಾಣಗಳಲ್ಲಿ ಸೃಷ್ಟ್ಯಾದ್ಯಷ್ಟಕಗಳನ್ನು ಹೇಳಿದ್ದಾರೆ. ಆದ್ದರಿಂದ ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನು

ಹೇಳಲೇಬೇಕು. ನಿಯಮನಾದಿಗಳನ್ನು ಜನ್ಮಾದಿಗಳಲ್ಲಿ ಅಂತರ್ಭಾವ ಮಾಡುವ ಸಾಹಸವೂ ವ್ಯರ್ಥ. ಹಾಗೆ ಮಾಡುವುದಾದರೆ ಲಯಕ್ಕೂ ಜನ್ಮವಿರುವುದರಿಂದ ಜನ್ಮದಲ್ಲಿಯೇ ಲಯವನ್ನು ಸೇರಿಸಬಹುದು. ಆವಾಗ ನಿಮ್ಮ ತ್ರಿವಿಧ ಕಾರಣತ್ವಕ್ಕೂ ಚ್ಯುತಿ ಬರುತ್ತದೆ.

## ಭಾಮತಿಮತದಲ್ಲಿ ಜನ್ಮಾಧಿಕರಣ
## ಮತ್ತು
## ವಿಮರ್ಶೆ

ಭಾಮತಿಯಲ್ಲಿ ಜನ್ಮಾಧಿಕರಣದ ರಚನೆ ಹೀಗಿದೆ - ಜಗತ್ತನ್ನು ಬ್ರಹ್ಮಲಕ್ಷಣವೆನ್ನುವುದಂತೂ ಅನುಭವವಿರುದ್ಧ. ಇನ್ನು ಜಗತ್ಕಾರಣತ್ವವನ್ನು ಬ್ರಹ್ಮನ ಲಕ್ಷಣವೆನ್ನಬೇಕು. ಆದರೆ ಎಲ್ಲಿಯೂ ಕಾಣದ ಆ ಧರ್ಮವನ್ನು ಬ್ರಹ್ಮನ ಲಕ್ಷಣವೆಂದು ಹೇಳಲು ಹೇಗೆ ಸಾಧ್ಯವೆಂದು ಪೂರ್ವಪಕ್ಷ.

ಜಗತ್ತು ಬ್ರಹ್ಮನಿಂದ ಹುಟ್ಟಿದ್ದರಿಂದ ತನಗೆ ಕಾರಣನಾದ ಬ್ರಹ್ಮನನ್ನು ತಿಳಿಸುತ್ತದೆ. ಯಾವ ರೀತಿಯಾಗಿ ಸೂರ್ಯನ ಗಮನಕ್ಕೆ ಸೂರ್ಯನ ದೇಶಾಂತರಪ್ರಾಪ್ತಿಯು ಲಕ್ಷಣವಾಗುತ್ತದೋ, ಅದರಂತೆ ಜಗತ್ತಿನ ಉತ್ಪತ್ತ್ಯಾದಿಗಳು ಬ್ರಹ್ಮನ ಲಕ್ಷಣಗಳಾಗಬಹುದೆಂದು ಸಿದ್ಧಾಂತ ಮಾಡಿದ್ದಾರೆ.

ಇದು ತಪ್ಪು. ಇವರು ಮಾಡಿಕೊಂಡ ಪೂರ್ವಪಕ್ಷವು ಸಿದ್ಧಾಂತದಿಂದ ಪರಿಹಾರವೇ ಆಗುವುದಿಲ್ಲ. ಮತ್ತು ಜಗತ್ತಿನ ಜಗತ್ಕಾರಣತ್ವವೂ ಅನಾತ್ಮವಾಗಿರುವಾಗ ಆತ್ಮವಿರುದ್ಧಸ್ವಭಾವವನ್ನು ಬ್ರಹ್ಮನ ಲಕ್ಷಣವೆಂದು ಸಿದ್ಧಾಂತ ಮಾಡಲೂ ಸಾಧ್ಯವಿಲ್ಲ. ಮತ್ತೊಂದು ಸ್ವಾರಸ್ಯವೆಂದರೆ ಸೂರ್ಯಗಮನಕ್ಕೆ ದೇಶಾಂತರಸಂಯೋಗವು ಅನುಮಾಪಕವೇ ಹೊರತು ಲಕ್ಷಣವಲ್ಲ. ಪ್ರಕೃತ ಜಗತ್‌ಕಾರಣತ್ವವನ್ನು ಹಾಗೆ ಅನುಮಾಪಕವೆಂದು ಎಲ್ಲಿಯೂ ಹೇಳಿಲ್ಲ.

## ರಾಮಾನುಜಮತದಲ್ಲಿ ಜನ್ಮಾಧಿಕರಣ
## ಮತ್ತು
## ವಿಮರ್ಶೆ

'ತುಂಡು ಕೊಂಬಿನ ಹಸು' 'ಕೊಂಬಿಲ್ಲದ ಹಸು' 'ಪೂರ್ಣಕೊಂಬಿರುವ ಹಸು' ಎಂದು ಹೇಳಿದಾಗ ಯಾರಿಗೆ ಗೋವಿನ ಪರಿಚಯವೇ ಇರುವುದಿಲ್ಲವೋ ಅವನಿಗೆ ಅನೇಕ ಗೋಗಳ ಜ್ಞಾನವೇ ಬರುತ್ತದೆ. ಹೊರತು ಒಂದೇ ಗೋ ಎಂಬ ಜ್ಞಾನ ಬರುವುದಿಲ್ಲ. ಆದರಂತೆ 'ಜನ್ಮಕಾರಣನು ಬ್ರಹ್ಮ'

'ಸ್ಥಿತಿಕಾರಣನು ಬ್ರಹ್ಮ' 'ಲಯಕಾರಣನು ಬ್ರಹ್ಮ' ಎಂದು ಹೇಳಿದಾಗ ಅನೇಕ ಬ್ರಹ್ಮರೆಂದೇ ಅರ್ಥವಾಗುತ್ತದೆ. ಒಬ್ಬನೇ ಬ್ರಹ್ಮನೆಂದಲ್ಲ. ಆದ್ದರಿಂದ ಜನ್ಮಾದಿಗಳು ವಿಶೇಷಣಗಳಾಗಿ ಬ್ರಹ್ಮನ ಲಕ್ಷಣಗಳಾಗುವುದಿಲ್ಲ. ಬ್ರಹ್ಮನಲ್ಲಿ ಮತ್ತೊಂದು ಧರ್ಮವೂ ತೋರದ ಕಾರಣ ಉಪಲಕ್ಷಣವಾಗಿಯೂ ಬ್ರಹ್ಮನ ಲಕ್ಷಣಗಳಾಗುವುದಿಲ್ಲವೆಂದು ಪೂರ್ವಪಕ್ಷ.

ಜನ್ಮಾದಿಗಳನ್ನು ವಿಶೇಷಣವೆಂದೇ ಹೇಳುತ್ತೇವೆ. ಹಾಗಾದರೆ ಬ್ರಹ್ಮನು ಅನೇಕನಾಗಬೇಕಾದೀತೆಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ವಿಶೇಷಣಗಳು ತಮಗೆ ವಿರೋಧಿಗಳಾದ ಇತರ ಧರ್ಮಗಳನ್ನಷ್ಟೇ ವ್ಯಾವೃತ್ತಿಗೊಳಿಸುತ್ತವೆ. ಜನ್ಮಾದಿಗಳಿಗೆ ಕಾಲಭೇದದಿಂದ ವಿರೋಧವೇ ಇಲ್ಲ. ಜನ್ಮವಿರುವಾಗ ಸ್ಥಿತಿಯಿಲ್ಲ. ಸ್ಥಿತಿಯಿರುವಾಗ ಸಂಹಾರವಿಲ್ಲ.

ಅಥವಾ ಜನ್ಮಾದಿಗಳನ್ನು ಉಪಲಕ್ಷಣವೆಂದೂ ಹೇಳಬಹುದು. ಬೃಹಧಾತುವಿನ ಅರ್ಥವಾದ ಪೂರ್ಣತ್ವವು ಉಪಲಕ್ಷ್ಯನ ಧರ್ಮವಾಗಿದೆಯೆಂದು ಸಿದ್ಧಾಂತ.

ರಾಮಾನುಜರ ನಿರಾಕರಣೆ

ರಾಮಾನುಜರ ಅಧಿಕರಣಶರೀರವೂ ಅತ್ಯಂತ ಅಯುಕ್ತ. ಸೃಷ್ಟ್ಯಾದಿಗಳು ಜಗತ್ತಿನಲ್ಲಿ ಇವೆ ಹೊರತು ಬ್ರಹ್ಮನಲ್ಲಿಲ್ಲ. ಜಗತ್ತಿನಲ್ಲಿರುವ ವಿಶೇಷ್ಯಗಳ ಭೇದದಿಂದ ಬ್ರಹ್ಮನಲ್ಲಿ ಭೇದ ಬರಲು ಹೇಗೆ ತಾನೆ ಸಾಧ್ಯ? ಮತ್ತು ಸೂತ್ರದಲ್ಲಿರುವ 'ಯತಃ' ಪದವೂ ವ್ಯರ್ಥವಾಗುತ್ತದೆ. ಇನ್ನು ಸೃಷ್ಟ್ಯಾದಿಕಾರಣತ್ವವನ್ನು ಬ್ರಹ್ಮನ ಲಕ್ಷಣವೆಂದು ಹೇಳಿದಾಗ 'ಸೃಷ್ಟಿ' ಮೊದಲಾದವು ವಿಶೇಷಣಗಳೇ ಆಗುವುದಿಲ್ಲ. ಆದ್ದರಿಂದ ರಾಮಾನುಜರು ಮಾಡಿದ ಪೂರ್ವಪಕ್ಷ ಸರಿಯಿಲ್ಲ.

ಸಿದ್ಧಾಂತ ಮಾಡಿದ್ದೂ ಸರಿಯಿಲ್ಲ. ಕಾಲಭೇದದಿಂದ ಜನ್ಮಾದಿಗಳಿಗೆ ಅವಿರೋಧ ಹೇಳಿದಿರಿ. ಇದು ರಾಮಾನುಜಭಾಷ್ಯದಲ್ಲಿ ಉದಾಹರಿಸಿದ 'ಸರ್ಗಾದ್ಯಾಃ ಭಾವಶಕ್ತಯಃ' ಎಂಬ ಸ್ಮೃತಿಗೆ ವಿರುದ್ಧವಾಗಿದೆ. ಸೃಷ್ಟಿಕಾರಣತ್ವ ಎಂದರೆ ಸೃಷ್ಟಿಮಾಡುವ ಶಕ್ತಿ. ಇದು ಪ್ರಲಯಕಾಲದಲ್ಲೂ ಪರಮಾತ್ಮನಲ್ಲಿದೆ. ಸೃಷ್ಟಿಕಾಲದಲ್ಲೂ ಲಯ ಮಾಡುವ ಶಕ್ತಿ ಪರಮಾತ್ಮನಿಗೆ ಇದೆ. ಹೀಗೆ ಸಾಮರ್ಥ್ಯರೂಪವಾದ ಕಾರಣತ್ವವು ಎಲ್ಲಾ ಕಾಲದಲ್ಲೂ ಇರುವಾಗ ಕಾಲಭೇದದಿಂದ ಅವಿರೋಧವನ್ನೂ ಹೇಳಲು ಸಾಧ್ಯವಿಲ್ಲ.

ಇಲ್ಲಿಗೆ ಜನ್ಮಾಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ತ್ವಪ್ರದೀಪ ಇವುಗಳ ಅನುವಾದವು ಹಾಗೂ ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಶಾಸ್ತ್ರಯೋನಿತ್ವಾಧಿಕರಣ

ಬ್ರಹ್ಮಸೂತ್ರಭಾಷ್ಯ

ಸತ್ತರ್ಕದೀಪಾವಳಿ

ತತ್ವಪ್ರದೀಪ

ವಿಶೇಷ ವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥

॥ ಶ್ರೀವೇದವ್ಯಾಸಾಯ ನಮಃ ॥

॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥

॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥

॥ ಶ್ರೀಗುರುಭ್ಯೋ ನಮಃ ॥

# ಶಾಸ್ತ್ರಯೋನಿತ್ವಾಧಿಕರಣ

# ಬ್ರಹ್ಮಸೂತ್ರ

**ब्रह्मसूत्रम् – ।। शास्त्रयोनित्वात् ।। ३ ।।**

ಅನುವಾದ - ಜಗತ್ಕಾರಣನನ್ನು ತಿಳಿಸುವ ವಿಷಯದಲ್ಲಿ ಋಗಾದಿಶಾಸ್ತ್ರಗಳೇ ಪರಮಪ್ರಮಾಣವಾಗಿವೆ. ಹೊರತು ಅನುಮಾನಾದಿಗಳಲ್ಲ. ಆದ್ದರಿಂದ ವಿಷ್ಣುವೇ ಜಗತ್ಕಾರಣನು.

ಅನುಮಾನದಿಂದ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಕಲ್ಪಿಸಬಾರದು. ಏಕೆಂದರೆ ಶಾಸ್ತ್ರಯೋನಿತ್ವಾತ್ = ಜಗತ್ಕಾರಣನ ವಿಷಯದಲ್ಲಿ ಕೇವಲ ಶಾಸ್ತ್ರವೇ ಪ್ರಮಾಣವಾದುದರಿಂದ, 'ಶಾಸ್ತ್ರಮ್ ಯೋನಿಃ ಯಸ್ಯ ತತ್ ಶಾಸ್ತ್ರಯೋನಿಃ, ಶಾಸ್ತ್ರಯೋನೇಃ ಭಾವಃ ಶಾಸ್ತ್ರಯೋನಿತ್ವಮ್; ತಸ್ಮಾತ್ = ಶಾಸ್ತ್ರಯೋನಿತ್ವಾತ್' ಎಂದು ವಿಗ್ರಹ. (ಶಾಸ್ತ್ರಮ್ = ಋಗಾದಿಸಚ್ಛಾಸ್ತ್ರಗಳು, ಯೋನಿಃ = ಜಗತ್ಕಾರಣನನ್ನು ತಿಳಿಸುವುದಕ್ಕೆ ಕಾರಣ)

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ ಶಾಸ್ತ್ರಯೋನಿತ್ವಾಧಿಕರಣವು ಸಮಾಪ್ತವಾಯಿತು ॥

* * * * * *

## ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

### ಜಗತ್ಕಾರಣನ ವಿಷಯದಲ್ಲಿ ಶಾಸ್ತ್ರವೇ ಪ್ರಮಾಣ

**ब्रह्मसूत्रभाष्यम् – अनुमानतोऽन्ये न कल्पनीयाः ।**

**।। शास्त्रयोनित्वात् ।। ३ ।।**

ಅನುಮಾನಪ್ರಮಾಣದಿಂದ ರುದ್ರಾದಿಗಳು ಜಗತ್ಕಾರಣರೆಂದು ಊಹಿಸಬಾರದು. ಏಕೆಂದರೆ ಜಗತ್ಕಾರಣನನ್ನು ನಿರ್ಧರಿಸುವ ವಿಷಯದಲ್ಲಿ ಶಾಸ್ತ್ರವೇ ಮುಖ್ಯಪ್ರಮಾಣವಾಗಿದೆ.

**भाष्यम् –'नावेदविन्मनुते तं बृहन्तम् । सर्वानुभुमात्मानं साम्पराये'**

**(तै. ब्रा. ३-१२-९)**

**'औपनिषदः पुरुषः' इत्यादिश्रुतिभ्यः ।**

'ಯಾರು ವೇದಾರ್ಥವನ್ನು ತಿಳಿದಿರುವುದಿಲ್ಲವೋ ಅವರು ಮೋಕ್ಷಕ್ಕೋಸ್ಕರ ಪೂರ್ಣನಾದ, ಸರ್ವಜ್ಞನಾದ, ಅಂತಃಪ್ರೇರಕನಾದ ಆ ಪರಮಾತ್ಮನನ್ನು ತಿಳಿಯಲಾರರು' ಹೀಗೆ ತೈತ್ತಿರೀಯ-ಬ್ರಾಹ್ಮಣಶ್ರುತಿಯು ಹೇಳಿದೆ. ಮತ್ತು 'ಪುರುಷಶಬ್ದವಾಚ್ಯನಾದ ಪರಮಾತ್ಮನು ಉಪನಿಷದೇಕವೇದ್ಯ-ನಾಗಿದ್ದಾನೆ' ಎಂಬಿವೇ ಮೊದಲಾದ ಶ್ರುತಿಗಳಿರುವುದರಿಂದ ವಿಷ್ಣುವೇ ಜಗತ್ಕಾರಣನಾಗುತ್ತಾನೆ.

### ಶುಷ್ಕತರ್ಕಕ್ಕೆ ಜೋತುಬೀಳಬೇಡಿ

**ब्रह्मसूत्रभाष्यम् – न चानुमानस्य नियतप्रामाण्यम् ।**

**'श्रुतिसाहाय्यरहितमनुमानं न कुत्रचित् ।**
**निश्चयेत् साधयेदर्थं प्रमाणान्तरमेव च ।।**

**श्रुतिस्मृतिसहायं यत् प्रमाणान्तरमुत्तमम् ।**
**प्रमाणपदवीं गच्छेन्नात्र कार्या विचारणा ।**

पूर्वोत्तराविरोधेन कोऽत्रार्थोऽभिमतो भवेत् ।
इत्याद्यमूहनं तर्कः शुष्कतर्कं तु वर्जयेत् ।।' इत्यादि कौर्मे ।

शक्यत्वाच्चानुमानानां सर्वत्र ।

'सर्वत्र शक्यते कर्तुमागमं हि विनाऽनुमा ।
तस्मान्न सा शक्तिमती विनाऽऽगममुदीक्षितुम् ।।' इति वाराहे ।

ಭಾಷ್ಯಾರ್ಥ -- ಅನೇಕ ವಿಧವಾದ ಅನುಮಾನಗಳಿಗೆ ಅತೀಂದ್ರಿಯವಿಷಯದಲ್ಲಿ ನಿಯಮೇನ ಪ್ರಾಮಾಣ್ಯವಿರುವುದಿಲ್ಲ.

''ವೇದದ ಸಹಾಯವಿಲ್ಲದ ಅನುಮಾನವು ಯಾವುದೇ ಅತೀಂದ್ರಿಯ ವಿಷಯದಲ್ಲಿ ನಿಶ್ಚಾಯಕವಾಗಿ ಪ್ರಮೇಯವನ್ನು ಸಾಧಿಸುವುದಿಲ್ಲ. ಆದರೆ ಶ್ರುತಿಸ್ಮೃತಿ ಸಹಾಯ ಹೊಂದಿರುವ ಅನುಮಾನವು ನಿರ್ದುಷ್ಟಪ್ರಮಾಣವಾಗುತ್ತದೆ. ಪ್ರತ್ಯಕ್ಷಪ್ರಮಾಣವೂ ಸಹ ಶ್ರುತಿಸ್ಮೃತಿ ಸಹಾಯ ಹೊಂದಿದ್ದಲ್ಲಿ ಅತೀಂದ್ರಿಯ ವಿಷಯದಲ್ಲಿ ಉತ್ತಮಪ್ರಮಾಣವೇ ಎನಿಸಿ ಶ್ರೇಷ್ಠವಾದ ಪ್ರಮಾಣಪಂಕ್ತಿಯನ್ನು ಹೊಂದುತ್ತದೆ. ಈ ವಿಷಯದಲ್ಲಿ ವಿಚಾರ ಮಾಡಬೇಕಾಗಿಲ್ಲ. ಉಪಕ್ರಮ ಮತ್ತು ಉಪಸಂಹಾರಗಳಿಗೆ ಆಪಾತತಃ ವಿರೋಧ ಕಂಡರೂ; ವಿರೋಧ ಬಾರದಂತೆ ಜ್ಞಾನಿಗಳಿಗೆ ಸಮ್ಮತವಾದ ಅರ್ಥವು ಯಾವುದು? ಇತ್ಯಾದಿ ವಿಷಯಗಳನ್ನು ಉಪಯುಕ್ತವಾಗುವಂತೆ ಊಹಿಸುವುದೇ 'ತರ್ಕ' ಎನಿಸುತ್ತದೆ. ಶುಷ್ಕತರ್ಕವನ್ನು ಪರಿತ್ಯಾಗ ಮಾಡಬೇಕು.''; ಇವೇ ಮೊದಲಾದ ವಿಷಯಗಳನ್ನು ಮಹಾಕೂರ್ಮಪುರಾಣದಲ್ಲಿ ಹೇಳಲಾಗಿದೆ.

''ಪ್ರತ್ಯಕ್ಷ ಹಾಗೂ ಶ್ರುತಿಗೆ ವಿರುದ್ಧವಾದ ಅರ್ಥದಲ್ಲಿಯೂ ಅನುಮಾನವನ್ನು ಮಾಡಲು ಬರುತ್ತದೆ. ಆದ್ದರಿಂದ ಅನುಮಾನವನ್ನು ಆಶ್ರಯಿಸಬಾರದು'' ಎಂದು ವರಾಹಪುರಾಣ ಹೇಳುತ್ತದೆ.

ಆಗಮವಿರುದ್ಧವಾದ ಯಾವುದೇ ವಿಷಯದಲ್ಲಿಯೂ ಅನುಮಾನವನ್ನು ಪ್ರಯೋಗಿಸಬಹುದು. ಆದ್ದರಿಂದ ಆಗಮಸಹಾಯವಿಲ್ಲದ ಅನುಮಾನವು ಅತೀಂದ್ರಿಯವಿಷಯವನ್ನು ತಿಳಿಸಲು ಸಮರ್ಥ-ವಾಗುವುದಿಲ್ಲ.

ನಾಸ್ತಿಕರ ಮೇಲೆ ಬ್ರಹ್ಮಾಸ್ತ್ರ ಪ್ರಯೋಗ

**ब्रह्मसूत्रभाष्यम् –**

**'रेतो धातुर्वटकणिका घृतधूमाधिवासनम् ।**
**जातिस्मृतिरयस्कान्तः सूर्यकान्तोऽम्बुभक्षणम् ।**
**प्रेत्य भूताप्ययश्चैव देवताऽभ्युपयाचनम् ।**
**मृते कर्मनिवृत्तिश्च प्रमाणमिति निश्चयः ।।'**
**इति मोक्षधर्मवचनान्न नास्तिक्यवादो युज्यते ।।**
**दर्शनाच्च तप आदिफलस्य ।**

ರೇತಸ್ಸು, ವಾತ, ಪಿತ್ತ ಮೊದಲಾದ ಧಾತುಗಳು, ಆಲದ ಮರದ ಬೀಜಗಳು, ತುಪ್ಪ, ಹೊಗೆಯ ಸಂಸ್ಕಾರವು, ಜನ್ಮಾಂತರಸ್ಮರಣೆಯು, ಅಯಸ್ಕಾಂತವು, ಸೂರ್ಯಕಾಂತಮಣಿಯು, ನೀರು ಕುಡಿಯುವಿಕೆಯು, ಮೃತರಾದ ಮೇಲೆ ಪಂಚಭೂತಗಳಲ್ಲಿ ಶರೀರದ ಸೇರುವಿಕೆಯು, ದೇವತಾಪ್ರಾರ್ಥನೆ, ಸತ್ತ ವ್ಯಕ್ತಿಗಳಲ್ಲಿ ಚೇಷ್ಟಾದಿಗಳ ನಿಲ್ಲುವಿಕೆಯು ಇವೇ ಮೊದಲಾದ ಅನುಭವಗಳಿಂದ ಅತೀಂದ್ರಿಯ ವಿಷಯಗಳಲ್ಲಿ ಪ್ರಮಾಣವಾಗಿವೆಯೆಂದು ನಿಶ್ಚಯಿಸಬಹುದು; ಹೀಗೆ ಮೋಕ್ಷಧರ್ಮಪರ್ವದಲ್ಲಿ ಹೇಳಿದ್ದಾರೆ. ಆದ್ದರಿಂದ ಕಣ್ಣಿಗೆ ಕಾಣದ್ದು ಇಲ್ಲವೆಂಬ ನಾಸ್ತಿಕ್ಯವಾದವು ಯುಕ್ತವಲ್ಲ.

ಅಷ್ಟೇ ಅಲ್ಲದೆ ತಪಸ್ಸು ಮೊದಲಾದ ಅನುಷ್ಠಾನಗಳ ಫಲವು ಪ್ರತ್ಯಕ್ಷವಾಗಿ ಕಾಣುತ್ತಿರುವುದರಿಂದಲೂ ನಾಸ್ತಿಕ್ಯವಾದವು ಅಯುಕ್ತವಾಗಿದೆ.

ಸಚ್ಛಾಸ್ತ್ರಗಳೇ ಮಾರ್ಗದರ್ಶಕಗಳು

**ब्रह्मसूत्रभाष्यम् –**

**'ऋग्यजुस्सामाथर्वाश्च भारतं पञ्चरात्रकम् ।**
**मूलरामायणं चैव शास्त्रमित्यभिधीयते ।।**

**यच्चानुकूलमेतस्य तच्च शास्त्रं प्रकीर्तितम् ।**
**अतोऽन्यो ग्रन्थविस्तारो नैव शास्त्रं कुवर्त्म तत् ।।' इति स्कान्दे ।**

ಅನುವಾದ -- ಋಗ್ವೇದ, ಯಜುರ್ವೇದ, ಸಾಮವೇದ ಅಥರ್ವವೇದ ಮಹಾಭಾರತ ಪಂಚರಾತ್ರಾಗಮ, ಮೂಲರಾಮಾಯಣ ಈ ಏಳೂ ಶಾಸ್ತ್ರಗಳೆಂದು ಪ್ರಸಿದ್ಧವಾಗಿವೆ. ಮತ್ತು ಈ ಏಳು ಶಾಸ್ತ್ರಗಳಿಗೆ ಅನುಕೂಲವಾದ ಪ್ರಮೇಯಗಳನ್ನು ಪ್ರತಿಪಾದಿಸುವ ಪೌರುಷೇಯ ಗ್ರಂಥಗಳೆಲ್ಲವೂ ಪ್ರಮಾಣಗಳೇ ಆಗಿವೆ. ಈ ಏಳು ಶಾಸ್ತ್ರಗಳಿಗೆ ವಿರುದ್ಧವಾದ ಪ್ರಮೇಯಗಳನ್ನು ಪ್ರತಿಪಾದಿಸುವ ಪಾಶುಪತಾದಿಶಾಸ್ತ್ರಗಳೆಲ್ಲವೂ ಶಾಸ್ತ್ರಗಳೇ ಆಗುವುದಿಲ್ಲ; ಹೊರತು ಆ ಎಲ್ಲಾ ಶಬ್ದಪ್ರಪಂಚವು ಅಪಮಾರ್ಗವನ್ನೇ ತೋರಿಸುತ್ತವೆ. ಹೀಗೆ ಸ್ಕಾಂದಪುರಾಣದಲ್ಲಿ ತೋರಿಸಲ್ಪಟ್ಟಿದೆ.

ಪಂಚರಾತ್ರಾಗಮವಷ್ಟೇ ಸ್ವೀಕಾರಾರ್ಹ

**ब्रह्मसूत्रभाष्यम् – 'साङ्ख्यं योगः पाशुपतं वेदारण्यकमेव च ।'**

**इत्यारभ्य वेदपञ्चरात्रयोरैक्याभिप्रायेण पञ्चरात्रस्यैव प्रामाण्यमुक्तमितरेषां भिन्नमतत्वं प्रदर्श्य मोक्षधर्मेष्वपि ।**

**शास्त्रं योनिः प्रमाणमस्येति शास्त्रयोनि ।। ३ ।।**

**।। इति शास्त्रयोनित्वाधिकरणम् ।।**

ಮಹಾಭಾರತದ ಮೋಕ್ಷಧರ್ಮಪರ್ವದಲ್ಲಿಯೂ ಹೀಗೆ ಹೇಳಿದ್ದಾರೆ - ' 'ಸಾಂಖ್ಯಂ ಯೋಗಃ ಪಾಶುಪತಂ' ಎಂಬುದಾಗಿ ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ, ಪಾಶುಪತಾಗಮ, ವೇದ, ಆರಣ್ಯಕ'; ಎಂದು ಪ್ರಾರಂಭಿಸಿ ಮುಂದೆ ವೇದ, ಪಂಚರಾತ್ರಗಳಿಗೆ ಮಾತ್ರ ಒಂದೇ ಅಭಿಪ್ರಾಯವೆಂದು ಹೇಳಿ ಪಂಚರಾತ್ರಕ್ಕೆ ಮಾತ್ರ ಪ್ರಾಮಾಣ್ಯವನ್ನು ಸಮರ್ಥಿಸಿದ್ದಾರೆ. ಉಳಿದ ಪಾಶುಪತಾದ್ಯಾಗಮಗಳಿಗೆ ವೇದಕ್ಕಿಂತ ಭಿನ್ನಾಭಿಪ್ರಾಯವನ್ನು ಹೇಳಿದ್ದಾರೆ.

ಸೂತ್ರದಲ್ಲಿರುವ 'ಶಾಸ್ತ್ರಯೋನಿಃ' ಎಂಬ ಪದಕ್ಕೆ 'ಶಾಸ್ತ್ರಂ ಯೋನಿಃ ಯಸ್ಯ ತತ್'; ಎಂಬುದಾಗಿ ಬಹುವ್ರೀಹಿಸಮಾಸವನ್ನು ತಿಳಿಯಬೇಕು. 'ಯೋನಿ' ಎಂದರೆ ಪ್ರಮಾಣ ಎಂದರ್ಥ.

॥ ಇಲ್ಲಿಗೆ ಶ್ರೀಮದಾಚಾರ್ಯರು ರಚಿಸಿದ ಬ್ರಹ್ಮಸೂತ್ರಭಾಷ್ಯದ ಕನ್ನಡಾನುವಾದದಲ್ಲಿ ಶಾಸ್ತ್ರಯೋನಿತ್ವಾಧಿಕರಣವು ಸಮಾಪ್ತವಾಯಿತು ॥

ಶ್ರೀ ಪದ್ಮನಾಭತೀರ್ಥರಿಂದ ವಿರಚಿತವಾದ

# ಸತ್ತರ್ಕದೀಪಾವಳಿ

ರುದ್ರಾದಿಗಳು ಜಗತ್ಕಾರಣರಲ್ಲ ಎನ್ನಲು ಶಾಸ್ತ್ರಯೋನಿತ್ವಾಧಿಕರಣ

**सत्तर्कदीपावळिः – अधुना रुद्रादीनां जगत्कारणत्वमाशङ्क्य तत्परिहारत्वेन सूत्रमवतारयति – शास्त्रेति ।। यदि अनुमानेन जगत्कर्ता सिद्ध्येत् तर्ह्येव 'यत् कार्यं तत् सकर्तृकम्' इति व्याप्त्या क्षित्यादिकार्यस्यापि यः कश्चित् कर्ता सिद्ध्यन् रुद्रादिः परिशङ्कितः स्यात् ।**

ಈಗ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಆಶಂಕಿಸಿ ಅದನ್ನು ಪರಿಹಾರ ಮಾಡುವುದಕ್ಕೋಸ್ಕರ ಸೂತ್ರವನ್ನೇ 'ಶಾಸ್ತ್ರಯೋನಿತ್ವಾತ್' ಎಂಬುದಾಗಿ ಪಠನ ಮಾಡುತ್ತಿದ್ದಾರೆ. ಒಂದು ವೇಳೆ ಅನುಮಾನದಿಂದ ಜಗತ್ಕರ್ತೃತ್ವವು ಸಿದ್ಧವಾಗುವುದಾದರೆ ಆವಾಗ 'ಯತ್ಕಾರ್ಯಂ ತತ್ ಸಕರ್ತೃಕಮ್' ಎಂಬ ವ್ಯಾಪ್ತಿಯಿಂದ ಭೂಮಿ ಮೊದಲಾದ ಸಕಲಕಾರ್ಯಗಳಿಗೆ ಯಾರೋ ಒಬ್ಬ ಕರ್ತೃವು ಇದ್ದಾನೆಂದು ಸಿದ್ಧವಾಗುತ್ತದೆ. ಅಂತಹ ಕರ್ತೃ ರುದ್ರಾದಿಗಳೂ ಆಗಬಹುದೆಂದು ಶಂಕಿಸಬಹುದು.

ಜಗತ್ಕಾರಣನನ್ನು ತಿಳಿಯಲು ವೇದವನ್ನೇ ಓದಬೇಕು

**सत्तर्कदीपावळिः – नत्वेतदस्ति शास्त्रैकसमधिगम्यत्वात् जगत्कर्तुः । अतः शास्त्रं यं जगत्कर्तारं बोधयति स जगत्कर्ता स्यान्नापरः । शास्त्रैकवेद्यत्वं जगत्कर्तृः श्रुतिभिरुपपादयति – 'नावेदम्' इत्यादिना ।। 'सर्वमनुभवति' इति 'सर्वानुभूम्' परमात्मानं साम्पराये, तल्लोकमुद्दिश्य वेदविदेवमनुते न त्ववेदवित् इत्यनेन वेदैक वेद्यत्वमनुमानावेद्यत्वं च जगदीशितुरुक्तं भवति । पुरु सरणः परमपुरुषो जगत्कर्ता औपनिषदः उपनिषदेकसमधिगम्य इत्युक्तं भवति । 'नैषा तर्केण मतिरापनेया' इत्याद्या श्रुतिरादिशब्दोक्ता ।**

ಆದರೆ ಜಗತ್ಕರ್ತೃತ್ವವನ್ನು ಕೇವಲ ಶಾಸ್ತ್ರದಿಂದಲೇ ತಿಳಿಯಬೇಕು. ಅನುಮಾನದಿಂದ

ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ಶಾಸ್ತ್ರವು ಯಾವ ಜಗತ್ಕರ್ತೃವನ್ನು ಪ್ರತಿಪಾದಿಸುತ್ತದೋ ಅವನೇ ಜಗತ್ಕಾರಣನಾಗುತ್ತಾನೆ ಹೊರತು ಮತ್ತೊಬ್ಬನಲ್ಲ. ಶಾಸ್ತ್ರೈಕವೇದ್ಯತ್ವವನ್ನು ಜಗತ್ಕರ್ತೃತ್ವಕ್ಕೆ ಶ್ರುತಿಗಳಿಂದ ಪ್ರತಿಪಾದಿಸುತ್ತಿದ್ದಾರೆ ''ನಾವೇದವಿತ್'' ಇತ್ಯಾದಿಯಾಗಿ. 'ಸರ್ವಾನುಭೂ' ಎಂದರೆ ಎಲ್ಲವನ್ನೂ ತಿಳಿದವನು ಎಂದರ್ಥ. 'ಯಾರು ಪರಮಾತ್ಮನ ಲೋಕವನ್ನು ಉದ್ದೇಶಿಸಿ ವೇದವನ್ನು ಅಧ್ಯಯನ ಮಾಡಿ ಪರಮಾತ್ಮನನ್ನು ತಿಳಿಯುತ್ತಾರೋ' ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಜಗತ್ಕಾರಣನಾದವನು ವೇದದಿಂದಷ್ಟೇ ತಿಳಿಯುತ್ತಾನೆ ಹೊರತು ಅನುಮಾನದಿಂದ ತಿಳಿಯಲಾರನೆಂದು ಸಿದ್ಧವಾಗುತ್ತದೆ. 'ಔಪನಿಷದಃ ಪುರುಷಃ' ಎಂಬ ಶ್ರುತಿಯಲ್ಲಿರುವ ಪುರುಷಶಬ್ದಕ್ಕೆ 'ಪುರು ಸರಣಃ' ಎಂದು ನಿಷ್ಪತ್ತಿ ಮಾಡಿದಾಗ ಜಗತ್ಕರ್ತಾ ಎಂಬರ್ಥವು ಲಭಿಸುತ್ತದೆ. ಆದ್ದರಿಂದ ಜಗತ್ಕರ್ತೃವು ಉಪನಿಷತ್ತುಗಳಿಂದಷ್ಟೇ ತಿಳಿಯುತ್ತದೆಂದು ಈ ಶ್ರುತಿಗೆ ಅರ್ಥ. ಆದಿಶಬ್ದದಿಂದ 'ನೈಷಾ ತರ್ಕೇಣ ಮತಿರಾಪನೇಯಾ' ಇತ್ಯಾದಿ ಶ್ರುತಿಗಳನ್ನು ವಿವಕ್ಷಿಸಬೇಕು.

### ಸ್ವತಂತ್ರವಾಗಿ ಅನುಮಾನವು ಏನನ್ನೂ ಸಾಧಿಸದು

**सत्तर्कदीपावळिः** – इतोऽपि नानुमानं स्वतन्त्रमीश्वरं साधयति अनियतप्रमाणत्वाभावादित्याह – न चेति ।। एतदेव पुराणवचनेनोपपादयति – श्रुतीति।। न ह्यनिश्चितार्थसाधकं प्रमाणं भवति । न च क्षित्यादेः कार्यत्वहेतुना घटवत् सकर्तृकत्वं निश्चेतुं शक्यम्, शरीरवत् कर्तृरहितत्वेन अकर्तृकत्वस्यापि सम्भवात् । जडशरीरादिमान् ईश्वरो प्रवर्तमानमनुमानं प्रमाणं भवेत् नान्यथा । यथा भगवदवतारग्राहि प्रत्यक्षम् । न चात्यन्तातीन्द्रियार्थे स्वतन्त्रानुमानप्रवृत्तौ यस्तर्केणानुसन्धत्ते 'स मां वेद न चेतनम्' इति वचनविरोधः, तद् वचनस्य श्रुतिपौर्वापर्यपर्यालोचनतर्कविषयत्वात् इत्यर्थः । यदि स्वतन्त्रानुमानेन प्रत्यक्षयोग्यार्थस्यापि सिद्धिर्भवेत् तर्हि शशशृङ्गादीनामपि सिद्धिः स्यात् । तत्रापि गवादिचतुष्पादत्वादिहेतुना अनुमानस्य कर्तुं शक्यत्वादित्याह – शक्यत्वादिति।। पुराणवचनेनैतदुपपादयति – सर्वत्रेति ।। उदीक्षितुम् अर्थमुदीक्षियितुम् इत्यर्थः ।

ಅನುಮಾನವು ಅನಿಯತಪ್ರಮಾಣವಾಗಿರುವುದರಿಂದ ಸ್ವತಂತ್ರನಾದ ಈಶ್ವರನನ್ನು ಸಾಧಿಸುವುದಿಲ್ಲವೆಂದು ಮತ್ತೊಂದು ಕಾರಣದಿಂದ 'ನಚ' ಎಂಬ ವಾಕ್ಯವು ಪ್ರತಿಪಾದಿಸುತ್ತಿದೆ. ಈ ವಿಷಯವನ್ನೇ ಪುರಾಣದ ಮಾತುಗಳಿಂದ ''ಶ್ರುತಿಸ್ಮೃತಿ'' ಎಂಬ ಭಾಷ್ಯವು ಪ್ರತಿಪಾದಿಸುತ್ತಿದೆ. ಅನಿಶ್ಚಿತವಾದ ಅರ್ಥವನ್ನು ಸಾಧಿಸುವುದು ಪ್ರಮಾಣವಾಗುವುದಿಲ್ಲವೆಂದು ಅಭಿಪ್ರಾಯ. ಕಾರ್ಯತ್ವ ಹೇತುವಿನಿಂದ ಕ್ಷಿತ್ಯಾದಿಗಳಿಗೆ ಸಕರ್ತೃಕತ್ವವನ್ನು ಘಟಾದಿಗಳಂತೆ ಸಾಧಿಸಲು ಬರುವುದಿಲ್ಲ. ಹಾಗಾದಲ್ಲಿ ಶರೀರದ ದೃಷ್ಟಾಂತದಂತೆ ಕರ್ತೃರಹಿತತ್ವದಿಂದ ಅಕರ್ತೃಕತ್ವವನ್ನು ಸಾಧಿಸುವ ಪ್ರಸಂಗ ಬರುತ್ತದೆ. ಜಡಶರೀರವನ್ನು ಹೊಂದಿರುವ ಈಶ್ವರನು ಅನುಮಾನದಿಂದ ಗಮ್ಯನಾಗಬಹುದಲ್ಲವೇ? ಎಂದು ಶಂಕಿಸಬಾರದು. ಹಾಗಾದಲ್ಲಿ ಪ್ರತ್ಯಕ್ಷವಿರೋಧ ಬರುತ್ತದೆ. ಆದ್ದರಿಂದ ಶ್ರುತಿಯನ್ನು ಅನುಸರಿಸಿರುವ ಅನುಮಾನವಷ್ಟೇ ಅತೀಂದ್ರಿಯನಾದ ಈಶ್ವರನನ್ನು ಸಾಧಿಸಲು ಸಮರ್ಥವಾಗುತ್ತದೆ. ಶ್ರುತಿಸಹಾಯವಿಲ್ಲದ ಅನುಮಾನವು ಈಶ್ವರನನ್ನು ಸಾಧಿಸಲಾರದು. ಯಾವರೀತಿಯಾಗಿ ಭಗವದವತಾರವಾದ ರಾಮಕೃಷ್ಣಾದಿಗಳನ್ನು ವಿಷಯೀಕರಿಸುವ ಪ್ರತ್ಯಕ್ಷವು ಶ್ರುತಿಸಹಾಯವಿಲ್ಲದಿದ್ದಾಗ ದೋಷಪೂರ್ಣವಾಗಿ ತೋರಿಸುತ್ತದೋ ಅದರಂತೆ.

ಅತೀಂದ್ರಿಯವಸ್ತುವಿನಲ್ಲಿ ಅನುಮಾನವು ಸ್ವತಂತ್ರವಾಗಿ ಪ್ರವೃತ್ತಿ ಮಾಡುವುದರಿಂದ 'ತರ್ಕದಿಂದ ನನ್ನನ್ನು ತಿಳಿಯುತ್ತಾನೆ. ಹೊರತು ಚೇತನನಲ್ಲ' ಎಂಬ ಮಾತಿನ ವಿರೋಧಕ್ಕೂ ಈಗ ಅವಕಾಶವಿಲ್ಲ. ಈ ವಚನವು ಶ್ರುತಿಯ ಪೌರ್ವಾಪರ್ಯ ಆಲೋಚನರೂಪವಾದ ತರ್ಕವಿಷಯಕವಾಗಿದೆ ಹೊರತು ಶುಷ್ಕತರ್ಕದ ವಿಷಯವಲ್ಲ. ಒಂದು ವೇಳೆ ಸ್ವತಂತ್ರವಾಗಿ ಅನುಮಾನದಿಂದ ಪ್ರತ್ಯಕ್ಷ ಅಯೋಗ್ಯವಾದ ಅರ್ಥವು ಸಿದ್ಧವಾಗುವುದಾದರೆ ಶಶಾದಿಗಳಿಗೂ ಶೃಂಗವು ಸಿದ್ಧವಾಗಬೇಕಾದೀತು. ಏಕೆಂದರೆ ಹಸುವಿನಂತೆ ಶಶಾದಿಗಳಿಗೂ ನಾಲ್ಕು ಕಾಲುಗಳಿರುತ್ತವೆ. ಈ ಶಂಕೆಯನ್ನು 'ಶಕ್ಯತ್ವಾಚ್ಚ' ಎಂಬ ಭಾಷ್ಯದಿಂದ ತೋರಿಸುತ್ತಿದ್ದಾರೆ. ಇದನ್ನೇ ಪುರಾಣದ ಮಾತಿನಿಂದ 'ಸರ್ವತ್ರ' ಎಂಬುದಾಗಿ ಉಪಪಾದಿಸುತ್ತಿದ್ದಾರೆ. ಉದೀಕ್ಷಿತುಮ್ ಎಂದರೆ ಅತೀಂದ್ರಿಯವಸ್ತುವನ್ನು ತಿಳಿಯಲು ಎಂದರ್ಥ.

### ನಾಸ್ತಿಕರೂ ಕೂಡ ಈಶ್ವರನನ್ನು ಒಪ್ಪಬೇಕು

**सत्तर्कदीपावळिः** – ननु 'प्रत्यक्ष एव विषयीकरोति नानुमानमित्येतत् प्रतिपादनं व्यर्थम्' इत्येतच्चोद्यं परिहरति – रेतो धातुरित्यादि मोक्षधर्मवचनेन ।।

**अस्यार्थः** – कश्चिदेव रेतसः शरीरविशेषपरिणामान्यथानुपपत्त्या, कस्यचिदेव अपथ्यस्य सेवनेन वातपित्तादिधातुविकारान्यथानुपपत्त्या, कस्याश्चिदेव वटकणिकायाः वटविशेषपरिणामान्यथानुपपत्त्या, केनचिदेव जातिस्मृत्यन्यथानुपपत्त्या, कस्यचिदेव अयस्कान्तस्य अयोभ्रामकत्वान्यथानुपपत्त्या, सूर्यकान्तशिलाया अप्यग्निजनकत्वान्यथानुपपत्त्या जीवद्दशायां तन्निर्वाहकमन्यत् कल्पनीयम् । तच्च कारणं रेतोधात्वाद्यभिमानिजीवान्तर्यामी कर्मसापेक्षो विष्णुरेवेत्येतद् वेद एव बोधयितुं शक्नोति । देवताभ्युपयाचनान्यथानुपपत्त्याप्यागमिकोर्थः सिद्ध्यति । अप्रत्यक्षाया हि देवताया याचनं लोकसिद्धम् । मृतशरीरस्य ज्ञानचेष्टानिवृत्त्यनुपपत्त्या जीवद्दशायां ज्ञानादिनिर्वाहकं पूर्वोक्तं कारणं सिद्धत्येव अन्यथा मृतशरीरस्यापि ज्ञानादिमत्वप्रसङ्गात् । गतप्राणत्वेन ज्ञानाभावश्चेत् सुप्तशरीरस्य ज्ञानं स्यात् सप्राणत्वात् । जीवेश्वरादिकमनङ्गीकुर्वतः प्रत्यक्षैकप्रामाण्यवादिनोम्बुपानादिप्रवृत्तिरपि दुर्घटा स्यात् । अनुमायत्तत्वात् तस्याः । इतोपि न शास्त्रापह्नवः कर्तुं शक्यते। 'अत्युत्कटैः पुण्यपापैरिहैव फलमश्नुते' इति लोकप्रसिद्धेरित्याह – दर्शनादिति ।।

'ಪ್ರತ್ಯಕ್ಷವಷ್ಟೇ ಪ್ರಮಾಣವಾಗಿದೆ; ಅನುಮಾನವು ಪ್ರಮಾಣವೇ ಅಲ್ಲ' ಹೀಗಿರುವಾಗ ಅನುಮಾನದ ನಿರಾಕರಣೆಯು ವ್ಯರ್ಥ ಎಂಬ ಕುಚೋದ್ಯವನ್ನು 'ರೇತೋ ಧಾತುಃ'' ಎಂಬ ಭಾಷ್ಯವು ಪರಿಹರಿಸುತ್ತಿದೆ. ಮಹಾಭಾರತದ ಮೋಕ್ಷಧರ್ಮವಚನದ ಈ ಶ್ಲೋಕಗಳಿಗೆ ಹೀಗರ್ಥ- ಕೆಲವರ ರೇತಸ್ಸು ಮಾತ್ರ ಶರೀರವಿಶೇಷಪರಿಣಾಮವನ್ನು ಹೊಂದುತ್ತದೆ. ಇದರ ಅನ್ಯಥಾನುಪಪತ್ತಿಯಿಂದ ಅತೀಂದ್ರಿಯ ಪದಾರ್ಥವು ಸಿದ್ಧವಾಗುತ್ತದೆ. ಕೆಲವರಿಗೆ ಮಾತ್ರ ಅಪಥ್ಯದ ಸೇವನೆಯಿಂದ ವಾತಪಿತ್ತಾದಿ ಧಾತುವಿಕಾರವು ಉಂಟಾಗುತ್ತದೆ. ಇದರ ಅನ್ಯಥಾನುಪಪತ್ತಿಯಿಂದ; ಕೆಲವು ಆಲದ ಬೀಜಗಳಿಂದಷ್ಟೇ ಆಲದ ಮರವು ಹುಟ್ಟುತ್ತದೆ. ಇದರ ಅನ್ಯಥಾನುಪಪತ್ತಿಯಿಂದ; ಕೆಲವರಿಗಷ್ಟೇ ಜಾತಿಸ್ಮೃತಿಯು ಉಂಟಾಗುತ್ತದೆ. ಇದರ ಅನ್ಯಥಾನುಪಪತ್ತಿಯಿಂದ; ಕೆಲವು ಅಯಸ್ಕಾಂತಕ್ಕಷ್ಟೇ ಕಬ್ಬಿಣವನ್ನು ತಿರುಗಿಸುವ ಶಕ್ತಿಯಿದೆ. ಇದರ ಅನ್ಯಥಾನುಪಪತ್ತಿಯಿಂದ; ಸೂರ್ಯಕಾಂತಶಿಲೆಗೆ ಅಗ್ನಿಜನಕತ್ವವು ಕಂಡಿರುತ್ತದೆ. ಇದರ ಅನ್ಯಥಾನುಪಪತ್ತಿಯಿಂದ; ಅವುಗಳ ನಿರ್ವಹಣೆಗಾಗಿ ಅತೀಂದ್ರಿಯನಾದ ಒಬ್ಬನನ್ನು ಒಪ್ಪಲೇ ಬೇಕಾಗುತ್ತದೆ. ಅಂತಹ ಅತೀಂದ್ರಿಯನಾರೆಂದರೆ ರೇತಸ್ಸು, ಧಾತುಗಳ ಅಭಿಮಾನಿಯಾಗಿ

ಸಕಲಜೀವರ ಅಂತರ್ಯಾಮಿಯಾಗಿ ಕರ್ಮಪ್ರೇರಕನಾಗಿ ಇರುವ ವಿಷ್ಣುವೇ ಆಗಿದ್ದಾನೆಂದು ಒಪ್ಪಲೇ ಬೇಕು. ಇಂತಹ ವಿಷ್ಣುವನ್ನು ವೇದವೇ ತಿಳಿಸಲು ಸಮರ್ಥವಾಗಿದೆ. ದೇವತೆಗಳ ಪ್ರಾರ್ಥನೆಯ ಅನ್ಯಥಾನುಪಪತ್ತಿಯಿಂದಲೂ ಅತೀಂದ್ರಿಯವಾದ ಭವಿಷ್ಯಪದಾರ್ಥಗಳು ಗೋಚರಿಸುವುದು ಕಂಡಿದೆ. ಪ್ರತ್ಯಕ್ಷಸಿದ್ಧರಲ್ಲದ ದೇವತೆಗಳನ್ನು ಪ್ರಾರ್ಥಿಸುವುದು ಲೋಕದಲ್ಲಿ ಎಲ್ಲೆಡೆ ಕಂಡಿರುವ ವಿಷಯವಾಗಿದೆ. ಮೃತಶರೀರದಲ್ಲಿ ಜ್ಞಾನ, ಚೇಷ್ಟಾ ಮೊದಲಾದವುಗಳು ಕಾಣಿಸದ ಕಾರಣ ಜೀವಂತ ಶರೀರದಲ್ಲಿರುವ ಜ್ಞಾನಾದಿಗಳನ್ನು ನಿರ್ವಹಿಸಲು ಹಿಂದೆ ಹೇಳಿದ ಕಾರಣವನ್ನು ಒಪ್ಪಲೇ ಬೇಕು. ಇಲ್ಲದಿದ್ದರೆ ಮೃತಶರೀರದಲ್ಲಿಯೂ ಜ್ಞಾನಾದಿಗಳನ್ನು ಒಪ್ಪುವ ಪ್ರಸಂಗ ಬರುತ್ತದೆ. ಪ್ರಾಣವಿಲ್ಲದ ಕಾರಣ ಮೃತಶರೀರದಲ್ಲಿ ಜ್ಞಾನವಿಲ್ಲವೆಂದು ಉತ್ತರಿಸಿದರೆ ಸುಷುಪ್ತಿ ಹೊಂದಿದ ಶರೀರದಲ್ಲಿ ಪ್ರಾಣವಿರುವುದರಿಂದ ಜ್ಞಾನಪ್ರವೃತ್ತಿ ಮೊದಲಾದವು ಕಾಣಿಸಬೇಕಾದೀತು. ಮತ್ತು ಜೀವೇಶ್ವರರನ್ನು ಅಂಗೀಕರಿಸದೆ ಕೇವಲ ಪ್ರತ್ಯಕ್ಷವನ್ನು ಪ್ರಮಾಣವೆಂದು ಅಂಗಿಕರಿಸುವ ನಾಸ್ತಿಕನ ನೀರು ಕುಡಿಯುವಿಕೆ ಮೊದಲಾದ ಪ್ರವೃತ್ತಿಗಳು ಅರ್ಥಶೂನ್ಯಗಳಾಗಬೇಕಾದೀತು. ಏಕೆಂದರೆ ನೀರು ಕುಡಿಯುವಿಕೆಯ ಪ್ರವೃತ್ತಿಯೂ ಸಹ ಅನುಮಾನರೂಪವೇ ಆಗಿದೆ.

ಮತ್ತೊಂದು ಕಾರಣದಿಂದಲೂ ಶಾಸ್ತ್ರವನ್ನು ಧಿಕ್ಕರಿಸಲು ಸಾಧ್ಯವಿಲ್ಲ. 'ಅತ್ಯುತ್ಕಟೈಃ ಪುಣ್ಯಪಾಪೈರಿಹೈವ ಫಲಮಶ್ನುತೇ'' (ಬಲಿಷ್ಠವಾದ ಪುಣ್ಯಪಾಪಗಳು ಬದುಕಿರುವಾಗಲೇ ಫಲ ನೀಡುತ್ತವೆ.) ಎಂಬ ಉಕ್ತಿಯಂತೆ ಲೋಕಪ್ರಸಿದ್ಧವಾಗಿದೆ ಎಂಬುದನ್ನು 'ದರ್ಶನಾಚ್ಚ' ಎಂಬ ಭಾಷ್ಯವು ಹೇಳುತ್ತಿದೆ.

## ಹಿತವನ್ನು ನುಡಿಯುವುದೇ ಶಾಸ್ತ್ರ

**सत्तर्कदीपावलिः – हितशासनात् शास्त्रम्, ऋगादिकं तदनुकूलस्मृत्यादि चोच्यते न पाशुपतादिकं कुवर्त्मत्वात् इत्येतत् स्कान्दवचनेन दर्शयति – ऋगिति ।। 'चरितं रघुनाथस्य शतकोटिप्रविस्तरम्' इत्यादिवचनसिद्धं मूलरामायणम् ।**

ಹಿತವನ್ನು ಶಾಸನ ಮಾಡುವುದರಿಂದ ಶಾಸ್ತ್ರವೆನಿಸುತ್ತದೆ. ಇಂತಹ ಹಿತವನ್ನು ಋಗಾದಿವೇದಗಳು ಪಂಚರಾತ್ರ ಮೊದಲಾದ ಸ್ಮೃತಿಗಳು ಮಾಡುತ್ತಿರುವುದರಿಂದ ಶಾಸ್ತ್ರ

ಎನಿಸುತ್ತವೆ. ಆದರೆ ಪಾಶುಪತಾದಿಗಳು ಕೆಟ್ಟಮಾರ್ಗವನ್ನು ತೋರಿಸುವುದರಿಂದ ಶಾಸ್ತ್ರಗಳಾಗುವುದಿಲ್ಲವೆಂದು ಸ್ಕಾಂದಪುರಾಣದ ಮಾತಿನಿಂದ 'ಋಗ್' ಇತ್ಯಾದಿಯಾಗಿ ತೋರಿಸುತ್ತಿದ್ದಾರೆ. 'ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಮ್' ಎಂದು ಶ್ರೀರಾಮನ ಚರಿತ್ರೆಯನ್ನು ವರ್ಣಿಸುವ ನೂರುಕೋಟಿಶ್ಲೋಕಗಳನ್ನು ಹೊಂದಿರುವ ಮೂಲರಾಮಾಯಣವನ್ನು ಇಲ್ಲಿ ವಿವಕ್ಷಿಸಬೇಕು.

### ಸಚ್ಛಾಸ್ತ್ರಗಳ ಲಕ್ಷಣ ಮತ್ತು ವಿಭಾಗ

**सत्तर्कदीपावळिः – भारतवचनैरपि वेदादेः सच्छास्त्रत्वं प्रदर्शयति – साङ्ख्यमिति ।।**

**'साङ्ख्यं योगः पाशुपतं वेदारण्यकमेव च ।**
**ज्ञानेन्येतानि भिन्नानि ..........' इति**

**साङ्ख्यादिदर्शनानां नानामतत्वमुक्त्वा, तत्र वेदारण्यकस्याप्यपौरुषेयत्वेनोत्कर्षे वक्तव्ये –**

**पञ्चरात्रस्य कृत्स्नस्य वक्ता नारायणः स्वयम् ।**
**ज्ञानेष्वेतेषु राजेन्द्र सर्वेष्वेतद् विशिष्यते ।।**

**इति पञ्चरात्रस्यैव प्रमाणत्वेन यद् वैशिष्ट्यकथनं तद् वेदारण्यकेन यत् जगत्कारणमुच्यते तदेव पञ्चरात्रेणेति वेदपञ्चरात्रयोरेकत्वाभिप्रायं यथायोगं यथान्यायं नारायणपर इति वाक्यशेषादित्यर्थः । एतदेव ऋगादिकम् । 'योनिः प्रतिपत्तिकारणं यस्य तत् शास्त्रयोनि' इत्येव व्याख्येयम् । 'न शास्त्रस्य योनिरिति' इत्याह – शास्त्रमिति ।। जगज्जन्मादिकारणे ब्रह्मणि पूर्वं सूत्रोक्ते किं तत्र प्रमाणम्? इत्याकाङ्क्षितत्वात् शास्त्रप्रमाणकत्वमेवाभिधातुं युक्तम् । न**

तु शास्त्रकारणत्वम् असङ्गतत्वात् । न हि शास्त्रकारणत्वं जगत्कारणत्वे हेतुः वैपरीत्यस्यापि वक्तुं शक्यत्वात् । जगज्जन्मादिकारणत्वोक्तौ शास्त्रादि-कारणत्वस्यापि सिद्धत्वाच्च । न पुनस्तत्कारणं वक्तुं युज्यते शास्त्रस्यापि जगदन्तर्भूतत्वादित्यभिप्रायः ।।३।।

।। इति श्रीपद्मनाभतीर्थविरचितायां सत्तर्कदीपावळ्यां शास्त्रयोनित्वाधिकरणम् ।।

ಮಹಾಭಾರತದ ಮಾತಿನಿಂದಲೂ ವೇದಾದಿಗಳಿಗೆ ಸಚ್ಛಾಸ್ತ್ರತ್ವವು ತಿಳಿಯುತ್ತದೆಂದು ''ಸಾಂಖ್ಯಮ್'' ಇತ್ಯಾದಿಯಾಗಿ ಹೇಳುತ್ತಿದ್ದಾರೆ.

''ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ ।
ಜ್ಞಾನಾನ್ಯೇತಾನಿ ಭಿನ್ನಾನಿ''

ಹೀಗೆ ಸಾಂಖ್ಯಾದಿದರ್ಶನಗಳಿಗೆ ಭಿನ್ನ ಭಿನ್ನ ಅಭಿಪ್ರಾಯಗಳನ್ನು ಹೇಳಿ, ವೇದಾರಣ್ಯಕಕ್ಕೆ ಅಪೌರುಷೇಯತ್ವೇನ ಉತ್ತಮತ್ವವನ್ನು ಹೇಳುವ ಪ್ರಸಂಗದಲ್ಲಿ ಪಂಚರಾತ್ರಕ್ಕೆ ಉತ್ತಮತ್ವವನ್ನು ಹೇಳಿದ್ದಾರೆ.

ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್
ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ವಿಶಿಷ್ಯತೇ ॥

ಹೀಗೆ ಪಂಚರಾತ್ರಕ್ಕೆ ಪ್ರಾಮಾಣ್ಯವನ್ನು ಹೇಳುವ ಮೂಲಕ ವೈಶಿಷ್ಟ್ಯವನ್ನು ಹೇಳಿದ್ದರಿಂದ ವೇದಾರಣ್ಯಕದಿಂದ ಪ್ರತಿಪಾದಿಸಲ್ಪಡುವ ಜಗತ್ಕಾರಣತ್ವವು ಪಂಚರಾತ್ರದಿಂದಲೂ ಪ್ರತಿಪಾದಿಸಲ್ಪಟ್ಟಿದೆಯೆಂದು ತಿಳಿಯುತ್ತದೆ. ಆದ್ದರಿಂದ ವೇದ ಹಾಗೂ ಪಂಚರಾತ್ರಗಳಿಗೆ ಐಕ್ಯಾಭಿಪ್ರಾಯವಿದೆಯೆಂದು ತಿಳಿಯುತ್ತದೆ. ಯಥಾಕ್ರಮವಾಗಿ ಇದನ್ನು 'ನಾರಾಯಣಪರಃ' ಎಂಬ ವಾಕ್ಯಶೇಷದಿಂದ ತಿಳಿಯಬೇಕು. ''ಏತದೇವ'' ಎಂದರೆ ಋಗಾದಿಗಳು ಎಂದರ್ಥ. 'ಶಾಸ್ತ್ರಯೋನಿ' ಎಂಬಲ್ಲಿ ಯೋನಿಶಬ್ದಕ್ಕೆ ಜ್ಞಾನಕಾರಣ ಎಂದರ್ಥ. ಆದ್ದರಿಂದ 'ಶಾಸ್ತ್ರಂ ಯೋನಿಃ ಯಸ್ಯ ತತ್' ಎಂದು ಬಹುವ್ರೀಹಿ ಸಮಾಸವನ್ನೇ ಮಾಡಬೇಕು ಹೊರತು 'ಶಾಸ್ತ್ರಸ್ಯ ಯೋನಿಃ' ಎಂದು ಷಷ್ಠಿತತ್ಪುರುಷವನ್ನು ಮಾಡಬಾರದು.

ಹಿಂದಿನ ಸೂತ್ರದಲ್ಲಿ ಬ್ರಹ್ಮನು ಜಗತ್ಕಾರಣನಾಗಿದ್ದಾನೆಂದು ಸಮರ್ಥಿಸಲಾಯಿತು. ಈ ವಿಷಯದಲ್ಲಿ ಏನು ಪ್ರಮಾಣ? ಎಂದು ಆಕಾಂಕ್ಷೆ ಬಂದರೆ ಅದಕ್ಕೆ ಉತ್ತರಿಸಲು ಈ ಸೂತ್ರವು ಹೊರಟಿದೆ. ಈ ಆಕಾಂಕ್ಷೆಗೆ ಶಾಸ್ತ್ರಕಾರಣತ್ವವನ್ನು ಹೇಳುವುದರಿಂದ ಉತ್ತರ ನೀಡಿದಂತಾಗುವುದಿಲ್ಲ. ಮತ್ತು ಶಾಸ್ತ್ರಕಾರಣತ್ವವನ್ನು ಜಗತ್ಕಾರಣತ್ವಕ್ಕೆ ಹೇತುವನ್ನಾಗಿ ಹೇಳುವುದೂ ಸಹ ಅತ್ಯಂತ ಅಸಂಗತ. ಇದಕ್ಕಿಂತ ವಿಪರೀತವಾಗಿ ಶಾಸ್ತ್ರಕಾರಣತ್ವಕ್ಕೆ ಜಗತ್ಕಾರಣತ್ವವನ್ನು ಹೇತುವನ್ನಾಗಿ ಹೇಳುವುದೇ ಒಳ್ಳೆಯದು. ಜಗಜ್ಜನ್ಮಾದಿಕಾರಣತ್ವವನ್ನು ಹೇಳುವುದರಿಂದಲೇ ಶಾಸ್ತ್ರಕಾರಣತ್ವವು ಸ್ವತಃ ಸಿದ್ಧವಾಗುತ್ತದೆ. ಏಕೆಂದರೆ ಜಗತ್ತಿನ ಒಳಗಡೆ ಶಾಸ್ತ್ರವೂ ಕೂಡ ಅಂತರ್ಭೂತವಾಗುತ್ತದೆ. ಆದ್ದರಿಂದ ತತ್ಪುರುಷ ಸಮಾಸವು ಅಸಂಗತವೂ ಅಯುಕ್ತವೂ ಆಗಿದೆ. ಬಹುವ್ರೀಹಿಸಮಾಸವೇ ಸಮಂಜಸವಾಗಿದೆ.

ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ರಚಿತವಾದ ಸತ್ತರ್ಕದೀಪಾವಳಿಯ
ಕನ್ನಡಾನುವಾದದಲ್ಲಿ ಶಾಸ್ತ್ರಯೋನಿತ್ವಾಧಿಕರಣವು ಸಮಾಪ್ತವಾಯಿತು.

### ಶ್ರೀ ತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

### ಅತಿಪ್ರಸಂಗಪರಿಹಾರಕ್ಕಾಗಿ ಶಾಸ್ತ್ರಯೋನಿತ್ವಾಧಿಕರಣ

**तत्वप्रदीपः – जगत्काणत्वं विष्णोरुक्तं केचित् प्रधानरुद्रादीनां कल्पयन्ति, तन्निराकरोति – अनुमानत इत्यादिना ।**

ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನ ಲಕ್ಷಣವೆಂದು ಹಿಂದಿನ ಸೂತ್ರದಲ್ಲಿ ಸಮರ್ಥಿಸಲಾಯಿತು. ಕೆಲವರು ಪ್ರಕೃತಿ ಹಾಗೂ ರುದ್ರಾದಿಗಳಲ್ಲಿಯೂ ಈ ಲಕ್ಷಣವನ್ನು ಕಲ್ಪನೆ ಮಾಡುತ್ತಾರೆ. ಅದನ್ನು ನಿರಾಕರಣೆ ಮಾಡಲು 'ಅನುಮಾನತೋ ಅನ್ಯೇ ನ ಕಲ್ಪನೀಯಾಃ' ಎಂಬುದಾಗಿ ಶಾಸ್ತ್ರಯೋನಿತ್ವಾಧಿಕರಣವು ಹೊರಟಿದೆ. ಅನುಮಾನದಿಂದ ಜಗತ್ತಿಗೆ ಕಾರಣಭೂತವಾದ ಪದಾರ್ಥವನ್ನು ಕಲ್ಪನೆ ಮಾಡಬಾರದು.

ಜಗತ್‌ಕಾರಣತ್ವ ವಿಷಯದಲ್ಲಿ ಶಾಸ್ತ್ರವೇ ಪ್ರಮಾಣವಾಗಿದೆ

**तत्वप्रदीपः – अनुमानतोऽन्ये न कल्पनीयाः कारणभूता इति कुतः शास्त्रयोनित्वात् । जगत्कारणस्य शास्त्रयोनित्वे प्रमाणमाह – नेत्यादि ।**

ಅನುಮಾನದಿಂದ ಜಗತ್ಕಾರಣತ್ವವನ್ನು ಏಕೆ ಕಲ್ಪನೆ ಮಾಡಬಾರದು ? ಎಂಬ ಪ್ರಶ್ನೆಗೆ 'ಶಾಸ್ತ್ರಯೋನಿತ್ವಾತ್' ಎಂಬ ಸೂತ್ರವು ಉತ್ತರಿಸಲು ಹೊರಟಿದೆ. ಜಗತ್ಕಾರಣ ವಿಷಯದಲ್ಲಿ ಶಾಸ್ತ್ರವು ಪ್ರಮಾಣ ಹೊರತು ಅನುಮಾನವಲ್ಲ. ಈ ವಿಷಯದಲ್ಲಿ ಪ್ರಮಾಣವನ್ನು 'ನಾವೇದವಿತ್' ಇತ್ಯಾದಿಯಾಗಿ ಹೇಳಿದ್ದಾರೆ.

ಈ ವಿಷಯದಲ್ಲಿ ಶ್ರುತಿಪ್ರಮಾಣ

**तत्वप्रदीपः – ''नावेदविन्मनुते तं बृहन्तं सर्वानुभुमात्मानं साम्पराये'' इति । तं पूर्णं वेदेनैव मनुते । सर्वमनुभवतीति 'सर्वानुभूः' । सम्यक्परस्मिन्नयनं 'साम्परायः' । तादर्थ्ये सप्तमी ।**

'ನಾವೇದವಿನ್ಮನುತೇ ತಂ ಬೃಹಂತಂ ಸರ್ವಾನುಭುಮಾತ್ಮಾನಂ ಸಾಂಪರಾಯೇ' ಎಂಬ ಶ್ರುತಿಯ ಅರ್ಥ ಹೀಗಿದೆ - ಪೂರ್ಣನಾದ ಜಗತ್ಕಾರಣನಾದವನು ವೇದದಿಂದಷ್ಟೇ ತಿಳಿಯುತ್ತಾನೆ. ವೇದವನ್ನು ತಿಳಿಯದವನು ಜಗತ್ಕಾರಣನನ್ನು ತಿಳಿಯಲಾರ. ಆ ಜಗತ್ಕಾರಣನು ಎಲ್ಲವನ್ನೂ ತಿಳಿದವನಾದ್ದರಿಂದ 'ಸರ್ವಾನುಭೂ' ಎಂದು ಕರೆಸಿಕೊಳ್ಳುತ್ತಾನೆ. ಆತ್ಯಂತಿಕವಾಗಿ ಶ್ರೇಷ್ಠವಾದದ್ದನ್ನು ಕುರಿತು ತೆರಳುವುದು ಸಾಂಪರಾಯ ಎಂದು ಕರೆಸಿಕೊಳ್ಳುತ್ತದೆ. ತಾದರ್ಥ್ಯದಲ್ಲಿ ಸಪ್ತಮೀ ವಿಭಕ್ತಿಯು ಬಂದು 'ಸಾಂಪರಾಯೇ' ಎಂದಾಗಿದೆ. 'ಮೋಕ್ಷವೆಂಬ ಪ್ರಯೋಜನಕ್ಕೋಸ್ಕರ' ಎಂದು ಇದರರ್ಥ.

ಬ್ರಹ್ಮನು ಉಪನಿಷದೇಕಗಮ್ಯ

**तत्वप्रदीपः – 'औपनिषदः' उपनिषदेकगम्यः । 'पुरुषः' पूर्णषड्गुणः । नहि पूर्णगुणात् सर्वज्ञादन्यस्य जगत्कारणत्वम् । नच द्वयोः पूर्णत्वं,**

**पूर्णत्वविरोधात् । आदिशब्दात् ''सर्वे वेदा यत्पदमामनन्ति'' ''तं त्वौपनिषदं पुरुषं पृच्छामि'' इत्यादि च द्रष्टव्यम् ।**

'ಔಷನಿಷದಃ' ಎಂಬ ಪದಕ್ಕೆ ಉಪನಿಷತ್ತಿನಿಂದ ಮಾತ್ರ ಪ್ರತಿಪಾದ್ಯನಾದವನು. ಪುರುಷಃ ಎಂಬ ಶಬ್ದಕ್ಕೆ ಪೂರ್ಣವಾದ ಷಡ್ಗುಣಗಳುಳ್ಳವನು ಎಂದರ್ಥ. ಯಾವ ವ್ಯಕ್ತಿಯು ಪೂರ್ಣವಾದ ಗುಣಗಳುಳ್ಳವನೋ, ಸರ್ವಜ್ಞನೋ ಅವನೇ ಜಗತ್ಕಾರಣನಾಗುತ್ತಾನೆ. ಮತ್ತೊಬ್ಬನು ಜಗತ್ಕಾರಣನಾಗಲಾರ ಎಂಬುದು ಅಭಿಪ್ರಾಯ. ಇಬ್ಬರು ವ್ಯಕ್ತಿಗಳು ಪೂರ್ಣರಾಗಲು ಸಾಧ್ಯವಿಲ್ಲ. ಹಾಗಾದಲ್ಲಿ ಪೂರ್ಣತ್ವದಿಂದಲೇ ವಿರೋಧ ಬರುತ್ತದೆ. 'ಆದಿ' ಶಬ್ದದಿಂದ 'ಸರ್ವೇ ವೇದಾಃ ಯತ್ಪದಮಾಮನಂತಿ' ಸಕಲ ವೇದಗಳೂ ಯಾವನ ಸ್ವರೂಪವನ್ನು ಪ್ರತಿಪಾದನೆ ಮಾಡುತ್ತವೋ ಮತ್ತು 'ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ' ಉಪನಿಷದೇಕಗಮ್ಯನಾದ ಪೂರ್ಣಗುಣಗಳುಳ್ಳವನ ಬಗ್ಗೆ ಪ್ರಶ್ನಿಸುತ್ತೇನೆ. ಇವೇ ಮೊದಲಾದ ಶ್ರುತಿಗಳನ್ನು ವಿವಕ್ಷಿಸಬೇಕು.

### ಅನುಮಾನವು ನಿಯತ ಪ್ರಮಾಣವಲ್ಲ

**तत्वप्रदीपः – नचानुमानस्य नियतप्रामाण्यम् । अनुमानत्वादेव । प्रमाणान्तरानुकूलत्वे यन्मानं, नान्यथा, तद्ध्यनुमानं नाम ।**

ಅನುಮಾನವು ನಿಯಮೇನ ಪ್ರಮಾಣವೇ ಆಗಿರುವುದಿಲ್ಲ. ಏಕೆಂದರೆ ಅನುಮಾನದ ಸ್ವಭಾವವೇ ಹಾಗೆ. ಮತ್ತೊಂದು ಪ್ರಮಾಣದ ಸಹಕಾರವಿದ್ದರೆ ಅದು ಪ್ರಮಾಣವಾಗುತ್ತದೆ ಇಲ್ಲದಿದ್ದರೆ ಅದು ಪ್ರಮಾಣವಾಗುವುದಿಲ್ಲ. ಇದು ಅನುಮಾನದ ಲಕ್ಷಣ.

### ಒಟ್ಟು ಪ್ರಮಾಣಗಳು ನಾಕು

**तत्वप्रदीपः – ''श्रुतिः प्रत्यक्षमैतिह्यमनुमानं चतुष्टम्'' इति, ''श्रुतिर्वेदोऽक्षजं प्रत्यक्षं पूर्वोक्तिरैतिह्यं युक्तिरनुमानम्'' इति च तुरुश्रुतेरैतिह्यादपि पाश्चत्त्यत्वादनुमानस्य न तेषां विरोधे, तन्निरपेक्षत्वे वा प्रामाण्यम् ।**

'ಶ್ರುತಿಃ ಪ್ರತ್ಯಕ್ಷಮೈತಿಹ್ಯಮನುಮಾನಂ ಚತುಷ್ಟಯಮ್' ಎಂಬಲ್ಲಿರುವ ಶ್ರುತಿ ಎಂಬ ಪದಕ್ಕೆ 'ವೇದ' ಎಂದರ್ಥ. ಇಂದ್ರಿಯಗಳಿಂದ ಹುಟ್ಟಿದ ಜ್ಞಾನವು ಪ್ರತ್ಯಕ್ಷ ಎಂದು ಕರೆಸಿಕೊಳ್ಳುತ್ತದೆ. ಆಯಾಸ್ಥಳಗಳಿಗೆ ಸಂಬಂಧಪಟ್ಟಂತೆ ಇರುವ ದಾಖಲೆಗಳು 'ಐತಿಹ್ಯ' ಎಂದು ಕರೆಸಿಕೊಳ್ಳುತ್ತದೆ. ಉದಾ - ಸ್ಥಳಪುರಾಣ. ಯುಕ್ತಿಯೇ ಅನುಮಾನವಾಗುತ್ತದೆ. ಹೀಗೆ ತುರಶ್ರುತಿಯು ಐತಿಹ್ಯದ ಅನಂತರ ಅನುಮಾನಕ್ಕೆ ಪ್ರಾಮಾಣ್ಯವನ್ನು ಹೇಳುತ್ತಿದೆ. ಆದ್ದರಿಂದ ಅನುಮಾನಕ್ಕೆ ಶ್ರುತ್ಯಾದಿಗಳ ವಿರೋಧ ಬಂದಾಗ ಅಥವಾ ಶ್ರುತ್ಯಾದಿಗಳ ಸಹಕಾರ ಇಲ್ಲದಿದ್ದಾಗ ಪ್ರಾಮಾಣ್ಯವಿರುವುದಿಲ್ಲ.

ವಿಶೇಷ ವಿಚಾರ - ಐತಿಹ್ಯದ ಬಗ್ಗೆ ಪ್ರಮಾಣಲಕ್ಷಣ ಗ್ರಂಥದಲ್ಲಿ ಶ್ರೀಮದಾಚಾರ್ಯರು ಹೀಗೆ ಹೇಳಿದ್ದಾರೆ - 'ಶ್ರುತಿಃ ಪ್ರತ್ಯಕ್ಷಮೈತಿಹ್ಯಮನುಮಾನಂ ಚತುಷ್ಟಯಮ್ ಪ್ರಾಮಾಣ್ಯಮಿತಿ ವಿಜ್ಞೇಯಂ ಧರ್ಮಾದ್ಯರ್ಥೇ ಬುಭೂಷುಭಿಃ' ಎಂಬ ಶ್ರುತಿಗೆ ವ್ಯಾಖ್ಯಾನ ಮಾಡುವಾಗ 'ಐತಿಹ್ಯಂ ಆಗಮಭೇದಃ' ಐತಿಹ್ಯವು ಆಗಮದ ಪ್ರಭೇದವೇ ಆಗಿದೆ ಎಂದು ಹೇಳಿರುತ್ತಾರೆ.

ಪ್ರಮಾಣಪದ್ಧತಿಯಲ್ಲಿ ಶ್ರೀಜಯತೀರ್ಥರು ಐತಿಹ್ಯದ ಲಕ್ಷಣವನ್ನು ಹೀಗೆ ಹೇಳಿದ್ದಾರೆ - 'ಅನಿರ್ದಿಷ್ಟ ಪ್ರವರ್ತಕಂ ಪ್ರವಾದ ಪಾರಂಪರ್ಯಂ ಐತಿಹ್ಯಂ ಯಥಾ 'ಅತ್ರ ವಟೇ ವೈಶ್ರವಣಃ ಅಸ್ತಿ' ಇತಿ ವಾಕ್ಯಂ ತತ್ ಆಗಮ ಏವ. ''ಹೀಗೆ ತಿಳಿದವರು ಹೇಳುತ್ತಾರೆ'' ಎಂಬುದಾಗಿ ಪರಂಪರೆಯಿಂದ ಬಂದಿರುವ ವೃದ್ಧ ಸಮ್ಮತಿಯು ಐತಿಹ್ಯವೆಂದು ಕರೆಸಿಕೊಳ್ಳುತ್ತದೆ. ಇದು ಆಗಮರೂಪವೇ ಆಗಿದೆ.

### ಶ್ರುತಿಯೇ ಪ್ರಬಲ ಪ್ರಮಾಣ

**ತತ್ವಪ್ರದೀಪः – श्रुतेस्तु क्वापि प्रत्यक्षानुमानानन्तर्यवचनं प्रवृत्तिक्रमापेक्षम् ।। श्रुतिसाहाय्यरहितमनुमानं प्रत्यक्षं च श्रौतेऽर्थे न क्वापि प्रमाणम् । यथा हिंसाऽधर्मत्वानुमानं; यथा च रामकृष्णादेर्मानुषत्वादिविषयं प्रत्यक्षम् ।**

ಪ್ರತ್ಯಕ್ಷ ಹಾಗೂ ಅನುಮಾನಗಳ ಅನಂತರದ ಪ್ರಾಮಾಣ್ಯವನ್ನು ಹೇಳಿರುವುದಿಲ್ಲ. 'ಪ್ರತ್ಯಕ್ಷ ಅನುಮಾನ ಆಗಮ' ಎಂದು ಪ್ರಯೋಗಿಸುತ್ತಾರಲ್ಲವೆ, ನಿಮ್ಮ ಪ್ರಕಾರ ದುರ್ಬಲವಾದ್ದನ್ನು ಮೊದಲು ಹೇಳಬೇಕೆಂದರೆ ಅನುಮಾನ ಪ್ರತ್ಯಕ್ಷ ಆಗಮ ಎನ್ನಬೇಕಿತ್ತಲ್ಲವೇ? ಎಂದರೆ ಅದು

ಕೇವಲ ಪ್ರವೃತ್ತಿಯ ಕ್ರಮವನ್ನು ವಿವಕ್ಷಿಸಿ ಮಾಡುವ ಪ್ರಯೋಗ. ಪ್ರಾಬಲ್ಯಕ್ರಮವನ್ನು ವಿವಕ್ಷಿಸಿ ಮಾಡುವ ಪ್ರಯೋಗವಲ್ಲ. ಶ್ರುತಿ ಸಹಾಯವಿಲ್ಲದ ಅನುಮಾನವು ಅಥವಾ ಶ್ರುತಿಸಹಾಯವಿಲ್ಲದ ಪ್ರತ್ಯಕ್ಷವು ಶ್ರೌತಾರ್ಥದಲ್ಲಿ ಪ್ರಮಾಣವಾಗಲು ಸಾಧ್ಯವೇ ಇಲ್ಲ. ಉದಾಹರಣೆ - 'ಹಿಂಸಾ ಅಧರ್ಮಸಾಧನಂ ಹಿಂಸಾತ್ವಾತ್' ಎಂಬ ಅನುಮಾನಕ್ಕೆ ಪ್ರಾಮಾಣ್ಯವಿರುವುದಿಲ್ಲ. ಏಕೆಂದರೆ ವೈದೀಹಿಂಸಾವು ಧರ್ಮಸಾಧನ ಆಗಿದೆ. ಇದರಂತೆ ಪರಮಾತ್ಮನು ರಾಮಕೃಷ್ಣಾದ್ಯವತಾರಗಳಲ್ಲಿ ಮನುಷ್ಯನಂತೆ ಕಾಣಿಸುತ್ತಾನೆಂದು ಪ್ರತ್ಯಕ್ಷವಿದೆ. ಇದೂ ಸಹ ಶ್ರುತಿವಿರುದ್ಧವಾದ್ದರಿಂದ ಅಪ್ರಮಾಣವಾಗಿದೆ.

### ಶುಷ್ಕತರ್ಕವು ತ್ಯಾಜ್ಯ

**तत्वप्रदीपः – उपक्रमोपसंहारादिलिङ्गैः ऊहनं 'तर्कः' । श्रुतिनिरपेक्षः 'शुष्कतर्कः' । तस्मान्न स्वतन्त्रस्य तस्य प्रामाण्यं सम्भवति ।**

'ಉಪಕ್ರಮ' 'ಉಪಸಂಹಾರ' ಮೊದಲಾದ ಲಿಂಗಗಳಿಂದ ಊಹೆ ಮಾಡುವುದನ್ನೇ 'ತರ್ಕ' ಎನ್ನುತ್ತಾರೆ. ಈ ತರ್ಕವು ಪ್ರಮಾಣ. ಆದರೆ ಶ್ರುತಿಯ ಅಪೇಕ್ಷೆಯಿಲ್ಲದ ತರ್ಕಕ್ಕೆ 'ಶುಷ್ಕತರ್ಕ' ಎನ್ನುತ್ತಾರೆ. ಆದ್ದರಿಂದ ಅನುಮಾನವು ಸ್ವತಂತ್ರವಾಗಿ ಎಲ್ಲಿಯೂ ಪ್ರಮಾಣವಾಗುವುದಿಲ್ಲ.

### ಜಗತ್ಕಾರಣ ಸಾಧಕ ಅನುಮಾನಕ್ಕೆ ಉಪಾಧಿ ದೋಷ

**तत्वप्रदीपः – ननु स्वतन्त्रमेवार्थं साधयदनुमानं को निवारयति ? तथाहि - विमतं सकर्तृकं कार्यत्वात् घटवदित्यनपेक्षमेवेदं जगत्कर्तारमीश्वरं साधयतीति; तदयुक्तम् । उपाधिदोषदुष्टत्वात् तस्य । अस्मदादिप्रत्यक्षकर्तृकत्वं च उपाधिः ।**

ಅನುಮಾನವು ಸ್ವತಂತ್ರವಾಗಿ ಸಾಧಕವಾದಾಗ ಅದನ್ನು ಯಾರು ತಾನೇ ನಿರ್ವಾಹಣೆ ಮಾಡಲು ಸಮರ್ಥರಾಗುತ್ತಾರೆ. 'ವಿಮತಂ ಸಕರ್ತೃಕಂ ಕಾರ್ಯತ್ವಾತ್ ಘಟವತ್' ಎಂಬ ಅನುಮಾನವು ಅನ್ಯ ನಿರಪೇಕ್ಷವಾಗಿಯೇ ಜಗತ್ಕರ್ತೃವಾದ ಈಶ್ವರನನ್ನು ಸಾಧನೆ ಮಾಡುತ್ತದಲ್ಲವೆ ?

ಇಲ್ಲಿ ಕೇಳು ! 'ಅಸ್ಮದಾದಿಪ್ರತ್ಯಕ್ಷಕರ್ತೃಕತ್ವ' ಎಂಬ ಉಪಾಧಿಯಿಂದ ನಿನ್ನ ಈ ಅನುಮಾನವು ದುಷ್ಟವಾಗಿದೆ. ನಮ್ಮ ಕಣ್ಣಿಗೆ ಕಾಣಿಸುವ ಕರ್ತೃಗಳಿಂದಲೇ ಸಾಧ್ಯವು ಪರ್ಯವಸಾನ ಆಗುತ್ತಿರುವಾಗ ನಿನ್ನ ಹೇತು ಏಕೆ ಬೇಕು ?

### ಆಗಮ ಸಹಾಯವಿಲ್ಲದ ಅನುಮಾನವು ಅಪ್ರಮಾಣ

**तत्वप्रदीपः – तेन हि घटादेः सकर्तृकत्वम् । तस्मान्न स्वतन्त्रस्य प्रामाण्यमिति नियतप्रामाण्यं नास्तीत्युक्तम् । तस्मान्नानुमाऽऽगमं विनाऽर्थमुदीक्षयितुं शक्नोति ।**

ನೀನು ಹೇಳಿದ ಕಾರ್ಯತ್ವ ಹೇತುವಿನಿಂದ ಘಟಾದಿಗಳು 'ಸಕರ್ತೃಕ' ಎಂದು ಸಿದ್ಧವಾಗುತ್ತವೆ. ಹೊರತು ಸಮಸ್ತ ಜಗತ್ತು ಸಕರ್ತೃಕ ಎಂದು ಸಿದ್ಧವಾಗುವುದಿಲ್ಲ. ಆದ್ದರಿಂದ ಅನುಮಾನವು ಸ್ವತಂತ್ರವಾದ ಪ್ರಾಮಾಣ್ಯವನ್ನು ಹೊಂದುವುದಿಲ್ಲ. ಆದ್ದರಿಂದಲೇ ನಿಯತಪ್ರಾಮಾಣ್ಯವೂ ಕೂಡ ಇರುವುದಿಲ್ಲ. ಆಗಮದ ಸಹಾಯವಿಲ್ಲದ ಅನುಮಾನವು ಯಾವ ಅರ್ಥದ ನಿರ್ಣಾಯಕವೂ ಆಗುವುದಿಲ್ಲ ಎಂದು ಸಿದ್ಧವಾಯಿತು.

### ಅನುಮಾನದಂತೆ ಆಗಮವು ಅಪ್ರಮಾಣವಲ್ಲ

**तत्वप्रदीपः – नन्वेवमनुमानस्याप्रामाण्यात् तन्न्यायेनाऽऽगमस्याप्य-प्रामाण्यात्प्रत्यक्षमेव सम्मतं प्रमाणमस्तु । अतो न देहव्यतिरिक्तो जीवोऽस्ति नापि जगत्कर्तेश्वरः, प्रमाणाभावादित्याशङ्क्याऽह रेतो धातुरित्यादि ।**

ಅನುಮಾನವು ಅಪ್ರಮಾಣವಾದ್ದರಿಂದ ಅದೇ ನ್ಯಾಯದಿಂದ ಆಗಮವೂ ಕೂಡ ಅಪ್ರಮಾಣವಾಗುತ್ತದೆ. ಅನುಮಾನ ಹಾಗೂ ಆಗಮಗಳೆರಡೂ ಅಪ್ರಮಾಣವಾದ ಮೇಲೆ ಪ್ರತ್ಯಕ್ಷವನ್ನು ಮಾತ್ರ ಪ್ರಮಾಣವೆಂದು ಒಪ್ಪಿಕೊಳ್ಳಬೇಕು. ಆವಾಗ ದೇಹಕ್ಕಿಂತ ಅತಿರಿಕ್ತನಾದ ಜೀವನೂ ಇಲ್ಲ. ಜಗತ್‌ಕರ್ತೃವಾದ ಈಶ್ವರನೂ ಇಲ್ಲ ಎಂದು ಹೇಳುತ್ತೇವೆ. ಏಕೆಂದರೆ ಜೀವ ಹಾಗೂ ಈಶ್ವರರ ವಿಷಯದಲ್ಲಿ ಪ್ರತ್ಯಕ್ಷಪ್ರಮಾಣವು ಇರುವುದಿಲ್ಲ. ಈ ಆಕ್ಷೇಪಕ್ಕೆ 'ರೇತೋ ಧಾತುಃ' ಇತ್ಯಾದಿಯಾಗಿ ಉತ್ತರಿಸುತ್ತಿದ್ದಾರೆ.

ಅದೃಷ್ಟ-ಜೀವ-ಈಶ್ವರರು ಇಲ್ಲದಿದ್ದರೆ ವೀರ್ಯಸೇಚನದಿಂದಲೇ ಮಕ್ಕಳು ಹುಟ್ಟಬೇಕಿತ್ತಲ್ಲವೇ?

**तत्वप्रदीपः – रेतःसिक्तं कालाच्छरीरं भवति । न च तस्य शरीरभावः प्रत्यक्षग्राह्यः । वाक्यायुक्त्या वा ज्ञायते, अतस्तयोः प्रामाण्यम् । न च तद्रेतो मृतशरीरे सिक्तं वर्धते । तस्माद्यदधिष्ठित एव वर्धते स देहव्यतिरिक्तो जीवोऽभ्युपगन्तव्यः । न च जीवच्छरीरेऽपि नियमेन वर्धते । अतो यदिच्छया वर्धते न वर्धते च, स ईश्वरः ।**

ಸ್ತ್ರೀ ದೇಹದಲ್ಲಿ ರೇತಸ್ಸನ್ನು ಸೇಚನೆ ಮಾಡಿದಾಗ ಸ್ವಲ್ಪಕಾಲದ ಅನಂತರ ಅದು ಶರೀರವಾಗುತ್ತದೆ. ಹೀಗೆ ರೇತಸ್ಸು ಶರೀರಭಾವವನ್ನು ಪಡೆಯುವುದು ಪ್ರತ್ಯಕ್ಷದಿಂದ ಸಿದ್ಧವಾಗುವುದಿಲ್ಲ. ಆಗಮ ಪ್ರಮಾಣದಿಂದ ಅಥವಾ ಯುಕ್ತಿಪ್ರಮಾಣದಿಂದ ರೇತಸ್ಸಿಗೂ ಶರೀರಕ್ಕೂ ಕಾರ್ಯಕಾರಣಭಾವವು ತಿಳಿಯುತ್ತದೆ. ಆದ್ದರಿಂದ ಅನುಮಾನ ಹಾಗೂ ಆಗಮಗಳಿಗೆ ಪ್ರಾಮಾಣ್ಯವನ್ನು ಅಂಗೀಕಾರ ಮಾಡಬೇಕು. ಸತ್ತ ಸ್ತ್ರೀದೇಹದಲ್ಲಿ ವೀರ್ಯವು ಸಿಕ್ತವಾದರೆ ಅದರಿಂದ ಶರೀರವು ಬೆಳೆಯುವುದಿಲ್ಲ. ಜೀವಂತ ಶರೀರವೆಂಬ ಅಧಿಷ್ಠಾನದಲ್ಲಿ ವೀರ್ಯವು ಸಿಕ್ತವಾದರೆ ಮಾತ್ರ ಶರೀರಕಾರಣತ್ವವು ಕಂಡಿರುತ್ತದೆ. ಆದರಲ್ಲೂ ಬಂಜೆ ಸ್ತ್ರೀಯಾಗಿರಬಾರದು. ಆದ್ದರಿಂದ ಜೀವ ಇದ್ದಾನೆಂಬುದನ್ನು ಅಂಗೀಕಾರ ಮಾಡಬೇಕು. ಈಶ್ವರನನ್ನೇಕೆ ಒಪ್ಪಬೇಕೆಂದರೆ ಜೀವಂತವಾದ ಎಲ್ಲಾ ಶರೀರದಲ್ಲಿಯೂ ವೀರ್ಯಸೇಚನದಿಂದ ಶರೀರವು ಬೆಳೆಯುತ್ತೆಂಬುದೂ ಕೂಡ ನಿಯಮವಿಲ್ಲ. ಆದ್ದರಿಂದ ಯಾವ ಇಚ್ಛೆಯಿಂದ ಶರೀರವು ಬೆಳೆಯುತ್ತದೋ ಯಾರ ಇಚ್ಛೆ ಇಲ್ಲದಿದ್ದರೆ ಶರೀರವು ಬೆಳೆಯುವುದಿಲ್ಲವೋ ಅವನೇ ಈಶ್ವರನೆಂದು ಒಪ್ಪಬೇಕು.

ಅಪಥ್ಯ ಸೇವನೆಯಿಂದ ಧಾತುವಿಕಾರ ಏಕಾಗುತ್ತದೆ?

**तत्वप्रदीपः – धातुर्वातादिरपथ्याद्विपरीयते । न च तयोर्हेतुहेतुमद्भावः प्रत्यक्षः । न च मृतशरीरे विकारो भवति । अपथ्यकरणेऽपि जीवच्छरीरेऽपि कदाचिन्न ।**

ಅಪಥ್ಯಸೇವನೆಯಿಂದ ದೇಹದಲ್ಲಿ ವಾತ, ಪಿತ್ತ, ಕಫ ಎಂಬ ಧಾತುಗಳು ವಿಕಾರವಾಗುತ್ತವೆ. ಅಪಥ್ಯಸೇವನೆಗೂ ಹಾಗೂ ಧಾತು ವಿಕಾರಕ್ಕೂ ಕಾರ್ಯಕಾರಣಭಾವವಿರುವುದು ಪ್ರತ್ಯಕ್ಷದಿಂದ ಸಿದ್ಧವಾಗಿರುವುದಿಲ್ಲ. ಸತ್ತ ಶರೀರದಲ್ಲಿ ವಾತಾದಿಗಳ ವಿಕಾರವು ಕಾಣಸುವುದಿಲ್ಲ. ಆದ್ದರಿಂದ ಜೀವನನ್ನು ಒಪ್ಪಬೇಕು. ಅಪಥ್ಯ ಮಾಡಿದಾಗಲೂ ಬದುಕಿರುವ ಎಲ್ಲಾ ಶರೀರದಲ್ಲಿ ಧಾತು ವಿಕಾರವಾಗುವುದು ಕಾಣಸುತ್ತಿಲ್ಲ. ಇದಕ್ಕೆ ಈಶ್ವರನ ಇಚ್ಛೆಯನ್ನೇ ಕಾರಣವೆಂದು ಒಪ್ಪಬೇಕು. ಆದ್ದರಿಂದ ಜೀವ ಹಾಗೂ ಈಶ್ವರರು ಇದರಿಂದ ಸಿದ್ಧವಾಗುತ್ತದೆ.

ಸಣ್ಣ ಆಲದ ಬೀಜದಿಂದ ಹೆಮ್ಮರ ಹೇಗಾಗುತ್ತದೆ ?

**तत्वप्रदीपः – वटकणिकाया वटभावो न प्रत्यक्षः । नापि भर्जिता सा प्ररोहति । अभर्जिताऽपि कदाचित् प्ररोहति, कदाचिन्न ।**

ಆಲದ ಮರದ ಬೀಜದಿಂದ ಆಲದ ಮರವು ಹುಟ್ಟುವುದು ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಆದರೆ ಹುರಿದಿರುವ ಬೀಜದಿಂದ ಮರವು ಹುಟ್ಟುವುದಿಲ್ಲ. ಆದ್ದರಿಂದ ಆಲದ ಮರದ ಬೀಜದಲ್ಲಿ ಜೀವನನ್ನು ಒಪ್ಪಬೇಕು. ಆದರೆ ಹುರಿಯದೇ ಇರುವ ಎಲ್ಲಾ ಬೀಜಗಳಿಂದ ಮರವು ಹುಟ್ಟುತ್ತದೆ ಎಂಬ ನಿಯಮವಿಲ್ಲ. ಕೆಲವು ಬೀಜಗಳಿಂದ ಹುಟ್ಟುತ್ತವೆ. ಕೆಲವು ಬೀಜಗಳಿಂದ ಹುಟ್ಟುವುದಿಲ್ಲ. ಇದಕ್ಕೆ ಕಾರಣನಾದ ಈಶ್ವರನನ್ನು ಮತ್ತು ಅದೃಷ್ಟವನ್ನು ಒಪ್ಪಲೇಬೇಕು.

ತುಪ್ಪ ತಿನ್ನುವುದರಿಂದ ದಷ್ಟಪುಷ್ಟನಾಗಿ ಹೇಗೆ ಬೆಳೆಯುತ್ತಾನೆ ?

**तत्वप्रदीपः – घृतोपयोगात् पीनतेति न प्रत्यक्षत्वम् । नापि मृतशरीरनिक्षिप्तेन तेन पीनता भवति । जीवोपयुक्तेऽपि कदाचिन्न भवति ।**

ತುಪ್ಪವನ್ನು ತಿನ್ನುವುದರಿಂದ ದೇಹವು ದಷ್ಟಪುಷ್ಟವಾಗುತ್ತಿದೆ. ತುಪ್ಪ ಹಾಗೂ ದೇಹ ದಪ್ಪವಾಗುವಿಕೆಗೆ ಪರಸ್ಪರ ಕಾರ್ಯಕಾರಣಭಾವವಿದೆ. ಆದರೆ ಇದು ಕಣ್ಣಿಗೆ ಕಾಣಿಸುವುದಿಲ್ಲ. ಸತ್ತ ಶರೀರದಲ್ಲಿ ತುಪ್ಪವನ್ನು ಹಾಕಿದರೂ ಯಾವುದೇ ಉಪಯೋಗವಾಗುವುದಿಲ್ಲ. ಶರೀರವು ಜೀವಂತವಾಗಿದ್ದರೆ ಮಾತ್ರ ತುಪ್ಪವು ದಷ್ಟಪುಷ್ಟವಾಗುವಿಕೆಗೆ ಕಾರಣವಾಗುತ್ತದೆ. ಇದರಿಂದ ದೇಹಕ್ಕಿಂತ ಅತಿರಿಕ್ತನಾದ ಜೀವನಿದ್ದಾನೆಂದು ಸಿದ್ಧವಾಗುತ್ತದೆ. ಆದರೆ ಜೀವಂತನಾದ ಎಲ್ಲಾ

ಶರೀರದಲ್ಲಿಯೂ ತುಪ್ಪವನ್ನು ತಿನ್ನುವುದರಿಂದ ದಪ್ಪವಾಗುವಿಕೆ ಎಂಬ ಕಾರ್ಯ ಉಂಟಾಗುವುದಿಲ್ಲ. ಇದಕ್ಕೆ ಪ್ರೇರಕನಾದ ಈಶ್ವರನನ್ನು ಮತ್ತು ಅದೃಷ್ಟವನ್ನು ಒಪ್ಪಬೇಕು.

ಸಂಸ್ಕಾರದಿಂದ ಮರಗಳು ಹೇಗೆ ಫಲಭರಿತವಾಗುತ್ತವೆ.

**तत्वप्रदीपः – न च वृक्षे धूमाधिवासननिमित्तता पुष्पफलसम्भवस्य प्रत्यक्षा । न च धूमाधिवासनेऽपि शुष्के पुष्पादिसम्पत्तिः । जीवत्यपि क्वचिद्भवति, क्वचिन्न भवति ।**

ಹೊಗೆಯ ಸಂಸ್ಕಾರಗಳಿಂದ ಮರಗಳಲ್ಲಿ ಹೂವು ಹಣ್ಣುಗಳು ಹೆಚ್ಚಾಗುತ್ತವೆ. ಹೊಗೆಗೂ ಫಲಪುಷ್ಪಗಳ ಸಂಪತ್ತಿಗೂ ಕಾರ್ಯಕಾರಣ ಭಾವವಿದೆ. ಆದರೆ ಇದು ಕಣ್ಣಿಗೆ ಕಾಣಿಸುವುದಿಲ್ಲ. ಹೊಗೆಯ ಸಂಸ್ಕಾರ ನೀಡಿದರೂ ಒಣಗಿದ ಮರದಲ್ಲಿ ಪುಷ್ಪಾದಿಸಂಪತ್ತುಗಳು ಹುಟ್ಟುವುದಿಲ್ಲ. ಜೀವಂತವಾಗಿರುವ ಎಲ್ಲಾ ಮರಗಳಲ್ಲಿಯೂ ಹೊಗೆ ಎಂಬ ಸಂಸ್ಕಾರದಿಂದ ಫಲಪುಷ್ಪಾದಿಗಳು ಕೆಲವೊಮ್ಮೆ ಉಂಟಾಗುತ್ತವೆ ಕೆಲವೊಮ್ಮೆ ಉಂಟಾಗುವುದಿಲ್ಲ. ಆದ್ದರಿಂದ ಜೀವನನ್ನು ಮತ್ತು ಈಶ್ವರನನ್ನು ಅದಕ್ಕೆ ಅನುಸಾರವಾಗಿ ಅದೃಷ್ಟವನ್ನೂ ಒಪ್ಪಬೇಕು.

ಪೂರ್ವಜನ್ಮದ ಸ್ಮರಣೆ ಹೇಗೆ ಬರುತ್ತದೆ ?

**तत्वप्रदीपः – अनेन पुण्येनैव स्वर्गोऽनुभूयते, अनेन पापेनेत्थं नरकमनुभूतमित्यादिज्ञानं जातिस्मृतिमतामस्ति । एतमर्थमागमश्चावगमयति।**

ಈ ಪುಣ್ಯದಿಂದಲೇ ಸ್ವರ್ಗವು ದೊರೆಯುತ್ತದೆ ಈ ಪಾಪದಿಂದ ನರಕವಾಗುತ್ತದೆ. ಇತ್ಯಾದಿ ಜ್ಞಾನವು ಪೂರ್ವಜನ್ಮದ ಸ್ಮರಣೆಯಿಂದ ಉಂಟಾಗುತ್ತದೆ. ಈ ಅರ್ಥವನ್ನು ಆಗಮವೂ ಕೂಡ ತಿಳಿಸುತ್ತಿದೆ.

ಅರ್ಥವಾಗದ ಅತೀಂದ್ರಿಯವಿಷಯಕ್ಕಾಗಿ ಈಶ್ವರ, ಜೀವ, ಅದೃಷ್ಟಾದಿಗಳನ್ನು ಒಪ್ಪಲೇಬೇಕು

**तत्वप्रदीपः – तस्मादागमप्रामाण्यस्थापिका सा । न च देहव्यतिरिक्तस्य जीवस्यातीतवर्तमानदेहसम्बन्धमन्तरेण जातिस्मृतिरुत्पद्यते । सा च कस्यचिदेव भवति, न सर्वस्य ।**

ಆದ್ದರಿಂದ ಆಗಮ ಪ್ರಾಮಾಣ್ಯಕ್ಕೆ ಜಾತಿಸ್ಮೃತಿಯು ಕಾರಣವಾಗಿದೆ. ದೇಹಕ್ಕಿಂತ ಅತಿರಿಕ್ತನಾದ ಜೀವನೇ ಇಲ್ಲದಿದ್ದರೆ ಹಿಂದಿನ ಜನ್ಮದಲ್ಲಿ ಮಾಡಿದ ಸ್ಮರಣೆ ಈ ಜನ್ಮದಲ್ಲಿ ಹೇಗೆ ತಾನೆ ಬರಲು ಸಾಧ್ಯ ? ದೇಹಕ್ಕಿಂತ ಅತಿರಿಕ್ತನಾದ ಒಬ್ಬ ಜೀವನನ್ನು ಒಪ್ಪಲೇ ಬೇಕು. ಆದರೆ ಪ್ರತಿಯೊಬ್ಬರಿಗೂ ಹಿಂದಿನ ಜನ್ಮದ ಸ್ಮರಣೆ ಬರುತ್ತಿಲ್ಲ. ಆದ್ದರಿಂದ ಇದಕ್ಕೆ ಪ್ರೇರಕನಾಗಿ ಈಶ್ವರನನ್ನು ಒಪ್ಪಬೇಕು. ಈ ಅರ್ಥವನ್ನು ಆಗಮವೂ ಕೂಡ ತಿಳಿಸುತ್ತಿದೆ. ಆದ್ದರಿಂದ ಹಿಂದಿನ ಜನ್ಮದ ಸ್ಮರಣೆಯು ಆಗಮ ಪ್ರಾಮಾಣ್ಯಕ್ಕೆ ಸ್ಥಾಪಕವಾಗಿದೆ. ದೇಹಕ್ಕಿಂತ ಅತಿರಿಕ್ತನಾದ ಜೀವನಿದ್ದಾನೆಂದು ಇದರಿಂದ ಸಿದ್ಧವಾಗುತ್ತದೆ. ಮತ್ತು ಹಿಂದಿನ ಮತ್ತು ಈಗಿನ ದೇಹದ ಸಂಬಂಧವಿಲ್ಲದೆ ಪೂರ್ವಜನ್ಮದ ಸ್ಮರಣೆಯು ಬರಲು ಸಾಧ್ಯವಿಲ್ಲ. ಮತ್ತು ಕೆಲವರಿಗೆ ಮಾತ್ರ ಹಿಂದಿನ ಜನ್ಮದ ಸ್ಮರಣೆ ಇರುತ್ತದೆ. ಪ್ರತಿಯೊಬ್ಬರಿಗೂ ಇರುವುದಿಲ್ಲ. ಇದರಿಂದ ಅನುಮಾನ ಹಾಗೂ ಆಗಮಗಳಿಗೆ ಪ್ರಾಮಾಣ್ಯವು ಸಿದ್ಧವಾಗುತ್ತದೆ.

ಜಡವಾದ ಅಯಸ್ಕಾಂತದಿಂದ ಕಬ್ಬಿಣದಲ್ಲಿ ಹೇಗೆ ಚಲನೆ ಬರುತ್ತದೆ ?

**तत्वप्रदीपः– नचायस्कान्तस्यायोभ्रामकशक्तिः प्रत्यक्षा । नचाजीवतश्चेष्टकत्वं दृष्टम् । नचैतादृशी वस्तुशक्तिः सर्वशक्तिमीश्वरमन्तरेण प्रतिनियममर्हति ।**

ಅಯಸ್ಕಾಂತದಿಂದ ಕಬ್ಬಿಣವು ಚಲಿಸುತ್ತದೆ. ಅಚೇತನ ಪದಾರ್ಥದಲ್ಲಿ ಇಂಥ ಚಲನೆಯು ಎಲ್ಲಿಯೂ ಕಂಡಿರುವುದಿಲ್ಲ. ಆದ್ದರಿಂದ ಅಯಸ್ಕಾಂತದಲ್ಲಿ ಇಂಥ ಶಕ್ತಿ ಬರಲು ಈಶ್ವರನ ಪ್ರೇರಣೆಯೇ ಮುಖ್ಯಕಾರಣ. ಈಶ್ವರನ ಶಕ್ತಿಯಿಲ್ಲದೆ ಅಯಸ್ಕಾಂತದಲ್ಲಿ ಇಂಥ ಕ್ರಿಯಾಜನಕತ್ವವು ಬರಲು ಸಾಧ್ಯವಿಲ್ಲ

ಸೂರ್ಯಕಾಂತಮಣಿಯಿಂದ ಅಗ್ನಿಯು ಹೇಗೆ ಜ್ವಲಿಸುತ್ತದೆ ?

**तत्वप्रदीपः – एवं सूर्यकान्तेऽप्यूहनीयम् ।**

ಸೂರ್ಯಕಾಂತಿ ಮಣಿಯಿಂದ ಅಗ್ನಿಯು ಹುಟ್ಟುತ್ತದೆ. ಜಡಪದಾರ್ಥದಲ್ಲಿ ಇಂಥ ಶಕ್ತಿ ಇರುವುದಿಲ್ಲ. ಇದಕ್ಕೆ ಪ್ರೇರಕನಾಗಿ ಈಶ್ವರನು ಸಿದ್ಧನಾಗುತ್ತಾನೆ.

ನೀರು ಕುಡಿಯುವುದರಿಂದ ಬಾಯಾರಿಕೆ ಹೇಗೆ ಪರಿಹಾರವಾಗುತ್ತದೆ ?

**तत्वप्रदीपः – अम्बुभक्षणात् तृष्णानाश इत्येतन्न प्रत्यक्षम् । नच मृतशरीरे पात्रान्तरे वा निहितं तत्पच्यते । जीवच्छरीरेऽपि कदाचिदेव ।**

ನೀರು ಕುಡಿಯುವುದರಿಂದ ಬಾಯಾರಿಕೆಯು ನಾಶವಾಗುತ್ತದೆ. ಇದೂ ಕೂಡ ಪ್ರತ್ಯಕ್ಷದಿಂದ ಸಿದ್ಧವಾಗಿದೆ ಆದರೆ ಸತ್ತದೇಹದಲ್ಲಿ ನೀರು ಪಚನವಾಗುವುದಿಲ್ಲ. ಅಥವಾ ಮತ್ತೊಂದು ಪಾತ್ರೆಯಲ್ಲಿಯೂ ನೀರು ಪಚನವಾಗುವುದಿಲ್ಲ. ಜೀವಂತವಾದ ಎಲ್ಲಾ ಶರೀರಗಳಲ್ಲಿಯೂ ನೀರು ಪಚನವಾಗುವುದಿಲ್ಲ. ಆದ್ದರಿಂದ ನೀರಿಗೂ ಬಾಯಾರಿಕೆಯ ಪರಿಹಾರ ಎಂಬ ಕ್ರಿಯೆಗೂ ಕಾರ್ಯಕಾರಣಭಾವವು ಪ್ರತ್ಯಕ್ಷದಿಂದ ಸಿದ್ಧವಾಗಿರುವುದಿಲ್ಲ. ಇದಕ್ಕೆ ಯುಕ್ತಿಯನ್ನೇ ಆಶ್ರಯಿಸಬೇಕು. ಮತ್ತು ದೇಹಕ್ಕಿಂತ ಅತಿರಿಕ್ತವಾದ ಜೀವನನ್ನು ಪ್ರೇರಕನಾದ ಈಶ್ವರನನ್ನು ಅಂಗೀಕಾರ ಮಾಡಬೇಕು.

ಮರಣವಾದಾಗ ದೇಹವು ಹೇಗೆ ಲಯವಾಗುತ್ತದೆ ?

**तत्वप्रदीपः – प्रेतशरीरं भूतान्यप्येति, पूर्वं नाप्येति; यस्मिंस्तिष्ठति नाप्येति, गच्छत्यप्येति, स देहातिरिक्तोऽस्तीति गम्यते । न च तस्य प्रेतस्य देहे भूताप्ययः स्वाधीनः ।**

ಮರಣದಿಂದ ದೇಹವು ಪಂಚಭೂತಗಳಲ್ಲಿ ಲಯ ಹೊಂದುತ್ತದೆ. ಆದರೆ ಬದುಕಿರುವಾಗ ದೇಹವು ಪಂಚಭೂತಗಳಲ್ಲಿ ಲಯವಾಗುವುದಿಲ್ಲ. ಜೀವನು ಇಚ್ಛೆಪಟ್ಟರೂ ಕೂಡ ಪಂಚಭೂತಗಳಲ್ಲಿ ಲಯವಾಗುವುದಿಲ್ಲ. ಇದರಿಂದ ದೇಹಕ್ಕಿಂತ ಅತಿರಿಕ್ತನಾದ ಒಬ್ಬ ಜೀವನನ್ನು ಒಪ್ಪಬೇಕು. ಮತ್ತು ಮರಣ ಹೊಂದಿದ ಮೇಲೆ ಪಂಚಭೂತಗಳಲ್ಲಿ ಲಯವಾಗುವುದು ಜೀವನ ಅಧೀನವಾಗಿರುವುದಿಲ್ಲ. ಅದಕ್ಕಾಗಿ ಈಶ್ವರನನ್ನು ಒಪ್ಪಬೇಕು.

ದೇವತಾರಾಧನೆಯಿಂದ ಅಭೀಷ್ಟಪ್ರಾಪ್ತಿಯು ಹೇಗಾಗುತ್ತಿದೆ ?

**तत्वप्रदीपः – आगमविहितं देवताराधनादि कुर्वतः सा प्रत्यक्षा भवति। तत्प्रसादाद्यथोदितमारोग्यपुत्रवित्तादि भवति । तस्मादागमप्रामाण्यनिश्चयः ।**

**सा च वरप्रदानाद्यतिशयवती देवता परलोकसुखादिदानेन देहादन्यं जीवमीश्वरं चावगमयति । ईश्वर एव वा सा स्यात् ।**

ಆಗಮಗಳಲ್ಲಿ ಹೇಳಿದಂತೆ ಇಷ್ಟವಾದ ದೇವತೆಯನ್ನು ಆರಾಧನೆ ಮಾಡಿದಾಗ ನಮ್ಮ ಅಭೀಷ್ಟಗಳು ಇದ್ದೇ ಇರುತ್ತವೆ. ಹಾಗೆ ಮಾಡುವ ಆರಾಧನೆಯಿಂದ ಆರೋಗ್ಯ, ಪುತ್ರ, ಸಂಪತ್ತು, ಮೊದಲಾದವುಗಳ ಪ್ರಾಪ್ತಿಯಾಗುವುದು ಅನುಭವದಿಂದ ಕಂಡಿದೆ. ಆದ್ದರಿಂದ ಆಗಮಶಾಸ್ತ್ರಗಳ ಪ್ರಾಮಾಣ್ಯವು ಇದರಿಂದ ಸಿದ್ಧವಾಗುತ್ತದೆ. ಆರಾಧನೆಯು ಈಶ್ವರನ ವರಕ್ಕೆ ಕಾರಣವಾಗಿರುವುದರಿಂದ ಈಶ್ವರನು ಪಾರಲೋಕಿಕವಾದ ಸುಖಾದಿಗಳನ್ನು ನೀಡುತ್ತಾನಾದ್ದರಿಂದ ದೇಹಕ್ಕಿಂತ ಭಿನ್ನವಾದ ಜೀವನು ಮತ್ತು ಈಶ್ವರನು ಸಿದ್ಧವಾಗುತ್ತಾನೆ.

ಮರಣವು ಯಾರ ಅಧೀನ ?

**तत्वप्रदीपः – मरणनिमित्तत्वं चेष्टनिवृत्तेर्न प्रत्यक्षम् । स च चेष्टावान्न देहः । न च तस्य मरणं स्वाधीनम् ।**

ಮರಣ ಹೊಂದಿದಾಗ ದೇಹದಲ್ಲಿ ಚೇಷ್ಟೆಯು ನಿಲ್ಲುತ್ತದೆ. ಈ ಕ್ರಿಯಾನಿವೃತ್ತಿಗೆ ಮರಣವು ಕಾರಣವೆನ್ನುವುದು ಪ್ರತ್ಯಕ್ಷದಿಂದ ಸಿದ್ಧವಾಗಿರುವುದಿಲ್ಲ. ಕ್ರಿಯಾಶೀಲವಾಗಿರುವುದೇ ದೇಹವಲ್ಲ. ಏಕೆಂದರೆ ಮರಣ ಹೊಂದಿದ ಮೇಲೂ ಕ್ರಿಯೆಯು ಕಾಣಸುತ್ತಿಲ್ಲ. ಮತ್ತು ಆ ಮರಣವು ನಮ್ಮ ಅಧೀನವಲ್ಲ. ಆದ್ದರಿಂದ ಮರಣವನ್ನು ನೀಡುವ ಈಶ್ವರನು ಇದರಿಂದ ಸಿದ್ಧವಾಗುತ್ತಾನೆ.

ಈ ಪ್ರಶ್ನೆಗಳಿಗೆ ಉತ್ತರಿಸಲಾಗದ ನಾಸ್ತಿಕರು ಸೋಲಪ್ಪಿದರು

**तत्वप्रदीपः – स्वाध्यायब्रह्मचर्यादेस्तपसस्तेजस्वितादिफलं दृश्यते । तप्तमाषादिव्यपरीक्षाणां च तत्वविज्ञानादि फलम् । तस्मादागमोक्तस्य सर्वस्य सिद्धिः । अतश्च न नास्तिक्यवादो युज्यते ।**

'ದರ್ಶನಾಚ್ಚ ತಪ ಆದಿ ಫಲಸ್ಯ' ಎಂಬುದಾಗಿ ಭಾಷ್ಯದಲ್ಲಿ ಹೇಳಿದ್ದಾರೆ. ಇಲ್ಲಿರುವ 'ತಪಃ' ಎಂಬ ಪದಕ್ಕೆ ಸ್ವಾಧ್ಯಾಯ ಬ್ರಹ್ಮಚರ್ಯ ಮೊದಲಾದವುಗಳು ಎಂದರ್ಥ. ಇದರಿಂದ ಉತ್ತಮ

ತೇಜಸ್ವಿಯಾಗುವಿಕೆ ಎಂಬ ಫಲ ದೊರೆಯುವುದು ಕಾಣಿಸುತ್ತಿದೆ. ಮತ್ತು ಸತ್ಯ ಹೇಳುವವನು ಚೆನ್ನಾಗಿ ಕಾಯಿಸಿದ ಚಿನ್ನದ ಉದ್ದನ್ನು ಕೈಯಲ್ಲಿ ಹಿಡಿದು ಕೊಂಡರೂ ಸುಡುವುದಿಲ್ಲ. ಸುಳ್ಳು ಹೇಳಿದರೆ ಸುಡುತ್ತದೆ. ಹೀಗೆ ಅತೀಂದ್ರಿಯವಾದ ಈ ಎಲ್ಲಾ ವಿಷಯಗಳನ್ನು ಕೂಡಿಸಲು ಆಗಮಕ್ಕೆ ಪ್ರಾಮಾಣ್ಯವನ್ನು ಒಪ್ಪಲೇ ಬೇಕು. ಆದ್ದರಿಂದ ಪ್ರತ್ಯಕ್ಷಮಾತ್ರ ಪ್ರಮಾಣವೆಂಬ ನಾಸ್ತಿಕರ ವಾದವು ಅಯುಕ್ತವಾಗಿದೆ.

### ಶಾಸ್ತ್ರಕ್ಕೆ ಅನುಕೂಲವಾದ ಪುರಾಣಗಳು

**तत्वप्रदीपः – अनुकूलं पुराणादि -**

**साङ्ख्यं योगः पाशुपतं वेदारण्यकमेव च ।**
**ज्ञानान्येतानि भिन्नानि उतास्हो नेति चोच्यताम् ।।**

ಭಾಷ್ಯದಲ್ಲಿ 'ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ' ಇತ್ಯಾದಿಯಾಗಿ ಹೇಳಿದ್ದಾರೆ. ಮಹಾಭಾರತ ಮೋಕ್ಷಧರ್ಮಪರ್ವದಲ್ಲಿ ಬರುವ ಸಂಪೂರ್ಣ ಶ್ಲೋಕಗಳು ಹೀಗಿವೆ -

ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ ।
ಜ್ಞಾನಾನ್ಯೇತಾನಿ ಭಿನ್ನಾನಿ ಉತಾಽಹೋ ನೇತಿ ಚೋಚ್ಯತಾಮ್ ॥

ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ, ಪಾಶುಪತಶಾಸ್ತ್ರ, ವೇದಾರಣ್ಯಕಗಳು ಈ ನಾಕು ಶಾಸ್ತ್ರಗಳು ತಿಳಿಸುವ ವಿಷಯ ಒಂದೇ ಆಗಿದೆಯೋ ಅಥವಾ ಬೇರೆಬೇರೆ ಆಗಿದೆಯೋ? ಈ ಪ್ರಶ್ನೆಗೆ ಉತ್ತರಿಸಿರಿ.

ವಿಶೇಷ ವಿಚಾರ - ಧರ್ಮರಾಜನು ಭೀಷ್ಮಚಾರ್ಯಬಳಿ ಹೀಗೆ ಪ್ರಶ್ನೆ ಮಾಡುತ್ತಿದ್ದಾನೆ. ಮೋಕ್ಷ ಮಾರ್ಗವನ್ನು ಒಬ್ಬೊಬ್ಬರು ಒಂದೊಂದು ರೀತಿ ಹೇಳುತ್ತಿದ್ದಾರೆ. ಪ್ರಧಾನವಾಗಿ ನಾಕು ಮಾರ್ಗಗಳು ಹೀಗಿದೆ - ೧. ಸಾಂಖ್ಯ, ೨. ಯೋಗ, ೩. ಪಾಶುಪತ, ೪. ವೇದಾರಣ್ಯಕ ಎಂದು. ಸಾಂಖ್ಯಶಾಸ್ತ್ರವೂ ಕೂಡ ಎರಡುವಿಧ - ೧. ನಿರೀಶ್ವರಸಾಂಖ್ಯ, ೨. ಸೇಶ್ವರ ಸಾಂಖ್ಯ. ನಿರೀಶ್ವರ ಸಾಂಖ್ಯಮತದಲ್ಲಿ ಪ್ರಕೃತಿಯೇ ಜಗತ್ತಿಗೆ ಕಾರಣವಾಗಿದೆ.

ರೀಶ್ವರನನ್ನು ಒಪ್ಪಬೇಕಾಗಿಲ್ಲ ಎಂದು ಹೇಳುತ್ತಾರೆ. ಸೇಶ್ವರ ಸಾಂಖ್ಯರು ಈಶ್ವರನನ್ನು ಒಪ್ಪಿದರೂ ಕೂಡ ಪುಷ್ಕರಪಲಾಶದಂತೆ ನಿರ್ಲಿಪ್ತನಾಗಿರುತ್ತಾನೆ. ಪ್ರಕೃತಿಯೇ ಸಂಪೂರ್ಣವಾಗಿ ಜಗತ್ತಿಗೆ ಕಾರಣವಾಗಿದೆ ಎಂದು ಹೇಳುತ್ತಾರೆ.

ಯೋಗಶಾಸ್ತ್ರವು ಕೂಡ ಎರಡು ವಿಧ. ೧. ಸೇಶ್ವರಯೋಗ. ೨. ನಿರೀಶ್ವರಯೋಗ ಎಂದು. ಸೇಶ್ವರಯೋಗದ ಮುಖ್ಯಪ್ರವರ್ತಕ ಪತಂಜಲಿ, ನಿರೀಶ್ವರಯೋಗದ ಮುಖ್ಯಪ್ರರ್ವಕತ ವಿಂದ್ಯಾ.

ಸೇಶ್ವರಸಾಂಖ್ಯರು ಮತ್ತು ಸೇಶ್ವರಯೋಗಶಾಸ್ತ್ರದವರು ಶಿವನೂ ಸಹ ಈಶ್ವರನಾಗಬಹುದು ಕೇಶವನೂ ಆಗಬಹುದು ಎನ್ನುತ್ತಾರೆ. ಕೇಶವನೇ ಆಗಬೇಕೆಂದು ಸಮರ್ಥಿಸುವುದಿಲ್ಲ.

'ಪಾಶುಪತಂ' ಎಂದರೆ ಪಾಶುಪತಶಾಸ್ತ್ರ. ಈ ಶಾಸ್ತ್ರದಲ್ಲಿ ರುದ್ರನೇ ಜಗತ್ತಿಗೆ ಕಾರಣನೆಂದು ಹೇಳುತ್ತಾರೆ. ವಿಷ್ಣು ಸರ್ವಥಾ ಜಗತ್ತಿಗೆ ಕಾರಣನಲ್ಲ ಎನ್ನುತ್ತಾರೆ.

ನಾಕನೆಯದು ವೇದಾರಣ್ಯಕ. ವೇದವು ಒಟ್ಟು ನಾಕು ಬಗೆಯದ್ದಾಗಿದೆ - ೧. ಸಂಹಿತಾ, ೨. ಬ್ರಾಹ್ಮಣ, ೩. ಆರಣ್ಯಕ, ೪. ಉಪನಿಷತ್ ಈ ನಾಕನ್ನೂ ಕೂಡ ವೇದಾರಣ್ಯಕಪದದಿಂದ ವಿವಕ್ಷಿಸಿದ್ದಾರೆ. ಸಂಹಿತಾ ಭಾಗದಿಂದ ತಿಳಿಯುವ ಕರ್ಮಾನುಷ್ಠಾನದ ಬಗ್ಗೆ ಬ್ರಾಹ್ಮಣದಲ್ಲಿ ಹೇಳುವುದರಿಂದ ಎರಡನ್ನು ವೇದ ಎಂಬ ಪದದಿಂದ ಪರಿಗಣಿಸಬೇಕು. ಆರಣ್ಯಕದಲ್ಲಿ ಮಾಡುವ ಸಾಧನೆಯು ವಿವರವಾಗಿ ಉಪನಿಷತ್ತಿನಲ್ಲಿರುವುದರಿಂದ ಆರಣ್ಯಕ ಹಾಗೂ ಉಪನಿಷತ್ತುಗಳನ್ನು ಆರಣ್ಯಕ ಪದಗಳಿಂದ ವಿವಕ್ಷಿಸಬೇಕು. ಆದ್ದರಿಂದ ಸಂಹಿತಾ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತು ಈ ನಾಕರಲ್ಲಿಯೂ ವಿಷ್ಣುವೇ ಜಗತ್ಕಾರಣನು ಮತ್ತೊಬ್ಬರಲ್ಲ ಎಂದು ಸಾರಲಾಗಿದೆ.

ಯುಧಿಷ್ಠಿರನ ಪ್ರಶ್ನೆಯ ಅಭಿಪ್ರಾಯ ಹೀಗಿದೆ - ಸಾಂಖ್ಯರು ಮತ್ತು ಯೋಗಶಾಸ್ತ್ರದವರು ಹೇಳುವಂತೆ ಜಗತ್ಕಾರಣನಾದವನು ಶಿವನು ಆಗಬಹುದು ಕೇಶವನು ಆಗಬಹುದು ಎಂಬ ಮಾರ್ಗವು ಸರಿಯೋ, ಅಥವಾ ಪಾಶುಪತಶಾಸ್ತ್ರದವರು ಹೇಳುವಂತೆ ರುದ್ರನೇ ಜಗತ್ಕಾರಣನೋ, ಅಥವಾ ವೇದಾರಣ್ಯಕಗಳು ಹೇಳುವಂತೆ ವಿಷ್ಣುವೇ ಜಗತ್ಕಾರಣನೋ? ಈ ನಾಕು ಪಂಥದಲ್ಲಿ ಯಾವುದು ಸರಿ ಎಂಬುದರ ಬಗ್ಗೆ ನನಗೆ ಸರಿಯಾದ ಉತ್ತರವನ್ನು ತಿಳಿಸಿರಿ ಎಂದು ಧರ್ಮರಾಜನು ಪ್ರಶ್ನಿಸುತ್ತಿದ್ದಾನೆ.

ನಾಕು ಶಾಸ್ತ್ರಗಳು ಭಿನ್ನವಿಷಯಕ

तत्वप्रदीपः –

**साङ्ख्यं योगः पाशुपतं वेदारण्यकमेव च ।**
**ज्ञानान्येतानि भिन्नानि नात्र कार्या विचारणा ।।**

ಸಾಂಖ್ಯಂ ಯೋಗಃ ಪಾಶುಪತಂ ವೇದಾರಣ್ಯಕಮೇವ ಚ ।
ಜ್ಞಾನಾನ್ಯೇತಾನಿ ಭಿನ್ನಾನಿ ನಾತ್ರ ಕಾರ್ಯಾ ವಿಚಾರಣಾ ॥

ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ, ಪಾಶುಪತಶಾಸ್ತ್ರ ಹಾಗೂ ವೇದಾರಣ್ಯಕಗಳು ಈ ನಾಕು ಶಾಸ್ತ್ರಗಳೂ ಏಕವಿಷಯಕವಾಗಿಲ್ಲ. ಬೇರೆ ಬೇರೆ ವಿಷಯವನ್ನೇ ಪ್ರತಿಪಾದನೆ ಮಾಡುತ್ತಿವೆ. ಇದರ ಬಗ್ಗೆ ನಿನಗೆ ಸಂದೇಹ ಬೇಡ.

ಸಾಂಖ್ಯಶಾಸ್ತ್ರ ಪ್ರವರ್ತಕ ಯಾರು ?

तत्वप्रदीपः –

**साङ्ख्यस्य वक्ता कपिलः परमर्षिः स उच्यते ।**
**प्राचीनगर्भं तमृषिं प्रवदन्तीह केचन ।**

ಸಾಂಖ್ಯಸ್ಯ ವಕ್ತಾ ಕಪಿಲಃ ಪರಮರ್ಷಿಸ್ಸ ಉಚ್ಯತೇ ।
ಪ್ರಾಚೀನಗರ್ಭಂ ತಮೃಷಿಂ ಪ್ರವದಂತೀಹ ಕೇಚನ ॥

ಸಾಂಖ್ಯಶಾಸ್ತ್ರವನ್ನು ಪರಮರ್ಷಿಯಾದ ಕಪಿಲನು ರಚನೆ ಮಾಡಿದ್ದಾನೆ. ಅವನನ್ನು ಪ್ರಾಚೀನಗರ್ಭ ಋಷಿಯೆಂದು ಕೆಲವರು ಹೇಳುತ್ತಾರೆ.

ವಿಶೇಷ ವಿಚಾರ - ಸೇಶ್ವರ ಸಾಂಖ್ಯಮತವನ್ನು ಅಥವಾ ನಿರೀಶ್ವರಸಾಂಖ್ಯಮತವನ್ನು ಪ್ರವೃತ್ತಿ ಮಾಡಿದವನು ದೇವಹೂತಿಯ ಮಗನಾದ ವಾಸುದೇವ ರೂಪಿಯಾದ ಕಪಿಲನಲ್ಲ. ಆದರೆ ಕೆಲವರು ಈ ಕಪಿಲನನ್ನು ಕೂಡ ಪರಮರ್ಷಿ ಎಂದು ಹೇಳುತ್ತಾರೆ. ಇನ್ನು ಕೆಲವರು ಪ್ರಾಚೀನಗರ್ಭ ಎಂದು ಹೇಳುತ್ತಾರೆ. ಎರಡೂ ಕೂಡ ಕೇವಲ ಪ್ರವಾದ ಹೊರತು ನಿಜವಾದ ವಿಚಾರವಲ್ಲ.

## ಯೋಗಶಾಸ್ತ್ರ ಪ್ರವರ್ತಕ ಯಾರು ?

**तत्वप्रदीपः –**

**हिरण्यगर्भो योगस्य वक्ता चैव चतुर्मुखः ।**
**उमापतिर्भूतपतिः श्रीकण्ठो ब्रह्मणः सुतः ।**
**उक्तवानिदमव्यग्रं ज्ञानं पाशुपतं शिवः ।।**

ಹಿರಣ್ಯಗರ್ಭೋ ಯೋಗಸ್ಯ ವಕ್ತ ಚೈವ ಚತುರ್ಮುಖಃ ।
ಉಮಾಪತಿರ್ಭೂತಪತಿಃ ಶ್ರೀಕಂಠೋ ಬ್ರಹ್ಮಣಸ್ಸುತಃ ॥
ಉಕ್ತವಾನಿದಮವ್ಯಗ್ರಂ ಜ್ಞಾನಂ ಪಾಶುಪತಂ ಶಿವಃ ॥

' ಚತುರ್ಮುಖಬ್ರಹ್ಮನು ಯೋಗಶಾಸ್ತ್ರ ಪ್ರವರ್ತಕನಾಗಿದ್ದಾನೆ. ಶ್ರೀಕಂಠನಾದ ಬ್ರಹ್ಮನ ಮಗನಾದ ಭೂತಪತಿಯಾದ ಪಾರ್ವತೀಪತಿಯಾದ ಶಿವನು ಸಂದೇಹವಿಲ್ಲದೆ ಪಾಶುಪತಶಾಸ್ತ್ರವನ್ನು ಉಪದೇಶಿಸಿರುವನು.

ವಿಶೇಷ ವಿಚಾರ - ಸಾಂಖ್ಯಶಾಸ್ತ್ರವನ್ನು ಕಪಿಲನು ರಚನೆ ಮಾಡಿದ್ದಾನೆಂದು ಹೇಳುವಾಗ 'ಆ ಕಪಿಲನು ಪರಮರ್ಷಿಯೆಂದು ಹೇಳುವುದು ಕೇವಲ ಪ್ರವಾದ ಮಾತ್ರ' ಎಂಬುದಾಗಿ ಭೀಷ್ಮರು ಉತ್ತರಿಸಿದರು. ಆದರೆ ಯೋಗಶಾಸ್ತ್ರ ಪ್ರವರ್ತಕನಾದ ಚತುರ್ಮುಖಬ್ರಹ್ಮನ ಬಗ್ಗೆ ಹೇಳುವಾಗ 'ಇದು ಕೇವಲ ಪ್ರವಾದ' ಎಂದು ಹೇಳಿಲ್ಲ. ಏಕೆಂದರೆ ಸಾಂಖ್ಯಶಾಸ್ತ್ರದಲ್ಲಿ ಹೇಳಿದ ವಿಚಾರವು ವೇದಾರಣ್ಯಕಗಳಿಗೆ ಸಂಪೂರ್ಣವಾಗಿ ವಿರುದ್ಧವಾಗಿವೆ. ಯೋಗಶಾಸ್ತ್ರದಲ್ಲಿ ಹೇಳಿದ ವಿಚಾರಕ್ಕೆ ಹೆಚ್ಚಿನ ವಿರೋಧವಿರುವುದಿಲ್ಲ. ಆದರೆ ವಿಷ್ಣುವೇ ಸರ್ವೋತ್ತಮನೆಂಬ ಮಹತ್ವವಿಚಾರವನ್ನು ಯೋಗಶಾಸ್ತ್ರವು ಹೇಳಿರುವುದಿಲ್ಲ. ಈ ಸೂಕ್ಷ್ಮವನ್ನು ಗಮನಿಸಬೇಕು.

ಪಾಶುಪತಶಾಸ್ತ್ರವನ್ನು ಶಿವನು ಉಪದೇಶಿಸಿದನು ಎಂದು ಹೇಳುವಾಗ 'ಅವ್ಯಗ್ರಮ್' ಎಂಬ ಪದವನ್ನು ಪ್ರಯೋಗಿಸಿದ್ದಾರೆ. 'ಅವ್ಯಗ್ರ' ಎಂಬ ಪದಕ್ಕೆ 'ಸಂದೇಹವಿಲ್ಲದೆ' ಎಂದರ್ಥ. ಏಕೆಂದರೆ ರುದ್ರದೇವರು ಭಗವಂತನ ಆಜ್ಞೆಯಿಂದ ತನ್ನನ್ನು ಸರ್ವೋತ್ತಮನೆಂದು ಹೇಳಿಕೊಂಡಿದ್ದಾರೆ ಹೊರತು ತಮ್ಮ ಅಭಿಪ್ರಾಯದಿಂದಲ್ಲ. ಭಗವದಾಜ್ಞೆಯನ್ನು ಪರಿಪಾಲನೆ ಮಾಡುತ್ತಿರುವುದರಿಂದ ಅವರ ಮನಸ್ಸಿನಲ್ಲಿ ಸ್ವಲ್ಪವೂ ಸಂದೇಹವಿಲ್ಲ ಎಂಬ ಪ್ರಮೇಯವೂ ಅಡಗಿದೆ.

ಪಂಚರಾತ್ರ ಪ್ರವರ್ತಕ ಯಾರು ?

**तत्वप्रदीपः –**

**पञ्चरात्रस्य कृत्स्नस्य वक्ता नारायणः स्वयम् ।**
**ज्ञानेष्वेतेषु राजेन्द्र सर्वेष्वेतत् विशिष्यते ।।**

ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್ ।
ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ ವಿಶಿಷ್ಯತೇ ।।

ಎಲೈ ಯುಧಿಷ್ಠಿರನೇ! ಪಂಚರಾತ್ರವನ್ನು ಉಪದೇಶಿಸಿದವನು ಸಾಕ್ಷಾತ್ ನಾರಾಯಣನೇ ಆಗಿದ್ದಾನೆ. ಈ ನಾಕು ಬಗೆಯ ಜ್ಞಾನಗಳಲ್ಲಿ ಪಂಚರಾತ್ರವೇ ಶ್ರೇಷ್ಠವಾಗಿದೆ.

ವಿಶೇಷ ವಿಚಾರ - ಧರ್ಮರಾಜನು ಪ್ರಶ್ನೆ ಮಾಡುವಾಗ ಪಂಚರಾತ್ರವನ್ನು ಉಲ್ಲೇಖ ಮಾಡಿಯೇ ಇಲ್ಲ. ಆದರೆ ಉತ್ತರವನ್ನು ನೀಡುವಾಗ ಭೀಷ್ಮರು ಪಂಚರಾತ್ರವೇ ಶ್ರೇಷ್ಠವೆಂದು ಹೇಳಿದ್ದಾರೆ. ಇದು ಹೇಗೆ ? ಎಂಬ ಪ್ರಶ್ನೆ ಬರುತ್ತದೆ. ಅದಕ್ಕೆ ಭಾಷ್ಯದಲ್ಲಿ ಆಚಾರ್ಯರು 'ವೇದಪಂಚರಾತ್ರಯೋಃ ಐಕ್ಯಾಭಿಪ್ರಾಯೇಣ' ಎಂದು ಹೇಳಿದ್ದಾರೆ. ವೇದ ಹಾಗೂ ಪಂಚರಾತ್ರಗಳು ಏಕವಿಷಯಕವೆಂಬ ಅರಿವು ಧರ್ಮರಾಜನಿಗೆ ಇರುವುದರಿಂದ ಈ ವಿಷಯದಲ್ಲಿ ಗೊಂದಲವಿಲ್ಲ. ಪಂಚರಾತ್ರವು ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುತ್ತದೆ ಎಂದು ಉತ್ತರಿಸುವುದರಿಂದ ವೇದಾರಣ್ಯಕಗಳು ಕೂಡ ಅದೇ ವಿಷಯವನ್ನೇ ಹೇಳುತ್ತಿವೆ ಎಂಬುದು ಭೀಷ್ಮರ ಅಭಿಪ್ರಾಯವಾಗಿದೆ. ಆದ್ದರಿಂದ ವೇದ ಹಾಗೂ ಪಂಚರಾತ್ರಗಳ ಅಭಿಪ್ರಾಯವು ಏಕವಿಷಯಕವಾಗಿದೆ. ಉಳಿದ ಶಾಸ್ತ್ರಗಳ ಅಭಿಪ್ರಾಯವು ಭಿನ್ನವಿಷಯಕವಾಗಿದೆ ಎಂದು ಇದರಿಂದ ತಿಳಿಸಿದಂತಾಗುತ್ತದೆ.

ಯಾವ ಶಾಸ್ತ್ರಗಳಲ್ಲಿ ಏಕವಿಷಯಕತ್ವವಿದೆ ?

**तत्वप्रदीपः –**

**ज्ञानेष्वेतेषु सर्वेषु सांख्यपाशुपतादिषु ।**
**यथायोगं यथान्यायं निष्ठा नारायणः परः ।।**

ಜ್ಞಾನೇಷ್ವೇತೇಷು ಸರ್ವೇಷು ಸಾಂಖ್ಯಪಾಶುಪತಾದಿಷು ।
ಯಥಾಯೋಗಂ ಯಥಾನ್ಯಾಯಂ ನಿಷ್ಠಾ ನಾರಾಯಣಃ ಪರಃ ॥

ಈ ಎಲ್ಲಾ ಜ್ಞಾನಗಳಲ್ಲಿ ಮತ್ತು ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ, ಪಾಶುಪತ ಶಾಸ್ತ್ರಗಳಲ್ಲಿಯೂ ಯೋಗಾರ್ಥವನ್ನು ತಿಳಿದು ಉಪಕ್ರಮಾದಿನ್ಯಾಯಗಳಿಂಂದ ಅಧ್ಯಯನ ಮಾಡಿದಾಗ ಏಕವಿಷಯಕತ್ವವು ತಿಳಿಯುತ್ತದೆ. ಸಕಲವೂ ಕೂಡ ನಾರಾಯಣಪರವೇ ಆಗುತ್ತವೆ.

ವಿಶೇಷ ವಿಚಾರ - ಸಾಂಖ್ಯಶಾಸ್ತ್ರ, ಯೋಗಶಾಸ್ತ್ರ ಹಾಗೂ ಪಾಶುಪತ ಶಾಸ್ತ್ರಗಳು ಆಪಾತತಃ ಭಿನ್ನವಿಷಯಕವಲ್ಲ. ವಿಚಾರ ಮಾಡಿದಾಗ ಸಕಲವೂ ನಾರಾಯಣ ಪರವೇ ಆಗಿವೆ. ಯಥಾಯೋಗಮ್ = ಶಬ್ದಗಳ ಯೋಗಾರ್ಥವನ್ನು ತಿಳಿದಾಗ, ಯಥಾನ್ಯಾಯಂ = ಉಪಕ್ರಮಾದಿ ನ್ಯಾಯಗಳಿಂದ ಅಧ್ಯಯನ ಮಾಡಿದಾಗ ಮಾತ್ರ ನಿಷ್ಠಾಃ = ವಿಷ್ಣುವನ್ನು ಪ್ರತಿಪಾದನೆ ಮಾಡುತ್ತವೆ. ಇಲ್ಲದಿದ್ದಾಗ ಭಿನ್ನಾರ್ಥಕವಾಗುತ್ತವೆ.

## ಪಂಚರಾತ್ರದಲ್ಲಿ ಕೇಶವನ ಸನ್ನಿಧಾನ

**तत्वप्रदीपः –**

**ससंशयास्ते सर्वेऽपि पञ्चरात्रमसंशयम् ।**
**निःसंशयेषु सर्वेषु नित्यं वसति केशवः ॥**

ಸ ಸಂಶಯಾಸ್ತೇ ಸರ್ವೇಽಪಿ ಪಂಚರಾತ್ರಮಸಂಶಯಮ್ ।
ನಿಃಸಂಶಯೇಷು ಸರ್ವೇಷು ನಿತ್ಯಂ ವಸತಿ ಕೇಶವಃ ॥

ಸಾಂಖ್ಯಾದಿಶಾಸ್ತ್ರಗಳು ಸಂದೇಹವನ್ನು ಉಂಟುಮಾಡುವಂತೆ ವಿಷಯಬೋಧಕವಾಗಿವೆ ಆದರೆ ಪಂಚರಾತ್ರಶಾಸ್ತ್ರವು ಸಂದೇಹ ಬಾರದಂತೆ ವಿಷಯಪ್ರತಿಪಾದಕವಾಗಿದೆ. ನಿಸ್ಸಂಶಯವಾಗಿ ವಿಷ್ಣುವೇ ಜಗತ್ಕಾರಣವೆಂದು ಪಂಚರಾತ್ರವು ಪ್ರತಿಪಾದನೆ ಮಾಡುತ್ತಿರುವುದರಿಂದ ಕೇಶವನ ಸನ್ನಿಧಾನ ಪಂಚರಾತ್ರದಲ್ಲಿ ನಿತ್ಯವಾಗಿರುತ್ತದೆ.

ಯುಕ್ತಿಯು ಏಕೆ ಅಪ್ರಮಾಣ ?

**तत्वप्रदीपः –**

**ससंशयान् हेतुबलान् नाध्यावसति माधवः ।**
**पञ्चरात्रविदो ये तु यथाक्रमपरा नृप ।।**
**एकान्तभावोपगता वासुदेवं विशन्ति ते । इति ।**

ಸಸಂಶಯಾನ್ ಹೇತುಬಲಾನ್ನಾಧ್ಯಾವಸತಿ ಮಾಧವಃ ।
ಪಂಚರಾತ್ರವಿದೋ ಯೇ ತು ಯಥಾಕ್ರಮಪರಾ ನೃಪ ।
ಏಕಾಂತಭಾವೋಪಗತಾ ವಾಸುದೇವಂ ವಿಶಂತಿ ತೇ ॥

ಸಂಶಯ ಜ್ಞಾನವನ್ನು ನೀಡುವ ಯುಕ್ತಿಯನ್ನೇ ಮುಖ್ಯಪ್ರಮಾಣವನ್ನಾಗಿ ಆಶ್ರಯಿಸಿರುವ ಸಾಂಖ್ಯಾದಿಶಾಸ್ತ್ರಗಳಲ್ಲಿ ಮಾಧವನ ಸನ್ನಿಧಾನ ಹೆಚ್ಚು ಇರುವುದಿಲ್ಲ. ಆದ್ದರಿಂದ ಯಾವ ಸಾಧಕನು ಪಂಚರಾತ್ರಶಾಸ್ತ್ರವನ್ನು ಶ್ರದ್ಧೆಯಿಂದ ಅಧ್ಯಯನ ಮಾಡಿ ದೇವತಾತಾರತಮ್ಯವನ್ನು ಸ್ಪಷ್ಟವಾಗಿ ತಿಳಿದು ಪರಮಾತ್ಮನೇ ಸರ್ವೋತ್ತಮನಾಗಿದ್ದಾನೆಂದು ಮನದಟ್ಟು ಮಾಡಿಕೊಳ್ಳುತ್ತಾನೋ ಅವನು ವಾಸುದೇವನ ಲೋಕವನ್ನು ಪ್ರವೇಶ ಮಾಡುತ್ತಾನೆ.

ವಿಶೇಷ ವಿಚಾರ - 'ಹೇತುಬಲಾನ್' ಎಂದರೆ ಯುಕ್ತಿಯನ್ನೇ ಮುಖ್ಯವಾಗಿ ಆಶ್ರಯಿಸಿರುವ ಸಾಂಖ್ಯಾದಿಶಾಸ್ತ್ರಗಳು ಎಂದರ್ಥ. ಯಥಾಕ್ರಮಪರಾಃ ಎಂಬುದಕ್ಕೆ ದೇವತೆಗಳಲ್ಲಿರುವ ತಾರತಮ್ಯವನ್ನು ಸರಿಯಾಗಿ ತಿಳಿದು ಎಂದರ್ಥ. 'ಏಕಾಂತಭಾವೋಪಗತಾಃ' ಎಂದರೆ ಪರಮಾತ್ಮನೊಬ್ಬನೇ ಅಂತಿಮತತ್ವನಾಗಿದ್ದಾನೆಂದು ತಿಳಿದವರು ಎಂದರ್ಥ.

ಪರಮಾತ್ಮನು ಪ್ರಾಚೀನಗರ್ಭ

**तत्वप्रदीपः – ज्ञापयन्तीति 'ज्ञानानि' । ''परमर्षिः स उच्यते'' नतु परमऋषिः परमज्ञानी । प्राचीना ब्रह्मादयो यस्य गर्भाःस 'प्राचीनगर्भः', तं प्राचीनगर्भं केचिदज्ञा वदन्ति ।**

ಹೇಳಲಿರುವ ಸೂತ್ರದಿಂದ ಪುನರುಕ್ತಿಯು ಇಲ್ಲ ಎಂಬುದಾಗಿ ಸ್ಪಷ್ಟಪಡಿಸಿದಂತೆ ಆಯಿತು. ಏಕೆಂದರೆ 'ನಿರ್ಗುಣನನ್ನು ಶ್ರುತಿಯು ಹೇಳುತ್ತಿದೆ' ಎಂಬ ಅಂಶವು 'ಪೂರ್ಣತ್ವ, ಸ್ವಾಪ್ಯಯ' ಇವೇ ಮೊದಲಾದ ಹೇತುಗಳಿಂದ ಸಿದ್ಧವಾಗಬೇಕು. ಅಲ್ಲಿ (ಶ್ರುತತ್ವಾಚ್ಚ ಎಂಬಲ್ಲಿ) 'ನಿರ್ಗುಣಶ್ಚ' ಎಂಬುದಾಗಿ ಸಾಕ್ಷಾತ್ತಾಗಿಯೇ ಸಿದ್ಧವಾಗಿದೆ.

ವಿಶೇಷ ವಿಚಾರ - ಸೂತ್ರಗಳ ಕ್ರಮ ಹೀಗಿದೆ - ಪ್ರಥಮಸೂತ್ರದಲ್ಲಿ ಈಕ್ಷಣೀಯತ್ವಹೇತುವಿನಿಂದ ವಾಚ್ಯತ್ವವನ್ನು ಸಾಕ್ಷಾತ್ತಾಗಿ ಸಾಧಿಸಲಾಗಿದೆ. ಈಕ್ಷಣೀಯತ್ವ ಹೇತುವು ಪಕ್ಷದಲ್ಲೇ ಇಲ್ಲ. ಸಗುಣಾತ್ಮನಲ್ಲಿ ಇರುವುದರಿಂದ ವ್ಯಧಿಕರಣಾಸಿದ್ಧಿದೋಷ ಬಂದರೆ ದ್ವಿತೀಯಸೂತ್ರದಲ್ಲಿ ಆತ್ಮಶಬ್ದದ ಬಲದಿಂದ ಪರಿಹರಿಸಲಾಗಿದೆ. ಆತ್ಮಶಬ್ದವೆಂಬ ಸಾಧ್ಯವನ್ನು ಬಿಟ್ಟು ಇರುವುದರಿಂದ ಅನ್ಯಥಾಸಿದ್ಧಿಶಂಕೆ ಬರುತ್ತದೆ. ಇದನ್ನು ಪರಿಹರಿಸಲು ಮೂರು ಮತ್ತು ನಾಕನೆಯ ಸೂತ್ರಗಳು ಹೊರಟವೆ.

'ಹೇಯತ್ವಾವಚನಾಚ್ಚ' ಎಂಬ ನಾಕನೆಯ ಸೂತ್ರಕ್ಕೆ ಮತ್ತೂ ಒಂದು ಪ್ರಯೋಜನವಿದೆ. 'ತನ್ನಿಷ್ಠಸ್ಯ' ಎಂಬ ಸೂತ್ರವು ಜೀವಾತ್ಮನ ಜ್ಞಾನದಿಂದಲೂ ಪರಂಪರಯಾ ಮೋಕ್ಷವಾಗುತ್ತದೆಂದು ಹೇಳುತ್ತಿದೆಯೆಂಬ ಆಶಂಕೆ ಬರುತ್ತದೆ. ಆವಾಗ 'ಹೇಯತ್ವಾವಚನಾಚ್ಚ' ಎಂಬ ಸೂತ್ರವು 'ಒಂದು ವೇಳೆ ಜೀವಾತ್ಮನ ಜ್ಞಾನದಿಂದಲೂ ಮೋಕ್ಷವಾಗುವುದಾದರೆ 'ತಮೇವೈಕಂ ಜಾನಥ' ಎಂಬ ಸಾವಧಾರಣವಾದ ಅಹೇಯತ್ವವಚನವು ಕೂಡದಿರಬೇಕಾದೀತು' ಎಂದು ಹಿಂದಿನ ಶಂಕೆಯನ್ನು ಪರಿಹರಿಸುತ್ತದೆ. ಮತ್ತು ಆತ್ಮಶಬ್ದವು ನಿರ್ಗುಣಪರವಾಗಿದೆಯೆಂದು ಸ್ವತಂತ್ರವಾಗಿಯೂ ಸಾಧಿಸುತ್ತದೆ. ಈ ಪಕ್ಷದಲ್ಲಿ ಹೇತುತ್ವಸೂತ್ರವನ್ನು 'ತನ್ನಿಷ್ಠಸ್ಯ' ಎಂಬ ಸೂತ್ರಕ್ಕಿಂತ ಮೊದಲೇಕೆ ಹೇಳಲಿಲ್ಲ? ಎಂಬ ಪ್ರಶ್ನೆ ಬರುತ್ತದೆ. ಆದರೆ ಅಭಾವರೂಪವಾದ್ದರಿಂದ ಅನಂತರ ಹೇಳಿದ್ದು ಯುಕ್ತವೆಂದು ತಿಳಿಯಬೇಕು.

ಮುಂದಿನದ್ದು ಸ್ವಾಪ್ಯಯಸೂತ್ರ. ಇದು ವಾಚ್ಯತ್ವವನ್ನು ಪರಂಪರಯಾ ಸಾಧಿಸುತ್ತಿದೆ. ಆದ್ದರಿಂದ 'ಚ' ಶಬ್ದವಿಲ್ಲದಿರುವುದು ದೋಷವಲ್ಲವೆಂದು ಟೀಕೆಯಲ್ಲಿ ಹೇಳಿದ್ದಾರೆ - ''ಶ್ರುತ್ಯುಕ್ತತ್ವಾಚ್ಚ ನಿರ್ಗುಣೋ ವಾಚ್ಯಃ ಇತಿ ಬಹಿರೇವೋಕ್ತೇ ಕುತೋಽಯಂ ನಿರ್ಗುಣಃ? ಇತಿ ಶಂಕಾಪರಿಹಾರಾತ್ಮಕತ್ವಾತ್ತತ್ರ ಚ ಶಬ್ದಾಭಾವಃ'' 'ಶ್ರುತ್ಯುಕ್ತನಾದ್ದರಿಂದ ನಿರ್ಗುಣನು ವಾಚ್ಯನಾಗಿದ್ದಾನೆಂದು ಸೂತ್ರದಿಂದ ಹೊರಗೆ ಸಾಧಿಸಿದಾಗ ಇವನು ನಿರ್ಗುಣನೇ ಏಕಾಗಬೇಕು? ಎಂಬ ಶಂಕೆಯನ್ನು ಸ್ವಾಪ್ಯಯಹೇತು ಪರಿಹರಿಸುತ್ತಿದೆ. ಆದ್ದರಿಂದ ಅಲ್ಲಿ ಚ ಶಬ್ದವಿಲ್ಲ' ಎಂದು

ಹೇಯತ್ವಸೂತ್ರದ ಅನಂತರವೇ ಈ ಸೂತ್ರವನ್ನು ಹೇಳಲು ಮತ್ತೊಂದು ಕಾರಣವಿದೆ. 'ಆತ್ಮಾನಮ್ ವಿಲಾಯಯತಿ' ಎಂದು ಆತ್ಮನು ನಾಶಿಯೆಂದು ಹೇಯತ್ವ ಹೇಳಿದ್ದರಿಂದ ಹೇಯತ್ವದ ಅವಚನವು ಅಸಿದ್ಧವೆಂಬ ಶಂಕೆ ಬಂದರೆ ಶ್ರುತಿಯಲ್ಲಿ ನಾಶವನ್ನು ಹೇಳುತ್ತಿಲ್ಲ. ಏಕೀಭಾವವನ್ನು ಹೇಳಲಾಗಿದೆಯೆಂದು ಸ್ವಾಪ್ಯಯಸೂತ್ರ ಸಮರ್ಥಿಸುತ್ತಿದೆ. ನಿರ್ಗುಣನು ವಾಚ್ಯನಲ್ಲವೆನ್ನಲು ಹೇತುವನ್ನು ಟೀಕೆಯಲ್ಲೇ ಹೇಳಿದ್ದಾರೆ. ಆದ್ದರಿಂದ ಅದರ ಪರಿಹಾರಕ್ಕಾಗಿ ಈ ಸೂತ್ರವೆಂಬುದು ಟೀಕೆಗೆ ಸಮ್ಮತವಾಗಿದೆ.

ಆರನೆಯ ಗತಿಸೂತ್ರವು ಸ್ವಾಪ್ಯಯಾದಿಗಳು ಬೇರೆ ಶಾಖೆಯಲ್ಲಿ ಬೇರೆಯವರಲ್ಲೂ ಇರಬಹುದು? ಎಂಬ ಶಂಕೆಯ ಪರಿಹಾರಕ್ಕಾಗಿ ಹೊರಟಿದೆ. ಆದ್ದರಿಂದ ಸ್ವಾಪ್ಯಯಸೂತ್ರದ ಅನಂತರ ಹೇಳಿದ್ದು ಯುಕ್ತವಾಗಿದೆ.

ಏಳನೆಯ 'ಶ್ರುತತ್ವಾಚ್ಚ' ಸೂತ್ರವು ಗತಿಸಾಮಾನ್ಯವು ಶ್ರುತಿಸಿದ್ಧವಾಗಿದೆಯೆಂದು ಸಮರ್ಥಿಸಲು ಹೊರಟಿದೆ. ಆದ್ದರಿಂದ ಕೊನೆಯಲ್ಲೇ ಹೇಳಿದ್ದು ಸಮಂಜಸವಾಗಿದೆ.

### ಭಾಷ್ಯದ ಮಾತುಗಳು ಅತ್ಯಂತ ಸಂಗತ

**भावदीपः** – 'नहि' इति भाष्यस्य सङ्गत्यप्रतीतेस्तामाह – **नन्विति** ।। **यत्प्रयन्तीत्यादीति** ।। 'अत्र यत् प्रयन्ति भूतानि तद्ब्रह्मेति सर्वजीवानां निर्दोष एव लयोक्तेः' इति भावः । श्रुत्युक्तत्वेन = श्रुतिस्मृत्युक्तत्वेनेत्यर्थः। **वाच्यत्वमितीति** ।। 'लक्षणया श्रुत्युक्तत्वं तु निरसिष्यते' इति भावः । 'सूत्रे स्वाप्ययाच्चेति स्यात्' इत्याशङ्कां निरस्यति – **यद्यपीति** ।। **श्रुत्युक्तत्वाच्चेति** ।। 'श्रुतिस्मृत्युक्तत्वाच्च' इत्यर्थः ।

''ನನು'' ಇತ್ಯಾದಿ ವಾಕ್ಯಗಳಿಂದ 'ನ ಹಿ' ಇತ್ಯಾದಿ ಭಾಷ್ಯದ ಸಂಗತಿಯು ಸ್ಪಷ್ಟವಾಗಿ ತಿಳಿಯದಿರುವುದರಿಂದ ಅದನ್ನು ಸ್ಪಷ್ಟಪಡಿಸುತ್ತಿದ್ದಾರೆ. ''ಯತ್‌ಪ್ರಯಂತಿ'' ಇತ್ಯಾದಿ ಅಂಶಕ್ಕೆ '' 'ಯತ್ ಪ್ರಯಂತಿ ಭೂತಾನಿ ತದ್ ಬ್ರಹ್ಮ' ಎಂಬುದಾಗಿ ಎಲ್ಲಾ ಜೀವಿಗಳಿಗೂ ಕೂಡ ನಿರ್ದೋಷನಾದ ಬ್ರಹ್ಮನಲ್ಲೇ ಲಯವನ್ನು ಹೇಳಿರುವುದರಿಂದ'' ಎಂದರ್ಥ. ''ಶ್ರುತ್ಯುಕ್ತತ್ವೇನ'' ಎಂಬ ಪದಕ್ಕೆ ಶ್ರುತಿಸ್ಮೃತಿಗಳಿಂದ ಹೇಳಲ್ಪಡುತ್ತಿರುವುದರಿಂದ ಎಂಬುದಾಗಿ ಅರ್ಥ. ''ವಾಚ್ಯತ್ವಮ್'' ಎಂಬ ಪದದಿಂದ ಲಕ್ಷಣಯಾ ಶ್ರುತ್ಯುಕ್ತತ್ವವನ್ನು ಮುಂದೆ ನಿರಾಸ ಮಾಡಲಿದ್ದೇವೆ ಎಂದು ತಿಳಿಸುತ್ತಿದ್ದಾರೆ.

ಸೂತ್ರದಲ್ಲಿ 'ಸ್ವಾಪ್ಯಯಾಚ್ಚ' ಎಂಬುದಾಗಿ 'ಚ'ಶಬ್ದವು ಇರಬೇಕಾಗಿತ್ತಲ್ಲವೇ? ಈ ಸಂಶಯವನ್ನು ''ಯದ್ಯಪಿ'' ಇತ್ಯಾದಿ ವಾಕ್ಯಗಳಿಂದ ನಿರಾಕರಣೆ ಮಾಡುತ್ತಿದ್ದಾರೆ. ''ಶ್ರುತ್ಯುಕ್ತತ್ವಾಚ್ಚ'' ಎಂಬ ಪದಕ್ಕೆ 'ಶ್ರುತಿಸ್ಮೃತಿಗಳಿಂದ ಉಕ್ತವಾಗಿರುವುದರಿಂದ' ಎಂದು ಅರ್ಥ.

ವ್ಯಧಿಕರಣಾಸಿದ್ಧಿಯ ಪರಿಹಾರಕ್ಕಾಗಿ ಮೂರು ಸೂತ್ರಗಳು

**भावदीपः** – ननु श्रुतिस्मृत्युक्तत्वं नाम तज्जन्यज्ञानकर्मत्वमेव । तथा च श्रुत्युक्तत्वादित्यस्य श्रुत्यादिजन्यज्ञानकर्मत्वाच्च नाऽशब्दं ब्रह्मेत्यर्थः स्यात् । अयमेवार्थः 'ईक्षतेर्नाशब्दम्' इत्यत्रोक्तः । तत्रापि 'उपनिषदाद्येकजन्येक्षणकर्मत्वाद् ब्रह्माशब्दं न' इत्युक्तत्वादिति चेत्, मैवम्। 'तत्राद्यसूत्रे सामान्यतः शब्दजन्येक्षणकर्मत्वहेतूक्तौ तस्यासिद्धि-निरासायोक्तेक्षण वाक्यानां गौणपरतयोत्पन्नव्यधिकरणासिद्धिशङ्का त्रिभिः सूत्रैः परम्परया परिहृता । अत्र पुनर्निर्गुणस्यैव ब्रह्मणोऽसाधारण-स्वाप्ययादिरूपनिरवकाशलिङ्गेण उपेततया गौणपरत्वशङ्कानास्पदवाक्य-विशेषजन्य ज्ञानविषयत्वरूपश्रुतत्वहेतुना शुद्धं वाच्यमेवेत्युच्यते' इति न कोऽपि दोषः ।

ಇಲ್ಲಿ ಹೀಗೊಂದು ಪ್ರಶ್ನೆ ಬರಬಹುದು. ಶ್ರುತಿಸ್ಮೃತ್ಯುಕ್ತತ್ವಂ ಎಂದರೆ ಆ ಶ್ರುತಿಸ್ಮೃತಿಗಳಿಂದ ಉಂಟಾದ ಜ್ಞಾನಕ್ಕೆ ಕರ್ಮವಾಗಿರುವುದು ಎಂದೇ ಅರ್ಥ. ಹಾಗಾಗಿ 'ಶ್ರುತ್ಯುಕ್ತತ್ವಾತ್' ಎಂಬ ಪದಕ್ಕೆ 'ಶ್ರುತ್ಯಾದಿಗಳಿಂದ ಉಂಟಾದ ಜ್ಞಾನಕ್ಕೆ ಕರ್ಮವಾಗಿರುವುದರಿಂದ ಬ್ರಹ್ಮನು ಅಶಬ್ದನಲ್ಲ' ಎಂಬ ಅರ್ಥವು ಸಿಗುತ್ತದೆ. ಹಿಂದೆ 'ಈಕ್ಷತೇರ್ನಾಶಬ್ದಮ್' ಎಂಬ ಸೂತ್ರದಲ್ಲೂ ಇದೇ ಅರ್ಥವನ್ನು ಹೇಳಿದ್ದಾರೆ. ಅಲ್ಲೂ ಕೂಡ ಉಪನಿಷದಾದಿಗಳಿಂದ ಮಾತ್ರ ಉಂಟಾದ ಜ್ಞಾನಕ್ಕೆ ಕರ್ಮವಾಗಿರುವುದರಿಂದ ಬ್ರಹ್ಮ ಅಶಬ್ದನಲ್ಲ ಎಂದು ಹೇಳಿರುವುದರಿಂದ ಈ ಸೂತ್ರವು ಗತಾರ್ಥವಾಗುತ್ತದೆಯಲ್ಲವೆ?

ಈ ಶಂಕೆಯು ಸರಿಯಲ್ಲ. 'ಈಕ್ಷತೇರ್ನಾಶಬ್ದಮ್' ಎಂಬ ಸೂತ್ರದಲ್ಲಿ ಸಾಮಾನ್ಯವಾಗಿ ಶಬ್ದದಿಂದ ಉಂಟಾದ ಜ್ಞಾನಕರ್ಮತ್ವರೂಪವಾದ ಹೇತುವನ್ನು ಹೇಳಿದಾಗ ಆ ಹೇತುವಿಗೆ ಅಸಿದ್ಧಿಯನ್ನು ನಿರಾಸ ಮಾಡುವುದಕ್ಕಾಗಿ ಉದಾಹರಿಸಿದ ಈಕ್ಷಣವನ್ನು ಹೇಳುವ ಶ್ರುತಿವಾಕ್ಯಗಳಿಗೆ ಈ ಈಕ್ಷಣೀಯನಾದ ವ್ಯಕ್ತಿಯು ಗೌಣನೂ ಆಗಬಹುದು ಎಂಬ ವ್ಯಧಿಕರಣಾಸಿದ್ಧಿಯ ಶಂಕೆಯನ್ನು ಕ್ರಮವಾಗಿ ಮೂರು

ಸೂತ್ರಗಳಲ್ಲಿ ಪರಿಹಾರ ಮಾಡಿದ್ದಾರೆ. ಈ ಸೂತ್ರದಲ್ಲಾದರೋ "ನಿರ್ಗುಣನಾದ ಬ್ರಹ್ಮನಿಗೆ ಅಸಾಧಾರಣವಾದ ಸ್ವಾಪ್ಯಯಾದಿ ರೂಪವುಳ್ಳ ನಿರವಕಾಶಹೇತು ಇರುವುದರಿಂದ ಗೌಣಪರ ಎಂಬ ಶಂಕೆಗೆ ಆಸ್ಪದವಿಲ್ಲದ ವಿಶೇಷವಾಕ್ಯದಿಂದ ಉಂಟಾದ ಜ್ಞಾನಕ್ಕೆ ವಿಷಯ ಎಂಬ ಅರ್ಥವನ್ನು ಹೊಂದಿದ ಶ್ರುತತ್ವ ಹೇತುವಿನಿಂದ ಶುದ್ಧಬ್ರಹ್ಮನು ವಾಚ್ಯನೇ ಆಗಿದ್ದಾನೆ" ಎಂಬುದಾಗಿ ವಿವರಿಸುತ್ತಿದ್ದಾರೆ. ಹೀಗೆ ಈ ಸೂತ್ರದಲ್ಲಿ ಗತಾರ್ಥತಾದೋಷವು ಬರಲಾರದು.

ಕೆಲವರು ಮಾಡುವ ಪುನರುಕ್ತಿಪರಿಹಾರ

**भावदीपः –** केचित्तु आद्यसूत्रे प्रत्यक्षाद्यवेद्यत्वे सति ईक्षणीयत्वादिति हेतुना वाच्यं ब्रह्मेत्युक्तम् । अत्र तु श्रुत्युक्तत्वात् श्रुत्यादिजन्यज्ञान-विषयत्वात् तस्य लक्षणादिनानुपपत्तेरशब्दं न किन्तु वाच्यमेवेत्युच्यत इति भेदात् । एवं श्रुतत्वाच्चेत्यनेनाप्यस्य साक्षात्त्वासाक्षात्त्वाभ्यां भेदो ज्ञेयः ।

निर्दोषस्येतीति ।। 'सत्वादिगुणरूपदोषहीनस्य' इत्यर्थः । अन्यथा 'निर्गुणस्य' इत्यवक्ष्यदिति भावः ।।९।।

ಇಲ್ಲಿ ಕೆಲವರ ವ್ಯಾಖ್ಯಾನ ಹೀಗಿದೆ – "ಮೊದಲ ಸೂತ್ರದಲ್ಲಿ 'ಪ್ರತ್ಯಕ್ಷಾದ್ಯವೇದ್ಯತ್ವೇ ಸತಿ ಈಕ್ಷಣೀಯತ್ವಾತ್' (ಪ್ರತ್ಯಕ್ಷಾದಿಗಳಿಂದ ತಿಳಿಯಲಾಗದಿದ್ದರೂ ಶ್ರುತಿಯಿಂದ ತಿಳಿಯಲ್ಪಡುತ್ತಿರು-ವುದರಿಂದ) ಎಂಬ ಹೇತುವಿನಿಂದ 'ಬ್ರಹ್ಮನು ವಾಚ್ಯನಾಗಿದ್ದಾನೆ' ಎಂದು ಸಮರ್ಥಿಸಿದ್ದಾರೆ. ಈ ಸೂತ್ರದಲ್ಲಿ 'ಶ್ರುತ್ಯುಕ್ತತ್ವಾತ್' ಎಂದರೆ ಆ ಬ್ರಹ್ಮನು ಶ್ರುತ್ಯಾದಿಗಳಿಂದ ಉಂಟಾದ ಜ್ಞಾನಕ್ಕೆ ವಿಷಯನಾಗಿರುವುದರಿಂದ ಲಕ್ಷಣಾದಿಗಳಿಂದ ಅವನನ್ನು ತಿಳಿಯಲು ಸಾಧ್ಯವಿಲ್ಲದಿರುವುದರಿಂದ ಅವನು ಅಶಬ್ದನಲ್ಲ; ಹೊರತು ವಾಚ್ಯನೇ ಆಗಿದ್ದಾನೆ ಎಂಬುದಾಗಿ ಎರಡು ಸೂತ್ರಗಳಲ್ಲೂ ವಿಷಯಪ್ರತಿಪಾದನೆಯ ಕ್ರಮದಲ್ಲಿ ವ್ಯತ್ಯಾಸವಿರುವುದರಿಂದ ಗತಾರ್ಥತ್ವವು ಇಲ್ಲ. ಇದೇ ರೀತಿಯಾಗಿ 'ಶ್ರುತತ್ವಾಚ್ಚ' ಎಂಬ ಸೂತ್ರಕ್ಕಿಂತಲೂ ಈ ಸೂತ್ರಕ್ಕೆ ಅಲ್ಲಿ ಸಾಕ್ಷಾತ್ತಾಗಿ ಶ್ರುತತ್ವಹೇತುವಿನಿಂದ ವಾಚ್ಯತ್ವವನ್ನು ಸಮರ್ಥನೆ ಮಾಡುತ್ತಿದ್ದಾರೆ; ಇಲ್ಲಿ ಪರಂಪರೆಯಿಂದ ಶ್ರುತತ್ವರೂಪಹೇತುವಿನಿಂದ ವಾಚ್ಯತ್ವವನ್ನು ಸಮರ್ಥಿಸುತ್ತಿದ್ದಾರೆ ಎಂಬುದಾಗಿ ವ್ಯತ್ಯಾಸವನ್ನು ತಿಳಿಯಬೇಕು." ಎಂದು.

"ನಿರ್ದೋಷಸ್ಯ ಇತಿ" ಎಂಬ ಪದಕ್ಕೆ ಸತ್ವಾದಿಗುಣರೂಪವಾದ ದೋಷವಿಲ್ಲದ ಎಂದು ಅರ್ಥ. ಈ ಅರ್ಥದ ಅಭಿಪ್ರಾಯವಿಲ್ಲದಿದ್ದರೆ 'ನಿರ್ಗುಣಸ್ಯ' ಎಂಬುದಾಗಿಯೇ ಭಾಷ್ಯದಲ್ಲಿ ಹೇಳಬೇಕಾಗಿತ್ತು ಎಂಬ ಅಭಿಪ್ರಾಯವನ್ನು ಟೀಕಾರಾಯರು ವಿವರಿಸಿದ್ದಾರೆ.

## ಬ್ರಹ್ಮಸೂತ್ರಭಾಷ್ಯ

### ಗತಿಸಾಮಾನ್ಯಾತ್ ಸೂತ್ರವ್ಯಾಖ್ಯಾನ

**ब्रह्मसूत्रभाष्यम् – न च कासुचिच्छाखास्वन्यथोच्यते ।।**

**।। गतिसामान्यात् ।। १० ।।**

**'सर्वे वेदा युक्तयः सुप्रमाणा ब्राह्मं ज्ञानं परमं त्वेकमेव ।
प्रकाशयन्ते न विरोधः कुतश्चिद् वेदेषु सर्वेषु तथेतिहासे ।।'**

**इति पैङ्गिश्रुतेर्गतेर्ज्ञानस्य साम्यमेव ।।**

'ಅಪ್ರಸಿದ್ಧವಾದ ಕೆಲವು ವೇದಭಾಗಗಳಲ್ಲಿ ರುದ್ರಾದಿಗಳಿಗೂ ಜಗತ್ಕಾರಣತ್ವವನ್ನು ಹೇಳಿರಬಹುದು' ಎಂದು ಶಂಕಿಸಬಾರದು. ಏಕೆಂದರೆ ಎಲ್ಲ ವೇದಗಳು ಒಂದೇ ವಿಷಯವನ್ನು ಪ್ರತಿಪಾದಿಸುತ್ತಿವೆಯೆಂದು ತಿಳಿಸಲು 'ಗತಿಸಾಮಾನ್ಯಾತ್' ಎಂಬ ಸೂತ್ರವು ಹೊರಟಿದೆ.

''ಅತ್ಯಂತ ಶ್ರೇಷ್ಠವಾದ ಪ್ರಾಮಾಣ್ಯವನ್ನು ಹೊಂದಿದ ಎಲ್ಲ ಋಗಾದಿವೇದಗಳು, ಸತ್ತರ್ಕಗಳು, ಬ್ರಹ್ಮವಿಷಯಕವಾದ ಒಂದೇ ಶ್ರೇಷ್ಠವಾದ ತತ್ವಜ್ಞಾನವನ್ನು ಪ್ರಕಾಶಪಡಿಸುತ್ತಿವೆ. ಎಲ್ಲ ಋಗಾದಿವೇದಗಳಲ್ಲಿ ಇತಿಹಾಸಗಳಲ್ಲಿ ಪರಸ್ಪರ ವಿರೋಧಕ್ಕೆ ಸ್ವಲ್ಪವೂ ಅವಕಾಶವಿಲ್ಲ.'' ಹೀಗೆ ಪೈಂಗಿಶ್ರುತಿಯು ಹೇಳುತ್ತಿರುವುದರಿಂದ ಎಲ್ಲ ವೇದದಿಂದ ದೊರೆಯುವ ತತ್ವಜ್ಞಾನಕ್ಕೆ ಅತ್ಯಂತ ಸಾಮ್ಯವಿದೆ ಹೊರತು ಒಂದು ಕಡೆ ರುದ್ರನ ಬಗ್ಗೆ ಮತ್ತೊಂದು ಕಡೆ ಬ್ರಹ್ಮನ ಬಗ್ಗೆ ಹೇಳುವ ಅಭಿಪ್ರಾಯವನ್ನು ಹೊಂದಿಲ್ಲ.

> ಪ್ರತಿಪದಾರ್ಥ -- ನಿರ್ಗುಣಬ್ರಹ್ಮನು ಸರ್ವಶಬ್ದವಾಚ್ಯನೆಂದು ಪ್ರಸಿದ್ಧವೇದ-ಭಾಗಗಳಿಂದ ತಿಳಿಯಬಹುದು, ಆದರೆ ನಮಗೆ ಗೋಚರಿಸಿದ ಇನ್ನೂ ಅನೇಕ ವೇದಭಾಗಗಳಿಂದ ರುದ್ರಾದಿಗಳೇಕೆ ವಾಚ್ಯರಾಗಿರಬಾರದು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಕಾಸುಚಿತ್ ಶಾಖಾಸು = ಅಪ್ರಸಿದ್ಧವಾದ ಕೆಲವು ವೇದಭಾಗಗಳಲ್ಲಿ, ಅನ್ಯಥಾ = ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು, ನ ಚ ಉಚ್ಯತೇ = ಸರ್ವಥಾ ಹೇಳಿಲ್ಲ. ಏಕೆಂದರೆ ಗತಿಸಾಮಾನ್ಯಾತ್ = ಸಕಲವೇದಭಾಗಗಳಿಂದ ಹುಟ್ಟುವ ತತ್ವಜ್ಞಾನಕ್ಕೆ ಏಕವಿಷಯತ್ವ - ವಿರುವುದರಿಂದ.

ಸರ್ವೇ ವೇದಾಃ = ಸಕಲ ಋಗಾದಿಸಚ್ಛಾಸ್ತ್ರಗಳು, ಸುಪ್ರಮಾಣಾಃ = ಪರಮಪ್ರಮಾಣಗಳ ಬೆಂಬಲ ಪಡೆದ, ಯುಕ್ತಯಃ = ಸತ್ತರ್ಕಗಳು, ಬ್ರಾಹ್ಮಂ = ಬ್ರಹ್ಮವಿಷಯಕವಾದ, ಪರಮಮ್ - ಶ್ರೇಷ್ಠವಾದ, ಜ್ಞಾನಂ = ತತ್ವಜ್ಞಾನವನ್ನು, ಏಕಮೇವ = ಏಕಪ್ರಕಾರವಾಗಿಯೇ, ಪ್ರಕಾಶಯಂತೇ = ಪ್ರಕಾಶಪಡಿಸುತ್ತವೆ. ತಥಾ = ಹಾಗೆಯೇ, ಸರ್ವೇಷು = ಎಲ್ಲಾ, ವೇದೇಷು = ಋಗಾದಿವೇದಗಳಲ್ಲಿ, ಇತಿಹಾಸೇ = ಇತಿಹಾಸದಲ್ಲಿ, ವಿರೋಧಃ = ಪರಸ್ಪರವಿರೋಧವು, ನ ಕುತಶ್ಚಿತ್ = ಬರಲು ಸಾಧ್ಯವೇ ಇಲ್ಲ. ಇತಿ = ಈ ರೀತಿಯಾಗಿ, ಪೈಂಗಿಶ್ರುತೇಃ = ಪೈಂಗಿಶ್ರುತಿ ಇರುವುದರಿಂದ, ಗತೇಃ = ಸಕಲವೇದಗಳಿಂದ ದೊರೆಯುವ, ಜ್ಞಾನಸ್ಯ = ತತ್ವಜ್ಞಾನಕ್ಕೆ, ಸಾಮ್ಯಮೇವ = ಏಕಾಭಿಪ್ರಾಯವೇ ಇರುತ್ತದೆ.

## ಸತ್ತರ್ಕದೀಪಾವಳಿ

### ಸಕಲ ವೇದಗಳ ಜ್ಞಾನ ಒಂದೇ

**सत्तर्कदीपावळिः –**

**प्रागुक्तार्थस्य शाखान्तरे अन्यथोक्तिसम्भावनयाऽनिश्चितत्वशङ्कां परिहरत् सूत्रमुपन्यस्य व्याचष्टे – गतीत्यादिना ।। सर्वज्ञेन भगवता सूत्रकारेण सर्ववेदानां वृत्तौ विष्णौ गतिसामान्यस्योक्तत्वात् । 'सर्वे वेदा युक्तयः' इत्यादिश्रुतिबलाच्च तस्य निश्चितत्वान्नादृष्टशाखावचनं विष्णोः संवलित-प्रतिपादकं भविष्यतीति शङ्कनीयमित्यर्थः ।**

ಗತಿಸಾಮಾನ್ಯಾತ್

ಹಿಂದೆ ಹೇಳಿದ (ವಿಷ್ಣುವಿಗೆ ಜಗಜನ್ಮಾದಿಕಾರಣತ್ವೇನ ಶಾಸ್ತ್ರಯೋನಿತ್ವ) ಅರ್ಥವು (ವಿಷಯವು) ಬೇರೆ ಶಾಖೆಯಲ್ಲಿ ಮತ್ತೊಂದು ರೀತಿಯಾಗಿ ಹೇಳಿರಬಹುದು ಎಂಬ ಸಂದೇಹವನ್ನು ಪರಿಹರಿಸುವ ಸೂತ್ರವನ್ನು ಹೇಳಿ ವ್ಯಾಖ್ಯಾನ ಮಾಡುತ್ತಾರೆ 'ಗತಿ' ಎನ್ನುವುದರಿಂದ, ಸರ್ವಜ್ಞರಾದ ಪೂಜ್ಯರಾದ ಸೂತ್ರಕಾರರಿಂದ ಸಕಲವೇದಗಳು ವಿಷ್ಣುವನ್ನು

ಹೇಳುತ್ತವೆ ಎನ್ನುವ ವಿಷಯದಲ್ಲಿ ಜ್ಞಾನವು ಒಂದೇ ರೀತಿಯಾಗಿದೆ ಎಂದು ಹೇಳಿದ್ದರಿಂದ ಮತ್ತು ''ಸರ್ವೇ ವೇದಾ ಯುಕ್ತಯಃ'' ಎಂಬ ಶ್ರುತಿಯ ಬಲದಿಂದಲೂ ನಿಶ್ಚಯವಾಗುತ್ತದೆಯಾದ್ದರಿಂದ ನಾವು ನೋಡದ ಬೇರೆ ಶಾಖೆಯಲ್ಲಿ ವಿಷ್ಣುವಿಗೆ ವಿರುದ್ಧವಾಗಿ ಗುಣಬದ್ಧನು ಹೇಳಲ್ಪಡುತ್ತದೆ ಎಂದು ಶಂಕಿಸಬಾರದು ಎಂದು ಅರ್ಥ.

## ತತ್ವಪ್ರದೀಪ

ಮತ್ತೊಂದು ವೇದದಿಂದ ಮತ್ತೊಬ್ಬ ಪ್ರತಿಪಾದ್ಯನಾಗಲಾರ

**तत्वप्रदीपः – न च सगुणं निर्गुणं चेति द्विविधं ब्रह्म वेदेषु प्रतिपाद्यत इत्याह – नच कासुचिदिति ।।**

**गतिसामान्यात् । सुप्रमाणाः सुष्ठु प्रमाणाः सुष्ठु प्रमाणान्तरसहिताः । प्रकाशयन्ते उत्पादयन्ति । गतेर्ज्ञानस्य साम्यमेव, ब्रह्मज्ञानस्य सर्ववेदेषु साम्यमेव । गुणानामनन्यथोक्त्या साम्यम् । नह्येकत्र ज्ञानानन्दादिकमुक्त्वाऽन्यत्राज्ञानदुःखादिरूपत्वं ब्रह्मण उच्यते ।**

ನಿರ್ಗುಣ ಬ್ರಹ್ಮನೇ ಸಕಲವೇದಪ್ರತಿಪಾದ್ಯನೆಂದು ಇಲ್ಲಿಯತನಕ ಸಮರ್ಥನೆ ಮಾಡಿದಿರಿ. ಆದರೆ ಬ್ರಹ್ಮನು ಸಗುಣ ಹಾಗೂ ನಿರ್ಗುಣನೆಂದು ಎರಡು ಬಗೆಯಲ್ಲಿ...ನೆ. ಈ ಎರಡು ಬಗೆಯ ಬ್ರಹ್ಮನೂ ಕೂಡ ವೇದಗಳಲ್ಲಿ ಪ್ರತಿಪಾದ್ಯನಾಗಿದ್ದಾನೆ ? ಈ ಪ್ರಶ್ನೆಗೆ 'ನ ಚ ಕಾಸುಚಿತ್' ಇತ್ಯಾದಿ ಭಾಷ್ಯದಲ್ಲಿ ಉತ್ತರಿಸುತ್ತಿದ್ದಾರೆ.

'ಗತಿಸಾಮಾನ್ಯಾತ್' ಎಂಬ ಸೂತ್ರವನ್ನು 'ಸರ್ವೇ ವೇದಾಃ' ಇತ್ಯಾದಿ ಪೈಂಗಿಶ್ರುತಿಯನ್ನು ಉದಾಹರಿಸುವ ಮೂಲಕ ವ್ಯಾಖ್ಯಾನ ಮಾಡಿದ್ದಾರೆ. 'ಸುಪ್ರಮಾಣಾಃ' ಎಂಬ ಪದಕ್ಕೆ ಎರಡರ್ಥ. 'ವೇದಗಳಿಗೆ ವಿಶೇಷಣ ಮಾಡಿದಾಗ ಶ್ರೇಷ್ಠವಾದ ಪ್ರಮಾಣಗಳು' ಎಂದರ್ಥ. 'ಯುಕ್ತಯಃ' ಎಂಬುದಾಗಿ ವಿಶೇಷಣವನ್ನಾಗಿ ಮಾಡಿದಾಗ ಶ್ರೇಷ್ಠವಾದ ಬೇರೆ ಪ್ರಮಾಣಗಳ ಬೆಂಬಲವಿರುವ 'ಎಂದರ್ಥ. (ಯುಕ್ತಿಗಳು ಸ್ವತಂತ್ರ ಪ್ರಮಾಣಗಳಾದ್ದರಿಂದ ಸತ್ಪ್ರಮಾಣಗಳ ಬೆಂಬಲವನ್ನು ಈ ವಿಶೇಷಣವು ಸೂಚಿಸಿದೆ.) 'ಪ್ರಕಾಶಯಂತೇ' ಎಂಬುದಕ್ಕೆ ಹುಟ್ಟಿಸುತ್ತವೆ

ಸರ್ವೇ ವೇದಾಃ = ಸಕಲ ಋಗಾದಿಸಚ್ಛಾಸ್ತ್ರಗಳು, ಸುಪ್ರಮಾಣಾಃ = ಪರಮಪ್ರಮಾಣಗಳ ಬೆಂಬಲ ಪಡೆದ, ಯುಕ್ತಯಃ = ಸತ್ತರ್ಕಗಳು, ಬ್ರಾಹ್ಮಂ = ಬ್ರಹ್ಮವಿಷಯಕವಾದ, ಪರಮಮ್ = ಶ್ರೇಷ್ಠವಾದ, ಜ್ಞಾನಂ = ತತ್ತ್ವಜ್ಞಾನವನ್ನು, ಏಕಮೇವ = ಏಕಪ್ರಕಾರವಾಗಿಯೇ, ಪ್ರಕಾಶಯಂತೇ = ಪ್ರಕಾಶಪಡಿಸುತ್ತವೆ. ತಥಾ = ಹಾಗೆಯೇ, ಸರ್ವೇಷು = ಎಲ್ಲಾ, ವೇದೇಷು = ಋಗಾದಿವೇದಗಳಲ್ಲಿ, ಇತಿಹಾಸೇ = ಇತಿಹಾಸದಲ್ಲಿ, ವಿರೋಧಃ = ಪರಸ್ಪರವಿರೋಧವು, ನ ಕುತಶ್ಚಿತ್ = ಬರಲು ಸಾಧ್ಯವೇ ಇಲ್ಲ. ಇತಿ = ಈ ರೀತಿಯಾಗಿ, ಪೈಂಗಿಶ್ರುತೇಃ = ಪೈಂಗಿಶ್ರುತಿ ಇರುವುದರಿಂದ, ಗತೇಃ = ಸಕಲವೇದಗಳಿಂದ ದೊರೆಯುವ, ಜ್ಞಾನಸ್ಯ = ತತ್ತ್ವಜ್ಞಾನಕ್ಕೆ, ಸಾಮ್ಯಮೇವ = ಏಕಾಭಿಪ್ರಾಯವೇ ಇರುತ್ತದೆ.

## ಸತ್ತರ್ಕದೀಪಾವಳಿ

### ಸಕಲ ವೇದಗಳ ಜ್ಞಾನ ಒಂದೇ

**सत्तर्कदीपावळिः –**

**प्रागुक्तार्थस्य शाखान्तरे अन्यथोक्तिसम्भावनयाऽनिश्चितत्वशङ्कां परिहरत् सूत्रमुपन्यस्य व्याचष्टे – गतीत्यादिना ।। सर्वज्ञेन भगवता सूत्रकारेण सर्ववेदानां वृत्तौ विष्णौ गतिसामान्यस्योक्तत्वात् । 'सर्वे वेदा युक्तयः' इत्यादिश्रुतिबलाच्च तस्य निश्चितत्वान्नादृष्टशाखावचनं विष्णोः संवलित-प्रतिपादकं भविष्यतीति शङ्कनीयमित्यर्थः ।**

ಗತಿಸಾಮಾನ್ಯಾತ್

ಹಿಂದೆ ಹೇಳಿದ (ವಿಷ್ಣುವಿಗೆ ಜಗಜನ್ಮಾದಿಕಾರಣತ್ವೇನ ಶಾಸ್ತ್ರಯೋನಿತ್ವ) ಅರ್ಥವು (ವಿಷಯವು) ಬೇರೆ ಶಾಖೆಯಲ್ಲಿ ಮತ್ತೊಂದು ರೀತಿಯಾಗಿ ಹೇಳಿರಬಹುದು ಎಂಬ ಸಂದೇಹವನ್ನು ಪರಿಹರಿಸುವ ಸೂತ್ರವನ್ನು ಹೇಳಿ ವ್ಯಾಖ್ಯಾನ ಮಾಡುತ್ತಾರೆ 'ಗತಿ' ಎನ್ನುವುದರಿಂದ, ಸರ್ವಜ್ಞರಾದ ಪೂಜ್ಯರಾದ ಸೂತ್ರಕಾರರಿಂದ ಸಕಲವೇದಗಳು ವಿಷ್ಣುವನ್ನು

ಹೇಳುತ್ತವೆ ಎನ್ನುವ ವಿಷಯದಲ್ಲಿ ಜ್ಞಾನವು ಒಂದೇ ರೀತಿಯಾಗಿದೆ ಎಂದು ಹೇಳಿದ್ದರಿಂದ ಮತ್ತು ''ಸರ್ವೇ ವೇದಾ ಯುಕ್ತಯಃ'' ಎಂಬ ಶ್ರುತಿಯ ಬಲದಿಂದಲೂ ನಿಶ್ಚಯವಾಗುತ್ತದೆಯಾದ್ದರಿಂದ ನಾವು ನೋಡದ ಬೇರೆ ಶಾಖೆಯಲ್ಲಿ ವಿಷ್ಣುವಿಗೆ ವಿರುದ್ಧವಾಗಿ ಗುಣಬದ್ಧನು ಹೇಳಲ್ಪಡುತ್ತದೆ ಎಂದು ಶಂಕಿಸಬಾರದು ಎಂದು ಅರ್ಥ.

## ತತ್ವಪ್ರದೀಪ

### ಮತ್ತೊಂದು ವೇದದಿಂದ ಮತ್ತೊಬ್ಬ ಪ್ರತಿಪಾದ್ಯನಾಗಲಾರ

**तत्वप्रदीपः – न च सगुणं निर्गुणं चेति द्विविधं ब्रह्म वेदेषु प्रतिपाद्यत इत्याह – नच कासुचिदिति ।।**

**गतिसामान्यात् । सुप्रमाणाः सुष्ठु प्रमाणाः सुष्ठु प्रमाणान्तरसहिताः । प्रकाशयन्ते उत्पादयन्ति । गतेर्ज्ञानस्य साम्यमेव, ब्रह्मज्ञानस्य सर्ववेदेषु साम्यमेव । गुणानामनन्यथोक्त्या साम्यम् । नह्येकत्र ज्ञानानन्दादिकमुक्त्वाऽन्यत्राज्ञानदुःखादिरूपत्वं ब्रह्मण उच्यते ।**

ನಿರ್ಗುಣ ಬ್ರಹ್ಮನೇ ಸಕಲವೇದಪ್ರತಿಪಾದ್ಯನೆಂದು ಇಲ್ಲಿಯತನಕ ಸಮರ್ಥನೆ ಮಾಡಿದಿರಿ. ಆದರೆ ಬ್ರಹ್ಮನು ಸಗುಣ ಹಾಗೂ ನಿರ್ಗುಣನೆಂದು ಎರಡು ಬಗೆಯಲ್ಲಿದ್ದಾನೆ. ಈ ಎರಡು ಬಗೆಯ ಬ್ರಹ್ಮನೂ ಕೂಡ ವೇದಗಳಲ್ಲಿ ಪ್ರತಿಪಾದ್ಯನಾಗಿದ್ದಾನೆ ? ಈ ಪ್ರಶ್ನೆಗೆ 'ನ ಚ ಕಾಸುಚಿತ್' ಇತ್ಯಾದಿ ಭಾಷ್ಯದಲ್ಲಿ ಉತ್ತರಿಸುತ್ತಿದ್ದಾರೆ.

'ಗತಿಸಾಮಾನ್ಯಾತ್' ಎಂಬ ಸೂತ್ರವನ್ನು 'ಸರ್ವೇ ವೇದಾಃ' ಇತ್ಯಾದಿ ಪೈಂಗಿಶ್ರುತಿಯನ್ನು ಉದಾಹರಿಸುವ ಮೂಲಕ ವ್ಯಾಖ್ಯಾನ ಮಾಡಿದ್ದಾರೆ. 'ಸುಪ್ರಮಾಣಾಃ' ಎಂಬ ಪದಕ್ಕೆ ಎರಡರ್ಥ. 'ವೇದಗಳಿಗೆ ವಿಶೇಷಣ ಮಾಡಿದಾಗ ಶ್ರೇಷ್ಠವಾದ ಪ್ರಮಾಣಗಳು' ಎಂದರ್ಥ. 'ಯುಕ್ತಯಃ' ಎಂಬುದಾಗಿ ವಿಶೇಷಣವನ್ನಾಗಿ ಮಾಡಿದಾಗ ಶ್ರೇಷ್ಠವಾದ ಬೇರೆ ಪ್ರಮಾಣಗಳ ಬೆಂಬಲವಿರುವ 'ಎಂದರ್ಥ. (ಯುಕ್ತಿಗಳು ಸ್ವತಂತ್ರ ಪ್ರಮಾಣಗಳಾದ್ದರಿಂದ ಸತ್ಪ್ರಮಾಣಗಳ ಬೆಂಬಲವನ್ನು ಈ ವಿಶೇಷಣವು ಸೂಚಿಸಿದೆ.) 'ಪ್ರಕಾಶಯಂತೇ' ಎಂಬುದಕ್ಕೆ ಹುಟ್ಟಿಸುತ್ತವೆ

ಎಂದರ್ಥ. ಬ್ರಹ್ಮನ ವಿಷಯದಲ್ಲಿ ವೇದೇತಿಹಾಸಗಳೆಲ್ಲವೂ ಸಮಾನವಾದ ಒಂದೇ ಜ್ಞಾನವನ್ನು ಹುಟ್ಟಿಸುತ್ತವೆ. ಶಾಸ್ತ್ರಗಳಿಂದ ಹುಟ್ಟುವ ಜ್ಞಾನದಲ್ಲಿ ಸಾಮ್ಯವಿದೆ. ಸಾಮ್ಯಶಬ್ದಕ್ಕೆ ಗುಣಗಳು ಬೇರೆ ರೀತಿಯಲ್ಲಿ ಹೇಳಲ್ಪಡುವುದಿಲ್ಲ ಎಂದರ್ಥ. ಒಂದೆಡೆ ಜ್ಞಾನಾನಂದಾದಿಗುಣಗಳಿಂದ ಪರಿಪೂರ್ಣನಾಗಿದ್ದಾನೆಂದು ಹೇಳಿ, ಮತ್ತೊಂದು ಕಡೆ ಅಜ್ಞಾನದುಃಖಾದಿಗಳಿಂದ ಪರಿಪೂರ್ಣ-ನಾಗಿದ್ದಾನೆಂದು ಹೇಳಲು ಸಾಧ್ಯವಿಲ್ಲ ಎಂದಭಿಪ್ರಾಯ.

## ತತ್ವಪ್ರಕಾಶಿಕಾ

### ಅಪ್ರಸಿದ್ಧ ಶಾಖೆಯಲ್ಲೂ ನಿರ್ಗುಣನೇ ವಾಚ್ಯ

**तत्वप्रकाशिका – ननु 'अस्त्वेवं निर्गुणस्य वाच्यत्वोपपत्तौ युक्तं तस्य कारणत्वेन शास्त्रयोनित्वम्, तच्च प्रसिद्धशाखासूपक्रमादिविचारेऽस्तु ब्रह्मणः कारणत्वेन प्रतिपाद्यत्वम् । अप्रसिद्धशाखासु पुनरन्योऽपि कारणतयोच्यताम्? तासामानन्त्येनाऽनिश्चयात् इत्यत आह – न चेति ।। तत्र हेत्वाकाङ्क्षायां सूत्रमुपन्यस्य व्याचष्टे – गतीति ।।**

ನಿರ್ಗುಣಬ್ರಹ್ಮನು ಸಕಲಶಬ್ದವಾಚ್ಯನೆಂದು ಸಿದ್ಧನಾದರೆ ಜಗತ್ಕಾರಣತ್ವೇನ ಶಾಸ್ತ್ರಪ್ರತಿಪಾದ್ಯನೆಂದು ಸಿದ್ಧನಾಗುತ್ತಾನೆ. ಇದು ಪ್ರಸಿದ್ಧವಾಗಿರುವ ವೇದಶಾಖೆಗಳನ್ನು ಉಪಕ್ರಮಾದಿಷಡ್ವಿಧತಾತ್ಪರ್ಯ-ಲಿಂಗಗಳಿಂದ ವಿಚಾರ ಮಾಡಿದಾಗ ಬ್ರಹ್ಮನು ಜಗತ್ಕಾರಣನೆಂದು ಸಿದ್ಧವಾಗುತ್ತದೆ. ಆದರೆ ಅಪ್ರಸಿದ್ಧವಾದ ಇನ್ನೂ ಅನೇಕ ವೇದಶಾಖೆಗಳಲ್ಲಿ ರುದ್ರಾದಿಗಳು ಜಗತ್ಕಾರಣನೆಂದು ಏಕೆ ಹೇಳಿರಬಾರದು? ಏಕೆಂದರೆ ವೇದಶಾಖೆಗಳು ಅನಂತವಾಗಿರುವುದರಿಂದ ಯಾವುದೇ ಒಂದು ವೇದಶಾಖೆಯಲ್ಲಿ ಹೀಗೆಯೇ ಹೇಳಿದ್ದಾರೆಂದು ನಿಶ್ಚಯಿಸಲಾಗದಷ್ಟೇ? ಈ ಗೊಂದಲದ ಪರಿಹಾರಕ್ಕಾಗಿ ''ನ ಚ'' ಎಂಬ ವಾಕ್ಯವು ಹೊರಟಿದೆ.

ಬೇರೆ ಶಾಖೆಗಳಲ್ಲಿ ರುದ್ರಾದಿಗಳೇಕೆ ಪ್ರತಿಪಾದ್ಯರಾಗಿರಬಾರದು? ಎಂದು ಹೇತುವಿನ ಆಕಾಂಕ್ಷೆ ಬಂದರೆ ಸೂತ್ರವನ್ನು ಪಠಿಸಿ ವ್ಯಾಖ್ಯಾನಿಸುತ್ತಿದ್ದಾರೆ. ''ಗತಿ'' ಇತ್ಯಾದಿಯಾಗಿ.

ವೇದಗಳಲ್ಲಿ ವಿರೋಧವಿಲ್ಲ

**तत्वप्रकाशिका – सर्वे वेदाः, सुष्ठु प्रमाणं मूलभूतं यासां ता युक्तयः, इतिहासश्च ब्रह्मविषयमेकविधमेव ज्ञानमुत्पादयन्ति । न पुनर्वेदादिषु कश्चिद्विरोधोऽस्तीति श्रुत्या स्वयमेव सर्वशाखाद्युत्पाद्यज्ञानस्यैकविधत्व-कथनान्न[१] कासुचिच्छाखासु अन्यथोच्यत इत्यर्थः । एवं ब्रह्मणोऽवाच्यत्वं निराकृत्य तदेव शास्त्रयोनीत्युक्तम् ।।१०।।**

ಸಕಲವೇದಗಳು ಶ್ರೇಷ್ಠವಾದ ಪ್ರಮಾಣಗಳಾಗಿವೆ, ಮತ್ತು ಮೂಲಭೂತವಾದ ಪ್ರಮಾಣಗಳಲ್ಲಿ ಉತ್ತಮವಾದ ಯುಕ್ತಿಗಳು, ಇತಿಹಾಸಗಳು ಬ್ರಹ್ಮವಿಷಯಕವಾದ ಒಂದೇ ವಿಧವಾದ ಜ್ಞಾನವನ್ನು ಹುಟ್ಟಿಸುತ್ತವೆ. ಹೊರತು ವೇದಾದಿಗಳಲ್ಲಿ ಎಲ್ಲಿಯೂ ಸಹ ವಿರೋಧವಿರುವುದಿಲ್ಲ. ಏಕೆಂದರೆ ಶ್ರುತಿಗಳು ಸ್ವತಃ ವೇದವೇ ಸಕಲಶಾಖೆಗಳಿಂದ ಹುಟ್ಟುವ ತತ್ವಜ್ಞಾನವು ಏಕಪ್ರಕಾರವಾಗಿದೆಯೆಂದು ಹೇಳಿಕೊಂಡಿದೆ. ಈ ಪ್ರಕಾರವಾಗಿ ಉಳಿದ ಶಾಖೆಗಳಲ್ಲಿ ರುದ್ರಾದಿಗಳು ಪ್ರತಿಪಾದ್ಯರಾಗಲು ಸಾಧ್ಯವಿಲ್ಲ. ಹೀಗೆ ಬ್ರಹ್ಮನಿಗೆ ಅವಾಚ್ಯತ್ವವನ್ನು ನಿರಾಕರಿಸಿ ಅವನೇ ಶಾಸ್ತ್ರಪ್ರತಿಪಾದ್ಯನೆಂದು ಸಮರ್ಥಿಸಿದ್ದಾಯಿತು.

## ಭಾವದೀಪ

ವೇದಗಳಂತೆ ಶಾಸ್ತ್ರಗಳ ಜ್ಞಾನವೂ ಒಂದೇ

**भावदीपः – ।। गतिसामान्यात् ।।** सर्वशास्त्रयोनित्वसाधकगतिसूत्र-सम्बन्धभाष्यमवतारयन्नेव व्यनक्ति – **नन्वस्त्वेवमिति** ।। भाष्यस्थान्यथापदार्थमाह – **अन्योऽपीति** ।। तथा चातिव्यासं लक्षणमिति भावः । 'अनन्ता वै वेदाः' इति श्रुतेराह – **आनन्त्येनेति** ।। 'तथेतिहासः'

(१) विचित्रानन्तवाक्यैरेकज्ञानजननायोगात् । एकविधमित्युक्तम् । तच्चैकविधत्वं प्रकारैक्यस्याप्ययोगात् एकवाक्यस्यापरवाक्यानुकूलार्थकत्वमेव इति ज्ञेयम् ।
– (गुर्वर्थदीपिका)

इत्युपरिश्रवणादाह – इतिहासश्चेति ।। वेदादिष्विति ।। प्रागुक्तयुक्तयः इतिहासश्चादिपदार्थः । तेन 'श्रुतौ वेदेषु युक्तिषु इतिहासे च' इत्यर्थो दर्शितः । 'कथनात्' इत्यनेन 'सूत्रे गतिसामान्यश्रवणात्' इत्यर्थः सूचितः ।।१०।।

॥ ಗತಿಸಾಮಾನ್ಯಾತ್ ॥ ಸರ್ವಶಾಸ್ತ್ರಗಳಿಂದ ಬ್ರಹ್ಮನ ಜ್ಞಾನ ಉಂಟಾಗುವುದು ಎಂಬ ವಿಷಯದಲ್ಲಿ ಸಾಧಕವಾದ ಗತಿಸೂತ್ರದ ಅವತರಣಿಕಾರೂಪವಾದ ಭಾಷ್ಯವನ್ನು ಅವತಾರಮಾಡುತ್ತಲೇ ಭಾಷ್ಯವನ್ನು ''ನನ್ವಸ್ತು ಏವಮ್'' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಿದ್ದಾರೆ. ''ಅನ್ಯೋಽಪಿ'' ಎಂಬ ಅಂಶದಿಂದ ಭಾಷ್ಯದಲ್ಲಿರುವ ಅನ್ಯಥಾಪದದ ಅರ್ಥವನ್ನು ವಿವರಿಸಿದ್ದಾರೆ. ಆದ್ದರಿಂದ ಲಕ್ಷಣವು ಅತಿವ್ಯಾಪ್ತವಾಗುತ್ತದೆ ಎಂಬ ಅಭಿಪ್ರಾಯವನ್ನು ಗ್ರಹಿಸಬೇಕು. 'ಅನಂತಾ ವೈ ವೇದಾಃ' (ವೇದಗಳು ಅನಂತವಾಗಿವೆ) ಎಂಬ ಶ್ರುತಿ ಇರುವುದರಿಂದ ''ಆನಂತ್ಯೇನ'' ಎಂಬುದಾಗಿ ಹೇಳಿದ್ದಾರೆ.

'ತಥೇತಿಹಾಸಃ' ಎಂಬುದಾಗಿ ಮುಂದೆ ಉದಾಹರಣೆ ಮಾಡಿದ್ದರಿಂದ ''ಇತಿಹಾಸಶ್ಚ'' ಎಂಬುದಾಗಿ ಹೇಳಿದ್ದಾರೆ. ''ವೇದಾದಿಷು'' ಎಂಬಲ್ಲಿ 'ಆದಿ'ಪದಕ್ಕೆ ಹಿಂದೆ ಹೇಳಿದ ಯುಕ್ತಿಗಳು ಮತ್ತು ಇತಿಹಾಸ ಎಂಬುದಾಗಿ ಅರ್ಥ. ಇದರಿಂದಾಗಿ ವೇದಗಳಲ್ಲಿ, ಯುಕ್ತಿಗಳಲ್ಲಿ ಮತ್ತು ಇತಿಹಾಸದಲ್ಲಿ ಎಂಬ ಅರ್ಥವನ್ನು ತೋರಿಸಿದಂತೆ ಆಯಿತು. 'ಕಥನಾತ್' ಎಂಬುದರಿಂದ ಸೂತ್ರದಲ್ಲಿ 'ಗತಿಸಾಮಾನ್ಯಶ್ರವಣ' ಇರುವುದರಿಂದ ಎಂಬ ಅರ್ಥವನ್ನು ಸೂಚಿಸಿದ್ದಾರೆ.

## ಬ್ರಹ್ಮಸೂತ್ರಭಾಷ್ಯ

### ಶ್ರುತತ್ವಾಚ್ಚ ಸೂತ್ರವ್ಯಾಖ್ಯಾನ

**ब्रह्मसूत्रभाष्यम् –**

**'एको देवः सर्वभूतेषु गूढः सर्वव्यापी सर्वभूतान्तरात्मा ।**
**कर्माध्यक्षः सर्वभूताधिवासः साक्षी चेता केवलो निर्गुणश्च' ।**
**इति – श्रुतत्वाच्च ।। ११ ।।**

ಅನೇಕ ಶ್ರುತಿ-ಸ್ಮೃತಿಗಳಲ್ಲಿ ಕೇಳಿಬರುತ್ತಿರುವುದರಿಂದ ಬ್ರಹ್ಮನು ಅವಾಚ್ಯನಲ್ಲ. ''ಪ್ರಧಾನನಾದವನು ಕ್ರೀಡಾದಿಗುಣವಿಶಿಷ್ಟನು, ಸಕಲಪ್ರಾಣಿಗಳಲ್ಲಿ ಅಂತರ್ಗತನು, ಸರ್ವತ್ರ ವ್ಯಾಪ್ತನು, ಜೀವರಿಗೆ ನಿಯಾಮಕನು, ಕರ್ಮಗಳಿಗೆಲ್ಲಾ ಪ್ರೇರಕನು, ಚೇತನಾಚೇತನಾತ್ಮಕಪ್ರಪಂಚಕ್ಕೆ ಆಶ್ರಯನು, ಎಲ್ಲವನ್ನೂ ನೋಡುತ್ತಿರುವವನು, ಜ್ಞಾನರೂಪನು, ಜಡದಿಂದ ಅಮಿಶ್ರಿತನು, ಪ್ರಾಕೃತಸತ್ವಾದಿಗುಣಗಳಿಂದ ವಿದೂರನು'' ಹೀಗೆ ಶ್ರುತಿಗಳು ಬ್ರಹ್ಮನಲ್ಲಿ ಅನಂತಗುಣಗಳನ್ನು ಹೇಳುತ್ತಿರುವಾಗ ಅವಾಚ್ಯನೆಂದು ಹೇಳಿದ್ದು ಸರಿಯಲ್ಲ.

ಪ್ರತಿಪದಾರ್ಥ -- ಮತ್ತೊಂದು ಕಾರಣದಿಂದಲೂ ನಿರ್ಗುಣಬ್ರಹ್ಮನು ಸಕಲಶಬ್ದವಾಚ್ಯನಾಗಿದ್ದಾನೆಂದು ಸೂತ್ರಕಾರರೇ ಹೇಳುತ್ತಿದ್ದಾರೆ. ಶ್ರುತತ್ವಾಚ್ಚ = ಅನೇಕ ಶ್ರುತಿಸ್ಮೃತಿಗಳಲ್ಲಿ ಕೇಳಿಸುತ್ತಿರುವುದರಿಂದಲೂ (ಹೇಳಲ್ಪಟ್ಟಿರುವುದರಿಂದಲೂ) ಬ್ರಹ್ಮನು ಅವಾಚ್ಯನಲ್ಲ.

ಏಕಃ = ಪ್ರಧಾನನಾದವನು, ದೇವಃ = ಕ್ರೀಡಾದಿಗುಣವಿಶಿಷ್ಟನಾದವನು, ಸರ್ವಭೂತೇಷು = ಸಮಸ್ತಭೂತಗಳಲ್ಲಿ, ಗೂಢಃ = ಅಂತರ್ಯಾಮಿಯಾದವನು, ಸರ್ವವ್ಯಾಪೀ = ಎಲ್ಲೆಡೆ ವ್ಯಾಪ್ತನಾದವನು, ಸರ್ವಭೂತಾಂತರಾತ್ಮಾ = ಸಕಲಚೇತನವರ್ಗಕ್ಕೆ ನಿಯಾಮಕನಾದವನು, ಕರ್ಮಾಧ್ಯಕ್ಷಃ = ಸಕಲಕರ್ಮಗಳಿಗೆ ಪ್ರೇರಕನು, ಸರ್ವಭೂತಾಧಿವಾಸಃ = ಚೇತನಾಚೇತನಾತ್ಮಕವಾದ ಪ್ರಪಂಚಕ್ಕೆ ಆಶ್ರಯನಾದವನು, ಸಾಕ್ಷೀ = ಎಲ್ಲವನ್ನೂ ನೋಡುವವನು, ಚೇತಃ = ಜ್ಞಾನಸ್ವರೂಪನು, ಕೇವಲಃ = ಜಡದಿಂದ ಅಮಿಶ್ರಿತನು, ನಿರ್ಗುಣಃ = ಪ್ರಾಕೃತಸತ್ವಾದಿಗುಣರಹಿತನು'' ಹೀಗೆ ಬ್ರಹ್ಮನಲ್ಲಿ ಅನೇಕಗುಣಗಳನ್ನು ಶ್ವೇತಾಶ್ವತರ ಉಪನಿಷತ್ತು ಹೇಳುತ್ತಿದೆ. (ಶ್ವೆ ೬-೧೧)

ಸರ್ವಶಬ್ದವಾಚ್ಯನಲ್ಲಿ ಲಕ್ಷಣಾ ಕೂಡದು

**ब्रह्मसूत्रभाष्यम् — न ह्यशब्दः श्रूयते । न चाप्रसिद्धं कल्प्यम् । सर्वशब्दावाच्यस्य लक्षणाऽयुक्तेः ॥५॥**

**॥ इतीक्षत्यधिकरणम् ॥**

ಬ್ರಹ್ಮನು ಅವಾಚ್ಯನೆಂದು ಯಾವುದೇ ಶ್ರುತಿಗಳಲ್ಲಿಯೂ ಕೇಳಿಸುತ್ತಿಲ್ಲ. ಅಪ್ರಸಿದ್ಧವಾದ ವಿಷಯವನ್ನು ಕಲ್ಪನೆ ಮಾಡುವುದು ತಪ್ಪು. ಸಕಲಶಬ್ದಗಳಿಂದ ಅವಾಚ್ಯನಾದವನಲ್ಲಿ ಲಕ್ಷಣಾವೃತ್ತಿಯನ್ನು ಮಾಡಲು ಸಾಧ್ಯವಿಲ್ಲ.

ಪ್ರತಿಪದಾರ್ಥ -- ಅನೇಕ ಶ್ರುತಿಗಳಿಂದ ಬ್ರಹ್ಮನು ಪ್ರತಿಪಾದ್ಯನಾಗಿದ್ದರೂ ಅವಾಚ್ಯನೇಕಾಗಬಾರದು? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಅಶಬ್ದಃ = ಶಬ್ದ ಅವಾಚ್ಯನಾದವನು, ನಹಿ ಶ್ರೂಯತೇ = ಶ್ರುತಿಗಳಿಂದ ಪ್ರತಿಪಾದ್ಯನಾಗಲಾರ,

ಬ್ರಹ್ಮನು ಅವಾಚ್ಯನಾಗಿದ್ದರೂ ಲಕ್ಷಣಾವೃತ್ತಿಯಿಂದ ಏಕೆ ಪ್ರತಿಪಾದ್ಯ-ನಾಗಬಾರದು? ಎಂಬುದಕ್ಕೆ ಉತ್ತರಿಸುತ್ತಿದ್ದಾರೆ. ಅಪ್ರಸಿದ್ಧಮ್ = ಅತ್ಯಂತ ಅಪ್ರಸಿದ್ಧವಾದ ವಿಷಯವನ್ನು, ನ ಚ ಕಲ್ಪ್ಯಮ್ = ಲಕ್ಷಣಾವೃತ್ತಿಯಿಂದ ಕಲ್ಪಿಸಬಾರದು.

ಗಂಗಾಪದದಿಂದ ಅವಾಚ್ಯವಾದ ತೀರವು ಗಂಗಾಪದದಿಂದಲೇ ಲಕ್ಷ್ಯವಾಗಿದ್ದು ಕಂಡಿದೆಯಲ್ಲವೆ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ. ಸರ್ವಶಬ್ದ ಅವಾಚ್ಯಸ್ಯ = ಯಾವುದೇ ಶಬ್ದಗಳಿಂದಲೂ ವಾಚ್ಯವಾಗದ ವಸ್ತುವಿಗೆ, ಲಕ್ಷಣಾ = ಲಕ್ಷಣಾವೃತ್ತಿಯು, ಅಯುಕ್ತೇಃ = ಕೂಡುವುದಿಲ್ಲ.

ಇಲ್ಲಿಗೆ ಈಕ್ಷತ್ಯಧಿಕರಣಭಾಷ್ಯದ ಪ್ರತಿಪದಾರ್ಥವು ಸಮಾಪ್ತವಾಯಿತು

## ಸತ್ತರ್ಕದೀಪಾವಳಿ

### ಅನ್ಯನು ವಾಚ್ಯನಾದರೆ ಶ್ರುತಿವಿರೋಧ

**सत्तर्कदीपावळिः –**

**श्रुतत्वाच्च ।। 'त्रिगुणातीत एवोपनिषद्वाच्यः परमात्मा' इत्येतद् हेत्वन्तरेण साधयत्, सूत्रमुपन्यस्य व्याचष्टे – श्रुतत्वाचेत्यादिना ।। 'साक्षी चेता केवलो निर्गुणश्च' इत्यस्यां श्रुतौ निर्गुणशब्देनोक्तत्वात् न श्रुत्युक्तो विष्णुस्त्रिगुणसंवलितो विरोधात् । त्रिगुणातीतस्यावाच्यत्वे निर्गुणशब्देन श्रवणं न स्यात् । न चावाच्यमुच्यते विरोधात् न चावाच्यं गुणातीतमत्र शब्दैर्लक्ष्यत**

**इति कल्प्यम् । सर्वशब्दावाच्यस्य लक्ष्यत्वायोगात् । तीरादिशब्दवाच्यस्यैव लोके गङ्गादिशब्दलक्ष्यत्वदर्शनात् । गङ्गापदावाच्यस्यागङ्गात्ववत् आत्मशब्द-लक्ष्यपदेनावाच्यत्वे गुणातीतस्यालक्ष्यत्वप्रसङ्गात् । अतस्त्रिगुणवर्जिते ब्रह्मणि नारायणाख्ये जगत्कर्तरि आत्मशब्दमुख्यार्थे निखिलश्रुतीनां मुख्यवृत्त्या समन्वयो नानुपपन्न इति सिद्धम् ।**

**।। इति श्रीपद्मनाभतीर्थविरचित सत्तर्कदीपावळ्याम् ईक्षत्यधिकरणम् ।।**

ತ್ರಿಗುಣಾತೀತನೇ ಉಪನಿಷತ್ತಿನಿಂದ ಹೇಳಲ್ಪಡುವ ಪರಮಾತ್ಮ ಎನ್ನುವುದನ್ನು ಸಾಧಿಸುವ ಸೂತ್ರವನ್ನು ಹೇಳಿ ವ್ಯಾಖ್ಯಾನ ಮಾಡುತ್ತಾರೆ ''ಶ್ರುತತ್ವಾಚ್ಚ'' ಎಂದು. 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎನ್ನುವ ಶ್ರುತಿಯಲ್ಲಿ ನಿರ್ಗುಣಶಬ್ದದಿಂದ ವಿಷ್ಣುವು ಹೇಳಲ್ಪಡುತ್ತಾನೆ. ಆದ್ದರಿಂದ ತ್ರಿಗುಣಸಂವಲಿತ ಎಂದು ಹೇಳಲು ಬರುವುದಿಲ್ಲ; ವಿರೋಧ ಬರುತ್ತದೆಯಾದ್ದರಿಂದ ಮತ್ತು ತ್ರಿಗುಣಾತೀತನು ಅವಾಚ್ಯನಾದರೆ 'ನಿರ್ಗುಣ' ಎನ್ನುವ ಶಬ್ದದಿಂದ ಅವನ ಶ್ರವಣ ಕೂಡುವುದಿಲ್ಲ.

ಆದಕ್ಕೆ ನಾವು ಹೇಳುತ್ತೇವೆ. ಅವಾಚ್ಯನಾದವನು ಶ್ರುತಿಯಲ್ಲಿ ವಾಚ್ಯನಾಗಿದ್ದಾನೆ ಎಂದರೆ ವಿರೋಧವಿರುವುದರಿಂದ ಹಾಗೆ ಹೇಳುವುದಿಲ್ಲ. ಮತ್ತೇನೆಂದರೆ ಅವಾಚ್ಯನಾದ ಗುಣಾತೀತನಾದವನು ಇಲ್ಲಿ ಶಬ್ದಗಳಿಂದ ಲಕ್ಷಣಯಾ ಹೇಳಲ್ಪಡುತ್ತಾನೆ ಎಂದು ಹೇಳುತ್ತೇವೆ. ಎಂದರೆ ಅದು ಸರಿಯಲ್ಲ ಸಕಲ ಶಬ್ದಗಳಿಂದ ಅವಾಚ್ಯನಾದವನಿಗೆ ಲಕ್ಷ್ಯತ್ವವು ಕೂಡುವುದಿಲ್ಲ. ತೀರಾದಿ ಶಬ್ದಗಳಿಂದ ವಾಚ್ಯವಾದ ತೀರ ಮೊದಲಾದವುಗಳೇ ಗಂಗಾದಿ ಪದಲಕ್ಷ್ಯಗಳಾಗಿ ಲೋಕದಲ್ಲಿ ಕಂಡಿದೆ. 'ಗಂಗಾ' ಪದ ಅವಾಚ್ಯವಾದುದು ಹೇಗೆ ಗಂಗೆಯಲ್ಲವೋ, ಹಾಗೆ 'ಆತ್ಮ'ಶಬ್ದದಿಂದ ಗುಣಾತೀತನು ಅವಾಚ್ಯನಾದರೆ ಲಕ್ಷ್ಯ ಎಂದಾಗುತ್ತಾನೆ. ಆದ್ದರಿಂದ ತ್ರಿಗುಣರಹಿತನಾದ ನಾರಾಯಣ ಎಂಬ ಜಗತ್ಕರ್ತೃವಾದ ಬ್ರಹ್ಮನು ಆತ್ಮಶಬ್ದದ ಮುಖ್ಯಾರ್ಥ-ನಾದ್ದರಿಂದ ಸಕಲಶ್ರುತಿಗಳಿಗೆ ಮುಖ್ಯವೃತ್ತಿಯಿಂದ ಅವನಲ್ಲಿ ಸಮನ್ವಯವು ಅನುಪಪನ್ನವಾದುದಲ್ಲ.

**॥ ಇಲ್ಲಿಗೆ ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ ಸತ್ತರ್ಕದೀಪಾವಳಿಯಲ್ಲಿ ಈಕ್ಷತ್ಯಧಿಕರಣದ ಕನ್ನಡಾನುವಾದವು ಸಮಾಪ್ತವಾಯಿತು ॥**

## ತತ್ವಪ್ರದೀಪ

'ಸಾಕ್ಷೀ ಚೇತಾ' ಶ್ರುತ್ಯರ್ಥ

**तत्वप्रदीपः – सर्वभूतस्थानभेदेऽपि भेदरहित एकः । द्योतनात् देवः । देशतः कालतो गुणतो व्याप्नोतीति सर्वव्यापी । अन्तःस्थित्वा, आ सम्यक् तन्नियन्ता च माता चेत्यन्तरात्मा, आदानादिकर्तृत्वाद्वा । कर्माध्यक्षः कर्माधिपतिः प्रवर्तकः । उपर्यस्याक्षाणीन्द्रियाणि वर्तन्त इति 'अध्यक्षः' ।**

'ಏಕೋ ದೇವಃ' ಎಂಬ ಶ್ವೇತಾಶ್ವತರೋಪನಿಷತ್ತಿನ ಅರ್ಥ ಹೀಗಿದೆ - 'ಸರ್ವಭೂತ' ಪದಕ್ಕೆ ಸಕಲ ಜೀವಜಾತರೆಂದರ್ಥ. 'ಭೂತ' ಶಬ್ದಕ್ಕೆ ಪಂಚಭೂತಗಳೆಂಬ ಅರ್ಥವು ಪ್ರಸಿದ್ಧವಾಗಿದ್ದರೂ ಪ್ರಕೃತ ನಿರಂತರ ಪ್ರವರ್ಧಮಾನರಾದ ಜೀವರನ್ನಷ್ಟೇ ವಿವಕ್ಷಿಸಬೇಕು. ಸಕಲ ಜೀವರಲ್ಲಿ ಒಬ್ಬನೇ ಪರಮಾತ್ಮನು ನೆಲೆಸಿದ್ದಾನೆ. 'ಏಕಃ' ಎಂಬ ಪದದಿಂದ ಸಕಲಭೂತಗಳೆಂಬ ಸ್ಥಾನದಲ್ಲಿ ಭೇದವಿದ್ದರೂ ಅಂತರ್ಯಾಮಿಯಾದವನಿಗೆ ಭೇದವಿಲ್ಲವೆಂದು ತಿಳಿಸಲಾಗಿದೆ. ಅಧಿಷ್ಠಾನವು ಭಿನ್ನವಾದ್ದರಿಂದ ಆಧೇಯನಾದ ಪರಮಾತ್ಮನೂ ಕೂಡ ಭಿನ್ನನಾಗಬೇಕಲ್ಲವೇ ? ಎಂಬ ಪ್ರಶ್ನೆಗೆ ಈಗ ಅವಕಾಶವಿಲ್ಲ. ಇಂಥ ಅಂತರ್ಯಾಮಿಯಾದ ಪರಮಾತ್ಮನು ಯಾರಿಗೂ ಕೂಡ ಗೋಚರನಾಗುತ್ತಿಲ್ಲವೆಂದು 'ಗೂಢಃ' ಎಂಬ ಪದವು ಹೇಳುತ್ತಿದೆ. ಆದರೂ ಸಹ ಜ್ಞಾನಿಗಳಿಗೆ ಗೋಚರನಾಗುತ್ತಿದ್ದಾನೆಂದು 'ದೇವಃ' ಎಂಬ ಪದವು ಹೇಳುತ್ತಿದೆ. ಪರಮಾತ್ಮನು ಅಂತರ್ಯಾಮಿಯಾಗಿದ್ದಾನೆಂದು ಹೇಳಲಾಯಿತು. ಹಾಗಾದರೆ ಬಾಹ್ಯಪ್ರಪಂಚದಲ್ಲಿ ಅವನು ಇರುವುದಿಲ್ಲವೇ? ಎಂಬ ಪ್ರಶ್ನೆಗೆ 'ಸರ್ವವ್ಯಾಪಿ' ಎಂಬ ಪದವು ಉತ್ತರಿಸುತ್ತಿದೆ. ಎಲ್ಲೆಡೆ ವ್ಯಾಪ್ತನಾಗಿದ್ದಾನೆ. ಸಕಲ ದೇಶದಿಂದ, ಸಕಲ ಕಾಲದಿಂದ, ಸಕಲ ಗುಣಗಳಿಂದಲೂ ವ್ಯಾಪ್ತನಾದ ಕಾರಣ 'ಸರ್ವವ್ಯಾಪಿ' ಎಂದು ಕರೆಸಿಕೊಂಡಿದ್ದಾನೆ. ಎಲ್ಲೆಡೆ ಇದ್ದ ಮೇಲೆ ಅಂತರ್ಯಾಮಿಯಾಗಿರುವುದು ಏಕೆ? ಎಂಬ ಪ್ರಶ್ನೆಗೆ 'ಸರ್ವಭೂತಾಂತರಾತ್ಮ' ಎಂಬ ಮುಂದಿನ ಪದವು ಉತ್ತರಿಸುತ್ತಿದೆ. ಸಕಲ ಜೀವರಲ್ಲಿ ಅಂತರಾತ್ಮನಾಗಿ ನೆಲೆಸಿದ್ದಾನೆ. 'ಆ ಸಮ್ಯಕ್ ತನ್ನಿಯಂತಾ ಚ ಮಾತಾ ಚೇತ್ಯಂತರಾತ್ಮಾ' ಎಂಬ ನಿಷ್ಪತ್ತಿಯಂತೆ ನಿಯಾಮಕನಾಗಿದ್ದಾನೆ. ಮತ್ತು ಜೀವನು ಮಾಡುವ ಎಲ್ಲಾ ವ್ಯಾಪಾರವನ್ನೂ ಕೂಡ ತಿಳಿದಿದ್ದಾನೆ. ಅಥವಾ ಆದಾನಾದಿ ವ್ಯಾಪಾರಗಳಿಗೆ

ಕರ್ತೃವಾಗಿರುವುದರಿಂದಲೂ 'ಅಂತರಾತ್ಮ' ಎನಿಸಿದ್ದಾನೆ. ಆದ್ದರಿಂದಲೇ ಕರ್ಮಾಧ್ಯಕ್ಷ-ನಾಗಿದ್ದಾನೆಂದು 'ಕರ್ಮಾಧ್ಯಕ್ಷ' ಎಂಬ ಪದವು ಹೇಳುತ್ತಿದೆ. ಸಕಲ ಕರ್ಮಗಳಿಗೆ ಪ್ರವರ್ತಕ-ನಾದ್ದರಿಂದ ಅಧಿಪತಿಯಾಗಿದ್ದಾನೆ. 'ಅಧ್ಯಕ್ಷ' ಶಬ್ದಕ್ಕೆ 'ಉಪರಿ ಅಸ್ಯ ಅಕ್ಷಾಣಿ ಇತಿ ಅಧ್ಯಕ್ಷಃ' ಎಂಬ ನಿಷ್ಪತ್ತಿಯಂತೆ ಮೇಲೆ ನಿಂತು ಜೀವನು ಮಾಡುವ ಸಕಲ ವ್ಯಾಪಾರಗಳನ್ನು ನೋಡುತ್ತಿದ್ದಾನೆ ಎಂದರ್ಥ.

### ಪರಮಾತ್ಮನೊಬ್ಬನೇ 'ಸಾಕ್ಷೀ'

**तत्वप्रदीपः – सर्वभूतानामधिवासः । साक्षादीक्षत इति साक्षी । साक्षादीक्षणं प्राकृतज्ञानेनापि भवतीति तन्निवृत्त्यर्थं चेतेति । चैतन्यरूप इत्यर्थः । केवलोऽविमिश्रः समाधिकरहितो वा ।**

ಸಕಲಭೂತಗಳ ಒಳಗೆ ಅಂತರ್ಯಾಮಿಯಾಗಿದ್ದಾನೆಂದು ಹೇಳಲಾಯಿತು. ಆದರೆ ಸಕಲಭೂತಗಳೇ ಇವನಲ್ಲಿ ನೆಲೆಸಿವೆ ಎಂಬುದನ್ನು 'ಸರ್ವಭೂತಾಧಿವಾಸಃ' ಎಂಬ ಪದವು ಹೇಳುತ್ತಿದೆ. ಸಕಲಭೂತ ಪದಾರ್ಥಗಳಿಗೆ ಇವನು ಅಧಿಷ್ಠಾನನಾಗಿದ್ದಾನೆ ಎಂದು ಇದರ ಅರ್ಥ. ಪ್ರತಿಯೊಂದು ವ್ಯಾಪಾರವನ್ನು ನೇರವಾಗಿ ನೋಡಲು ಸಮರ್ಥನಾಗಿದ್ದಾನೆ ಎಂದು 'ಸಾಕ್ಷೀ' ಎಂಬ ಪದವು ತಿಳಿಸುತ್ತಿದೆ. ನೇರವಾಗಿ ನೋಡುವಿಕೆಯು ಪ್ರಾಕೃತಜ್ಞಾನದಿಂದಲೂ ಕೂಡ ಉಪಪನ್ನವಾಗುತ್ತದೆ. ಆದರೆ ಪರಮಾತ್ಮನ ಈಕ್ಷಣವು ಅಪ್ರಾಕೃತವಾಗಿದೆ ಎಂದು ತಿಳಿಸಲು 'ಚೇತಾ' ಎಂಬ ಪದದ ಪ್ರಯೋಗವಿದೆ. ಅವನ ಈಕ್ಷಣವು ಚೈತನ್ಯರೂಪವಾಗಿದೆ. ಅಪ್ರಾಕೃತವಾಗಿದೆ ಎಂದರ್ಥ. ಇಂಥ ಪರಮಾತ್ಮನು ಕೇವಲನೆನಿಸಿದ್ದಾನೆ. ಪ್ರಾಕೃತವಾದ ಗುಣಗಳ ಮಿಶ್ರಣವಿಲ್ಲವೆಂದು ಇದರ ಅರ್ಥ. ಅಥವಾ ಇವನಿಗೆ ಸಮನಾದ ವ್ಯಕ್ತಿ ಅಧಿಕನಾದ ವ್ಯಕ್ತಿ ಮತ್ತೊಬ್ಬನಿಲ್ಲ ಎಂದರ್ಥ.

### 'ಸಾಕ್ಷೀ ಚೇತಾ' ಇತ್ಯಾದಿ ಶ್ರುತಿಯಲ್ಲಿ ದಲಕೃತ್ಯ ವಿಚಾರ

**तत्वप्रदीपः – केवलचैतन्येनेक्षणमसम्प्रज्ञातसमाधिस्थस्य योगिनोऽपि भवति । स हि स्वरूपचैतन्येनैवाऽत्मानमीश्वरं च योगस्थः पश्यति । न च**

**तदा गुणाभिमानी । सा तुर्यावस्था नाम । तथापि सगुण एवासौ । प्रारब्धकर्मणोऽप्रनष्टत्वात् । तद्व्यावृत्त्यर्थो निर्गुणशब्दः प्राकृतगुणनिषेधात्मकः। एकत्वादिशब्दैरनेकगुणत्वप्रतीतेर्न स्वाभाविकगुणनिषेधः ।**

'ಸಾಕ್ಷೀ', 'ಚೇತಾ', 'ಕೇವಲಃ' ಇತ್ಯಾದಿ ವಿಶೇಷಣಗಳು ಯೋಗಿಯಲ್ಲಿಯೂ ಕೂಡ ಇರುವ ಕಾರಣ ಪರಮಾತ್ಮನ ಲಕ್ಷಣಕ್ಕೆ ಅತಿವ್ಯಾಪ್ತಿ ದೋಷವು ಬರುತ್ತದೆ. ಅದು ಹೀಗೆ - ಅಸಂಪ್ರಜ್ಞಾತಸಮಾಧಿಯಲ್ಲಿ ಕುಳಿತಿರುವ ಯೋಗಿಯು ಪ್ರಾಕೃತವಾದ ಮನಸ್ಸನ್ನೂ ಕೂಡ ಉಪರತ ಮಾಡಿ, ಜೀವಸ್ವರೂಪವಾದ ಕಣ್ಣಿನಿಂದಲೇ ನೇರವಾಗಿ ಆತ್ಮನಾದ ಈಶ್ವರನನ್ನು ಕಾಣುತ್ತಾನೆ. ಅಂಥ ಅವಸ್ಥೆಯಲ್ಲಿ ಪ್ರಾಕೃತ ಗುಣಗಳ ಸಂಪರ್ಕವೇ ಅವನಿಗಿರುವುದಿಲ್ಲ. ಆದ್ದರಿಂದಲೇ ಇದಕ್ಕೆ 'ತುರ್ಯಾವಸ್ಥೆ' ಎಂದು ಹೆಸರು. ಇಂಥ ಯೋಗಿಯಲ್ಲಿ ಸಾಕ್ಷಿತ್ವ, ಚೇತನತ್ವ, ಕೇವಲತ್ವಗಳು ಬರುತ್ತವಲ್ಲವೇ?

ಈ ಪ್ರಶ್ನೆಗೆ ಉತ್ತರಿಸಲು 'ನಿರ್ಗುಣಶ್ಚ' ಎಂಬ ಪದವನ್ನು ಪ್ರಯೋಗಿಸಲಾಗಿದೆ. ಅಸಂಪ್ರಜ್ಞಾತ ಸಮಾಧಿಯಲ್ಲಿರುವ ಯೋಗಿಯು ನಿರ್ಗುಣನಾಗಲು ಸಾಧ್ಯವಿಲ್ಲ. ಪ್ರಾಕೃತ ಗುಣಗಳಲ್ಲಿ ಅಭಿಮಾನವಿಲ್ಲದಿದ್ದರೂ ಅವುಗಳ ಸಂಪರ್ಕ ಇದ್ದೇ ಇರುತ್ತವೆ. ಏಕೆಂದರೆ ಪ್ರಾರಬ್ಧಕರ್ಮವು ಇನ್ನೂ ಸಹ ನಷ್ಟವಾಗಿರುವುದಿಲ್ಲ. ಆದ್ದರಿಂದ ಅಸಂಪ್ರಜ್ಞಾತ ಸಮಾಧಿಯಲ್ಲಿರುವ ಯೋಗಿಯನ್ನು ವ್ಯಾವೃತ್ತಿ ಮಾಡುವುದಕ್ಕಾಗಿ ನಿರ್ಗುಣಶಬ್ದವು ಸಾರ್ಥಕವಾಗಿದೆ. ನಿರ್ಗುಣಶಬ್ದಕ್ಕೆ ಪ್ರಾಕೃತ ಗುಣಗಳ ಸಂಪರ್ಕ ಇರಬಾರದೆಂದರ್ಥ. ಸ್ವಾಭಾವಿಕವಾದ ಗುಣಗಳಿಲ್ಲ ಎಂದರ್ಥವಲ್ಲ. ಏಕೆಂದರೆ ಈಗಾಗಲೇ ಇದೇ ಶ್ರುತಿಯು 'ಏಕಃ' 'ದೇವಃ' ಇತ್ಯಾದಿ ಪದಗಳಿಂದ ಅನೇಕ ಗುಣಗಳನ್ನು ವಿಧಾನ ಮಾಡಿದೆ.

ಅಶಬ್ದನು ಶ್ರುತನಾಗಲಾರ

**तत्वप्रदीपः – एवं श्रुतत्वाच्च न गौणः आत्मा ।**

**नाप्यशब्दः । नह्यशब्दः श्रूयते । अशब्देऽपि लक्षणया श्रुतिर्वर्तत इत्यत आह – नचाप्रसिद्धं कल्प्यमिति ।**

ಹೀಗೆ ಶ್ರುತಿಯು ಹೇಳುತ್ತಿರುವುದರಿಂದ ಗೌಣನಾದವನು ಆತ್ಮಶಬ್ದ ಪ್ರತಿಪಾದ್ಯನಾಗಲು ಸಾಧ್ಯವಿಲ್ಲ. 'ಶ್ರುತತ್ವಾಚ್ಚ' ಎಂಬ ಸೂತ್ರಕ್ಕೆ ಶ್ರುತನಾದ್ದರಿಂದ ಗೌಣಾತ್ಮನು ಆತ್ಮಶಬ್ದ ಪ್ರತಿಪಾದ್ಯನಲ್ಲ ಎಂದರ್ಥ. ಇದನ್ನು 'ನಹಿ ಅಶಬ್ದಃ' ಎಂಬುದರಿಂದ ವ್ಯಾಖಾನ ಮಾಡುತ್ತಿದ್ದಾರೆ. ಯಾರು ಅಶಬ್ದನೋ, ಅವನು ಶ್ರುತನಾಗಲು ಸಾಧ್ಯವಿಲ್ಲ. ಅಶಬ್ದನಾಗಿದ್ದರೂ ಕೂಡ ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯನಾಗಬಹುದು. ಶ್ರುತಿಗಳು ಬ್ರಹ್ಮನನ್ನು ಲಕ್ಷಣಾವೃತ್ತಿಯಿಂದ ಪ್ರತಿಪಾದನೆ ಮಾಡುತ್ತವೆಂದು ಹೇಳಬಹುದಲ್ಲವೇ? ಎಂಬ ಪ್ರಶ್ನೆಗೆ 'ನಚಾಪ್ರಸಿದ್ಧಂ ಕಲ್ಪ್ಯಮ್' ಎಂಬ ಮಾತಿನಿಂದ ಭಾಷ್ಯಕಾರರು ಉತ್ತರಿಸುತ್ತಿದ್ದಾರೆ. 'ಶಬ್ದದಿಂದ ಪ್ರತಿಪಾದ್ಯವಲ್ಲದ ವಸ್ತುವಿದೆ' ಎಂದು ಹೇಳುವುದೇ ಅಪ್ರಸಿದ್ಧವಾಗಿದೆ ಎಂದು ಇದರ ಅಭಿಪ್ರಾಯ.

### 'ನಚಾಪ್ರಸಿದ್ಧಂ ಕಲ್ಪ್ಯಮ್' ಎಂಬ ಭಾಷ್ಯಕ್ಕೆ ಮೊದಲನೆಯ ಅರ್ಥ

**तत्वप्रदीपः – अयमर्थः – नचावाच्यं ब्रह्मास्तीति शक्यं कल्पयितुं, प्रमाणाभावात् । अवाच्ये शब्दस्य वृत्त्यभावात् । ब्रह्मणि प्रमाणान्तरानभ्युपगमाच्च ।**

'ನಚಾಪ್ರಸಿದ್ಧಂ ಕಲ್ಪ್ಯಮ್' ಎಂಬ ಆಚಾರ್ಯರ ಮಾತಿಗೆ ಅನೇಕಾರ್ಥಗಳನ್ನು ತಿಳಿಯಬೇಕು -

೧. ಶಬ್ದದಿಂದ ಪ್ರತಿಪಾದ್ಯನಲ್ಲದ ಬ್ರಹ್ಮನನ್ನು ಕಲ್ಪನೆ ಮಾಡಬಾರದು. ಏಕೆಂದರೆ ಅಂಥ ಅವಾಚ್ಯನಾದ ಬ್ರಹ್ಮನ ವಿಷಯದಲ್ಲಿ ಯಾವುದೇ ಪ್ರಮಾಣಗಳಿರುವುದಿಲ್ಲ. ಅವಾಚ್ಯನಾದ್ದರಿಂದ ಶಬ್ದಪ್ರಮಾಣವನ್ನು ಹೇಳಲು ಸಾಧ್ಯವಿಲ್ಲ. ಬ್ರಹ್ಮನ ವಿಷಯದಲ್ಲಿ ಪ್ರತ್ಯಕ್ಷ ಹಾಗೂ ಅನುಮಾನಗಳನ್ನು ಪ್ರಮಾಣವನ್ನಾಗಿ ಅಂಗೀಕರಿಸಿಲ್ಲ. ಆದ್ದರಿಂದ ಅವಾಚ್ಯನಾದ ಬ್ರಹ್ಮನು ಅಪ್ರಸಿದ್ಧನಾಗಿದ್ದಾನೆ. ಇಂಥ ಅಪ್ರಸಿದ್ಧಾರ್ಥವನ್ನು ಕಲ್ಪನೆ ಮಾಡಬಾರದು.

### ಎರಡನೆಯ ಅರ್ಥ

**तत्वप्रदीपः – न च सगुणं ब्रह्म वाच्यं, निर्गुणं लक्ष्यमिति कल्प्यम् । अप्रसिद्धत्वादेव । नह्यनिर्वाच्यं मायाशबलं ब्रह्म जगत्कारणं प्रसिद्धम् । न च ज्ञानानन्दादिगुणशून्यं निर्गुणं शुद्धं ब्रह्म प्रसिद्धम् ।**

೨. ಸಗುಣಬ್ರಹ್ಮನು ಶಬ್ದವಾಚ್ಯನಾಗಿದ್ದಾನೆ. ನಿರ್ಗುಣ ಬ್ರಹ್ಮನು ಶಬ್ದವಾಚ್ಯನಾಗಿರುವುದಿಲ್ಲ, ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆ ? ಹೀಗೆ ಕಲ್ಪನೆ ಮಾಡುವುದೂ ಕೂಡ ಅಪ್ರಸಿದ್ಧವೇ ಆಗಿದೆ. ಏಕೆಂದರೆ ಅನಿರ್ವಾಚ್ಯನಾದ ಮಾಯಾಶಬಲನಾದ ಬ್ರಹ್ಮನು ಜಗತ್ತಿಗೆ ಕಾರಣನಾಗಿದ್ದಾನೆ ಎಂಬುದು ಪ್ರಸಿದ್ಧವಾಗಿರುವುದಿಲ್ಲ. ಮತ್ತು ಜ್ಞಾನಾನಂದಾದಿ ಗುಣಗಳಿಂದ ಶೂನ್ಯನಾದ ನಿರ್ಗುಣನು ಶುದ್ಧಬ್ರಹ್ಮನಾಗಿದ್ದಾನೆಂಬುದೂ ಕೂಡ ಪ್ರಸಿದ್ಧವಾಗಿರುವುದಿಲ್ಲ. ಹೀಗೆ ಅಪ್ರಸಿದ್ಧನಾದ ಬ್ರಹ್ಮನನ್ನು ಕಲ್ಪನೆ ಮಾಡಬಾರದು.

### ಮೂರನೆಯ ಅರ್ಥ

**तत्वप्रदीपः – नच तस्य निर्गुणस्य लक्ष्यत्वम् । वाच्यसम्बन्धायत्तायाः लक्षणावृत्तेः असङ्गे तस्मिन्नसम्भवात् । अविद्यासङ्कल्पितसम्बन्धाभ्युपगमे, सगुणत्वप्रसङ्गात् ।**

೩. ನಿರ್ಗುಣಬ್ರಹ್ಮನು ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯನಾಗಿದ್ದಾನೆಂದು ಹೇಳುವುದೂ ಕೂಡ ಅಪ್ರಸಿದ್ಧವಾಗಿದೆ. ಇದನ್ನೂ ಕೂಡ ಕಲ್ಪನೆ ಮಾಡಬಾರದು. ಏಕೆಂದರೆ ಲಕ್ಷಣಾವೃತ್ತಿಯು ವಾಚ್ಯವಾದ ಪದಾರ್ಥದ ಸಂಬಂಧವನ್ನು ಪಡೆದಿರುತ್ತದೆ. ನೀವು ಹೇಳುವಂತೆ ನಿರ್ಗುಣಬ್ರಹ್ಮನು ಅಸಂಗನಾದ್ದರಿಂದ ವಾಚ್ಯಪದಾರ್ಥದ ಸಂಬಂಧವನ್ನು ಇವನಲ್ಲಿ ಹೇಳಲು ಸಾಧ್ಯವಿಲ್ಲ. ಒಂದುವೇಳೆ ಅವಿದ್ಯಾಸಂಕಲ್ಪದಿಂದ ಸಂಬಂಧವನ್ನು ಹೇಳಿದರೆ ಅವನು ಸಗುಣನೇ ಆಗುತ್ತಾನೆ ಹೊರತು, ನಿರ್ಗುಣನಾಗಲಾರ.

### ನಾಕನೆಯ ಅರ್ಥ

**तत्वप्रदीपः – नचावाच्यं वेदसमन्वयसिद्धमिति कल्प्यम् । सर्वशब्दावाच्यस्य लक्षणायुक्तेः ।**

೪. ಅವಾಚ್ಯನಾದ ಬ್ರಹ್ಮನಲ್ಲಿ ವೇದಗಳ ಸಮನ್ವಯವನ್ನು ಕಲ್ಪನೆ ಮಾಡಬಾರದು. ಏಕೆಂದರೆ ಸರ್ವಶಬ್ದಗಳಿಂದ ಅವಾಚ್ಯನಾದವನಲ್ಲಿ ಲಕ್ಷಣಾವೃತ್ತಿಯು ಅಯುಕ್ತವಾಗುತ್ತದೆ.

ಅವಾಚ್ಯವಾದದ್ದು ಲಕ್ಷಣಾ ಪ್ರತಿಪಾದ್ಯವಾಗುವುದಿಲ್ಲ

**तत्वप्रदीपः – नह्यवाच्यस्य लक्ष्यत्वं दृष्टम् । वाच्यमेव शब्दान्तरेण लक्ष्यते । यथा मञ्चादिशब्दैः पुरुषादयः । वाच्यत्वे प्रमाणान्तरगम्यत्वापात इति चेत् ।**

ಅವಾಚ್ಯವಾದ ಪದಾರ್ಥವು ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯವಾಗುತ್ತದೆಂಬುದು ಲೋಕದಲ್ಲಿ ಎಲ್ಲಿಯೂ ಕೂಡ ಕಂಡಿಲ್ಲ. ವಾಚ್ಯವಾದದ್ದು ಮಾತ್ರ ಮತ್ತೊಂದು ಶಬ್ದದಿಂದ ಲಕ್ಷ್ಯವಾಗುವುದು ಲೋಕದಲ್ಲಿ ಕಂಡಿದೆ. ಉದಾಹರಣೆ - ಮಂಚಾದಿಶಬ್ದದಿಂದ ಪುರುಷರು ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯರಾಗಿದ್ದಾರೆ. ಈ ಪುರುಷರು 'ಪುರುಷ' ಎಂಬ ಶಬ್ದದಿಂದ ವಾಚ್ಯರಾಗಿದ್ದಾರೆ.

ಪ್ರಶ್ನೆ - ಬ್ರಹ್ಮನನ್ನು ವಾಚ್ಯನೆಂದು ಹೇಳುವುದಾದರೆ ಬೇರೆ ಪ್ರಮಾಣದಿಂದ ಗಮ್ಯನೆಂದು ಒಪ್ಪಿದಂತಾಗುತ್ತದಲ್ಲವೇ?

ಪ್ರಮಾಣಾಂತರಗಮ್ಯವಾದದ್ದೇ ಲಕ್ಷ್ಯವಾಗುತ್ತದೆ

**तत्वप्रदीपः – न, धर्मादिवदगम्यत्वोपपत्तेः । समानश्चायं न्यायो लक्ष्यत्वपक्षेऽपि । मानान्तरवेद्यमेव हि तीरादिकं लक्ष्यमीक्षामहे ।**

ಉತ್ತರ - ಈ ಪ್ರಶ್ನೆ ಅಸಾಧುವಾಗಿದೆ. ಬೇರೆ ಪ್ರಮಾಣದಿಂದ ಗಮ್ಯವಾದದ್ದು ಮಾತ್ರ ವಾಚ್ಯವಾಗುತ್ತದೆ. ಬೇರೆ ಪ್ರಮಾಣದಿಂದ ಗಮ್ಯವಾಗದೇ ಇರುವುದು ವಾಚ್ಯವಾಗುವುದೇ ಇಲ್ಲ ಎಂಬ ನಿಯಮವೇ ತಪ್ಪು. ಧರ್ಮ, ಅಧರ್ಮ, ಸ್ವರ್ಗ, ನರಕ ಇವೆಲ್ಲವೂ ಕೂಡ ವಾಚ್ಯವಾಗಿವೆ. ಅಂದ ಮಾತ್ರಕ್ಕೆ ಬೇರೆ ಪ್ರಮಾಣದಿಂದ ಗಮ್ಯವಾಗಿವೆ ಎಂದೇನಿಲ್ಲ. ಬ್ರಹ್ಮಾದಿಗಳಿಗೆ ಬೇರೆ ಪ್ರಮಾಣದಿಂದ ಗಮ್ಯವಾಗದಿದ್ದರೂ ವಾಚ್ಯವಾಗಿದೆಯೋ, ಅದರಂತೆ ಬ್ರಹ್ಮನೂ ಕೂಡ ವಾಚ್ಯನಾಗಬಹುದು. ಮತ್ತು ಲಾಕ್ಷಣಿಕವಾದದ್ದೂ ಕೂಡ ಪ್ರಮಾಣಾಂತರ ಗಮ್ಯವೇ ಆಗಿರುತ್ತದೆ. ಪ್ರಮಾಣಾಂತರ ಗಮ್ಯವಾಗದಿದ್ದರೆ, ಲಾಕ್ಷಣಿಕವೂ ಕೂಡ ಆಗುವುದಿಲ್ಲ. ಬೇರೆ ಪ್ರಮಾಣದಿಂದ ಗಮ್ಯವೇ ಆದ ತೀರಾದಿಗಳು ಲಾಕ್ಷಣಿಕವಾಗುವುದನ್ನು ಲೋಕದಲ್ಲಿ ಕಾಣುತ್ತಿದ್ದೇವೆ.

## ನಚಾಪ್ರಸಿದ್ಧಂ ಕಲ್ಪ್ಯಮ್ ಎಂಬುದಕ್ಕೆ ಐದನೆಯ ಅರ್ಥ

**तत्वप्रदीपः – तस्मान्न तस्मिन् ब्रह्मणि लक्षणयाऽपि शब्दो वरीवर्तीत्यभ्युपगन्तव्यम् । एवञ्च, न कयाचिदपि विधया तस्य सिद्धिः । अत एव चैतदाह – नचाप्रसिद्धं कल्प्यमिति ।।**

ಆದ್ದರಿಂದ ಲಕ್ಷಣಾವೃತ್ತಿಯಿಂದಲೂ ಕೂಡ ನೀವು ಹೇಳುವ ನಿರ್ಗುಣಬ್ರಹ್ಮನಲ್ಲಿ ಶಬ್ದಗಳು ಸಮನ್ವಯವಾಗಲು ಸಾಧ್ಯವಿಲ್ಲ. ಹೀಗಿರುವಾಗ ಯಾವುದೇ ರೀತಿಯಿಂದಲೂ ಅವಾಚ್ಯನಾದ ಬ್ರಹ್ಮನಿಗೆ ಪ್ರಸಿದ್ಧಿಯನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದಲೇ ಶ್ರೀಮದಾಚಾರ್ಯರು 'ನಚಾಪ್ರಸಿದ್ಧಂ ಕಲ್ಪ್ಯಮ್' ಎಂಬುದಾಗಿ ಹೇಳಿರುತ್ತಾರೆ.

## ಪ್ರತಿಯೊಂದು ಸೂತ್ರಗಳೂ ಕೂಡ ಅದ್ವೈತದ ನಿರಾಕರಣೆಗಾಗಿಯೇ ಹೊರಟವೆ

**तत्वप्रदीपः – ननु हन्त ! एवं तर्हि, प्रकटमेतानि सूत्राणि ब्रह्मावाच्यत्व-पक्षप्रतिपक्षभूतानि, यावताऽत्र तत्पक्षीयाः पूर्वपक्षीक्रियन्त इति किमिदमिह कुतूहलम् ? प्रतीयन्ते हि तन्निराकरणपराणि मुखत एव कात्स्न्र्येन।**

ಬಹಳ ಆಶ್ಚರ್ಯವಿಷಯ ಎಂದರೆ ! ಅದ್ವೈತಿಗಳು ಬ್ರಹ್ಮನಿಗೆ ಅವಾಚ್ಯತ್ವವನ್ನು ಸಮರ್ಥನೆ ಮಾಡುವ ಮೂಲಕ ಯಾವ ಪೂರ್ವಪಕ್ಷವನ್ನು ಮಾಡುತ್ತಿದ್ದಾರೋ, ಇದನ್ನು ನಿರಾಕರಣೆ ಮಾಡುವುದಕ್ಕಾಗಿಯೇ 'ಅಥಾತೋ ಬ್ರಹ್ಮಜಿಜ್ಞಾಸಾ' ಮೊದಲಾದ ಸೂತ್ರಗಳೆಲ್ಲವೂ ಹೊರಟಿವೆ. ಇನ್ನೂ ಕುತೂಹಲ ವಿಷಯವೆಂದರೆ ಅದ್ವೈತಮತವನ್ನು ಈ ಎಲ್ಲಾ ಸೂತ್ರಗಳು ನೇರವಾಗಿಯೇ ನಿರಾಕರಣೆ ಮಾಡುತ್ತಿವೆ.[೧]

(೧) ಶ್ರೀ ತ್ರಿವಿಕ್ರಮಪಂಡಿತರು ತಮ್ಮ ಜೀವನದ ಅರ್ಧಭಾಗವನ್ನು ಅದ್ವೈತಮತದಲ್ಲಿಯೇ ಕಳೆದಿದ್ದರು. ಶ್ರೀಮದಾಚಾರ್ಯರ ಗ್ರಂಥವು ದೊರೆತ ಮೇಲೆ ತಾವು ಯಾವ ಅದ್ವೈತಮತವನ್ನು ನಂಬಿದ್ದರೋ, ಅದರಲ್ಲಿ ಎಷ್ಟೊಂದು ದೋಷವಿದೆ ಎಂಬ ಅರಿವು ಉಂಟಾಯಿತು. ಬ್ರಹ್ಮಸೂತ್ರಗಳೆಲ್ಲವೂ ಅದ್ವೈತಮತದ ನಿರಾಕರಣೆಗಾಗಿಯೇ ಹೊರಟವೆ ಎಂಬ ಹೊಸ ಅರ್ಥಗಳು ಅವರಿಗೆ ಹೊಳೆದವು. ಈ ಸೂತ್ರದ ವ್ಯಾಖ್ಯಾನದಲ್ಲಿ ಪ್ರಥಮಸೂತ್ರದಿಂದ ಪ್ರಾರಂಭಿಸಿ ಇಲ್ಲಿಯ ತನಕ ಪ್ರತಿಯೊಂದು ಸೂತ್ರಗಳೂ ಕೂಡ ಹೇಗೆ ಅದ್ವೈತಮತವನ್ನು ನಿರಾಕರಣೆ ಮಾಡುತ್ತಿವೆ ಎಂಬುದನ್ನು ಸ್ವರಸವಾಗಿ ವ್ಯಾಖ್ಯಾನ ಮಾಡಿದ್ದಾರೆ. ಹೃದಯಂಗಮವಾದ ಈ ವ್ಯಾಖ್ಯಾನವನ್ನು ಓದುಗರು ಅನುಭವಿಸಬೇಕು.

ಮೊದಲನೆಯ ಸೂತ್ರ ಅದ್ವೈತವನ್ನು ನಿರಾಕರಿಸುತ್ತದೆ

**तत्वप्रदीपः – तथाहि –**

**''अथातो ब्रह्मजिज्ञासा'' इति सूत्रे तावद् ब्रह्मजिज्ञासा विषयः । सा किं कर्तव्या नवेति सन्देहः । तत्र तावदाचक्षते – ब्रह्मजिज्ञासा न कर्तव्या, अविषयत्वाद् ब्रह्मणः । विषयभूते हि वस्तुनि जिज्ञासादयो घटेरन् । विषयत्वे तु घटादिवदब्रह्मत्वप्रसङ्गो दुष्परिहरः ।**

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಪ್ರಥಮಸೂತ್ರದಲ್ಲಿ ಬ್ರಹ್ಮನ ಜಿಜ್ಞಾಸೆಯು ವಿಷಯವಾಗಿದೆ. ಇದು ಕರ್ತವ್ಯವೋ, ಅಲ್ಲವೋ ? ಎಂಬುದು ಸಂದೇಹ. ಪೂರ್ವಪಕ್ಷ ಹೀಗಿದೆ - ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕಾಗಿಲ್ಲ. ಏಕೆಂದರೆ ಬ್ರಹ್ಮನು ಅವಿಷಯನಾಗಿದ್ದಾನೆ. ವಿಷಯವಾಗಿರುವ ವಸ್ತುವಿನಲ್ಲಷ್ಟೇ ಜಿಜ್ಞಾಸೆಯು ಹುಟ್ಟುತ್ತದೆ. ಬ್ರಹ್ಮನು ಜಿಜ್ಞಾಸೆಗೆ ವಿಷಯನೆಂದು ಒಪ್ಪಿದರೆ ಘಟಾದಿಗಳು ಹೇಗೆ ಜಿಜ್ಞಾಸೆಗೆ ವಿಷಯವಾದ್ದರಿಂದ ಅಬ್ರಹ್ಮ ಆಗಿವೆಯೋ, ಅದರಂತೆ ಬ್ರಹ್ಮನೂ ಕೂಡ ಅಬ್ರಹ್ಮನಾಗುವ ಪ್ರಸಂಗ ಬರುತ್ತದೆ.

ಬ್ರಹ್ಮನ ಜಿಜ್ಞಾಸೆಯಿಂದ ಪ್ರಯೋಜನವಿಲ್ಲ

**तत्वप्रदीपः – नच ब्रह्मणि जिज्ञासया किञ्चित् प्रयोजनं प्रेक्षामहे । नहि स्वयं प्रकाशमानस्य तस्य कदाचिदपि तिरोभावः ।**

ಬ್ರಹ್ಮನ ಜಿಜ್ಞಾಸೆಯಿಂದ ಯಾವುದೇ ಪ್ರಯೋಜನವೂ ಕೂಡ ನಮಗೆ ಕಾಣಿಸುತ್ತಿಲ್ಲ. ಸ್ವಯಂ ಪ್ರಕಾಶಸ್ವರೂಪನಾದ ಬ್ರಹ್ಮನು ಯಾವ ಕ್ಷಣದಲ್ಲಿಯೂ ತಿರೋಹಿತನಾಗಿರುವುದಿಲ್ಲ. ತಿರೋಹಿತನಾಗಿದ್ದಲ್ಲಿ ಅವನ ಜ್ಞಾನಕ್ಕಾಗಿ ಜಿಜ್ಞಾಸೆಯು ಉಪಪನ್ನವಾಗುತ್ತಿತ್ತು.

ಅಜ್ಞಾನವು ಸತ್ಯವಲ್ಲ

**तत्वप्रदीपः – नचाज्ञानात् स सम्भाव्यते । अज्ञानस्य सत्यत्वे श्रुत्युदिताद्वैतहानेः, निवृत्त्ययोगाच,**

ಅಜ್ಞಾನದ ಸಂಬಂಧದಿಂದ ಬ್ರಹ್ಮನಲ್ಲಿ ಸ್ವತಃ ಪ್ರಕಾಶಸ್ವರೂಪತ್ವವು ತಿರೋಹಿತವಾಗುತ್ತದೆ. ಆವಾಗ ಬ್ರಹ್ಮಜ್ಞಾನಕ್ಕೋಸ್ಕರ ಜಿಜ್ಞಾಸೆಯು ಕರ್ತವ್ಯವಾಗುತ್ತದಲ್ಲವೇ?

ಹೀಗೆ ಹೇಳಲಾಗದು. ಅಜ್ಞಾನವು ಸತ್ಯವೆಂದು ಒಪ್ಪಿದರೆ 'ಏಕಮೇವಾದ್ವಿತೀಯಂ' ಎಂಬ ಶ್ರುತಿಯಿಂದ ಹೇಳಲ್ಪಟ್ಟ ಅದ್ವೈತದ ಹಾನಿಯಾಗುತ್ತದೆ. ಮತ್ತು ಅಜ್ಞಾನದ ನಿವೃತ್ತಿಯೂ ಕೂಡ ಯುಕ್ತವಾಗುವುದಿಲ್ಲ.

ಅಜ್ಞಾನವೇ ಕೂಡುವುದಿಲ್ಲ

**तत्वप्रदीपः – भ्रममात्रादज्ञानसद्भावोऽभ्युपगन्तव्यः । न च स घटनामाटीकते । नहि शश्वत् विज्ञानरूपं ब्रह्म तत्वतो भ्रान्तं भवितुमर्हति । नच जीवस्य भ्रमादज्ञानसद्भावः सम्बोभवीति । ब्रह्मव्यतिरिक्तस्य जीवस्य तत्त्वतोऽभावात् ।**

ಅಜ್ಞಾನವನ್ನು ಬ್ರಹ್ಮನಲ್ಲಿ ಕಲ್ಪನೆ ಮಾಡುತ್ತಿದ್ದೀರಿ. ಈ ಅಜ್ಞಾನದ ಇರುವಿಕೆಯನ್ನು ಭ್ರಮೆಯಿಂದಷ್ಟೇ ಅಂಗೀಕರಿಸಬೇಕು. ಆದರೆ ಈ ಅಜ್ಞಾನವೇ ಕೂಡುವುದಿಲ್ಲ. ಏಕೆಂದರೆ ಜ್ಞಾನಸ್ವರೂಪನಾದ ಬ್ರಹ್ಮನು ತಾತ್ವಿಕವಾಗಿ ಭ್ರಾಂತನಾದನೆಂದು ಹೇಳಲು ಸಾಧ್ಯವಿಲ್ಲ. ಇನ್ನು ಜೀವನ ಭ್ರಮೆಯಿಂದ ಅಜ್ಞಾನದ ಇರುವಿಕೆಯನ್ನು ಸಹ ಕೂಡಿಸಲು ಸಾಧ್ಯವಿಲ್ಲ. ಏಕೆಂದರೆ ಬ್ರಹ್ಮನಿಗಿಂತ ಅತಿರಿಕ್ತನಾದ ಜೀವನು ಪಾರಮಾರ್ಥಿಕವಾಗಿ ಅಸ್ತಿತ್ವವನ್ನು ಹೊಂದಿರುವುದಿಲ್ಲ. ಹೀಗೆ ಬ್ರಹ್ಮನಿಗೆ ಮತ್ತು ಜೀವನಿಗೆ ಭ್ರಾಂತಿಯನ್ನು ಒಪ್ಪಲು ಸಾಧ್ಯವಿಲ್ಲದ ಕಾರಣ ಅಜ್ಞಾನವೇ ಕೂಡುವುದಿಲ್ಲ.

ಅನುಬಂಧಚತುಷ್ಟಯವಿಲ್ಲದ ಕಾರಣ ಶಾಸ್ತ್ರವು ಅನಾರಂಭಣೀಯ

**तत्वप्रदीपः – तस्मादेवमधिकारिविषयप्रयोजनाद्यनुपलम्भान्न सुघटत्व-बुद्ध्याऽऽरम्भणीयाऽसौ मीमांसेति ससंरम्भमुत्प्रेक्षितं पूर्वपक्षं प्रतिक्षिपति-अथातो ब्रह्मजिज्ञासेति ।**

ಹೀಗೆ ಅಧಿಕಾರಿ, ವಿಷಯ, ಪ್ರಯೋಜನ ಸಂಬಂಧಗಳು ಕೂಡುತ್ತಿಲ್ಲವಾದ್ದರಿಂದ ಸುಘಟತ್ವ ಬುದ್ಧಿಯಿಂದ ಬ್ರಹ್ಮಮೀಮಾಂಸಾಶಾಸ್ತ್ರವು ಆರಂಭ ಮಾಡಲು ಸಾಧ್ಯವಿಲ್ಲ. ಸಂಭ್ರಮದಿಂದ

ಸ್ವಯಂ ಉತ್ಪ್ರೇಕ್ಷಿತವಾದ ಪೂರ್ವಪಕ್ಷವನ್ನು ನಿರಾಕರಣೆ ಮಾಡಲು 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರವು ಹೊರಟಿದೆ.

### ಮೋಕ್ಷಕ್ಕಾಗಿ ಬ್ರಹ್ಮಜಿಜ್ಞಾಸೆ ಮಾಡಲೇ ಬೇಕು

**तत्वप्रदीपः – यत एवं सर्वस्याऽशीर्दुःखं नानुभूयासम्, सुखमाप्नवानीति। अतो ब्रह्मजिज्ञासा कर्तव्या । नहि तामन्तरेण तयोरत्यन्तपरिहारप्राप्ती स्याताम् । जिज्ञासासमनन्तरसमुद्भूतसम्यग्दर्शनसञ्जातप्रसादपरमपुरुषानुगृहीतो हि जीवः सकलपरिक्लेशप्रहाणेन प्रभूतानन्दानुभवोऽवतिष्ठते ।**

ಪ್ರತಿಯೊಬ್ಬ ಜೀವಿಗೂ ನನಗೆ ದುಃಖದ ಅನುಭವವಾಗಬಾರದು, ಸುಖವನ್ನೇ ಅನುಭವಿಸಬೇಕೆಂಬ ಅಪೇಕ್ಷೆಯಿರುತ್ತದೆ. ಅದಕ್ಕಾಗಿ ಬ್ರಹ್ಮನ ಜಿಜ್ಞಾಸೆಯನ್ನು ಆಚರಣೆ ಮಾಡಬೇಕು. ಬ್ರಹ್ಮಜಿಜ್ಞಾಸೆಯನ್ನು ಮಾಡದ ಹೊರತು ಸುಖದ ಪ್ರಾಪ್ತಿಯೂ, ದುಃಖದ ನಿವೃತ್ತಿಯೂ ಆಗಲು ಸಾಧ್ಯವಿಲ್ಲ. ಬ್ರಹ್ಮಜಿಜ್ಞಾಸೆಯಿಂದ ಅಪರೋಕ್ಷಜ್ಞಾನವಾಗುತ್ತದೆ. ಅಪರೋಕ್ಷಜ್ಞಾನದಿಂದ ಪ್ರಸಾದರೂಪವಾದ ಪರಮಪುರುಷನ ಅನುಗ್ರಹವು ಜೀವನಿಗಾಗುತ್ತದೆ. ಇದರಿಂದ ಸಕಲವಿಧವಾದ ಕಷ್ಟಗಳ ಸಂಕೋಲೆಗಳಿಂದ ಮುಕ್ತನಾಗಿ ಅನಂತವಾದ ಆನಂದವನ್ನು ಜೀವನು ಅನುಭವಿಸುತ್ತಾನೆ. ಇಂಥ ಮೋಕ್ಷಕ್ಕೋಸ್ಕರ ಬ್ರಹ್ಮಜಿಜ್ಞಾಸೆಯನ್ನು ಮಾಡಲೇಬೇಕು.

### ಜಿಜ್ಞಾಸೆಗೆ ಬ್ರಹ್ಮನೇ ವಿಷಯ

**तत्वप्रदीपः – न चाविषयत्वं ब्रह्मणः । 'सर्वे वेदा यत्पदमामनन्ति' 'वेदैश्च सर्वैरहमेव वेद्यः' इत्यादि श्रुतिस्मृतिभिर्विषयत्वावधारणात् ।**

ಬ್ರಹ್ಮನು ವಿಷಯನಾಗುವುದಿಲ್ಲ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ಸರ್ವೇ ವೇದಾ ಯತ್ಪದಮಾಮನಂತಿ' 'ವೇದೈಶ್ಚ ಸರ್ವೈರಹಮೇವ ವೇದ್ಯಃ' ಇವೇ ಮೊದಲಾದ ಶ್ರುತಿ-ಸ್ಮೃತಿಗಳಿಂದ ಬ್ರಹ್ಮನು ಜಿಜ್ಞಾಸೆಗೆ ವಿಷಯನಾಗುತ್ತಾನೆಂಬುದು ಈಗಾಗಲೇ ನಿರ್ಧಾರವಾಗಿದೆ.

ಬ್ರಹ್ಮನು ಏಕೆ ವಿಷಯನಾಗಲಾರ ?

**तत्वप्रदीपः – अपि चायमविषयत्वप्रतिपादनप्रयासः किं ब्रह्मणि स्यादाहोस्विन्नेति वक्तव्यम् ।**

ಮತ್ತು ಬ್ರಹ್ಮನು ವಿಷಯನಾಗುವುದಿಲ್ಲ ಎಂಬ ಪ್ರತಿಪಾದನೆಯ ಪ್ರಯಾಸವನ್ನು ನೀವು ಪಡುತ್ತಿರುವಿರಿ. ಈ ಪ್ರಯಾಸವನ್ನು ಬ್ರಹ್ಮನ ವಿಷಯದಲ್ಲಿ ಮಾಡುತ್ತಿದ್ದೀರೋ? ಅಥವಾ ಬೇರೆ ವಿಷಯದಲ್ಲಿ ಮಾಡುತ್ತಿದ್ದೀರೋ ? (ಬ್ರಹ್ಮನು ವಿಷಯನಲ್ಲ ಎಂಬ ಪ್ರತಿಪಾದನೆಯು ಬ್ರಹ್ಮನ ವಿಷಯದಲ್ಲೋ ? ಅಥವಾ ಬೇರೆ ವಿಷಯದಲ್ಲೋ ? ಎಂದಭಿಪ್ರಾಯ.)

ಅವಿಷಯತ್ವ ಪ್ರತಿಪಾದನೆಗೆ ಬ್ರಹ್ಮನೇ ವಿಷಯ

**तत्वप्रदीपः – यदि तावदाद्यं पक्षमुत्प्रेक्ष्येत, न तर्हि ब्रह्मणो विषयत्वं प्रत्याख्यातं स्यात् । प्रत्युतान्वाख्यातमेव स्यात् । अविषयत्वप्रतिपादन-प्रतिज्ञा च हीयेत । तद्विषयत्वाङ्गीकारात् ।**

ಒಂದು ವೇಳೆ ಮೊದಲನೆಯ ಪಕ್ಷವನ್ನು ಉತ್ಪ್ರೇಕ್ಷೆ ಮಾಡಿದರೆ ಬ್ರಹ್ಮನು ವಿಷಯನಲ್ಲ ಎಂಬ ಪ್ರತಿಪಾದನೆಗೆ ವಿಷಯನಾಗಿದ್ದಾನೆಂದು ಒಪ್ಪಿದಂತಾಯಿತು. ಈಗ ವಿಷಯನಲ್ಲ ಎಂಬ ಮಾತು ವ್ಯಾಹತವಾಯಿತು. ಏಕೆಂದರೆ ಅವಿಷಯತ್ವ ಪ್ರತಿಪಾದನೆಗೆ ವಿಷಯನಾಗಿದ್ದಾನೆ. ಆದ್ದರಿಂದ ಬ್ರಹ್ಮನಿಗೆ ವಿಷಯತ್ವವನ್ನು ಪ್ರತ್ಯಾಖ್ಯಾನ ಮಾಡಿದಂತೆ ಆಗಲಿಲ್ಲ. ಹೊರತು ಅನ್ವಾಖ್ಯಾನ ಮಾಡಿದಂತೆ ಆಯಿತು. ಮತ್ತು ಬ್ರಹ್ಮನು ಅವಿಷಯನಾಗಿದ್ದಾನೆಂಬ ಮೊದಲು ಮಾಡಿದ ಪ್ರತಿಜ್ಞೆಯು ಈಗ ಹಾನಿಯಾಯಿತು. ಏಕೆಂದರೆ ಅವಿಷಯತ್ವ ಪ್ರತಿಪಾದನೆಗೆ ಬ್ರಹ್ಮನು ವಿಷಯನಾಗಿದ್ದಾನೆಂದು ಒಪ್ಪಿರುತ್ತೀರಿ.

ವಿಷಯನಾದ ಬ್ರಹ್ಮನು ಅವಿಷಯನಾಗಲು ಹೇಗೆ ಸಾಧ್ಯ ?

**तत्वप्रदीपः – अथान्यतरं पक्षं मान्यं मन्येत, एवमपि सैव विषयता द्रढिमानमानीता । तदुपुपादकान् परुषान् प्रत्यपि तदप्रत्यादेशात् । प्रत्यादेशः क्रियमाणस्त्वविषयीकुर्वन् ब्रह्म न स्वोत्पत्तिमेव लभेत ।**

ಅವಿಷಯತ್ವ ಪ್ರತಿಪಾದನೆಗೆ ಬ್ರಹ್ಮನು ವಿಷಯನಲ್ಲ. ಬೇರೆ ಯಾರೋ ವಿಷಯ ಎಂಬ ಮತ್ತೊಂದು ಪಕ್ಷವನ್ನು ಒಪ್ಪಿದರೆ ಆವಾಗಲೂ ಬ್ರಹ್ಮನಿಗೆ ವಿಷಯತ್ವವು ದೃಢವಾಗಿಯೇ ಬಂದಂತಾಯಿತು. ಬ್ರಹ್ಮನು ಅವಿಷಯತ್ವ ಪ್ರತಿಪಾದನೆಗೆ ವಿಷಯನಲ್ಲ ಎಂದರೆ ಬ್ರಹ್ಮನು ವಿಷಯನೇ ಆಗುತ್ತಾನೆ. ಯಾವ ವ್ಯಕ್ತಿಯು ಬ್ರಹ್ಮನು ಅವಿಷಯತ್ವ ಪ್ರತಿಪಾದನೆಗೆ ವಿಷಯನಾಗಿದ್ದಾನೆಂದು ಹೇಳುತ್ತಾನೋ, ಆ ಪುರುಷನನ್ನು ನೀನು ಪ್ರತ್ಯಾದೇಶ (ನಿರಾಕರಣೆ) ಮಾಡಬೇಕು. ಅವಿಷಯತ್ವ ಪ್ರತಿಪಾದನೆಯು ಬ್ರಹ್ಮನ ವಿಷಯದಲ್ಲಿ ಅಲ್ಲ. ಬೇರೆ ವಿಷಯದಲ್ಲಿ ಎಂದರೆ ಆವಾಗ ಆ ಪುರುಷನನ್ನು ನಿರಾಕರಣೆ ಮಾಡಿದಂತೆ ಆಗಲಿಲ್ಲ. ನಿರಾಕರಣೆಗೆ ಯಾವುದಾದರು ಒಂದು ವಿಷಯ ಬೇಕು. ಯಾವುದೇ ವಿಷಯವಿಲ್ಲದೆ ನಿರಾಕರಣೆ ಮಾಡಲು ಸಾಧ್ಯವಿಲ್ಲ. ನಿರಾಕರಣೆ ಎಂಬ ಕ್ರಿಯೆಗೆ ಅನಿವಾರ್ಯವಾಗಿ ನೀವು ಬ್ರಹ್ಮನನ್ನೇ ವಿಷಯ ಎಂದು ಹೇಳಬೇಕು. ಹೀಗೆ ನಿರಾಕರಣೆ ಎಂಬ ಕ್ರಿಯೆಗೆ ಬ್ರಹ್ಮನು ವಿಷಯನಾದ ಮೇಲೆ ಪುನಃ ನಿರಾಕರಣೆ ಏಕೆ ಮಾಡಬೇಕು?

### ಜಾತಿ ಎಂಬ ನಿಧಿಯ ಮೇಲೆ ಸ್ವವ್ಯಾಹತಿ ಎಂಬ ಶಿರೋಮಣಿ ಪ್ರಕಾಶಿಸುತ್ತಿದೆ

**तत्वप्रदीपः – तथाच स्वव्याहतिर्व्याहता तस्य जातिजाताकरस्य शिरःशेखरीभूता भाति ।**

ಆದ್ದರಿಂದ ನಿರಂಕುಶವಾಗಿ ನಿನಗೆ ಸ್ವವ್ಯಾಹತಿದೋಷವು ಬರುತ್ತದೆ. ಈಗಾಗಲೇ ಜಾತಿ ಎಂಬ ನಿಗ್ರಹಸ್ಥಾನಕ್ಕೆ ನೀನು ನಿಧಿಯಾಗಿರುವಿ. ಇಂಥ ನಿನ್ನ ತಲೆಯ ಮೇಲೆ ಈಗ ಸ್ವವ್ಯಾಹತಿ ಎಂಬ ನಿಗ್ರಹಸ್ಥಾನವು ಶಿರೋಮಣಿಯಂತೆ ಕಂಗೊಳಿಸುತ್ತಿದೆ.

### ಅವಿಷಯತ್ವವನ್ನು ಹೇಳಿದರೂ ವಿಷಯತ್ವವನ್ನು ಬಿಡಲಾಗದು

**तत्वप्रदीपः – अथ सर्वथाऽपि विषयत्वनिषेधे सत्यविषयत्वमत्राऽपततीति मतम्, अविषयत्वधर्माङ्गीकारे विषयत्वस्य कोऽपराधः ?**

ಬ್ರಹ್ಮನಲ್ಲಿ ಯಾವುದೇ ವಿಷಯತ್ವವು ಇರುವುದಿಲ್ಲವೆಂದು ನಿರಾಕರಣೆ ಮಾಡುತ್ತೇವೆ. ಇದರಿಂದಲೇ ಅವಿಷಯತ್ವವು ಸಹಜವಾಗಿ ಬ್ರಹ್ಮನಲ್ಲಿ ಬರುತ್ತದಲ್ಲವೇ?

'ಅವಿಷಯತ್ವ' ಎಂಬ ಧರ್ಮವನ್ನು ಅಂಗೀಕಾರ ಮಾಡಿದ ಮೇಲೆ 'ವಿಷಯತ್ವ' ಎಂಬ ಧರ್ಮವು ಯಾವ ಅಪರಾಧ ಮಾಡಿದೆ ?

ಅವಿಷಯತ್ವವು ಬ್ರಹ್ಮನಲ್ಲಿ ಅಧ್ಯಸ್ತವಲ್ಲ

**तत्वप्रदीपः – नचाविषयत्वं चाध्यस्तमिति युक्तं वक्तुम् । भावाभावरूपयोर्विरुद्धधर्मयोर्द्वयोरेकस्यैवैकत्राध्यासासिद्धेः । न हि रजतत्वाध्यासाधिष्ठाने शुक्तिकादावरजतत्वाद्यध्यासोऽध्यवसीयते । अपरथानेदं रजतमित्युदीयमानं मानमप्यमानतामानीयेत ।**

ಮಾಯಾವಾದಿಗಳು - ಅವಿಷಯತ್ವವು ಬ್ರಹ್ಮನಲ್ಲಿ ಅಧ್ಯಸ್ತವಾಗಿದೆ ಎಂದು ಹೇಳುತ್ತೇವೆ ?

ತತ್ವವಾದಿಗಳು - ಅವಿಷಯತ್ವವು ಅಧ್ಯಸ್ತವೆಂದು ಹೇಳಿದರೆ ವಿಷಯತ್ವವು ಯಥಾರ್ಥವಾಯಿತು. ಏಕೆಂದರೆ ಭಾವಾಭಾವ ಎಂಬ ವಿರುದ್ಧಧರ್ಮಗಳಲ್ಲಿ ಒಂದನ್ನು ಮಾತ್ರ, ಅಧ್ಯಸ್ತ ಎನ್ನಬಹುದು. ಎರಡನ್ನೂ ಕೂಡ ಅಧ್ಯಸ್ತವೆಂದು ಹೇಳಲಾಗದು. ಅವಿಷಯತ್ವವನ್ನು ಅಧ್ಯಸ್ತವೆಂದು ಹೇಳಿದ ಮೇಲೆ, ವಿಷಯತ್ವವನ್ನು ಅಧ್ಯಸ್ತವೆಂದು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮನಲ್ಲಿ ವಿಷಯತ್ವವನ್ನು ಒಪ್ಪಿದಂತಾಯಿತು. ರಜತತ್ವದ ಅಧ್ಯಾಸಕ್ಕೆ ಶುಕ್ತಿಯು ಅಧಿಷ್ಠಾನವಾಗಿದೆ. ಇದೇ ಶುಕ್ತಿಯು ಪುನಃ ಅರಜತತ್ವದ ಅಧ್ಯಾಸಕ್ಕೂ ಅಧಿಷ್ಠಾನವಾಗಲು ಸಾಧ್ಯವಿಲ್ಲ. ಹಾಗೇನಾದರೂ ಶುಕ್ತಿಯು ರಜತತ್ವದ ಅಧಾಸ್ಯಕ್ಕೆ ಹಾಗೂ ಅರಜತತ್ವದ ಅಧ್ಯಾಸಕ್ಕೂ ಅಧಿಷ್ಠಾನವಾಗುವುದಾದರೆ, 'ಇದಂ ರಜತಮ್' ಎಂಬುದು ಹೇಗೆ ಅಪ್ರಮಾಣವೆಂದು ಬಾಧಕಾಲದಲ್ಲಿ ತಿಳಿಯುತ್ತದೋ, ಅದರಂತೆ 'ನೇದಂ ರಜತಮ್' ಎಂಬುದೂ ಕೂಡ ಅಪ್ರಮಾಣ ಎಂದಾಗಬೇಕಾದೀತು. ಏಕೆಂದರೆ 'ಇದಂ ರಜತಮ್' ಎಂಬ ಜ್ಞಾನದಲ್ಲಿ ತೋರಿರುವ ರಜತತ್ವವು ಅಧ್ಯಾಸವಾಗಿರುವ ಕಾರಣ, 'ಇದಂ ರಜತಮ್' ಎಂಬುದು ಅಪ್ರಮಾಣವಾಗಿದೆ. ಅದರಂತೆ 'ನೇದಂ ರಜತಮ್' ಎಂಬಲ್ಲಿ ಅರಜತತ್ವವು ಅಧ್ಯಸ್ತವಾದ್ದರಿಂದ ಇದೂ ಕೂಡ ಅಪ್ರಮಾಣವಾಗಬೇಕಾದೀತು.

ಬ್ರಹ್ಮನಲ್ಲಿ ಭಾವಧರ್ಮವನ್ನು ಒಪ್ಪದೇ ಗತಿಯಿಲ್ಲ

**तत्वप्रदीपः – न च वचनं सध्रीचीनम्भावधर्माणामेव विषयत्वादीनामभावं ब्रह्मणि ब्रूमो न पुनरभावरूपाणामविषयत्वादीनामपीति । अविषयत्वयोगस्य भावधर्मस्याभ्युपगमात् ।**

ಮಾಯವಾದಿಗಳು - ಭಾವರೂಪವಾದ ಧರ್ಮಗಳೆನಿಸಿರುವ ವಿಷಯತ್ವ ಮೊದಲಾದವನ್ನು ನಾವು ಬ್ರಹ್ಮನಲ್ಲಿ ಅಧ್ಯಸ್ತವೆಂದು ಹೇಳುತ್ತೇವೆ. ಹೊರತು, ಅಭಾವರೂಪವಾದ ಅವಿಷಯತ್ವ ಮೊದಲಾದ ಧರ್ಮಗಳನ್ನು ಅಧ್ಯಸ್ತವೆಂದು ಹೇಳುವುದಿಲ್ಲ. ಆದ್ದರಿಂದ ವಿಷಯತ್ವಾದಿ ಭಾವಪದಾರ್ಥಗಳಷ್ಟೇ ಬ್ರಹ್ಮನಲ್ಲಿ ಇರುವುದಿಲ್ಲ. ಅವಿಷಯತ್ವ ಮೊದಲಾದ ಅಭಾವರೂಪವಾದ ಧರ್ಮಗಳು ಬ್ರಹ್ಮನಲ್ಲಿ ಇರುತ್ತವೆ ?

ತತ್ವವಾದಿಗಳು - ವಿಷಯತ್ವ ಎಂಬ ಭಾವರೂಪವಾದ ಧರ್ಮವು ಬ್ರಹ್ಮನಲ್ಲಿ ನೀವು ಒಪ್ಪದಿರಬಹುದು. ಆದರೆ ಅವಿಷಯತ್ವದ ಸಂಬಂಧ ಎಂಬ ಭಾವರೂಪವಾದ ಧರ್ಮವನ್ನು ನೀವು ಒಪ್ಪಿದಂತಾಯಿತು.

ಅದ್ವೈತಮತ ನಿರಾಸದ ಬಗ್ಗೆ ಇನ್ನೂ ಹೆಚ್ಚು ತಿಳಿಯಿರಿ

**तत्वप्रदीपः – या पुनरविषयत्वयुक्तिरुक्ता साऽनुभवानुमानागमविरोधादमानम् । घटस्य विषयत्वे पटादिवदघटत्वप्रसङ्ग इतिवदित्यास्तामयमविषयत्वनिराकरणविस्तरः ।।**

ಮಾಯಾವಾದಿಗಳು - ಬ್ರಹ್ಮನು ಜಿಜ್ಞಾಸೆಗೆ ವಿಷಯನಾಗುವುದಾದರೆ, ಘಟದಂತೆ ಅಬ್ರಹ್ಮನಾಗುವ ಪ್ರಸಂಗ ಬರುತ್ತದಲ್ಲವೇ?

ತತ್ವವಾದಿಗಳು - ಪೂರ್ವಪಕ್ಷದಲ್ಲಿ ಮಾಡಿದ ಈ ಯುಕ್ತಿಗೆ ಅನುಭವವಿರೋಧ, ಅನುಮಾನವಿರೋಧ, ಆಗಮವಿರೋಧಗಳು ಬರುತ್ತವೆ. ಆದ್ದರಿಂದ ಈ ಯುಕ್ತಿಯು ಅಪ್ರಮಾಣವಾಗಿದೆ. ಮತ್ತು ಪಟವು ವಿಷಯವಾದ್ದರಿಂದ ಅಘಟವಾಗಿದೆ. ಅದರಂತೆ ಘಟವೂ ಕೂಡ ವಿಷಯವಾದ್ದರಿಂದ ಅಘಟವಾಗುವ ಪ್ರಸಂಗ ಬರುತ್ತದೆಂದು ಆಪಾದನೆ

ಮಾಡಬೇಕಾದೀತು. ಆದ್ದರಿಂದ ಬ್ರಹ್ಮನು ಜಿಜ್ಞಾಸೆಗೆ ಅವಿಷಯನಾಗಿದ್ದಾನೆಂಬ ಅದ್ವೈತಿಗಳ ಅಭಿಪ್ರಾಯವನ್ನು ನಿರಾಕರಣೆ ಮಾಡಿದ್ದಾಯಿತು. ಈ ನಿರಾಕರಣೆಯು ಕೇವಲ ದಿಕ್‌ಪ್ರದರ್ಶನವಾಗಿದೆ. ಇನ್ನು ಹೆಚ್ಚಿನ ನಿರಾಕರಣೆಯನ್ನು ಸ್ವತಃ ತಿಳಿದುಕೊಳ್ಳಬೇಕು.

## 'ಅದ್ವಿತೀಯ' ಎಂಬುದರ ಅರ್ಥ

**तत्वप्रदीपः – नच वाच्यमद्वितीयत्वाद् ब्रह्मणस्तद्व्यतिरिक्तस्याज्ञानादेः मिथ्यात्वमिति । प्रत्यक्षादिसिद्धवस्तुभेदस्यानपलपनीयत्वात् । नच सजातीयादिभेदराहित्यमद्वितीयत्वं; किन्तु समाधिकराहित्यमेव । तस्माद-ज्ञानसत्यत्वेऽप्यद्वैतहानिभयभरेण न मनः खेदनीयम् ।।**

ಮಾಯಾವಾದಿಗಳು - ಬ್ರಹ್ಮನು ಅದ್ವಿತೀಯನಾಗಿರುವುದರಿಂದ ಬ್ರಹ್ಮನಿಗಿಂತ ಭಿನ್ನವಾದ ಅಜ್ಞಾನಾದಿಗಳಿಗೆ ಮಿಥ್ಯಾತ್ವವನ್ನೇ ಹೇಳಬೇಕು.

ತತ್ವವಾದಿಗಳು - ಇದು ತಪ್ಪು. ಬ್ರಹ್ಮನಷ್ಟೇ ಸತ್ಯವೆನ್ನುವುದಾದರೆ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗಿರುವ ವಸ್ತುಗಳ ಪರಸ್ಪರಭೇದವನ್ನು ಅಪಲಾಪ ಮಾಡಬೇಕಾಗುತ್ತದೆ. ಆದರೆ ಪ್ರಮಾಣಸಮ್ಮತವಾದದ್ದನ್ನು ಅಪಲಾಪ ಮಾಡಬಾರದು.

ಮಾಯಾವಾದಿಗಳು - ಸಜಾತೀಯ - ವಿಜಾತೀಯ ಭೇದರಾಹಿತ್ಯವನ್ನು ಅದ್ವಿತೀಯತ್ವವೆಂದು ಹೇಳಬೇಕಲ್ಲವೇ?

ತತ್ವವಾದಿಗಳು - ಇದು ತಪ್ಪು. ತನಗೆ ಸರಿಸಮಾನನಾದ ಅಥವಾ ತನಗಿಂತಲೂ ಅಧಿಕನಾದ ಮತ್ತೊಬ್ಬ ವ್ಯಕ್ತಿಯು ಇರುವುದಿಲ್ಲ ಎಂಬುದು ಅದ್ವಿತೀಯ ಪದದ ಅಭಿಪ್ರಾಯ. ಶ್ರುತಿಯಲ್ಲಿ ಬ್ರಹ್ಮನನ್ನು ಅದ್ವಿತೀಯನೆಂದು ಹೇಳಿದ ಮಾತ್ರಕ್ಕೆ ಮತ್ತೊಂದು ಪದಾರ್ಥವೇ ಇಲ್ಲವೆನ್ನಬಾರದು. ಆದ್ದರಿಂದ ಅಜ್ಞಾನವು ಸತ್ಯವಾದರೂ ಕೂಡ ಅದ್ವಿತೀಯತ್ವಕ್ಕೆ ಭಂಗ ಬರುತ್ತದೆ ಎಂಬ ಹೆದರಿಕೆಯಿಂದ ಮನಸ್ಸಿಗೆ ಕಳವಳ ತಂದುಕೊಳ್ಳಬಾರದು. ಅಜ್ಞಾನ ಸತ್ಯತ್ವವನ್ನು ಒಪ್ಪಿಕೊಳ್ಳಬೇಕು.

ಮಿಥ್ಯಾ ಎಂದರೇನು ?

**तत्वप्रदीपः – यदप्यवादि – अज्ञानस्य सत्यत्वे निवृत्त्ययोगान्मिथ्यैवाज्ञानमिति, तदपि न घटनामश्नति । सत्यस्यैव निवृत्त्युपपत्तेः । मिथ्याभूतस्य नित्यनिवृत्तत्वान्न कादाचित्कनिवृत्तिः । नच मिथ्याशब्दस्यार्थान्तरमभिधीयेत। सदसद्विलक्षणवचनस्य स्वव्याहतत्वेनानुत्तरावसरदत्वात् ।**

ಮಾಯಾವಾದಿಗಳು - ಅಜ್ಞಾನವು ಸತ್ಯವೆನ್ನುವುದಾದರೆ ಅದರ ನಿವೃತ್ತಿಯೇ ಅನುಪಪನ್ನವಾಗುತ್ತದೆ. ಸತ್ಯಪದಾರ್ಥಕ್ಕೆ ನಿವೃತ್ತಿಯು ಅಯುಕ್ತವಾದ್ದರಿಂದ ಅಜ್ಞಾನವನ್ನು ಮಿಥ್ಯಾಭೂತವೆಂದೇ ಹೇಳಬೇಕು.

ತತ್ವವಾದಿಗಳು - ಈ ವಾದವೂ ಕೂಡ ಯುಕ್ತಿಯುಕ್ತವಾಗುವುದಿಲ್ಲ. ನಿವೃತ್ತಿಯಾಗಬೇಕಾದರೆ ಮಿಥ್ಯಾಭೂತವೇ ಆಗಿರಬೇಕು. ಮಿಥ್ಯಾಭೂತವಾದ ಪದಾರ್ಥವು ನಿತ್ಯವಾಗಿಯೂ ನಿವೃತ್ತವೇ ಆಗಿರುವುದರಿಂದ ಕೆಲವೊಮ್ಮೆ ನಿವೃತ್ತಿಯನ್ನು ಹೇಳಲಾಗದು.

ಮಾಯಾವಾದಿಗಳು - ಮಿಥ್ಯಾಶಬ್ದಕ್ಕೆ ಅಸತ್ಯವೆಂಬರ್ಥವು ನಮ್ಮ ಅಭಿಪ್ರಾಯವಲ್ಲ. ಅಸದ್ವಿಲಕ್ಷಣ ಎಂಬುದು ಮಿಥ್ಯಾಶಬ್ದದ ಅರ್ಥವಾಗಿದೆ.

ತತ್ವವಾದಿಗಳು - 'ಸದ್ವಿಲಕ್ಷಣ' ಎಂಬ ಪದಕ್ಕೆ 'ಅಸತ್' ಎಂದರ್ಥ. ಪುನಃ ಅಸದ್ವಿಲಕ್ಷಣವನ್ನೇ ಹೇಳಿದರೆ ಸ್ವವ್ಯಾಹತಿಯು ಬರುತ್ತದೆ. ಆದ್ದರಿಂದ ಮಿಥ್ಯಾಶಬ್ದದ ಅರ್ಥವನ್ನು ಬಾಯಿಯಿಂದ ಹೇಳಲಾಗದೆ ಮೌನ ವಹಿಸಬೇಕು.

ಮಾಯಾವಾದಿಯು ಭೇದವಿದ್ವೇಷದೋಷವಿಷದೂಷಿತ

**तत्वप्रदीपः – यच्चोक्तं – ब्रह्मव्यतिरिक्तस्य जीवस्यैवाभावाद् ब्रह्मैवाज्ञं भवेदिति, तदपि भेदविद्वेषदोषविषदूषितत्वात् प्रमुषितशेमुषीगुणोन्मेषैरभिलषितमिति मनीषिणो मन्यन्ते ।।**

ಮಾಯಾವಾದಿಗಳು - ಬ್ರಹ್ಮನಿಗಿಂತ ಭಿನ್ನನಾದ ಜೀವನೇ ಇರುವುದಿಲ್ಲ. ಆದ್ದರಿಂದ ಅಜ್ಞಾನವನ್ನು ಬ್ರಹ್ಮನಲ್ಲಿಯೇ ಹೇಳಬೇಕು.

ತತ್ವವಾದಿಗಳು - ಮಾಯಾವಾದಿಯ ಈ ಹೇಳಿಕೆ ಭೇದದ ಮೇಲಿನ ಅತಿಯಾದ ದ್ವೇಷವೆಂಬ ದೋಷದ ವಿಷದಿಂದ ದೂಷಿತವಾಗಿದೆ. ಆದ್ದರಿಂದ ಪ್ರಜ್ಞೆಯೆಂಬ ಗುಣದ ವಿಕಾಸದಿಂದ ದೂರ ಉಳಿಯಲ್ಪಟ್ಟ ಬಾಲಿಶರಿಂದ ಮಾತ್ರ ಬ್ರಹ್ಮನೇ ಅಜ್ಞಾನನಾಗುತ್ತಾನೆ ಎಂಬ ನಿನ್ನ ವಾದವನ್ನು ಸ್ವೀಕಾರ ಮಾಡಲು ಯೋಗ್ಯವಾಗಿದೆ; ಹೀಗೆ ಜ್ಞಾನಿಜನರು ತಿಳಿಯುತ್ತಾರೆ (ಪ್ರಮುಷಿತ = ದೂರವಾದ, ಶೇಮುಷಿ = ಪ್ರಜ್ಞಾ ಎಂಬ, ಗುಣ = ಗುಣವೆಂಬ, ಉನ್ಮೇಷೈಃ = ವಿಕಾಸದಿಂದ)

ಶ್ರುತಿಗಳಿಂದ ಭೇದದ ಘೋಷಣೆ

**तत्वप्रदीपः – 'नित्यो नित्यानां चेतनश्चेतनानामेको बहूनां यो विदधाति कामान्' 'द्वा सुपर्णा' इत्यादिश्रुतेर्जीवब्रह्मभेदावगमात् ।**

'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್' 'ದ್ವಾ ಸುಪರ್ಣಾ' ಇವೇ ಮೊದಲಾದ ಶ್ರುತಿಗಳು ಜೀವ ಹಾಗೂ ಬ್ರಹ್ಮರಿಗೆ ಭೇದವಿದೆಯೆಂದು ಸಾರುತ್ತಿವೆ.

ಅಭೇದ ನಿರಾಸಕ್ಕಾಗಿ 'ಅತತ್ತ್ವಮಸಿ' ಎಂಬ ಶ್ರುತಿ

**तत्वप्रदीपः – शकुनिसूत्रादिदृष्टान्तनवकेन 'अतत्त्वमस्यतत्त्वमसि' इति तत्तद्भ्रमापनोदेन नवकृत्वः सतात्पर्यं भेदोपदेशाच्च ।।**

ಮತ್ತು ಶಕುನಿಸೂತ್ರದ ಒಂಬತ್ತು ದೃಷ್ಟಾಂತಗಳಿಂದ 'ಅತತ್ತ್ವಮಸಿ ಅತತ್ತ್ವಮಸಿ' ಎಂಬುದಾಗಿ ಅನೇಕ ಬಾರಿ ಶ್ವೇತಕೇತುವಿನ ಭ್ರಮೆಯನ್ನು ಪರಿಹರಿಸುವ ಮೂಲಕ ಒಂಬತ್ತು ಬಾರಿ ಶ್ರುತಿಯ ತಾತ್ಪರ್ಯವನ್ನಾಗಿ, ಭೇದವನ್ನು ಉದ್ದಾಲಕರು ಉಪದೇಶ ಮಾಡಿದ್ದಾರೆ. ಇದರಿಂದ ಭೇದವು ಸಿದ್ಧವಾಗುತ್ತದೆ.

ಜೀವಬ್ರಹ್ಮೈಕ್ಯವು ಅಪ್ರಮಾಣ

**तत्वप्रदीपः – अथोच्येत - जीवो ब्रह्म भवितुमर्हति, चेतनत्वाद् ब्रह्मवदिति; तदनुभवादिविरोधात् कालात्ययापदिष्टम् । तस्मादस्ति ब्रह्मव्यतिरिक्तो जीवः ।**

ಅದ್ವೈತಿಗಳು ಐಕ್ಯವಿಷಯದಲ್ಲಿ ಅನುಮಾನವನ್ನು ಹೀಗೆ ಪ್ರಯೋಗಿಸಬಹುದು - 'ಜೀವಃ ಬ್ರಹ್ಮ ಭವಿತುಮರ್ಹತಿ, ಚೇತನತ್ವಾದ್ ಬ್ರಹ್ಮವತ್', ಬ್ರಹ್ಮನು ಚೇತನನಾಗಿದ್ದಾನೆ. ಮತ್ತು ಬ್ರಹ್ಮನಾಗಿದ್ದಾನೆ. ಅದರಂತೆ ಜೀವನೂ ಸಹ ಚೇತನನಾಗಿರುವುದರಿಂದ ಬ್ರಹ್ಮನಾಗಬೇಕು ಎಂದು. ಇಂತಹ ಅನೇಕ ಅನುಮಾನಗಳೆಲ್ಲವೂ ಅಪ್ರಮಾಣವಾಗಿವೆ. ಏಕೆಂದರೆ ಅನುಭವವಿರೋಧ, ಶ್ರುತಿವಿರೋಧ ಮೊದಲಾದ ದೋಷಗಳಿರುವುದರಿಂದ ಅನುಭವಬಾಧ, ಶ್ರುತಿಬಾಧ ಮೊದಲಾದ ಹೇತ್ವಾಭಾಸಗಳಿಂದ ದುಷ್ಟವಾಗಿವೆ. ಆದ್ದರಿಂದ ಬ್ರಹ್ಮನಿಗಿಂತ ಅತಿರಿಕ್ತವಾದ ಜೀವನು ಸತ್ಯನಾಗಿದ್ದಾನೆ ಎಂದು ಒಪ್ಪಿಕೊಳ್ಳಲೇ ಬೇಕು.

ಅಜ್ಞಾನಿಯಾದ ಜೀವನು ಬ್ರಹ್ಮಜಿಜ್ಞಾಸೆ ಮಾಡಲೇಬೇಕು

**तत्वप्रदीपः – तस्य चाज्ञानिनो जिज्ञासया विज्ञायमाने सर्वज्ञे हरावज्ञाननिवृत्तिः, परमसुखावाप्तिरिति सकलमनाकुलम् ।**

ಅಂತಹ ಜೀವನು ಅಜ್ಞಾನಿಯಾಗಿರುವುದರಿಂದ ಬ್ರಹ್ಮನ ಬಗ್ಗೆ ಜಿಜ್ಞಾಸೆ ಮಾಡಬೇಕು. ಅದರಿಂದ ಬ್ರಹ್ಮನ ಯಥಾರ್ಥವಾದ ಜ್ಞಾನವನ್ನು ಪಡೆಯುತ್ತಾನೆ. ಸರ್ವಜ್ಞನಾದ ಶ್ರೀಹರಿಯನ್ನು ತಿಳಿದಾಗ ಜೀವನಲ್ಲಿರುವ ಅಜ್ಞಾನವು ನಿವೃತ್ತವಾಗುತ್ತದೆ. ಪರಮಸುಖರೂಪವಾದ ಮೋಕ್ಷವು ದೊರೆಯುತ್ತದೆ. ಆದ್ದರಿಂದ ಜಿಜ್ಞಾಸಾಧಿಕರಣವು ಆರಂಭಣೀಯವಾಗಿದೆಯೆಂಬ ವಿಷಯದಲ್ಲಿ ಯಾವುದೇ ದೋಷಗಳಿಲ್ಲವೆಂದು ಸಿದ್ಧವಾಯಿತು.

ತತ್ವವಾದವನ್ನು ದೋಷಗಳು ಕಟಾಕ್ಷದಿಂದಲೂ ನೋಡಲಾರವು

**तत्वप्रदीपः – अतः कर्तव्या ब्रह्मजिज्ञासा । तदुपन्यस्तो विषयाद्यभावदोषस्तत्पक्ष एवाकर्तव्यतां विधत्ते । नास्मत्पक्षं कटाक्षेणापि वीक्षितुं क्षमते ।।**

ಆದ್ದರಿಂದ ಬ್ರಹ್ಮಜಿಜ್ಞಾಸವು ಕರ್ತವ್ಯವಾಯಿತು. ''ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕಾಗಿಲ್ಲ. ಏಕೆಂದರೆ ವಿಷಯಾದಿಗಳು ಇಲ್ಲದಿರುವುದರಿಂದ'' ಇತ್ಯಾದಿ ದೋಷಗಳೆಲ್ಲವೂ ಅದ್ವೈತಿಗಳ ಪಕ್ಷದಲ್ಲಿಯೇ ಅಕರ್ತವ್ಯತ್ವವನ್ನು ವಿಧಾನ ಮಾಡುತ್ತವೆ ಹೊರತು, ನಿರ್ದುಷ್ಟವಾದ ನಮ್ಮ ತತ್ವವಾದವನ್ನು ಕಟಾಕ್ಷದಿಂದಲೂ ನೋಡಲು ಅವುಗಳು ಸಮರ್ಥವಾಗಿರುವುದಿಲ್ಲ.

### ದೌರ್ಘಟ್ಯವು ಭೂಷಣವಲ್ಲ

**तत्वप्रदीपः – न च तस्य दुर्घटाऽपि जिज्ञासाऽऽरम्भणीया । अवास्तवत्वप्रसङ्गात् ।**

ಮಾಯಾವಾದಿಗಳು - ವಿಷಯ ಪ್ರಯೋಜನಾದಿಗಳು ಇಲ್ಲದಿದ್ದರೂ ಕೂಡ ಜಿಜ್ಞಾಸೆಯು ಆರಂಭಣೀಯವಾಗಿದೆ. ವಿಷಯಾದಿಗಳ ದೌರ್ಘಟ್ಯವು ನಮಗೆ ದೋಷವಲ್ಲ.

ತತ್ವವಾದಿಗಳು - ವಿಷಯಾದಿಗಳಿಲ್ಲದ ಜಿಜ್ಞಾಸೆಯು ಅವಾಸ್ತವ ತಾನೆ !

### ದೌರ್ಘಟ್ಯವೇ ಅದ್ವೈತಿಗಳಿಗೆ ದುರ್ಘಟವಾಗಿದೆ

**तत्वप्रदीपः – ननु हन्त ! इदमियन्तं कालं न जानीषे यदिह वयमिदमखिलमत एव दुर्घटत्वादविद्यामयं प्रतिपद्यामह इति । तत्र पृच्छामः । किमेषा भाषिता युक्तिः सुघटा, किंवा दुर्घटेति ।**

ಮಾಯಾವಾದಿಗಳು - ಅಯ್ಯೋ ! ಇಷ್ಟು ಕಾಲದ ತನಕ ನಿಮಗೆ ನಮ್ಮ ಅಭಿಪ್ರಾಯವೇ ಅರ್ಥವಾಗಿಲ್ಲವಲ್ಲ ! ಸಕಲ ವಾದಿಗಳ ಮಧ್ಯದಲ್ಲಿ ನಾವು ಸಕಲ ಜಗತ್ತು ದುರ್ಘಟವಾಗಿರುವುದರಿಂದಲೇ ಅಜ್ಞಾನಮಯ ಎಂದು ಹೇಳುತ್ತೇವೆ. ಇದು ನಿಮಗೆ ಗೊತ್ತಿಲ್ಲವೇ?

ತತ್ವವಾದಿಗಳು - ಇಲ್ಲಿ ಕೇಳು ! ನಿನಗೊಂದು ಪ್ರಶ್ನೆ - 'ಇದಮಖಿಲಂ ಅವಿದ್ಯಾಮಯಂ ದುರ್ಘಟತ್ವಾತ್' ಎಂಬ ಯುಕ್ತಿಯನ್ನು ಹೇಳುತ್ತಿರುವಿ. ಈ ಯುಕ್ತಿಯು ಸುಘಟವೋ, ಅಥವಾ ದುರ್ಘಟವೋ? ಇದಕ್ಕೆ ಮೊದಲು ಉತ್ತರಿಸು.

ಬ್ರಹ್ಮನಂತೆ ಯುಕ್ತಿಯೂ ಸತ್ಯವಾದೀತು

**तत्वप्रदीपः – न तावत् सुघटता जाघटीति; सत्यत्वप्रसङ्गादात्मवत् । सुघटस्यापि मिथ्यात्वोररीकारे, आत्मनोऽपि मिथ्यात्वमनिवारितमापतेत् ।**

ಯುಕ್ತಿಯು ಸುಘಟವೆಂದು ಹೇಳಲು ಸಾಧ್ಯವೇ ಇಲ್ಲ. ಸುಘಟನಾದ ಆತ್ಮನು ಹೇಗೆ ಸತ್ಯನಾಗಿದ್ದಾನೋ, ಅದರಂತೆ ನಿಮ್ಮ ಮತದಲ್ಲಿ ಮಿಥ್ಯಾಭೂತವಾದದ್ದೆಲ್ಲವು ದುರ್ಘಟವೇ ಆಗಿದೆ. ಪ್ರಕೃತ ಈ ಯುಕ್ತಿ ಸುಘಟ ಎಂದು ಒಪ್ಪುವುದಾದರೆ ಬ್ರಹ್ಮನಂತೆ ಸತ್ಯವಾದೀತು.

ಮಾಯಾವಾದಿಗಳು - ಯುಕ್ತಿಯು ಸುಘಟವೇ ಆಗಿದೆ. ಆದರೂ ಕೂಡ ಮಿಥ್ಯಾಭೂತ-ವಾಗಿದೆಯೆಂದು ಒಪ್ಪುತ್ತೇವೆ.

ತತ್ವವಾದಿಗಳು - ಹಾಗಾದರೆ ಆತ್ಮನೂ ಕೂಡ ಸುಘಟನಾದ್ದರಿಂದ ಯುಕ್ತಿಯಂತೆ ಮಿಥ್ಯಾಭೂತನಾಗುತ್ತಾನೆಂದು ಅನಿವಾರ್ಯವಾಗಿ ಒಪ್ಪಿಕೋ.

ದೌರ್ಘಟ್ಯವನ್ನು ಬಲಾತ್ಕಾರವಾಗಿ ಒಪ್ಪುವ ಪ್ರಯಾಸ ಬಿಡು

**तत्वप्रदीपः – भेदप्रपञ्चदौर्घट्यापादनायसाश्च व्यर्थः स्यात् । सौघट्येऽपि वैतथ्यसौलभ्यात्**

ಮತ್ತು ಭೇದಪ್ರಪಂಚಕ್ಕೆ ದೌರ್ಘಟ್ಯವನ್ನು ಆಪಾದನೆ ಮಾಡುವ ಪ್ರಯಾಸವೂ ಕೂಡ ವ್ಯರ್ಥ. ಸುಘಟವಾಗುವುದಾದರೂ ಮಿಥ್ಯಾಭೂತವಾಗುವುದಾದರೆ ಭೇದಪ್ರಪಂಚಕ್ಕೆ ದೌರ್ಘಟ್ಯವನ್ನು ಒಪ್ಪುವ ಪ್ರಯಾಸವನ್ನು ಏಕೆ ಹೊಂದುತ್ತಿರುವಿ ?

ನಾಚಿಕೆಯಿಲ್ಲದ ಅದ್ವೈತಿ ಸ್ವವ್ಯಾಘಾತ ಎಂಬ ಧ್ವಜ ಹಿಡಿದಿದ್ದಾನೆ

**तत्वप्रदीपः – अथोक्तदोषपरिजिहीर्षया मिथ्यात्वसाधने युक्तिर्दुघटेति मन्वीत, तर्हि न सा तत्साधयेत्; तत्साधने दुर्घटत्वात् । को नु खलु लोके घटनापरपर्यायां युक्तिं निजामपेतत्रपो दुर्घटां ब्रुवीत स्वव्याघात-ध्वजधरमेनमेकमृते ?**

ಮಾಯಾವಾದಿಗಳು - ಹಿಂದೆ ಹೇಳಿದ ದೋಷಗಳನ್ನು ಪರಿಹರಿಸಿಕೊಳ್ಳುವ ಅಪೇಕ್ಷೆಯಿಂದ ಮಿಥ್ಯಾತ್ವವನ್ನು ಸಾಧನೆ ಮಾಡಲು ಯುಕ್ತಿಗೆ ದೌರ್ಘಟ್ಯವನ್ನು ನಾವು ಒಪ್ಪಲೇ ಬೇಕು. ಆದ್ದರಿಂದ ಯುಕ್ತಿಯನ್ನು ಸುಘಟವೆಂದು ನಾವು ಹೇಳಲಾರೆವು.

ತತ್ವವಾದಿಗಳು - ಸರಿ.. ಸರಿ.. ಹಾಗಾದರೆ ದುರ್ಘಟವಾದ ಯುಕ್ತಿಯು ಮಿಥ್ಯಾತ್ವವನ್ನು ಸಾಧನೆ ಮಾಡಲು ಸಮರ್ಥವಾಗುವುದೇ ಇಲ್ಲ. ಏಕೆಂದರೆ ಮಿಥ್ಯಾತ್ವವನ್ನು ಸಾಧನೆ ಮಾಡಲು ಅದು ದುರ್ಘಟವೇ ಆಗಿದೆ. ಏಕೆಂದರೆ 'ಯುಕ್ತಿ' ಎಂಬ ಪದಕ್ಕೆ 'ಸುಘಟ' ಎಂದರ್ಥ. ಸುಘಟವಲ್ಲ ಆದರೂ ಯುಕ್ತಿ ಎಂದು ಹೇಳಿದರೆ ಸ್ವವ್ಯಾಘಾತ ಎಂಬ ದೋಷವು ಬರುತ್ತದೆ. ಸ್ವವ್ಯಾಘಾತ ಎಂಬ ಧ್ವಜಸ್ತಂಭವನ್ನು ಹಿಡಿದು ನಿಂತಿರುವ ನಾಚಿಕೆಯಿಲ್ಲದ ಮಾಯಾವಾದಿಯಾದ ನಿನ್ನೊಬ್ಬನನ್ನು ಬಿಟ್ಟು, ಲೋಕದಲ್ಲಿ ಯಾರೂ ತಾನೇ ಇಂಥ ಮಾತುಗಳನ್ನಾಡುತ್ತಾರೆ. ('ಅಪೇತತ್ರಪಃ' ನಾಚಿಕೆಯಿಲ್ಲದ, 'ಸ್ವವ್ಯಾಘಾತಧ್ವಜಧರಂ' ಸ್ವವ್ಯಾಘಾತ ಎಂಬ ಧ್ವಜವನ್ನು ಹಿಡಿದಿರುವ)

### ತತ್ವವಾದದಲ್ಲಿ ಮಾತ್ರ ಬ್ರಹ್ಮಜಿಜ್ಞಾಸೆ ಮಾತ್ರ

**तत्वप्रदीपः – उक्तन्यायेन मिथ्यात्वमपि जगतस्सुघटं चेन्न कल्पनीयम्। दुर्घटं चेत्तदा तस्य सत्यत्वमेव । तस्मादस्माकमेव जिज्ञासाऽऽरम्भणीयेति सिद्धम् ।।**

ಓ ಮಾಯಾವಾದಿ ! ಹಿಂದಿನ ನ್ಯಾಯದಂತೆ ಜಗತ್ತಿನಲ್ಲಿ ನೀನು ಒಪ್ಪಿದ ಮಿಥ್ಯಾತ್ವವೂ ಕೂಡ ಸುಘಟವೋ ?, ದುರ್ಘಟವೋ ? ಎಂಬ ಪ್ರಶ್ನೆಗೆ ಉತ್ತರಿಸು. 'ಸುಘಟ' ಎಂದು ಹೇಳಿದರೆ ಅದನ್ನು ಕಲ್ಪನೆ ಮಾಡಲು ಸಾಧ್ಯವೇ ಆಗುವುದಿಲ್ಲ. 'ದುರ್ಘಟ' ಎಂದು ಹೇಳಿದರೆ ಮಿಥ್ಯಾತ್ವವು ದುರ್ಘಟವಾದಾಗ ಜಗತ್ತು ಸತ್ಯವಾಗಿದಯೆಂದು ಒಪ್ಪಿದಂತಾಗುತ್ತದೆ. ಆದ್ದರಿಂದ ಬ್ರಹ್ಮಜಿಜ್ಞಾಸೆಯು ನಮ್ಮ ಸಿದ್ಧಾಂತದಲ್ಲಿ ಆರಂಭಣೀಯವಾಗಿದೆ. ನಿಮ್ಮ ಸಿದ್ಧಾಂತದಲ್ಲಿ ಅನಾರಂಭಣೀಯವಾಗಿದೆ ಎಂದು ಸಿದ್ಧವಾಯಿತು.

'ಜನ್ಮಾದ್ಯಸ್ಯ ಯತಃ' ಸೂತ್ರವ್ಯಾಖ್ಯಾನ

**तत्वप्रदीपः – इदमिदानीं चिन्त्यते - किं तद् ब्रह्म निर्गुणमुत सगुणमिति। भेदे चाभेदे च गुणगुणिभावस्यायुक्तत्वात्; भेदाभेदपक्षस्य स्वव्याहतत्वात्; 'केवलो निर्गुणश्च' इति श्रुतेश्च; निर्गुणमेव तदिति केचिदूचिरे ।**

ಜಿಜ್ಞಾಸಾಧಿಕರಣವು ಅದ್ವೈತಿಗಳ ಅಭಿಪ್ರಾಯವನ್ನು ನಿರಾಕರಣೆ ಮಾಡುತ್ತದೆಂದು ಸಮರ್ಥಿಸಿದ್ದಾಯಿತು. ಈಗ ಪ್ರಸಕ್ತವಾದದ್ದು, 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರ. ಇದೂ ಸಹ ಅದ್ವೈತಿಗಳ ಅಭಿಪ್ರಾಯವನ್ನು ನಿರಾಕರಣೆ ಮಾಡುತ್ತದೆ. ಅದ್ವೈತಿಗಳು ಹೀಗೆ ಹೇಳುತ್ತಾರೆ- ಬ್ರಹ್ಮನು ನಿರ್ಗುಣನೋ ? ಸಗುಣನೋ ? ಸಗುಣ ಎಂದು ಹೇಳಿದರೆ ಗುಣಗಳಿಗೆ ಬ್ರಹ್ಮನಿಂದ ಭೇದವಿದೆಯೋ? ಅಭೇದವಿದೆಯೋ? ಭೇದವಿರುವುದಾದರೆ ಗುಣಗುಣಿಭಾವವೇ ಯುಕ್ತವಾಗುವುದಿಲ್ಲ. ಮೇರು ಹಾಗೂ ಮಂದರಪರ್ವತಗಳಿಗೆ ಭೇದವಿದೆ. ಇವುಗಳಲ್ಲಿ ಪರಸ್ಪರ ಗುಣಗುಣಿಭಾವ ಪರಸ್ಪರ ಹೇಗೆ ಇರುವುದಿಲ್ಲವೋ? ಅದರಂತೆ ಬ್ರಹ್ಮನಿಗೂ, ಗುಣಗಳಿಗೂ ಭೇದವಿರುವುದರಿಂದ ಗುಣಗುಣಿಭಾವವು ಅನುಪಪನ್ನವಾಗುತ್ತದೆ. ಅಭೇದವಿದೆ ಎಂಬ ಎರಡನೆಯ ಪಕ್ಷವನ್ನು ಒಪ್ಪಿದರೆ ಗುಣವು ಗುಣಿಗಿಂತ ಅಭಿನ್ನವಾದ ಮೇಲೆ ಗುಣಗುಣಿಭಾವವನ್ನು ಹೇಳಲು ಹೇಗೆ ಸಾಧ್ಯ ? ತನಗೆ ತಾನು ಎಂದೂ ಸಹ ಗುಣವಾಗುವುದಿಲ್ಲವಷ್ಟೇ ? ಆದ್ದರಿಂದ ಗುಣಗಳು ಬ್ರಹ್ಮನಿಗಿಂತ ಭಿನ್ನವಾಗಿವೆ ಎಂದು, ಅಥವಾ ಅಭಿನ್ನವಾಗಿವೆ ಎಂದು ಹೇಳಲು ಸಾಧ್ಯವಿಲ್ಲ. ಇನ್ನು ಭಿನ್ನಾಭಿನ್ನವಾಗಿವೆ ಎಂದು ಹೇಳಬೇಕು. ಇದು ಸ್ವವ್ಯಾಹತವಾಗಿದೆ. ಏಕೆಂದರೆ ಗುಣವು ಬ್ರಹ್ಮನಲ್ಲಿ ಭಿನ್ನವಾಗಿದೆ ಎಂದು ಹೇಳಿದಾಗ, ಅಭಿನ್ನವಾಗಿಲ್ಲ ಎಂದರ್ಥ. ಪುನಃ ಅಭಿನ್ನವಾಗಿದೆ ಎಂದು ವಿಧಾನ ಮಾಡಿದರೆ ತನ್ನ ಮಾತಿಗೆ ವಿರುದ್ಧವಾಗಿ ನಡೆದುಕೊಂಡಂತೆ ಆಗುತ್ತದೆ. ಆದ್ದರಿಂದ 'ಕೇವಲೋ ನಿರ್ಗುಣಶ್ಚ' ಎಂಬ ಶ್ರುತಿಪ್ರಮಾಣದಂತೆ ಬ್ರಹ್ಮನು ನಿರ್ಗುಣನಾಗಿದ್ದಾನೆಂದೇ ಒಪ್ಪಬೇಕು. ಇಷ್ಟು ಮಾಯಾವಾದಿಗಳ ಅಭಿಪ್ರಾಯ.

ಮಾಯಾವಾದಿಗಳ ನಿರಾಕರಣೆಗಾಗಿ ಎರಡನೆಯ ಸೂತ್ರ

**तत्वप्रदीपः – तत्र सूत्रमवतारयति - जन्माद्यस्य यत इति । यतोऽस्य जगतो जन्मस्थितिनाशनियमनादयः तत्स्रष्टृपातृसंहर्तृनियन्तृत्वादिगुणगण-लक्षितं ब्रह्म जिज्ञास्यमिति ।**

ಮಾಯಾವಾದಿಗಳ ಈ ಆಕ್ಷೇಪದ ನಿರಾಕರಣೆಗಾಗಿಯೇ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರವು ಹೊರಟಿದೆ. ಯಾವ ವ್ಯಕ್ತಿಯ ದೆಸೆಯಿಂದ ಜಗತ್ತಿನ ಜನ್ಮ, ಸ್ಥಿತಿ, ನಾಶ, ನಿಯಮನಗಳು ನಡೆಯುತ್ತಿವೆಯೋ, ಆ ಕಾರಣದಿಂದ ಬ್ರಹ್ಮನು ಸಗುಣನೆಂದು ಒಪ್ಪಬೇಕಾಗುತ್ತದೆ. ಪರಮಾತ್ಮನು ಜಗತ್ತಿಗೆ ಜನ್ಮವನ್ನು ನೀಡುವುದರಿಂದ 'ಸ್ರಷ್ಟೃತ್ವ' ಎಂಬ ಗುಣವು, ಪಾಲನೆ ಮಾಡುವುದರಿಂದ 'ಪಾತೃತ್ವ' ಎಂಬ ಗುಣವು, ನಾಶ ಮಾಡುವುದರಿಂದ 'ಸಂಹರ್ತೃತ್ವ' ಎಂಬ ಗುಣವು, ನಿಯಮನ ಮಾಡುವುದರಿಂದ 'ನಿಯಂತೃತ್ವ' ಎಂಬ ಗುಣವು ಬ್ರಹ್ಮನಲ್ಲಿ ಉಪಪನ್ನವಾಗುತ್ತದೆ. ಇವೇ ಮೊದಲಾದ ಗುಣಗಳೇ ಲಕ್ಷಣವಾಗಿವುಳ್ಳ ಬ್ರಹ್ಮನು ಜಿಜ್ಞಾಸೆಗೆ ವಿಷಯನಾಗಿದ್ದಾನೆ.

### ವಿಶೇಷ ಬಲದಿಂದ ಗುಣಗುಣಿಭಾವವು ಸುಲಭ

**तत्वप्रदीपः – ''यतो वा इमानि भूतानि जायन्ते'' ''यो नः पिता जनिता यो विधाता' इत्यादिश्रुतेः ।**

ಬ್ರಹ್ಮನು ಜಗಜ್ಜನ್ಮಾದಿಕಾರಣನಾಗಿದ್ದಾನೆಂಬ ವಿಷಯದಲ್ಲಿ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' 'ಯೋ ನಃ ಪಿತಾ ಜನಿತಾ ಯೋ ವಿಧಾತಾ' ಇವೇ ಮೊದಲಾದ ಶ್ರುತಿಗಳು ಪ್ರಮಾಣವಾಗಿವೆ. ಒಬ್ಬನೇ ವ್ಯಕ್ತಿಯಲ್ಲಿ ಗುಣಗುಣಿಭಾವವು ಹೇಗೆ ಕೂಡುತ್ತವೆಂಬುದು ಅದ್ವೈತಿಗಳ ಮುಖ್ಯಪ್ರಶ್ನೆ. ಆದರೆ ವಿಶೇಷ ಎಂಬ ಪದಾರ್ಥವನ್ನು ನಾವು ಒಪ್ಪಿರುವುದರಿಂದ ಗುಣಗುಣಿಭಾವವನ್ನು ಸುಲಭವಾಗಿ ಕೂಡಿಸಬಹುದು.

### ಸ್ವರೂಪ ಹಾಗೂ ಸ್ವರೂಪಿಗೆ ಅಭೇದವು ಸರ್ವಸಿದ್ಧ

**तत्वप्रदीपः – गुणगुणिभावस्त्वेकत्रैव ब्रह्मणि विशेषाद्युज्यते । भेदभेदि-भाववत् स्वरूपस्वरूपिभाववच्च ।**

ಒಬ್ಬನೇ ಬ್ರಹ್ಮನಲ್ಲಿ ಗುಣಗುಣಿಭಾವವು ವಿಶೇಷಬಲದಿಂದ ಯುಕ್ತವಾಗುತ್ತದೆ. ಉದಾ :- ಪಟಭೇದವು ಘಟದಲ್ಲಿದೆ. ಪಟಭೇದಕ್ಕೆ ಘಟವು ಭೇದಿಯಾಗಿದೆ. ಪಟಭೇದವು ಭೇದಿಯಾದ ಘಟಸ್ವರೂಪವೇ ಆಗಿದ್ದರೂ ವಿಶೇಷಬಲದಿಂದ ಭೇದಭೇದಿಭಾವವು ಯುಕ್ತವಾಗುವುದು

ಸಿದ್ಧವಾಗಿದೆ. ಮತ್ತು ಘಟಸ್ವರೂಪವು 'ಘಟ' ಎಂಬ ಸ್ವರೂಪಿಗಿಂತ ಅಭಿನ್ನವೇ ಆಗಿದ್ದರೂ ಸ್ವರೂಪಸ್ವರೂಪಿಭಾವವು ವಿಶೇಷಬಲದಿಂದ ಯುಕ್ತವಾಗುವುದು ಕಂಡಿದೆ. ಈ ದೃಷ್ಟಾಂತದಂತೆ ಗುಣಗುಣಿಭಾವವನ್ನು ವಿಶೇಷ ಬಲದಿಂದ ಕೂಡಿಸಬೇಕು.

### ಬ್ರಹ್ಮನು ನಿರ್ವಿಶೇಷನಲ್ಲ

**तत्वप्रदीपः – नच ब्रह्मणो निर्विशेषत्वं वाच्यम् । अखण्डवाक्यार्थखण्डनप्रसङ्गात् । सविशेषत्व एव हि सत्यज्ञानादिपदानामपुनरुक्त्या ब्रह्मणि प्रवृत्तिः सम्भवति, अपरथा ब्रह्मपदेनैव स्वरूपसिद्धेः, पदान्तराणां वैयर्थ्यं प्रसज्येत ।**

ವಿಶೇಷಬಲದಿಂದ ಬ್ರಹ್ಮನ ವಿಷಯದಲ್ಲಿ ವಿರೋಧವನ್ನು ಪರಿಹರಿಸಲು ಸಾಧ್ಯವಿಲ್ಲ. ಏಕೆಂದರೆ ಬ್ರಹ್ಮನು ನಿರ್ವಿಶೇಷನಾಗಿದ್ದಾನಲ್ಲವೇ?

ಹೀಗೆ ಆಶಂಕಿಸಬಾರದು. ಒಂದು ವೇಳೆ ಅದ್ವೈತಿಗಳು ಬ್ರಹ್ಮನನ್ನು ಸವಿಶೇಷನೆಂದು ಒಪ್ಪದಿದ್ದರೆ, ಅದ್ವೈತಿಗಳ ಮುಖ್ಯ ಉದ್ದೇಶವಾಗಿರುವ ಅಖಂಡವಾಕ್ಯಾರ್ಥವೇ ನಾಶವಾಗುವ ಪ್ರಸಂಗ ಬರುತ್ತದೆ. ಅದು ಹೀಗೆ - ಬ್ರಹ್ಮನು ಸವಿಶೇಷನಾದಾಗ ಮಾತ್ರ 'ಸತ್ಯಂ ಜ್ಞಾನಮನಂತಮ್ ಬ್ರಹ್ಮ' ಎಂಬ ಶ್ರುತಿಯಲ್ಲಿರುವ ಸತ್ಯ, ಜ್ಞಾನ ಮೊದಲಾದ ಪದಗಳಿಗೆ ಪುನರುಕ್ತಿ ಬರುವುದಿಲ್ಲವೆಂದು ಬ್ರಹ್ಮನಲ್ಲಿ ಸಮನ್ವಯ ಮಾಡಬಹುದು. ಸವಿಶೇಷತ್ವವನ್ನು ಒಪ್ಪದಿದ್ದರೆ 'ಬ್ರಹ್ಮ' ಎಂಬ ಪದದಿಂದಲೇ ಬ್ರಹ್ಮನ ಸ್ವರೂಪವು ಸಿದ್ಧವಾಗುವಾಗ ಸತ್ಯ, ಜ್ಞಾನ ಉಳಿದ ಪದಗಳು ವ್ಯರ್ಥವಾಗುತ್ತವೆ.

### ವಿಶೇಷ ಒಪ್ಪದಿದ್ದರೆ ಪುನರುಕ್ತಿ

**तत्वप्रदीपः – सत्यादिशब्दाः पर्यायाश्च स्युः, निर्विशेषैकार्थवृत्तित्वात् । निर्विशेषं ब्रह्मेति वचनादेव सविशेषत्वं प्राप्तं; निर्विशेषत्वविशेषाभ्युपगमात्।**

ಮತ್ತು ಎಲ್ಲಾ ಪದಗಳೂ 'ನಿರ್ವಿಶೇಷನಾದ ಬ್ರಹ್ಮ' ಎಂಬ ಒಂದೇ ಪದಾರ್ಥವನ್ನು ಪ್ರತಿಪಾದನೆ ಮಾಡುತ್ತಿರುವುದರಿಂದ, ಪರ್ಯಾಯ ಶಬ್ದಗಳೆಂದಾಗಬೇಕಾದೀತು. ಮತ್ತು 'ನಿರ್ವಿಶೇಷಂ ಬ್ರಹ್ಮ' ಎಂದು ಮಾಯಾವಾದಿಗಳು ಹೇಳುತ್ತಾರೆ. ಈ ಮಾತಿನಿಂದಲೇ ಬ್ರಹ್ಮನಿಗೆ

ಸವಿಶೇಷತ್ವವು ಪ್ರಾಪ್ತವಾಯಿತು. ಏಕೆಂದರೆ 'ನಿರ್ವಿಶೇಷತ್ವ' ಎಂಬ ವಿಶೇಷವನ್ನು ಒಪ್ಪಿರುವುದರಿಂದ.

ನಿರ್ವಿಶೇಷತ್ವವು ಬ್ರಹ್ಮಸ್ವರೂಪವಲ್ಲ

**तत्वप्रदीपः – न च वाच्यं निर्विशेषत्वं नाम ब्रह्मस्वरूपमेव केवलं, न विशेष इति । तथा सति, ब्रह्मशब्दावृत्तिवन्निर्विशेषं ब्रह्मेति पर्यायोक्तिः स्यात्। नच तथा प्रसिद्धिः ।**

'ನಿರ್ವಿಶೇಷತ್ವ' ಎಂಬ ಶಬ್ದಕ್ಕೆ ಕೇವಲ ಬ್ರಹ್ಮಸ್ವರೂಪ ಎಂದೇ ಅರ್ಥ. ಆದ್ದರಿಂದ 'ನಿರ್ವಿಶೇಷಂ ಬ್ರಹ್ಮ' ಎಂಬ ಮಾತಿನಿಂದ ವಿಶೇಷವನ್ನು ಒಪ್ಪಿದಂತೆ ಆಗುವುದಿಲ್ಲ ?

ಅದ್ವೈತಿಗಳ ಈ ಸಮರ್ಥನೆಯೂ ಕೂಡ ಅಸಾಧುವಾಗಿದೆ. ಹಾಗಾದಲ್ಲಿ ಬ್ರಹ್ಮಶಬ್ದವನ್ನೇ ಎರಡು ಬಾರಿ ಉಚ್ಚರಿಸಿದಂತೆ ಆಗುತ್ತದೆ. 'ನಿರ್ವಿಶೇಷಂ ಬ್ರಹ್ಮ' ಎಂದು ಹೇಳಿದರೆ ಪರ್ಯಾಯಶಬ್ದಗಳಾಗುತ್ತವೆಂಬ ದೋಷವು ತಪ್ಪಿದ್ದಲ್ಲ. 'ಬ್ರಹ್ಮ' ಎಂಬ ಶಬ್ದಕ್ಕೆ ನಿರ್ವಿಶೇಷ ಎಂಬ ಅರ್ಥ ಪ್ರಸಿದ್ಧವೂ ಕೂಡ ಆಗಿರುವುದಿಲ್ಲ. ಬ್ರಹ್ಮ ಎಂದರೆ ನಿರ್ವಿಶೇಷ ಅಲ್ಲದವನು ಎಂದರ್ಥ. ಪುನಃ ಅದಕ್ಕೆ ವಿರುದ್ಧವಾಗಿ ನಿರ್ವಿಶೇಷ ಎಂದು ಹೇಳಿದರೆ ಅದ್ವೈತಿಗಳ ಈ ಮಾತೂ ಕೂಡ ಸ್ವವ್ಯಾಹತವಾಗುತ್ತದೆ.

ಓ ಅದ್ವೈತಿ ! 'ಜಾತಿ' ಎಂಬ ದೋಷವನ್ನು ತೊಡೆಯ ಮೇಲಿಟ್ಟು ಮುದ್ದಿಸಬೇಡ

**तत्वप्रदीपः – तस्माद् ''अहं मौनि'' इतिवादिवदयमहो मोहान्मुहुर्मुहरपि तामेव जातिं निर्विशङ्कमङ्कमारोहयति, यामिह तज्जन्मलक्षणस्थितिविशेषज्ञा दोषज्ञा दोषशरीरां दूरादेव परिहरन्ति । तस्मादुक्तयुक्तिबलेन सविशेषत्वाद् ब्रह्मणो गुणवत्त्ववाद एव गुणवान् ।**

ಆದ್ದರಿಂದ 'ಅಹಂ ಮೌನಿ' ಎಂದು ಹೇಳುವ ಮೂರ್ಖನಂತೆ ಅದ್ವೈತಿಯ ಮಾತು ಸ್ವವಾಹ್ಯತಿಗೆ ಜ್ವಲಂತ ದೃಷ್ಟಾಂತವಾಗಿದೆ. ಇದಕ್ಕಿಂತ ಆಶ್ಚರ್ಯವಿಷಯ ಜಗತ್ತಿನಲ್ಲಿ ಬೇರೆ

ಯಾವುದಿದೆ ! ಯಾವ 'ಜಾತಿ'ಯೆಂಬ ನಿಗ್ರಹಸ್ಥಾನವನ್ನು ಆ ದೋಷದ ಹುಟ್ಟಿನ ಬಗ್ಗೆ ಮತ್ತು ಲಕ್ಷಣದ ಬಗ್ಗೆ, ಅದರ ಇರುವಿಕೆಯ ಬಗ್ಗೆ ವಿಶೇಷವಾದ ಪರಿಜ್ಞಾನವನ್ನು ಹೊಂದಿದ ದೋಷಜ್ಞರು ದೋಷವೇ ಶರೀರವಾಗಿವುಳ್ಳ ಜಾತಿಯನ್ನು ದೂರದಿಂದಲೇ ಪರಿಹರಿಸಿಕೊಳ್ಳಲು ಬಯಸುತ್ತಾರೋ, ಅಂಥ ಜಾತಿಯನ್ನು ಅದ್ವೈತಿಯು ಮೋಹದ ಬಲೆಯಲ್ಲಿ ಸಿಲುಕಿ ಸ್ವಲ್ಪವೂ ಯೋಚನೆ ಮಾಡದೇ ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುತ್ತಿದ್ದಾನೆ.

ಆದ್ದರಿಂದ ಹಿಂದೆ ಹೇಳಿದ ಅನೇಕ ಯುಕ್ತಿಗಳ ಆಧಾರದಿಂದ ವಿಶೇಷ ಎಂಬ ಧರ್ಮದಿಂದ ಕೂಡಿರುವ ಬ್ರಹ್ಮನು ಸಕಲಗುಣಪರಿಪೂರ್ಣನಾಗಿದ್ದಾನೆಂಬ ನಮ್ಮ ವಾದವೇ ಗುಣವುಳ್ಳದ್ದು. ಮಾಯಾವಾದಿಯ ವಾದ ಗುಣವಿಲ್ಲದ್ದು.

ತತ್ವವಾದಿಗಳ ಪ್ರಕಾರ ಎರಡನೆಯ ಸೂತ್ರಾರ್ಥ ನಿರ್ದುಷ್ಟವಾಯಿತು

**तत्वप्रदीपः – या चोपन्यस्ता निर्गुणत्वे श्रुतिः, सा प्राकृतगुणविरहार्था। तस्मात् प्रथमसूत्रे जिज्ञास्यत्वेन प्रतिज्ञातं ब्रह्म स्रष्टृत्वादिगुणगणलक्षितमनेन सूत्रेणेत्यनवद्यम् ॥**

ಬ್ರಹ್ಮನು ನಿರ್ಗುಣನಾಗಿದ್ದಾನೆಂಬ ವಿಷಯದಲ್ಲಿ ಮಾಯವಾದಿಗಳು ಯಾವ ಶ್ರುತಿಯನ್ನು ಆಧಾರವನ್ನಾಗಿ ನೀಡಿದರೋ, ಆ ಶ್ರುತಿಗೆ ಪ್ರಾಕೃತವಾದ ಗುಣಗಳಿಲ್ಲದವನು ಎಂಬರ್ಥವನ್ನು ವಿವಕ್ಷಿಸಬೇಕು. ಆದ್ದರಿಂದ ಪ್ರಥಮಸೂತ್ರದಲ್ಲಿ ಜಿಜ್ಞಾಸ್ಯತ್ವೇನ ಪ್ರತಿಜ್ಞೆ ಮಾಡಲ್ಪಟ್ಟ ಬ್ರಹ್ಮನಲ್ಲಿ ಸ್ರಷ್ಟೃತ್ವಾದಿಗುಣಗಳ ಸ್ವರೂಪವು ಬ್ರಹ್ಮನ ಲಕ್ಷಣವಾಗಿದೆ ಎಂಬುದನ್ನು 'ಜನ್ಮಾದ್ಯಸ್ಯ ಯತಃ' ಎಂಬ ಎರಡನೆಯ ಸೂತ್ರವು ಸಮರ್ಥನೆ ಮಾಡಿತು. ತತ್ವವಾದಿಗಳು ಸಮರ್ಥಿಸಿದ ಎರಡನೆಯ ಸೂತ್ರ ವ್ಯಾಖ್ಯಾನವು ಸಕಲದೋಷಗಳಿಂದ ರಹಿತವಾದದ್ದೆಂದು ನಿರ್ಣಯವಾಯಿತು.

'ಶಾಸ್ತ್ರಯೋನಿತ್ವಾತ್' ಸೂತ್ರವ್ಯಾಖ್ಯಾನ

**तत्वप्रदीपः – जगत्कारणं ब्रह्म विषयः । तत्किं तत्त्वमुतातत्त्वमिति संशय्यते । ''न तस्य कार्यं करणं च विद्यते'' ''निष्कलं निष्क्रियं शान्तम्'' ''अप्राणो ह्यमनाः शुभ्रः'' इत्यादिश्रुतेर्न तत्वस्य कार्यकरणबुद्धिः ।**

**कर्तृत्वाद्यभावात् । कारणस्य च तदपेक्षणान्न जगत्कारणं तत्त्वमिति पूर्वपक्षे प्राप्ते प्रतिविधीयते शास्त्रयोनित्वादिति ।**

ಮೂರನೆಯ ಸೂತ್ರದಲ್ಲಿ ಜಗತ್ಕಾರಣನಾದ ಬ್ರಹ್ಮನು ವಿಷಯನಾಗಿದ್ದಾನೆ. ಜಗತ್ಕಾರಣನಾದ ಬ್ರಹ್ಮನು ಯಥಾರ್ಥವೋ? ಅಥವಾ ಅಯಥಾರ್ಥವೋ ? ಎಂಬುದು ಸಂಶಯ. ಅಯಥಾರ್ಥವೆಂದು ಪೂರ್ವಪಕ್ಷ. ಅದು ಹೀಗೆ - 'ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ' 'ಯಥಾರ್ಥನಾದ ಬ್ರಹ್ಮನು ಕಾರ್ಯ ಅಥವಾ ಕಾರಣನಾಗಲಾರ'. 'ನಿಷ್ಕಲಂ ನಿಷ್ಕ್ರಿಯಂ ಶಾಂತಮ್' 'ಬ್ರಹ್ಮನು ನಿಷ್ಕಲನು, ಕ್ರಿಯೆಯಿಲ್ಲದವನು, ಶಾಂತಸ್ವರೂಪನು'. 'ಅಪ್ರಾಣೋ ಹ್ಯಮನಾಃ ಶುಭ್ರಃ' 'ಪ್ರಾಣ, ಮನಸ್ಸು ಮೊದಲಾದವುಗಳಿಲ್ಲದ ಶುಭ್ರನಾದವನು ಬ್ರಹ್ಮ'. ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಯಥಾರ್ಥನಾದ ಬ್ರಹ್ಮನಲ್ಲಿ ಕಾರ್ಯತ್ವವಾಗಲೀ, ಕಾರಣತ್ವವಾಗಲೀ ಇಲ್ಲವೆಂದು ತಿಳಿಯಬೇಕು. ಯಾವುದು ತತ್ವವೋ, ಅದಕ್ಕೆ 'ಇದು ಕಾರ್ಯ, ಇದು ಕಾರಣ' ಎಂಬ ತಿಳುವಳಿಕೆ ಇರುವುದಿಲ್ಲ. ಏಕೆಂದರೆ ಕರ್ತೃತ್ವಾದಿಗಳೇ ಇಲ್ಲದ ಕಾರಣ. ಕಾರಣವಾದದ್ದಕ್ಕೆ ಎಲ್ಲದರ ಅಪೇಕ್ಷೆ ಇರುತ್ತದೆ. ನೀವು ಬ್ರಹ್ಮನನ್ನು ಕಾರಣ ಎಂದು ಹೇಳುತ್ತಿದ್ದೀರಿ. ಅಂಥ ಜಗತ್ಕಾರಣನಾದ ಶಬಲ ಬ್ರಹ್ಮನು ಯಥಾರ್ಥವಾಗಲು ಸಾಧ್ಯವಿಲ್ಲ. ಇಷ್ಟು ಮಾಯಾವಾದಿಗಳ ಪೂರ್ವಪಕ್ಷ. ಇದನ್ನು ನಿರಾಕರಣೆ ಮಾಡುವುದಕ್ಕಾಗಿ 'ಶಾಸ್ತ್ರಯೋನಿತ್ವಾತ್' ಎಂಬ ಮೂರನೆಯ ಸೂತ್ರ ಹೊರಟಿದೆ.

ಮಾಯಾವಾದ ಮತ ನಿರಾಸಕ್ಕಾಗಿ ಮೂರನೆಯ ಸೂತ್ರ

**तत्वप्रदीपः – जगत्कारणं ब्रह्म तत्वमेव । ''सत्यं ज्ञानमनन्तं ब्रह्म'' ''तस्माद्वा एतस्मादात्मन आकाशः सम्भूतः'' ''स कारणं कारणाधिपाधिपः'' ''यदा पश्यः पश्यते रुग्मवर्णं कर्तारं'' ''स इमाँल्लोकानसृजत'' ''एतस्मात् जायते प्राणो मनः सर्वेन्द्रियाणि च ; खं वायुः'' इत्यादिशास्त्रगम्यत्वात्तस्य । न खलु शास्त्रगम्यमतत्वं वक्तुं पार्यते ।**

ಜಗತ್ಕಾರಣನಾದ ಬ್ರಹ್ಮನು ಯಥಾರ್ಥವೇ ಆಗಿದ್ದಾನೆ. ಈ ವಿಷಯದಲ್ಲಿ ಅನೇಕ ಶ್ರುತಿ-ಸ್ಮೃತಿಗಳು ಆಧಾರವಾಗಿವೆ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ಬ್ರಹ್ಮನು ಸತ್ಯಸ್ವರೂಪನು, ಜ್ಞಾನಸ್ವರೂಪನು, ಅನಂತ ಸ್ವರೂಪನು' 'ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ'

'ಸರ್ವಸ್ವಾಮಿಯಾದ ಪರಮಾತ್ಮನ ದೆಸೆಯಿಂದ ಆಕಾಶವು ಹುಟ್ಟಿತು' 'ಸ ಕಾರಣಂ ಕಾರಣಾಧಿಪಾಧಿಪಃ' 'ಸಕಲ ಕಾರಣಗಳಿಗೆ ಯಾರು ಅಧಿಪತಿಗಳಿದ್ದಾರೋ, ಅವರಿಗೂ ಅಧಿಪತಿಯಾದ ಬ್ರಹ್ಮನೇ ಜಗತ್ಕಾರಣನು'. 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಂ' ರುಗ್ಮವರ್ಣದ ಜಗತ್‌ಕರ್ತೃವನ್ನು ಯಾವಾಗ ನೋಡುವನೋ, 'ಸ ಇಮಾಂಲ್ಲೋಕಾನಸೃಜತ' 'ಆ ಬ್ರಹ್ಮನು ಜಗತ್ತನ್ನು ಸೃಷ್ಟಿ ಮಾಡಿದನು. ''ಏತಸ್ಮಾತ್ ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ। ಖಂ ವಾಯುಃ' 'ಈ ಪರಮಾತ್ಮನಿಂದಲೇ ಪ್ರಾಣ, ಮನಸ್ಸು, ಸಕಲೇಂದ್ರಿಯಗಳೆಲ್ಲವೂ ಆಕಾಶ, ವಾಯು ಎಲ್ಲವೂ ಹುಟ್ಟನ್ನು ಪಡೆದವು'. ಹೀಗೆ ಸಚ್ಛಾಸ್ತ್ರದಿಂದ ಪರಮಾತ್ಮನು ಯಥಾರ್ಥವೆಂದು ಜಗತ್‌ಕರ್ತೃವಾಗಿದ್ದಾನೆಂದು ಸ್ಪಷ್ಟವಾಗಿ ಹೇಳಲಾಗಿದೆ. ಯಾವ ಬ್ರಹ್ಮನು ಶಾಸ್ತ್ರಗಮ್ಯನಾಗಿದ್ದಾನೋ ಅವನನ್ನು ಅಯಥಾರ್ಥ ಎಂದು ಹೇಳುವುದು ಬುದ್ಧಿವಂತಿಕೆಯಲ್ಲ.

### ಶಾಸ್ತ್ರಗಳು ಅತತ್ವಾವೇದಕವಲ್ಲ

**तत्वप्रदीपः – न च वाच्यमेवंवादिवाक्यं वैदिकमपि द्वैतगोचरत्वाद-तत्वावेदकमिति । शास्त्रस्य तत्र तात्पर्यावगमात् ।**

ಹೀಗೆ ಬ್ರಹ್ಮನಲ್ಲಿ ಕರ್ತೃತ್ವಾದಿಗುಣಗಳನ್ನು ಸಮರ್ಥಿಸುವ ವಾಕ್ಯಗಳು ವೈದಿಕವಾದರೂ ಕೂಡ ದ್ವೈತವನ್ನು ಪ್ರತಿಪಾದನೆ ಮಾಡುವುದರಿಂದ ಅತತ್ವಾವೇದಕಗಳಾಗಿವೆ. ಹೀಗೆ ಅದ್ವೈತಿಗಳು ಹೇಳುತ್ತಾರೆ. ಇದೂ ಕೂಡ ಸರಿಯಲ್ಲ. ಏಕೆಂದರೆ ಶಾಸ್ತ್ರಗಳ ಮುಖ್ಯತಾತ್ಪರ್ಯ ದ್ವೈತದಲ್ಲಿರುವುದರಿಂದ ಅತತ್ವಾವೇದಕವಾಗಲು ಸಾಧ್ಯವಿಲ್ಲ.

### ಸಕಲಶಾಸ್ತ್ರಗಳೇ ಮುಖ್ಯತಾತ್ಪರ್ಯ

**तत्वप्रदीपः – सकलजगत्सम्भवसंरक्षणसंहारैककर्तृत्वेनाखिलोत्कर्षवति वासुदेवे तात्पर्यं पर्यवसीयते वेदानाम् ।**

ಸಮಸ್ತ ಜಗತ್ತಿನ ಸೃಷ್ಟಿ, ರಕ್ಷಣೆ, ಸಂಹಾರ ಮೊದಲಾದವುಗಳಿಗೆ ಮುಖ್ಯಕರ್ತೃವಾಗಿ ಸಕಲ ಜೀವ-ಜಡ ಪ್ರಪಂಚಕ್ಕಿಂತ ಶ್ರೇಷ್ಠನಾದ ವಾಸುದೇವನಲ್ಲಿ ಸಕಲವೇದಗಳು ಮುಖ್ಯತಾತ್ಪರ್ಯವನ್ನು ಹೊಂದಿರುತ್ತವೆ.

## ಮಹಾವಿಷ್ಣುವೇ ಸಕಲ ಶಾಸ್ತ್ರಾರ್ಥ

**तत्वप्रदीपः – 'सर्वोत्कर्षे देवदेवस्य विष्णोर्महातात्पर्यं नैवचान्यत्र सत्यम् ।' 'अतोऽस्मि लोके वेदे च प्रथितः पुरुषोत्तमः' इत्यादिश्रुतिस्मृतिभ्यः। वेदतात्पर्यार्थो हि तत्वं नाम । विप्रतिषिद्धं चेदमागमः प्रमाणमतत्त्ववेदकमिति।**

'ಸರ್ವೋತ್ಕರ್ಷೇ ದೇವದೇವಸ್ಯ ವಿಷ್ಣೋರ್ಮಹಾತಾತ್ಪರ್ಯಂ ನೈವಚಾನ್ಯತ್ರ ಸತ್ಯಮ್' ಸರ್ವೋತ್ತಮನಾದ ದೇವತೆಗಳಿಗೂ ಒಡೆಯನಾದ ವಿಷ್ಣುವಿನಲ್ಲೇ ಸಕಲ ವೇದಗಳು ಮಹಾತಾತ್ಪರ್ಯವನ್ನು ಹೊಂದಿವೆ. ಬೇರೆ ಯಾರಲ್ಲಿಯೂ ಮಹಾತಾತ್ಪರ್ಯವನ್ನು ಹೊಂದಿರುವುದಿಲ್ಲ. ಇದು ಸತ್ಯವಾದ ವಿಚಾರ. 'ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ' 'ಲೌಕಿಕವಾದ, ವೈದಿಕವಾದ ಶಬ್ದಪ್ರಪಂಚದಲ್ಲಿ ನಾನು ಸರ್ವೋತ್ತಮನೆಂದು ಪ್ರತಿಪಾದ್ಯನಾಗಿದ್ದೇನೆ' - ಹೀಗೆ ಕೃಷ್ಣನು ಭಗವದ್ಗೀತೆಯಲ್ಲಿ ಹೇಳಿಕೊಂಡಿದ್ದಾನೆ. ಇವೇ ಮೊದಲಾದ ಶ್ರುತಿ-ಸ್ಮೃತಿಗಳಿಂದ ಸಕಲಶಾಸ್ತ್ರಗಳು ಪರಮಾತ್ಮನ ವಿಷಯದಲ್ಲಿ ಪ್ರಮಾಣವಾಗಿವೆ ಎಂದು ಸಿದ್ಧವಾಯಿತು. ವೇದಗಳ ನಿಜವಾದ ತಾತ್ಪರ್ಯ ಯಾವ ವಿಷಯದಲ್ಲಿರುತ್ತದೋ, ಅದೇ ತತ್ತ್ವ ಎಂದು ಕರೆಸಿಕೊಳ್ಳುತ್ತದೆ. ಅದ್ವೈತಿಗಳು ಅತತ್ವದಲ್ಲಿ ವೇದತಾತ್ಪರ್ಯವಿದೆ ಎಂದು ಹೇಳಿದರೆ ಸ್ವವ್ಯಾಹತವಾಗುತ್ತದೆ. ಆಗಮವು ಪ್ರಮಾಣವೆಂದು ಒಪ್ಪಿ, 'ಅತತ್ತ್ವವೇದಕ' ಎಂದು ಹೇಳಿದರೆ ಪುನಃ ಜಾತಿ ಎಂಬ ನಿಗ್ರಹಸ್ಥಾನಕ್ಕೆ ಅವಕಾಶ ಕೊಟ್ಟಂತಾಗುತ್ತದೆ.

## ಪರಮಾತ್ಮನಲ್ಲಿ ಜಗತ್‌ಕಾರಣತ್ವವು ಸ್ವಾಭಾವಿಕ

**तत्वप्रदीपः – प्राकृतकार्यकारणाद्यभावेपि न ब्रह्मणः कारणत्वविरोधः । 'पराऽस्य शक्तिर्विविधैव श्रूयते स्वाभाविकी ज्ञानबलक्रिया च' 'यः सर्वज्ञः सर्ववित्' इत्यादिश्रुतेः ।**

ಪರಮಾತ್ಮನಲ್ಲಿ ಪ್ರಾಕೃತವಾದ ಕಾರ್ಯಕಾರಣಗಳಿದ್ದರೂ ಅಪ್ರಾಕೃತವಾದ ಜಗತ್ಕಾರಣತ್ವ ಇಲ್ಲವೆಂದು ಸಾಧ್ಯವಿಲ್ಲ. 'ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ'' 'ಪರಮಾತ್ಮನ ಶಕ್ತಿಯು ಬಗೆ ಬಗೆಯಾಗಿ ವೇದಗಳಲ್ಲಿ ಶ್ರುತವಾಗಿದೆ. ಮತ್ತು ಅವನ

ಜ್ಞಾನ, ಕ್ರಿಯೆ ಇವುಗಳೆಲ್ಲವೂ ಸ್ವಾಭಾವಿಕವಾಗಿವೆ'. 'ಯಃ ಸರ್ವಜ್ಞಃ ಸರ್ವವಿತ್' 'ಎಲ್ಲವನ್ನೂ ತಿಳಿದವನು ಸರ್ವಜ್ಞನಾಗಿದ್ದಾನೆ' ಇವೇ ಮೊದಲಾದ ಶ್ರುತಿಗಳಿಂದ ಪರಮಾತ್ಮನಲ್ಲಿ ಜಗತ್ಕಾರಣತ್ವವು ಸ್ವಾಭಾವಿಕವೆಂದು ಸ್ಪಷ್ಟವಾಗಿ ತಿಳಿಯುತ್ತಿದೆ.

### ಜಗತ್‌ಕಾರಣತ್ವವು ಯಥಾರ್ಥ

**तत्वप्रदीपः – 'निष्कलं निष्क्रियं शान्तम्' इति श्रुतिश्च न विरुद्ध्यते । कलारहितत्वादक्रियमाणत्वाच्च ब्रह्मणः । तस्माज्जगत्कारणं तत्वमेवेति स्थितम् ॥**

'ನಿಷ್ಕಲಂ ನಿಷ್ಕ್ರಿಯಂ ಶಾಂತಮ್' ಎಂಬ ಶ್ರುತಿಯ ವಿರೋಧವೂ ಕೂಡ ಇರುವುದಿಲ್ಲ. 'ನಿಷ್ಕಲ' ಎಂಬ ಪದಕ್ಕೆ, 'ಪರಮಾತ್ಮನಲ್ಲಿ ತನಗಿಂತ ಭಿನ್ನವಾದ ಕ್ರಿಯೆ ಇರುವುದಿಲ್ಲ' ಎಂದರ್ಥ. 'ನಿಷ್ಕ್ರಿಯಂ' ಎಂಬ ಪದಕ್ಕೆ 'ಮತ್ತೊಬ್ಬನಿಂದ ಇವನು ಉತ್ಪನ್ನನಾಗಿಲ್ಲ' ಎಂದರ್ಥ. ಆದ್ದರಿಂದ ಪರಮಾತ್ಮನು ಜಗತ್ತಿಗೆ ಕಾರಣನಾಗಿದ್ದಾನೆಂಬುದು ಯಥಾರ್ಥವಾಗಿದೆ ಎಂಬ ಪ್ರಮೇಯವು ಸಿದ್ಧವಾಯಿತು.

### ಮಾಯಾವಾದ ನಿರಾಸಕ್ಕಾಗಿ ನಾಲ್ಕನೆಯ ಸೂತ್ರ

**तत्वप्रदीपः – जगत्कारणस्य तत्त्वभावप्रदर्शनेनैव तदेव शास्त्रगम्यमित्युपक्षिप्तम् । तत् स्पष्टमिदानीमाचष्टे – तत्तु समन्वयादिति ।**

ಜಗತ್‌ಕಾರಣನಾದ ಬ್ರಹ್ಮನು ಯಥಾರ್ಥನಾಗಿದ್ದಾನೆಂಬ ತತ್ತ್ವವನ್ನು ಸಮರ್ಥಿಸುವ ಮೂಲಕ ಅವನೇ ಶಾಸ್ತ್ರದಿಂದ ಪ್ರತಿಪಾದ್ಯನಾಗಿದ್ದಾನೆಂದು ಹಿಂದಿನ ಶಾಸ್ತ್ರಯೋನಿತ್ವಾಧಿಕರಣದಲ್ಲಿ ಉಪಸ್ಥಾಪನೆ ಮಾಡಲಾಯಿತು. 'ತತ್ತು ಸಮನ್ವಯಾತ್' ಎಂಬ ಈ ಸೂತ್ರದಲ್ಲಿ ಅದನ್ನೇ ಸ್ಪಷ್ಟವಾಗಿ ವ್ಯಾಖ್ಯಾನ ಮಾಡುತ್ತಿದ್ದಾರೆ.

### ಮಾಯಾವಾದಿಗಳ ಸೂತ್ರವ್ಯಾಖ್ಯಾನ

**तत्वप्रदीपः – "द्वे वाव ब्रह्मणो रूपे, मूर्तं चामूर्तं च" इत्यादिश्रुतेर्मायाशबलं शुद्धं चेति द्विविधं ब्रह्म, विद्याऽविद्यावस्थाभेदेन ।**

**तदुभयमपि शास्त्रात् सिद्ध्यतीति प्राप्त आह – यज्जिज्ञास्यं जगत्कारणत्वलक्षणं तत्वभूतं ब्रह्म, तदेव सर्ववेदसमन्वयादवगम्यते ।**

'ದ್ವೇ ವಾವ ಬ್ರಹ್ಮಣೋ ರೂಪೇ, ಮೂರ್ತಂ ಚಾಮೂರ್ತಂ ಚ' ಇತ್ಯಾದಿ ಶ್ರುತಿಗೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ - ಮಾಯಾವಿಶಿಷ್ಟಬ್ರಹ್ಮ, ಶುದ್ಧಬ್ರಹ್ಮ ಎಂಬುದಾಗಿ ಬ್ರಹ್ಮನು ಎರಡು ರೂಪವನ್ನು ತಾಳಿದ್ದಾನೆ. ಅವಿದ್ಯಾವಸ್ಥೆಯಲ್ಲಿ ಮಾಯಾವಿಶಿಷ್ಟನಾಗಿರುತ್ತಾನೆ. ಅವನೇ ವಿದ್ಯಾವಸ್ಥೆಯಲ್ಲಿ ಶುದ್ಧರೂಪವನ್ನು ತಾಳುತ್ತಾನೆ ಎಂದು. ಈ ಎರಡು ವಿಧವಾದ ಬ್ರಹ್ಮನ ಸ್ವರೂಪವು ಶಾಸ್ತ್ರದಿಂದ ಸಿದ್ಧವಾಗಿದೆ ಎಂದು ಅದ್ವೈತಿಗಳು ವ್ಯಾಖ್ಯಾನ ಮಾಡುತ್ತಾರೆ. ಇದನ್ನು ನಿರಾಕರಣೆ ಮಾಡಲು ಜಿಜ್ಞಾಸ್ಯನಾದ ಜಗತ್ಕಾರಣತ್ವ ಎಂಬ ಲಕ್ಷಣವುಳ್ಳ ಯಥಾರ್ಥನಾದ ಬ್ರಹ್ಮನಿದ್ದಾನೋ, ಅವನೇ ಸಕಲ ವೇದಗಳ ಸಮನ್ವಯದಿಂದ ತಿಳಿಯಲ್ಪಡುತ್ತಾನೆ.

ಮಾಯಾ ಎಂದರೇನು ?

**तत्वप्रदीपः – नहि मायाशबलं नामास्ति, प्रमाणाभावात् । न च मायिनामभिमता माया प्रमाणपद्धतिमध्यास्ते । या तु वैदिकपौराणिकवचन-गृहीता माया, सा भगवदिच्छा ।**

ಮಾಯಾವಿಶಿಷ್ಟನಾದ ಒಬ್ಬ ಬ್ರಹ್ಮನಿದ್ದಾನೆಂಬುದೇ ಅಪ್ರಾಮಾಣಿಕ. ಅಂತಹ ಬ್ರಹ್ಮನ ವಿಷಯದಲ್ಲಿ ಯಾವುದೇ ವಿಷಯವಿರುವುದಿಲ್ಲ. ಮಾಯಾವಾದಿಗಳಿಗೆ ಅಭಿಮತವಾದ ಮಾಯಾ ಎಂಬುದೇ ಪ್ರಮಾಣ ಮಾರ್ಗವನ್ನು ಅನುಸರಿಸಿರುವುದಿಲ್ಲ. ಇನ್ನು ವೇದ ಹಾಗೂ ಪುರಾಣಗಳಲ್ಲಿ ಮಾಯಾ ಎಂಬ ಪದವಿದೆ. ಅದಕ್ಕೆ ಭಗವದಿಚ್ಛೆ ಎಂದಷ್ಟೇ ಅರ್ಥ.

ಸ್ಕಾಂದಪುರಾಣದಲ್ಲಿ 'ಮಾಯಾ'ಪದದ ಅರ್ಥ

तत्वप्रदीपः – तथाचोक्तं स्कान्दे -

''महामायेत्यविद्येति नियतिर्मोहिनीति च ।
प्रकृतिर्वासनेत्येवं तवेच्छाऽनन्त कथ्यते'' इति ।

सा च ज्ञानरूपा । ''मायेति भगवत्प्रज्ञा प्रकृष्टं हि मयाभिधम्'' इति वचनात् ।

ಇದೇ ಅರ್ಥವನ್ನು ಸ್ಕಾಂದಪುರಾಣವು ಸ್ಪಷ್ಟಪಡಿಸಿದೆ -

'ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ ।
ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತ ಕಥ್ಯತೇ'' ॥

ಪರಮಾತ್ಮನ ಇಚ್ಛೆಯನ್ನು ಮಹಾಮಾಯಾ, ಅವಿದ್ಯಾ, ನಿಯತಿ, ಮೋಹಿನಿ, ಪ್ರಕೃತಿ, ವಾಸನ ಇವೇ ಮೊದಲಾದ ಶಬ್ದಗಳಿಂದ ಕರೆಯಲಾಗುತ್ತದೆ. ಆ ಇಚ್ಛೆಯಾದರೂ ಜ್ಞಾನರೂಪವಾಗಿದೆ. ಏಕೆಂದರೆ 'ಮಾಯೇತಿ ಭಗವತ್‌ಪ್ರಜ್ಞಾ ಪ್ರಕೃಷ್ಟಂ ಹಿ ಮಯಾಭಿಧಮ್' ಭಗವಂತನ ಪ್ರಕೃಷ್ಟವಾದ ಪ್ರಜ್ಞೆಯೇ 'ಮಾಯಾ' ಎಂದು ನನ್ನಿಂದ ಹೇಳಲ್ಪಟ್ಟಿದೆ ಎಂಬ ಮಾತು. ಈ ವಿಷಯದಲ್ಲಿ ಆಧಾರವಾಗಿದೆ.

### ಮಾಯೆಯು ಮಿಥ್ಯಾಭೂತವಲ್ಲ

तत्वप्रदीपः – नच सा मिथ्या, तदभिन्नत्वात् । नहि ब्रह्मणो ज्ञानेच्छादयस्तद्व्यतिरेकिणो भवितुमर्हन्ति । 'सोऽभिध्या स जूतिः' 'विज्ञानमानन्दं ब्रह्म' इत्यादिश्रुतेः । या च कचिज्जगदुपादानात्मिका माया श्रूयते स्मर्यते वा साऽपि नानिर्वाच्या; प्रमाणाभावादेव ।

ಭಗವದಿಚ್ಛಾರೂಪವಾದ ಈ ಮಾಯೆಯು ಮಿಥ್ಯಾಭೂತವಲ್ಲ. ಏಕೆಂದರೆ ಇದು ಭಗವದಭಿನ್ನವಾಗಿದೆ. ಭಗವದಭಿನ್ನವಾದ ಜ್ಞಾನ, ಇಚ್ಛಾ ಮೊದಲಾದವುಗಳು ಭಗವಂತನಿಗಿಂತ ಭಿನ್ನವಾಗಿವೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ 'ಸೋऽಭಿಧ್ಯಾ ಸ ಜೂತಿಃ' 'ವಿಜ್ಞಾನಮಾನಂದಂ ಬ್ರಹ್ಮ' ಇವೇ ಮೊದಲಾದ ಶ್ರುತಿಗಳು ಇಚ್ಛಾ, ಜ್ಞಾನ ಮೊದಲಾದವುಗಳು ಭಗವಂತನ ಸ್ವರೂಪವೆಂದು ಹೇಳುತ್ತಿವೆ.

### ಮಾಯಾವಿಶಿಷ್ಟಬ್ರಹ್ಮನು ಗಗನಕುಸುಮ

तत्वप्रदीपः – तस्मादनिर्वाच्यभूताया मायांया मनोरथमात्रत्वात् गगननलिनसदृशं मायाशबलं ब्रह्म ।

ಆದ್ದರಿಂದ ನೀವು ಹೇಳುವ ಅನಿರ್ವಾಚ್ಯಭೂತವಾದ ಯಾವ ಮಾಯೆಯಿದೆಯೋ, ಅದು ಕೇವಲ ನಿಮ್ಮ ಮನೋರಥ ಮಾತ್ರ. ಆದ್ದರಿಂದ ಮಾಯಾವಿಶಿಷ್ಟನಾದ ಬ್ರಹ್ಮನು ಗಗನಕುಸುಮದಂತೆ ಅತ್ಯಂತ ಅಸತ್ತಾಗಿರುತ್ತಾನೆ.

ಇಬ್ಬರು ಬ್ರಹ್ಮರಿಲ್ಲ

**तत्वप्रदीपः – न च ब्रह्मद्वयाभिधायकं वचनमुपलभामहे । यत्पुनरुपन्यस्तं 'द्वे वाव ब्रह्मणो रूपे' इत्यादि, तत्र मूर्तशब्दशब्दितं तु पृथिव्यप्तेजः । अमूर्तं वाय्वन्तरिक्षम् ।**

ನೀವು ಹೇಳುವಂತೆ ಶುದ್ಧಬ್ರಹ್ಮ, ವಿಶಿಷ್ಟಬ್ರಹ್ಮ ಎಂಬ ಎರಡು ಬಗೆಯ ಬ್ರಹ್ಮರು ಇದ್ದಾರೆಂದು ಯಾವ ಶ್ರುತಿಯಿಂದಲೂ ಕೂಡ ಸಿದ್ಧವಾಗಿರುವುದಿಲ್ಲ. 'ದ್ವೇ ವಾವ ಬ್ರಹ್ಮಣೋ ರೂಪೇ' ಎಂಬ ಶ್ರುತಿಯನ್ನು ಮಾಯಾವಾದಿಗಳಾದ ನೀವು ಆಧಾರವನ್ನಾಗಿ ಹೇಳುತ್ತೀರಿ. ಆದರೆ ಈ ಶ್ರುತಿಗೆ ನೀವು ಹೇಳುವ ಅರ್ಥವೇ ಇರುವುದಿಲ್ಲ. ಮೂರ್ತ ಎಂಬ ಪದದಿಂದ ಪೃಥ್ವಿ, ಅಪ್, ತೇಜಸ್ಸುಗಳು, ಅಮೂರ್ತ ಎಂಬ ಪದದಿಂದ ವಾಯು ಹಾಗೂ ಅಂತರಿಕ್ಷಗಳು ಪ್ರತಿಪಾದ್ಯವಾಗಿವೆ.

ಶ್ರುತಿಗಳಿಂದ ಮಹಾಮಹಿಮೆಯುಳ್ಳ ಮುರಾರಿಯೇ ಪ್ರತಿಪಾದ್ಯ

**तत्वप्रदीपः – इह हि, हरहिरण्यगर्भहरिहयदहनपवनादिभिरमरवैरहरहरतिमहीयमानमहिमा मुरमथनो रूप्यते ।**

ಈ ಶ್ರುತಿಯಲ್ಲಿ ರುದ್ರ, ಚತುರ್ಮುಖಬ್ರಹ್ಮ, ಇಂದ್ರ, ವಾಯು ಮೊದಲಾದ ದೇವಶ್ರೇಷ್ಠರಿಂದ ಅಹೋರಾತ್ರಿ ಅತ್ಯಂತ ಪೂಜ್ಯವಾದ ಮಹಿಮೆಯುಳ್ಳ ಮುರಾರಿಯು ಪ್ರತಿಪಾದ್ಯನಾಗಿದ್ದಾನೆ.

ಮೂರ್ತ-ಅಮೂರ್ತ ಪದಾರ್ಥಗಳು ಪರಮಾತ್ಮನ ಪ್ರತಿಮೆ

**तत्वप्रदीपः – तस्मादस्येदमुभयमपि रूपमिति भण्यते, प्रतिमात्वेन । अपरथा, रूपशब्दोऽपार्थः स्यात् । अचेतनस्य ब्रह्मस्वरूपत्वासम्भवात् । तस्माच्छुद्धमेव ब्रह्म समन्वयावगम्यमिति सिद्धम् ।**

ಆದ್ದರಿಂದ ಮೂರ್ತ ಹಾಗೂ ಅಮೂರ್ತಗಳೆರಡೂ ಪರಮಾತ್ಮನ ಪ್ರತಿಮಾಸ್ಥಾನ-ದಲ್ಲಿರುತ್ತವೆ. ಹೀಗೊಪ್ಪದಿದ್ದರೆ ರೂಪಶಬ್ದವು ಅಪಾರ್ಥವಾಗುತ್ತದೆ. ಏಕೆಂದರೆ ಅಚೇತನ-ಪದಾರ್ಥವು ಚೇತನನಾದ ಬ್ರಹ್ಮಸ್ವರೂಪವಾಗಲು ಸಾಧ್ಯವೇ ಇಲ್ಲ. ಆದ್ದರಿಂದ ಶುದ್ಧನಾದ ಬ್ರಹ್ಮನೇ ಸಕಲಶಾಸ್ತ್ರಗಳಿಂದ ಸಮನ್ವಯಗೊಳ್ಳುತ್ತಾನೆಂಬ ಪ್ರಮೇಯವು ಸಿದ್ಧವಾಯಿತು.

### ಮಾಯಾವಾದಿಗಳ ನಿರಾಸಕ್ಕಾಗಿ ಈಕ್ಷತ್ಯಧಿಕರಣ

**तत्वप्रदीपः – अथोत्तराधिकरणे ब्रह्म विषयः । तद्धि पूर्वसूत्रे समन्वयगम्यत्वेन प्रतिज्ञातम् । तच्छब्दगोचरो वा नवेति सन्देहः । वादिविप्रतिपत्तिरेवात्रापि संशयकारणम् ।**

ಸಮನ್ವಯಾಧಿಕರಣದ ಮುಂದಿನ ಈ ಈಕ್ಷತ್ಯಧಿಕರಣದಲ್ಲಿ ಬ್ರಹ್ಮನು ವಿಷಯನಾಗಿದ್ದಾನೆ. ಈ ಬ್ರಹ್ಮನು ಹಿಂದಿನ ಸೂತ್ರದಲ್ಲಿ ಸಕಲಶಾಸ್ತ್ರಸಮನ್ವಯದಿಂದ ಗಮ್ಯನಾಗಿದ್ದಾನೆಂದು ಪ್ರತಿಜ್ಞೆ ಮಾಡಲಾಗಿದೆ. ಆದ್ದರಿಂದ ಇವನು ಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೋ ಇಲ್ಲವೋ ? ಎಂಬುದೇ ಈ ಅಧಿಕರಣದ ಸಂದೇಹ. ವಾದಿ-ಪ್ರತಿವಾದಿಗಳಲ್ಲಿರುವ ವಿಪ್ರತಿಪತ್ತಿಯೇ ಸಂಶಯಕ್ಕೆ ಕಾರಣವಾಗಿದೆ.

### ಮಾಯಾವಾದಿಗಳ ಪ್ರಕಾರ ಈಕ್ಷತ್ಯಧಿಕರಣದ ವ್ಯಾಖ್ಯಾನ

**तत्वप्रदीपः – केचिदशब्दगोचरं ब्रह्म ब्रुवन्ति । 'यतो वाचो निवर्तन्ते' 'यद्वाचाऽनभ्युदितम्' इत्यादीनि वाक्यान्यत्र प्रमाणम् । न च मुख्ये सम्भवत्यमुख्योऽर्थो ग्राह्यः । येनैषामुपनिषद्वाक्यानामन्यमर्थं प्रतिपद्येमहि ।**

ಕೆಲವರು ಬ್ರಹ್ಮನು ಶಬ್ದದಿಂದ ಪ್ರತಿಪಾದ್ಯನಲ್ಲವೆಂದು ಹೇಳುತ್ತಾರೆ. ಈ ವಿಷಯದಲ್ಲಿ 'ಯತೋ ವಾಚೋ ನಿವರ್ತಂತೇ' 'ಯದ್ವಾಚಾऽನಭ್ಯುದಿತಮ್' ಇವೇ ಮೊದಲಾದ ಶ್ರುತಿವಾಕ್ಯಗಳು ಆಧಾರವಾಗಿವೆ. ಈ ಶ್ರುತಿಗಳಿಗೆ ಮುಖ್ಯಾರ್ಥವನ್ನು ಹೇಳಲು ಬರುವಾಗ, ಅಮುಖ್ಯಾರ್ಥವನ್ನು ಹೇಳುವುದು ಕೂಡುವುದಿಲ್ಲ. ಅಮುಖ್ಯಾರ್ಥವನ್ನು ಹೇಳಬಹು-ದೆಂದಾಗಿದ್ದರೆ ಈ ಉಪನಿಷತ್‌ವಾಕ್ಯಗಳಿಗೆ ವಾಚ್ಯಾರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ತಿಳಿಯಬಹುದಿತ್ತು.

### ಲಕ್ಷಣಾವೃತ್ತಿಯಿಂದ ಬ್ರಹ್ಮನು ಪ್ರತಿಪಾದ್ಯನಲ್ಲ

**तत्वप्रदीपः – न चान्योऽर्थः प्रतीतिपथमवतरति । न चैतावता ब्रह्मप्रतिपादकानां शब्दानामानर्थक्यप्रसङ्गः । लक्षणया हि वृत्त्या तत्प्रतिपादयन्ति वेदान्ताः ।**

ಮತ್ತು 'ಯತೋ ವಾಚೋ' ಇತ್ಯಾದಿ ವಾಕ್ಯಗಳನ್ನು ನೋಡಿದಾಗ ಮತ್ತೊಂದು ಅರ್ಥದ ಪ್ರತೀತಿಯೂ ಕೂಡ ಬರುತ್ತಿಲ್ಲ. ಬ್ರಹ್ಮನು ಯಾವುದೇ ಶಬ್ದದಿಂದ ಪ್ರತಿಪಾದ್ಯನಲ್ಲವೆಂದು ಹೇಳುವುದಾದರೆ ಬ್ರಹ್ಮಪ್ರತಿಪಾದಕವಾದ ಶಬ್ದಗಳಿಗೆ ವೈಯರ್ಥ್ಯದೋಷ ಬರುತ್ತದಲ್ಲವೇ? ಎಂದು ಪ್ರಶ್ನಿಸಬಾರದು. ಲಕ್ಷಣಾವೃತ್ತಿಯಿಂದ ವೇದಾಂತಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತಿವೆ ಎಂದು ತಿಳಿಯಬೇಕು.

### ಮುಖ್ಯಾರ್ಥ ಬಿಟ್ಟು ಅಮುಖ್ಯಾರ್ಥ ಬೇಡ

**तत्वप्रदीपः – नच वचनीयं सम्भवति मुख्ये नामुख्यकल्पना न्याय्येति। असम्भवादेव ब्रह्मणि मुख्यवृत्तेः शब्दानाम् ।**

ಬ್ರಹ್ಮಪ್ರತಿಪಾದಕವಾದ ಶ್ರುತಿಗಳಿಗೆ ಮುಖ್ಯಾರ್ಥವನ್ನೇ ಹೇಳಲು ಬರುವಾಗ, ಅಮುಖ್ಯಾರ್ಥವನ್ನೇಕೆ ಕಲ್ಪನೆ ಮಾಡುತ್ತಿದ್ದೀರಿ ? ಎಂದು ಪ್ರಶ್ನಿಸಬಾರದು. ಬ್ರಹ್ಮನಲ್ಲಿ ಮುಖ್ಯಾರ್ಥವನ್ನು ಹೇಳಲು ಸಾಧ್ಯವಾಗದ ಕಾರಣ, ಅಮುಖ್ಯಾರ್ಥವನ್ನು ಹೇಳುತ್ತಿದ್ದೇವೆ.

### ಶಬ್ದದ ಪ್ರವೃತ್ತಿಗೆ ಐದು ಕಾರಣಗಳು

**तत्वप्रदीपः – षष्ठीगुणक्रियाजातिरूढयो हि शब्दप्रवृत्तिहेतवः ।**

ಏಕೆಂದರೆ ಶಬ್ದದ ಪ್ರವೃತ್ತಿಗೆ - ೧. ಷಷ್ಠೀ, ೨. ಗುಣ, ೩. ಕ್ರಿಯಾ, ೪. ಜಾತಿ, ೫. ರೂಢಿ ಈ ಐದು ಕಾರಣಗಳಿವೆ.

(ಸಂಬಂಧವಾಚಕವಾದ ಶಬ್ದಗಳಿಗೆ 'ಷಷ್ಠೀ' ಎಂದು, ಶುಕ್ಲ-ಕೃಷ್ಣ ಮೊದಲಾದ ಶಬ್ದಗಳಿಗೆ 'ಗುಣ' ಎಂದು, ಪಾಚಕ-ವಾಚಕ ಮೊದಲಾದ ಶಬ್ದಗಳಿಗೆ 'ಕ್ರಿಯಾ' ಎಂದು, ಬ್ರಾಹ್ಮಣ ಮೊದಲಾದ ಶಬ್ದಗಳಿಗೆ 'ಜಾತಿ' ಎಂದು ದೇವದತ್ತ ಮೊದಲಾದ ಶಬ್ದಗಳಿಗೆ 'ರೂಢಿ' ಎಂದು ಕರೆಯಲಾಗುತ್ತದೆ.)

ಷಷ್ಠಿಯು ಬ್ರಹ್ಮನಲ್ಲಿ ಅಸಂಭಾವಿತ

**तत्वप्रदीपः – न च ता ब्रह्मण्युपलभ्यन्ते । न तावच्छष्ठी सम्भाव्यते । सम्बन्धे हि सा वरीवर्ति । तं च, 'असङ्गो ह्ययं पुरुषः' इत्यादिकोपनिषदेव विरुणद्धि ।**

ಈ ಐದರಲ್ಲಿ ಯಾವುದೇ ಶಬ್ದಪ್ರವೃತ್ತಿನಿಮಿತ್ತವೂ ಕೂಡ ಬ್ರಹ್ಮನಲ್ಲಿರುವುದಿಲ್ಲ. ಮೊದಲನೆಯ 'ಷಷ್ಠೀ' ಎಂಬ ಪ್ರವೃತ್ತಿನಿಮಿತ್ತವು ಬ್ರಹ್ಮನಲ್ಲಿ ಅಸಂಭಾವಿತವಾಗಿದೆ. ಬ್ರಹ್ಮನಿಗೆ ಯಾವುದಾದರೂ ಸಂಬಂಧವಿದ್ದರೆ ಆವಾಗ ಷಷ್ಠೀಯನ್ನು ಶಬ್ದಪ್ರವೃತ್ತಿನಿಮಿತ್ತವೆನ್ನಬಹುದಿತ್ತು. ಆದರೆ 'ಅಸಂಗೋ ಹ್ಯಯಂ ಪುರುಷಃ' ಎಂಬ ಶ್ರುತಿಯು ಬ್ರಹ್ಮನಿಗೆ ಯಾವುದರ ಸಂಬಂಧವೂ ಕೂಡ ಇರುವುದಿಲ್ಲ ಎಂದು ವಿರೋಧ ಮಾಡುತ್ತಿದೆ.

ಗುಣವು ಬ್ರಹ್ಮನಲ್ಲಿ ಅಸಂಭಾವಿತ

**तत्वप्रदीपः – 'केवलो निर्गुणश्च' इत्यादिवेदवादैर्निरस्ततत्वात् समस्तगुणस्य गुणाभ्युपगमो न गुणमावहति ।**

ಬ್ರಹ್ಮನಲ್ಲಿ ಸಮಸ್ತ ಗುಣಗಳನ್ನು 'ಕೇವಲೋ ನಿರ್ಗುಣಶ್ಚ' ಇವೇ ಮೊದಲಾದ ವೇದವಾಕ್ಯಗಳು ಪರಮಾತ್ಮನಲ್ಲಿ ಯಾವುದೇ ಗುಣಗಳಿಲ್ಲವೆಂದು ನಿರಾಸ ಮಾಡುತ್ತಿವೆ. ಆದ್ದರಿಂದ ಬ್ರಹ್ಮನಲ್ಲಿ ಗುಣಗಳನ್ನು ಒಪ್ಪುವುದೂ ಕೂಡ ಗುಣವಲ್ಲ. (ಗುಣಗಳನ್ನು ಒಪ್ಪಬಾರದು.)

ಕ್ರಿಯೆ ಹಾಗೂ ಜಾತಿಗಳು ಬ್ರಹ್ಮನಲ್ಲಿ ಅಸಂಭಾವಿತ

**तत्वप्रदीपः – 'निष्कलं निष्क्रियम्' इति च क्रियाऽस्य निषिद्ध्यते । जातिस्तु बहुव्यक्तिनिष्ठा परमात्मन्यद्वितीये दूरतो निवारिता ।**

'ನಿಷ್ಕಲಂ ನಿಷ್ಕ್ರಿಯಂ' ಎಂಬ ಶ್ರುತಿಯು ಯಾವುದೇ ಕ್ರಿಯೆಯು ಬ್ರಹ್ಮನಲ್ಲಿ ಇರುವುದಿಲ್ಲವೆಂದು ನಿಷೇಧ ಮಾಡುತ್ತಿದೆ. ಜಾತಿಯನ್ನೂ ಕೂಡ ಬ್ರಹ್ಮನಲ್ಲಿ ಒಪ್ಪುವಂತಿಲ್ಲ. ಬ್ರಹ್ಮನು ಒಬ್ಬನೇ ಆಗಿದ್ದಾನೆ. ಅನೇಕ ವ್ಯಕ್ತಿಗಳಿದ್ದರೆ ಮಾತ್ರ ಜಾತಿಯನ್ನು ಒಪ್ಪಬಹುದಿತ್ತು.

ರೂಢಿಯು ಬ್ರಹ್ಮನಲ್ಲಿ ಅಸಂಭಾವಿತವೆಂದು ಪೂರ್ವಪಕ್ಷ

**तत्वप्रदीपः – सङ्केतकर्तॄणां बहुलप्रयोक्तॄणां चाभावत् रूढिरपि नैनमारोढुमर्हति। अतो न शब्दवाच्यं ब्रह्मेत्येतं पक्षं प्रतिक्षेप्तुं ईक्षतेर्नाशब्दमिति भगवान् सूत्रकार आह –**

ರೂಢಿಯನ್ನು ಕೂಡ ಬ್ರಹ್ಮನಲ್ಲಿ ಹೇಳಲಾಗದು. ರೂಢಿಯನ್ನು ಅನುಷ್ಠಾನಕ್ಕೆ ತರಲು ಅನೇಕ ಜನರಿರಬೇಕು. ಆದರೆ ಅನೇಕರು ಇಲ್ಲದ ಕಾರಣ ರೂಢಿಯನ್ನೂ ಕೂಡ ಆರೂಢಮಾಡಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮನು ಯಾವುದೇ ಶಬ್ದದಿಂದ ಪ್ರತಿಪಾದ್ಯನಲ್ಲ. ಹೀಗೆ ಹೇಳುವ ಅದ್ವೈತಿಗಳ ಪಕ್ಷವನ್ನು ನಿರಾಕರಣೆ ಮಾಡಲು 'ಈಕ್ಷತೇರ್ನಾಶಬ್ದಮ್' ಎಂಬುದಾಗಿ ಭಗವಾನ್ ಸೂತ್ರಕಾರರು ಹೇಳುತ್ತಿದ್ದಾರೆ.

ಷಷ್ಠೀ, ಗುಣ, ಕ್ರಿಯಾ, ಜಾತಿ, ರೂಢಿಗಳು ಅಸಂಭಾವಿತವಲ್ಲ

**तत्वप्रदीपः – 'स एतस्माज्जीवघनात् परात्परं पुरिशयं पुरुषमीक्षते' 'यदैनमनुपश्यन्त्यात्मानं देवमञ्जसा' 'आत्मा वा अरे द्रष्टव्यः' इत्यादि श्रुतेर्न ब्रह्मावाच्यं भवितुमर्हति ।**

'ಸ ಏತಸ್ಮಾಜ್ಜೀವಘನಾತ್ ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' 'ಯದೈನಮನು-ಪಶ್ಯಂತ್ಯಾತ್ಮಾನಂ ದೇವಮಂಜಸಾ' 'ಆತ್ಮಾ ವಾ ಅರೇ ದ್ರಷ್ಟವ್ಯಃ' ಇವೇ ಮೊದಲಾದ ಶ್ರುತಿಗಳಿಂದ ಬ್ರಹ್ಮನು ಪ್ರತಿಪಾದ್ಯನಾಗುತ್ತಿರುವುದರಿಂದ ಅವಾಚ್ಯನಾಗಿದ್ದಾನೆಂದು ಹೇಳಲು ಸರ್ವಥಾ ಸಾಧ್ಯವಿಲ್ಲ.

ಶ್ರುತಿಗಳ ಆಧಾರದಿಂದ ಬ್ರಹ್ಮನಲ್ಲಿ ಪ್ರತಿಪಾದ್ಯತ್ವ ಸಮರ್ಥನೆ

**तत्वप्रदीपः – एषु हि वाक्येषु ब्रह्मविषयमीक्षणं प्रतीयते । नचाप्रत्यक्षस्य वस्तुन आगममन्तरेणेक्षणीयत्वं सम्भवति । औपनिषदत्वं च तस्यावगम्यते। 'सर्वे वेदाः' 'वेदा ह्येवैनम्' इत्यादिश्रुतिबलात् । अत ईक्षणीयत्वश्रवणाच्छब्द वाच्यमेव ब्रह्म ।।**

ಈ ಎಲ್ಲಾ ವಾಕ್ಯಗಳಲ್ಲಿ ಬ್ರಹ್ಮನು ಈಕ್ಷಣೀಯನಾಗಿದ್ದಾನೆಂದು (ಜ್ಞಾನವಿಷಯನಾಗಿದ್ದಾನೆಂದು ಪ್ರತೀತವಾಗುತ್ತದೆ.) ಕಣ್ಣಿಗೆ ಕಾಣಿಸದ ವಸ್ತುವನ್ನು ಆಗಮಬಿಟ್ಟು, ಮತ್ತೊಂದು ಪ್ರಮಾಣದಿಂದ ರೀಕ್ಷಣೀಯ ಎಂದು ಹೇಳಲು ಸಾಧ್ಯವಿಲ್ಲ. ಬ್ರಹ್ಮನಾದರೂ ಉಪನಿಷತ್ತುಗಳಿಂದ ಮಾತ್ರ ಪ್ರತಿಪಾದ್ಯನೆಂದು ತಿಳಿಯುತ್ತದೆ. 'ಸರ್ವೇ ವೇದಾಃ' 'ವೇದಾ ಹ್ಯೇವೈನಮ್' ಇವೇ ಮೊದಲಾದ ಶ್ರುತಿಗಳು ಉಪನಿಷತ್ತಿನಿಂದ ಮಾತ್ರ ಗಮ್ಯನೆಂದು ತಿಳಿಸುತ್ತಿವೆ. ಆದ್ದರಿಂದ ಈಕ್ಷಣೀಯತ್ವವು ಬ್ರಹ್ಮನಲ್ಲಿ ಶ್ರುತವಾಗಿರುವುದರಿಂದ ಬ್ರಹ್ಮನು ಸಕಲಶಬ್ದಗಳಿಂದ ಪ್ರತಿಪಾದ್ಯನಾಗುತ್ತಾನೆಂದು ಅಂಗೀಕಾರ ಮಾಡಬೇಕು.

### ಶ್ರುತಿಗಳಲ್ಲಿರುವ ಅವಾಚ್ಯಪದದ ಅರ್ಥ

**तत्वप्रदीपः – 'यतो वाचो निवर्तन्ते' इत्यादि श्रुतिबलादवाच्यत्त्व-मुपपादितमिति चेद् दुरुपपादमेवैतन्मन्यामहे । अवाच्यत्वादिशब्दोऽप्रसिद्धत्वा देव हि युज्यते । 'अप्रसिद्धेरवाच्यं तत्' इत्यादेः ।**

'ಯತೋ ವಾಚೋ ನಿವರ್ತಂತೇ' ಇವೇ ಮೊದಲಾದ ಶ್ರುತಿಗಳ ಆಧಾರದಿಂದ ಬ್ರಹ್ಮನು ಅವಾಚ್ಯನಾಗಿದ್ದಾನೆಂದು ಹೇಳಬಹುದಲ್ಲವೇ? ಎಂದು ಅದ್ವೈತಿಗಳು ಆಕ್ಷೇಪಿಸಬಹುದು. ಆದರೆ ಅವಾಚ್ಯತ್ವವನ್ನು ಸಮರ್ಥಿಸಲು ಅದ್ವೈತಿಗಳಿಂದ ಸಾಧ್ಯವೇ ಇಲ್ಲ. 'ಅಪ್ರಸಿದ್ಧೇರವಾಚ್ಯಂ ತತ್' ಎಂಬ ಮಾತಿನಂತೆ 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯು ಬ್ರಹ್ಮನು ಅಪ್ರಸಿದ್ಧನಾಗಿರುವ ಕಾರಣ, ಅವಾಚ್ಯನಾಗಿದ್ದಾನೆ.

### 'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯ ಅರ್ಥ

**तत्वप्रदीपः – अद्भुतमपि चावाच्यमिति लौकिका वदन्ति । तस्मादवाच्यत्वादिवचनानामेवमेवाभिसन्धिः । अन्यथा, 'यतो वाचो निवर्तन्ते' इत्यत्र यत्पदाविषयत्वाद् ब्रह्मणस्तस्यावाच्यत्वं न वेदोदितं स्यात्।**

ಅದ್ಭುತನಾಗಿರುವುದರಿಂದಲೂ ಅವಾಚ್ಯನಾಗಿದ್ದಾನೆಂದು ಲೌಕಿಕರು ಹೇಳುತ್ತಾರೆ. ಹೀಗೆ ಅವಾಚ್ಯತ್ವವನ್ನು ಪ್ರತಿಪಾದನೆ ಮಾಡುವ ಶ್ರುತಿಗಳಿಗೆ ವ್ಯಾಖ್ಯಾನ ಮಾಡಬೇಕು. ಇಲ್ಲದಿದ್ದರೆ

'ಯತೋ ವಾಚೋ ನಿವರ್ತಂತೇ' ಎಂಬ ಶ್ರುತಿಯಲ್ಲಿರುವ ಯತ್‌ಪದದಿಂದಲೂ ಬ್ರಹ್ಮನು ವಾಚ್ಯನಾಗದ ಕಾರಣ, ಅವನಲ್ಲಿ ಅವಾಚ್ಯತ್ವವನ್ನು ಸಮರ್ಥನೆ ಮಾಡಲು ಸಾಧ್ಯವಾಗುವುದಿಲ್ಲ.

ಮಾಯಾವಾದಿಯು ಪ್ರಮಾಣಾಭಾಸಗಳೆಂಬ ಸುಳಿಯಲ್ಲಿ ಸಿಕ್ಕಿಕೊಂಡನು

**तत्वप्रदीपः – अपिच, ब्रह्मावाच्यमिति वदन् वादी, ब्रह्म वक्ति वा न वेति विकल्पयामः । यद्याद्यपक्षकक्षीरकारस्तर्ह्यवाच्यत्वं विवदिषतोऽस्मदभिमत-वाच्यत्वानुमोदनात् स्वव्याहत्यादिनिग्रहमहाग्राहग्रस्ततया पृथुलकथाप्रपथसागरे प्रमाणतर्कतदाभासवीचीतरङ्गमालाजालावलोलिते निमज्जतो वादिनो निर्णयपारदर्शनं दुःशकं प्रसज्येत ।**

ಮತ್ತು ಬ್ರಹ್ಮನು ಅವಾಚ್ಯನಾಗಿದ್ದಾನೆಂದು ಹೇಳುವ ಮಾಯಾವಾದಿಯು ಬ್ರಹ್ಮನನ್ನು ಹೇಳುತ್ತಾನೋ, ಹೇಳುವುದಿಲ್ಲವೋ ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ಬ್ರಹ್ಮನನ್ನು ಹೇಳುತ್ತಾನೆಂದರೆ ಬ್ರಹ್ಮನು ಅವಾಚ್ಯನಾಗಿದ್ದಾನೆಂಬ ವಿಷಯವನ್ನು ಒಪ್ಪದ ನಮ್ಮ ಅಭಿಪ್ರಾಯದಂತೆ ವಾಚ್ಯತ್ವವನ್ನೇ ಅನುಮೋದನೆ ಮಾಡಿದಂತಾಯಿತು. ಸ್ವವಾಹ್ಯತಿ ಎಂಬ ದೊಡ್ಡ ಮೊಸಳೆಯ ಬಾಯಲ್ಲಿ ಸಿಕ್ಕಿಕೊಂಡು, ವಿಶಾಲವಾದ ವಾಕ್ಯಾರ್ಥಕಥಾ ಎಂಬ ಮಾರ್ಗವೆಂಬ ಸಾಗರದಲ್ಲಿ ಪ್ರಮಾಣಾಭಾಸ, ತರ್ಕಾಭಾಸಗಳೆಂಬ ದೊಡ್ಡ ಅಲೆಗಳ ಮಾಲೆಗಳ ಸುಳಿಗಳಲ್ಲಿ ಸಿಕ್ಕಿಹಾಕಿಕೊಂಡು, ಮುಳುಗಿ, ಮುಳುಗಿ ಏಳುತ್ತಿರುವ ಮಾಯಾವಾದಿಗೆ ತತ್ವನಿರ್ಣಯವೆಂಬ ದಡವನ್ನು ಕಾಣುವುದೇ ಬಲುಕಷ್ಟವಾಗಿದೆ.

ಬ್ರಹ್ಮನು ಅವಾಚ್ಯನೆಂದು ಸಮರ್ಥಿಸಲಾಗದು

**तत्वप्रदीपः – अथ द्वितीये पक्षे पक्षपातं करोति, तदा कस्य वाच्यत्वमयं प्रतिजानीते ? नह्यनभिधीयमानस्य धर्मिणो धर्मविधानमुपपद्यते ।**

ಬ್ರಹ್ಮನು ಅವಾಚ್ಯನಾಗಿದ್ದಾನೆಂದು ಹೇಳುವುದಿಲ್ಲವೆಂಬ ಎರಡನೆಯ ಪಕ್ಷದಲ್ಲಿ ಪಕ್ಷಪಾತವನ್ನು ಮಾಡಿದರೆ ಆವಾಗ ಯಾರನ್ನು ಕುರಿತು ವಾಚ್ಯತ್ವದ ಪ್ರತಿಜ್ಞೆ ಮಾಡುತ್ತಿದ್ದಾನೆ ? ಶಬ್ದವಾಚ್ಯನಾಗದ ಧರ್ಮಿಯಲ್ಲಿ ಧರ್ಮವನ್ನು ವಿಧಾನ ಮಾಡಲು ಸಾಧ್ಯವಿಲ್ಲವಷ್ಟೇ ?

'ಮೇ ಮಾತಾ ವಂಧ್ಯಾ' ಎನ್ನುತ್ತಿರುವವನು ಮಾಯಾವಾದಿ

**तत्वप्रदीपः – किञ्च, ब्रह्मशब्दोऽपि लक्षयति केवलं न पुनर्ब्रवीतीति चेत्, किं तल्लक्ष्यमिति वक्तव्यम् । येनकेनापि वचनेनाभिधीयमाने, नावाच्यत्वं स्यात् । अतो 'माता मे वन्ध्या' इति वदत्यन्तविरुद्धोऽयमीदृशः प्रलापः ।**

ಬ್ರಹ್ಮಶಬ್ದವು ಬ್ರಹ್ಮನಲ್ಲಿ ಲಕ್ಷಣಾವೃತ್ತಿಯಿಂದ ಪ್ರತಿಪಾದನೆ ಮಾಡುತ್ತದೆ ಹೊರತು, ಶಕ್ತಿವೃತ್ತಿಯಿಂದ ಪ್ರತಿಪಾದನೆ ಮಾಡುವುದಿಲ್ಲವೆಂದು ಅದ್ವೈತಿಗಳು ಉತ್ತರಿಸಬಹುದು. ಆದರೆ ಲಕ್ಷಣಾವೃತ್ತಿಯಿಂದ ಪ್ರತಿಪಾದ್ಯವಾದ ವಸ್ತು ಯಾವುದು ? ಎಂಬ ಪ್ರಶ್ನೆಗೆ ಉತ್ತರಿಸಬೇಕು. ಆ ವಸ್ತುವನ್ನು ಯಾವುದಾದರೂ ಶಬ್ದದಿಂದ ಗುರುತಿಸಿದರೆ ಅವಾಚ್ಯತ್ವವು ಭಗ್ನವಾಗುತ್ತದೆ. ಆದ್ದರಿಂದ 'ಮೇ ಮಾತಾ ವಂಧ್ಯಾ' ಎಂಬ ಮಾತಿನಂತೆ ಮಾಯಾವಾದಿಯ ಮಾತು ಅತ್ಯಂತ ವಿರುದ್ಧವಾಗಿದೆ. ಹೀಗೆ ಕೇವಲ ಹುರುಳಿಲ್ಲದ ಮಾತುಗಳನ್ನಾಡುವುದರಲ್ಲಿ ಮಾಯಾವಾದಿಗಳು ಬಲು ಚತುರರು.

'ಪರಮಾತ್ಮನು ಅನಂತಗುಣಪರಿಪೂರ್ಣ' ಎಂಬುದನ್ನು ಕೇಳಲು ಮಾಯಾವಾದಿಗೆ ಕಿವಿನೋವು

**तत्वप्रदीपः – यदपीदमुदितं षष्ठ्यादीनां मुख्यवृत्तिहेतूनामभावादशब्दं ब्रह्मेति च, तदपि निखिलवेदवाक्यसमन्वयपरिनिर्णीयमानपरमपुरुषगत-गुरुतरगुणगणागण्यताकर्णनं कर्णशूलमिव दुःसहमसहमानानां स्वमतमान-दुर्बलानां बालिशानामिवाऽक्रोशमात्रमुत्पश्यामः ।**

ಮಾಯಾವಾದಿಗಳು ಹಿಂದೆ ಆಕ್ಷೇಪ ಮಾಡುವಾಗ ಶಬ್ದಪ್ರವೃತ್ತಿಗೆ ಕಾರಣವಾದವು ಷಷ್ಠೀ, ಗುಣ, ಕ್ರಿಯಾ, ಜಾತಿ, ರೂಢಿ ಮೊದಲಾದವು. ಇವುಗಳು ಬ್ರಹ್ಮನಲ್ಲಿ ಇರುವುದಿಲ್ಲ. ಆದ್ದರಿಂದ ಬ್ರಹ್ಮನು ಶಬ್ದಪ್ರತಿಪಾದ್ಯನಲ್ಲವೆಂದು ಆಕ್ಷೇಪ ಮಾಡಿದ್ದರು. ಇದು ಕೇವಲ ದುರಾಗ್ರಹ ಪೀಡಿತವಾದದ್ದು, ಸಮಸ್ತ ವೇದವಾಕ್ಯಗಳ ಸಮನ್ವಯದಿಂದ ಸರ್ವೋತ್ತಮನಾದ ಪರಮಾತ್ಮನಲ್ಲಿ ಅತ್ಯಂತ ಶ್ರೇಷ್ಠವಾದ ಅನಂತಗುಣಪರಿಪೂರ್ಣತ್ವವು ನಿರ್ಣಯವಾಗಿದೆ. ಇದನ್ನು

ಮಾಯಾವಾದಿಯು ಕಿವಿಗೆ ನೋವು ಬಂದವನು ಶಬ್ದವನ್ನು ಕೇಳಲು ಕಷ್ಟಪಡುವಂತೆ ಕೇಳಲು ಕಷ್ಟಪಡುತ್ತಿದ್ದಾನೆ. ಇದು ಕೇವಲ ತನ್ನ ಮತದ ದುರಭಿಮಾನದಿಂದ ಹೀಗೆ ನಾಟಕವಾಡುತ್ತಿದ್ದಾನೆ. ತನ್ನ ಮತದ ಸ್ಥಾಪನೆಗೆ ಯಾವುದೇ ಪ್ರಮಾಣಗಳಿಲ್ಲದೇ ದುರ್ಬಲನಾಗಿ ಬಾಲಿಶನಾಗಿ ಆಕ್ರೋಶವನ್ನಷ್ಟೇ ವ್ಯಕ್ತಪಡಿಸುತ್ತಿದ್ದಾನೆ.

### ಶಬ್ದಪ್ರವೃತ್ತಿಗಳೆಲ್ಲವೂ ಪರಮಾತ್ಮನಲ್ಲಿ ಯುಕ್ತವಾಗುತ್ತದೆ

**तत्वप्रदीपः – 'यः सर्वज्ञः' 'एष सर्वेश्वर एष भतूाधिपतिः' 'गुणाश्श्रुतास्सुविरुद्धाश्च देवे' 'अथैनमाहुः सत्यकर्मेति' 'सत्यं ह्येवेदं विश्वमसौ सृजते' 'नित्यो नित्यानां चेतनश्चेतनानां' 'कश्छन्दसां योगमावेद धीर' 'वचसां वाच्यमुत्तमम्' इत्यादिश्रुतिस्मृतिभ्यः सम्बन्धगुणक्रियाजातियोगरूढिसम्भवात् ।**

'ಯಃ ಸರ್ವಜ್ಞಃ' ಎಂಬ ಶ್ರುತಿಯಿಂದ ಈಶ್ವರನಲ್ಲಿ ಅನೇಕ ಶ್ರುತಿ-ಸ್ಮೃತಿಗಳಿಂದ ಗುಣಕ್ರಿಯಾದಿಗಳು ಸಿದ್ಧವಾಗಿವೆ. 'ಯಃ ಸರ್ವಜ್ಞಃ' ಎಂಬ ಶ್ರುತಿಯು ಸಾರ್ವಜ್ಞವನ್ನು 'ಏಷ ಸರ್ವೇಶ್ವರ ಏಷ ಭೂತಾಧಿಪತಿಃ' ಎಂಬ ಶ್ರುತಿಯು ಸರ್ವೇಶ್ವರತ್ವ, ಸರ್ವನಿಯಾಮಕತ್ವ ಮೊದಲಾದ ಧರ್ಮಗಳನ್ನು, 'ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ' ಎಂಬ ಶ್ರುತಿಯು ಅನಂತಗುಣಪರಿಪೂರ್ಣತ್ವವನ್ನು 'ಅಥೈನಮಾಹುಃ ಸತ್ಯಕರ್ಮೇತಿ' ಎಂಬ ಶ್ರುತಿಯು ಮತ್ತು 'ಸತ್ಯಂ ಹ್ಯೇವೇದಂ ವಿಶ್ವಮಸೌ ಸೃಜತೇ' ಎಂಬ ಶ್ರುತಿಯು ಕ್ರಿಯೆಯನ್ನು, 'ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ' ಎಂಬ ಶ್ರುತಿಯು ಜಾತಿಯನ್ನು, 'ಕಶ್ಛಂದಸಾಂ ಯೋಗಮಾವೇದ ಧೀರ' ಎಂಬ ಶ್ರುತಿಯು ಸಕಲ ವೇದದಲ್ಲಿರುವ ಪದಗಳ ರೂಢಿಯನ್ನು 'ವಚಸಾಂ ವಾಚ್ಯಮುತ್ತಮಮ್' ಎಂಬ ಸ್ಮೃತಿಯು ಯೋಗಾರ್ಥವನ್ನು ಪರಮಾತ್ಮನಲ್ಲಿ ಸಮರ್ಥಿಸುತ್ತಿದೆ. ಆದ್ದರಿಂದ ಸಂಬಂಧ, ಗುಣ, ಕ್ರಿಯಾ, ಜಾತಿ, ಯೋಗ, ರೂಢಿ ಎಲ್ಲವೂ ಕೂಡ ಪರಮಾತ್ಮನಲ್ಲಿ ಯುಕ್ತವಾಗುವುದರಿಂದ ಶಬ್ದದಿಂದ ಪ್ರತಿಪಾದ್ಯನಾಗುತ್ತಾನೆ.

### ಸಂಬಂಧಾದಿಗಳಿಲ್ಲದೇ ಲಕ್ಷಣಾವೃತ್ತಿ ಕೂಡದು

**तत्वप्रदीपः** – नच वेदस्य मिथ्यावादित्वम् । तत्त्वमसिवाक्यस्यापि तथात्वप्रसङ्गात् । अपिच, षष्ठीगुणक्रियाजातिरूढयो हि शब्दवृत्तिहेतवः ।

**तेषामन्यतमोऽपि नाऽत्मनीति चेन्नैष लक्ष्यः । नहि सम्बन्धादिभिर्विना लक्षणावृत्तिर्दृष्टा ।**

ಮೇಲೆ ಉದಾಹರಿಸಿದ ವೇದವಾಕ್ಯಗಳು ಮಿಥ್ಯಾಭೂತವಾದ ಅರ್ಥವನ್ನು ಪ್ರತಿಪಾದನೆ ಮಾಡುತ್ತವೆಂದು ಹೇಳಬಾರದು. ಹಾಗಾದಲ್ಲಿ ಐಕ್ಯಪ್ರತಿಪಾದಕವಾದ 'ತತ್ತ್ವಮಸಿ' ಎಂಬ ವಾಕ್ಯವೂ ಕೂಡ ಮಿಥ್ಯಾಬೋಧಕವಾಗುತ್ತದೆಂದು ಹೇಳಬೇಕಾಗುತ್ತದೆ. ಮತ್ತು ಷಷ್ಠೀ, ಗುಣ, ಕ್ರಿಯಾ, ಜಾತಿ, ರೂಢಿ ಇವುಗಳು ಶಬ್ದದ ಪ್ರವೃತ್ತಿಗೆ ಕಾರಣವಾಗಿವೆ. ಇವುಗಳಲ್ಲಿ ಯಾವುದೂ ಸಹ ಆತ್ಮನಲ್ಲಿಲ್ಲವೆಂದು ಹೇಳುವುದಾದರೆ, ಆತ್ಮನು ಲಕ್ಷ್ಯನಾಗಿದ್ದಾನೆಂದೂ ಕೂಡ ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಸಂಬಂಧಾದಿಗಳಿಲ್ಲದೇ ಲಕ್ಷಣಾವೃತ್ತಿಯನ್ನು ಮಾಡುವುದು ಲೋಕದಲ್ಲಿ ಎಲ್ಲಿಯೂ ಕಂಡಿಲ್ಲ.

ಅವಾಚ್ಯವಾದ ವಸ್ತು ಲಕ್ಷ್ಯವಾಗದು

तत्वप्रदीपः – **नचावाच्यस्य लक्ष्यत्वम् । माधुर्यविशेषोऽपि नावाच्यो लक्ष्यते । माधुर्यविशेषशब्दवाच्यत्वात् । विविच्यानभिधानं तु विवेकापरिज्ञाननिबन्धनमेव, न पुनरवाच्यत्वात् ।**

ಅವಾಚ್ಯವಾದ ವಸ್ತು ಲಕ್ಷ್ಯವಾಗಲು ಸಾಧ್ಯವೇ ಇಲ್ಲ. ಮಾಧುರ್ಯವಿಶೇಷವು ಶಬ್ದದಿಂದ ಅವಾಚ್ಯವಾದರೂ ಲಕ್ಷ್ಯವಾಗಿದೆಯಲ್ಲವೇ? ಎಂದು ಪ್ರಶ್ನಿಸಬಾರದು. ಅದೂ ಸಹ ಮಾಧುರ್ಯವಿಶೇಷ ಎಂಬ ಶಬ್ದದಿಂದ ವಾಚ್ಯವೇ ಆಗಿದೆ. ಆ ಮಾಧುರ್ಯವಿಶೇಷವನ್ನು ಪ್ರತ್ಯೇಕವಾಗಿ ಗುರುತಿಸಲು ಅದರ ಬಗ್ಗೆ ವಿವೇಕವಿಲ್ಲದ ನಮ್ಮಿಂದ ಸಾಧ್ಯವಾಗುತ್ತಿಲ್ಲ. ಅಷ್ಟೇ ಹೊರತು, ಅವಾಚ್ಯವಾಗಿದೆ ಎಂಬ ಕಾರಣದಿಂದಲ್ಲ.

ಅವಾಚ್ಯವಾದದ್ದು ಯಾವುದೂ ಇಲ್ಲ

तत्वप्रदीपः – वदन्ति च तद्विदो माधुर्यविशेषान् विविच्य -

''विशदं क्षीरमाधुर्यं स्थिरमाज्यस्य तीक्ष्णकम् ।
गुडस्य पनसादीनां निर्हारीत्यभिधीयते ।।'' इत्यादि सूदशास्त्रे ।
तस्मान्नावाच्यस्य लक्ष्यत्वमिति सिद्धम् ।।

ಆದರೆ ಪಾಕಶಾಸ್ತ್ರದಲ್ಲಿ ಪರಿಣತರು ಮಾಧುರ್ಯವಿಶೇಷವನ್ನೂ ಕೂಡ ಪ್ರತ್ಯೇಕಗೊಳಿಸಿ, ಗುರುತಿಸುತ್ತಾರೆ. ಪಾಕಶಾಸ್ತ್ರದ ವಾಕ್ಯ ಹೀಗಿದೆ -

'ವಿಶದಂ ಕ್ಷೀರಮಾಧುರ್ಯಂ ಸ್ಥಿರಮಾಜ್ಯಸ್ಯ ತೀಕ್ಷ್ಣಕಮ್ ।
ಗುಡಸ್ಯ ಪನಸಾದೀನಾಂ ನಿರ್ಹಾರೀತ್ಯಭಿಧೀಯತೇ ॥

ಕ್ಷೀರಮಾಧುರ್ಯಕ್ಕೆ 'ವಿಶದ' ಎಂದು, ಆಜ್ಯದ ಮಾಧುರ್ಯಕ್ಕೆ 'ಸ್ಥಿರ' ಎಂದು, ಗುಡದ ಮಾಧುರ್ಯಕ್ಕೆ 'ತೀಕ್ಷ್ಣಕ' ಎಂದು, ಹಲಸುಹಣ್ಣಿನ ಮಾಧುರ್ಯಕ್ಕೆ 'ನಿರ್ಹಾರೀ' ಎಂದು ಕರೆಯುತ್ತಾರೆ.

ಆದ್ದರಿಂದ ಅವಾಚ್ಯವಾದ ಪದಾರ್ಥವು ಲಕ್ಷ್ಯವಾಗಲು ಸಾಧ್ಯವಿಲ್ಲವೆಂಬ ಪ್ರಮೇಯವು ಸಿದ್ಧವಾಯಿತು.

### ಮಾಯಾವಾದಿಗಳ ಪ್ರಕಾರ ಈಕ್ಷತ್ಯಧಿಕರಣದ ವ್ಯಾಖ್ಯಾನ

**तत्वप्रदीपः – यदपीदमधिकरणं साङ्ख्यपरिकल्पितप्रधानशाब्दत्व-निराकरणपरमपरे मन्यन्ते । तदपि मुखतः पौर्यापर्यानुसन्धानाच्च सुप्रतीतं स्वमतनिरासमात्रपरत्वं सूत्राणां संवरीतुमुत्प्रेक्षितम्; न पुनः सूत्रतात्पर्य-पर्यालोचनयेति न बहु मन्यामहे ।**

ಸಾಂಖ್ಯರು ಪ್ರಧಾನವು, ಶಬ್ದಪ್ರತಿಪಾದ್ಯವೆಂದು ಹೇಳುತ್ತಾರೆ. ಅದರ ನಿರಾಕರಣೆಗಾಗಿ ಈ ಈಕ್ಷತ್ಯಧಿಕರಣವು ಹೊರಟಿದೆ ಎಂದು ಮಾಯಾವಾದಿಗಳು ವ್ಯಾಖ್ಯಾನ ಮಾಡುತ್ತಾರೆ. ಇದೂ ಸಹ ಅಸಾಧುವಾಗಿವೆ. ಏಕೆಂದರೆ ಈಕ್ಷತ್ಯಧಿಕರಣದಲ್ಲಿರುವ ಪ್ರತಿಯೊಂದು ಸೂತ್ರಗಳು ನೇರವಾಗಿ ಮಾಯಾವಾದಮತದ ನಿರಾಸಕ್ಕೋಸ್ಕರ ಹೊರಟಿವೆ. ಮತ್ತು ಪೌರ್ವಾಪರ್ಯವನ್ನು ಅನುಸಂಧಾನ ಮಾಡಿದಾಗಲೂ ಮಾಯಾವಾದಮತದ ನಿರಾಕರಣೆಗೋಸ್ಕರ ಹೊರಟಿವೆ ಎಂಬುದು ದೃಢವಾಗುತ್ತದೆ. ಇದನ್ನು ಮುಚ್ಚಿಕೊಳ್ಳಲು ಮಾಯಾವಾದಿಗಳು ಸಾಂಖ್ಯಮತದ ನಿರಾಕರಣೆಗೋಸ್ಕರ ಹೊರಟಿದೆ ಎಂದು ಸೂತ್ರಗಳಿಗೆ ಅನ್ಯಾರ್ಥವನ್ನು ಮಾಡುತ್ತಿದ್ದಾರೆ ಹೊರತು, ಸೂತ್ರದ ನಿಜವಾದ ತಾತ್ಪರ್ಯವನ್ನು ಪರ್ಯಾಲೋಚನೆ ಮಾಡಿ, ವ್ಯಾಖ್ಯಾನ

ಮಾಡಲು ಅವರು ಹೊರಟಿಲ್ಲ. ಆದ್ದರಿಂದ ಅವರ ಮತವನ್ನು ನಾವು ಶ್ರೇಷ್ಠವೆಂದು ತಿಳಿಯಲಾರೆವು)

ಮಾಯಾವಾದಿಗಳ ಪ್ರಲಾಪ ಹುಚ್ಚರ ಸಂತೆ

**तत्वप्रदीपः – नहि साङ्ख्यानां प्रधानस्याशाब्दत्वं सिद्धम् । सिद्धवदेव च तैः 'अशब्दं हि तत्' इति हेतुत्वेनोच्यते । अतः प्रकृताननुसारित्वाचायं प्रलापो महोन्मत्तानामिवावभाति ।**

ಪ್ರಧಾನವು ಶಬ್ದಪ್ರತಿಪಾದ್ಯವಲ್ಲವೆಂಬುದು ಸಾಂಖ್ಯರಿಗೆ ಸಿದ್ಧವಾಗಿಲ್ಲ. ಆದ್ದರಿಂದ ಅದ್ವೈತಿಗಳ ಈ ಖಂಡನೆಯು ಪ್ರಕೃತಕ್ಕೆ ಅನನುಗುಣವಾಗಿದೆ. ಇವರ ಪ್ರಲಾಪವು ದೊಡ್ಡ ಹುಚ್ಚರ ಮಾತಿನ ಸಂತೆಯಂತೆ ಕಾಣಸುತ್ತಿದೆ.

ಪ್ರಧಾನಕ್ಕೆ ಶಾಬ್ದತ್ವ ನಿರಾಕರಣೆ ಅಪ್ರಸ್ತುತ

**तत्वप्रदीपः – प्रधाने त्वसमन्वय उपरिष्टात् प्रतिपादयिष्यते सूत्रकारेणैव- 'ईक्षतिकर्मव्यपदेशात् सः' 'न च स्मार्तम्' 'आनुमानिकम्' इत्यादिसूत्रेषु । तस्मात् 'ईक्षतेर्नाशब्दम्' इति ब्रह्मणोऽशब्दत्वमेव निराक्रियते ॥**

ಪ್ರಧಾನವು ಶಬ್ದಪ್ರತಿಪಾದ್ಯವಲ್ಲವೆಂಬುದನ್ನು ಮುಂದೆ ಸೂತ್ರಕಾರರೇ ಪ್ರತಿಪಾದನೆ ಮಾಡುತ್ತಾರೆ. 'ಈಕ್ಷತಿಕರ್ಮವ್ಯಪದೇಶಾತ್ ಸಃ' 'ನ ಚ ಸ್ಮಾರ್ತಮ್', 'ಆನುಮಾನಿಕಮ್' ಇತ್ಯಾದಿ ಸೂತ್ರಗಳು ಪ್ರಧಾನದಲ್ಲಿ ಶಬ್ದಸಮನ್ವಯವಾಗುವುದಿಲ್ಲವೆನ್ನಲು ಹೊರಟಿವೆ. ಆದ್ದರಿಂದ 'ಈಕ್ಷತೇರ್ನಾಶಬ್ದಮ್' ಎಂಬ ಸೂತ್ರವು ಬ್ರಹ್ಮನು ಶಬ್ದಪ್ರತಿಪಾದ್ಯನಲ್ಲ ಎಂಬುದನ್ನೇ ನಿರಾಕರಣೆ ಮಾಡಲು ಹೊರಟಿದೆ ಎಂಬುದು ಸಿದ್ಧವಾಯಿತು.

ಬ್ರಹ್ಮನ ಅಶಬ್ದತ್ವದ ನಿರಾಕರಣೆಗಾಗಿ ಈಕ್ಷತ್ಯಧಿಕರಣ

**तत्वप्रदीपः – इतश्च तदेवाभ्युपगन्तव्यम् । अन्वयो हि नाम शब्दानां मुख्यवृत्तिः । समन्वयस्तु परममुख्यवृत्तिः ।**

ಮತ್ತೊಂದು ಕಾರಣದಿಂದಲೂ ಬ್ರಹ್ಮನ ಅಶಬ್ದತ್ವದ ನಿರಾಕರಣೆಗಾಗಿ ಈಕ್ಷತ್ಯಧಿಕರಣ ಹೊರಟಿದೆಯೆಂಬುದನ್ನು ಅಂಗೀಕಾರ ಮಾಡಬೇಕು. ಹಿಂದಿನ ಸೂತ್ರದಲ್ಲಿ 'ತತ್ತು ಸಮನ್ವಯಾತ್' ಎಂಬುದಾಗಿ ಬ್ರಹ್ಮನಲ್ಲಿ ಸಕಲಶಬ್ದಗಳ ಸಮನ್ವಯವನ್ನು ಹೇಳಲಾಯಿತು. 'ಅನ್ವಯ' ಎಂಬ ಪದಕ್ಕೆ 'ಶಬ್ದಗಳ ಮುಖ್ಯವೃತ್ತಿ' ಎಂದರ್ಥ. 'ಸಮನ್ವಯ' ಎಂಬ ಪದಕ್ಕೆ 'ಪರಮಮುಖ್ಯವೃತ್ತಿ' ಎಂದರ್ಥ.

ಆನಂದಮಯಾಧಿಕರಣವೂ ಕೂಡ ಮಾಯಾವಾದಿಗಳ ನಿರಾಕರಣೆಗಾಗಿ ಹೊರಟಿದೆ

**तत्वप्रदीपः – तत्र शब्दानां ब्रह्मण्यनन्वयवादिनोऽन्वयमात्रप्रतिज्ञानेऽपि संरम्भमारभन्ते । किं पुनः समन्वयप्रतिज्ञायाम् ? अतः ''तत्तु समन्वयात्'' इति समन्वयं सूत्रितमाकर्ण्य, ब्रह्मवाच्यत्ववादिनः प्रत्यवतिष्ठन्ते ।**

ಹೀಗೆ ಹಿಂದಿನ ಸೂತ್ರದಲ್ಲಿ ಪರಮಮುಖ್ಯವೃತ್ತಿಯಿಂದ ಸಕಲ ಶಬ್ದಗಳು ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತವೆಂದು ಸಮರ್ಥಿಸಿದಾಗ ಬ್ರಹ್ಮನಲ್ಲಿ ಯಾವುದೇ ಶಬ್ದಗಳ ಸಮನ್ವಯವಾಗುವುದಿಲ್ಲವೆಂದು ಹೇಳುವ ಮಾಯಾವಾದಿಗೆ ಶಬ್ದಗಳ ಮುಖ್ಯವೃತ್ತಿಯ ಪ್ರತಿಜ್ಞೆಯಿಂದಲೇ ದ್ವೇಷವು ಹುಟ್ಟುತ್ತದೆ. ಸಮನ್ವಯದ ಪ್ರತಿಜ್ಞೆ ಮಾಡಿದಾಗ ಮತ್ತೆಷ್ಟು ದ್ವೇಷ ಹುಟ್ಟಲಿಕ್ಕಿಲ್ಲ. ಆದ್ದರಿಂದ 'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿರುವ ಸಮನ್ವಯ ಎಂಬ ಪದವನ್ನು ಕೇಳಿದ ಕೂಡಲೇ ಬ್ರಹ್ಮನಿಗೆ ಅವಾಚ್ಯತ್ವವನ್ನು ಹೇಳುವ ಮಾಯಾವಾದಿಯು ಸೆಟೆದು ನಿಲ್ಲುತ್ತಾನೆ.

**तत्वप्रदीपः – यावत् तदभिमतं ब्रह्मणोऽशब्दत्वं न निराकृतं, तावदन्वयोऽपि दूरस्थः । किमुत पुनः समन्वयस्सन्निधीयेत । अतो मुखत एव तन्मतव्युदासेन समन्वयप्राप्त्यसम्भवाशङ्कामुच्छिनत्त्यनेनाधिकरणेनेति ज्ञिष्यते ।।**

ಹೀಗಿರುವಾಗ ಮಾಯಾವಾದಿಯ ಅಭಿಪ್ರಾಯವಾಗಿರುವ ಬ್ರಹ್ಮನಿಗೆ ಅಶಬ್ದತ್ವವನ್ನು ಎಲ್ಲಿಯ ತನಕ ನಿರಾಕರಣೆ ಮಾಡುವುದಿಲ್ಲವೋ, ಅಲ್ಲಿಯ ತನಕ ಬ್ರಹ್ಮನಲ್ಲಿ ಶಬ್ದಗಳ ಅನ್ವಯವೇ

ದೂರವಾಗುತ್ತದೆ. ಹೀಗಿರುವಾಗ ಸಮನ್ವಯದ ಸನ್ನಿಧಾನವನ್ನು ಅಪೇಕ್ಷಿಸಲು ಹೇಗೆ ಸಾಧ್ಯವಾಗುತ್ತದೆ? ಆದ್ದರಿಂದ ಈಕ್ಷತ್ಯಧಿಕರಣವು ನೇರವಾಗಿಯೇ ಮಾಯಾವಾದ ಮತದ ನಿರಾಕರಣೆಗಾಗಿ ಹೊರಟಿದೆ. ಸಮನ್ವಯವಿಷಯದಲ್ಲಿ ಮಾಯಾವಾದಿ ಮಾಡಿರುವ ಅಸಂಭವಾಶಂಕೆಯನ್ನು ಬುಡಸಹಿತ ಕಿತ್ತುಹಾಕುತ್ತದೆ ಈ ಅಧಿಕರಣ.

**तत्वप्रदीपः – आनन्दमयाधिकरणे तु, अन्नमयाद्यानन्दमयान्तमब्रह्मरूपं कोशपञ्चकमत्यन्तहेयमुपन्यस्य ह्यानन्दमयस्य ब्रह्मत्वमुपदिदिक्षूणि 'आनन्दमयोऽभ्यासात्' इत्यादीनि सूत्राणि स्वयमेव मायी पूर्वपक्षीचकार । अनयैव दिशा उत्तरसूत्रेष्वपि सुखतरमूहनीयोऽयं न्यायः । प्रकटभावात् ग्रन्थबाहुल्यभयाच्चैवमुपरम्यते ।।**

ಈಕ್ಷತ್ಯಧಿಕರಣದ ಅನಂತರ ಆನಂದಮಯಾಧಿಕರಣವು ಹೊರಟಿದೆ. ಇದೂ ಸಹ ಮಾಯಾವಾದಿಯ ಪೂರ್ವಪಕ್ಷದ ನಿರಾಕರಣೆಗೋಸ್ಕರವೇ ಹೊರಟಿದೆ. ಅನ್ನಮಯದಿಂದ ಆನಂದಮಯದ ತನಕ ಹೇಳಲ್ಪಟ್ಟಿರುವುದು ಬ್ರಹ್ಮನ ರೂಪವಲ್ಲ ಹೊರತು, ಐದು ಕೋಶಗಳಾಗಿವೆ. ಆದ್ದರಿಂದ ಅತ್ಯಂತ ಹೇಯವಾದ ಈ ವಿಷಯವನ್ನು ಉಪನ್ಯಾಸ ಮಾಡಿ ಆನಂದಮಯನಿಗೆ ಬ್ರಹ್ಮತ್ವವನ್ನು ನಿರಾಕರಣೆ ಮಾಡಲು 'ಆನಂದಮಯೋಽಭ್ಯಾಸಾತ್' ಇತ್ಯಾದಿ ಸೂತ್ರಗಳು ಹೊರಟಿವೆ ಎಂದು ಮಾಯಾವಾದಿಯೇ ಪೂರ್ವಪಕ್ಷವನ್ನು ಮಾಡಿದ್ದಾನೆ. ಅವನ ಮತವನ್ನು ನಿರಾಕರಣೆ ಮಾಡುವುದಕ್ಕಾಗಿಯೇ ಸಂಪೂರ್ಣ ಆನಂದಮಯಾಧಿಕರಣವು ಹೊರಟಿದೆ ಎಂದು ತಿಳಿಯಬೇಕು. ಇದೇ ದಿಕ್ಕಿನಲ್ಲಿ ಮುಂದಿನ ಅಧಿಕರಣಗಳನ್ನೂ ಕೂಡ ಮಾಯಾವಾದಮತದ ನಿರಾಕರಣೆಗಾಗಿ ಹೊರಟಿವೆಯೆಂಬುದನ್ನು ಅಧ್ಯಯನ ಮಾಡುವವರು ಸುಖವಾಗಿ ಊಹೆ ಮಾಡಿಕೊಳ್ಳಬಹುದು. ಈ ವಿಷಯವು ಅತ್ಯಂತ ಸ್ಪಷ್ಟವಾಗಿರುವುದರಿಂದ ಮತ್ತು ಗ್ರಂಥಬಾಹುಲ್ಯದ ಭಯದಿಂದ ಇಲ್ಲಿಗೆ ವಿಷಯವನ್ನು ಸಮಾಪ್ತಿ ಮಾಡುತ್ತೇವೆ.

## ತತ್ವಪ್ರಕಾಶಿಕಾ

### ಯುಕ್ತ್ಯಂತರದಿಂದ ವಾಚ್ಯತ್ವ ಸಮರ್ಥನೆ

**तत्वप्रकाशिका – पुनः सिंहावलोनन्यायेन निर्गुणस्य ब्रह्मणो वाच्यत्वं युक्त्यन्तरेण प्रतिपादयत्सूत्रमुपन्यस्य तदुपात्तश्रुतिमेवोदाहरति – श्रुतत्वाच्चेति ।। 'एकः' प्रधानः सर्वभूतेषु गुप्ततयाऽवस्थितः । न केवलं सर्वभूतेषु, सर्वव्यापी च । न सर्वभूतेषु स्थितिमात्रं, सर्वभूतान्तर्यामी च । 'अध्यक्षः' अधिपतिः । सर्वभूतानामाश्रयः । सर्वं साक्षादीक्षत इति साक्षी । 'चेता' ज्ञानरूपः । 'केवलः' जडामिश्रः । 'निर्गुणः' सत्त्वादिगुणहीन इति श्रुतौ निर्गुणस्य श्रुतत्वाच्च, नासावशब्द इत्यर्थः ।**

ಪುನಃ ಸಿಂಹಾವಲೋಕನನ್ಯಾಯದಿಂದ ನಿರ್ಗುಣಬ್ರಹ್ಮನಿಗೆ ಮತ್ತೊಂದು ಯುಕ್ತಿಯಿಂದ ವಾಚ್ಯತ್ವವನ್ನು ಪ್ರತಿಪಾದನೆ ಮಾಡುವುದಕ್ಕಾಗಿ ಸೂತ್ರವನ್ನು ಪಠಿಸಿ, ಸೂತ್ರದಿಂದ ಸೂಚಿತವಾದ ಶ್ರುತಿಯನ್ನು ''ಶ್ರುತತ್ವಾಚ್ಚ'' ಇತ್ಯಾದಿಯಾಗಿ ಉದಾಹರಿಸುತ್ತಿದ್ದಾರೆ. ಏಕಃ = ಪ್ರಧಾನನು ಸರ್ವಭೂತೇಷು ಗೂಢಃ = ಸಕಲಭೂತಗಳಲ್ಲಿ ಗೂಢವಾಗಿ ನೆಲೆಸಿಕೊಂಡಿರುವವನು; ಸರ್ವಭೂತಾಂತಾರಾತ್ಮಾ = ಸರ್ವಭೂತಗಳಲ್ಲಿ ಕೇವಲ ಇರುವವನಲ್ಲದೆ, ನಿಯಾಮಕ-ನಾಗಿರುವವನು ಅಧ್ಯಕ್ಷಃ = ಸಕಲಕ್ಕೂ ಅಧಿಪತಿ. ಸರ್ವಭೂತಾಧಿವಾಸಃ = ಸರ್ವಭೂತಗಳಿಗೆ ಆಶ್ರಯನಾದವನು. ಸಾಕ್ಷೀ = ಸರ್ವವನ್ನೂ ನೇರವಾಗಿ ನೋಡುತ್ತಿರುವವನು. ಚೇತಾ = ಜ್ಞಾನಸ್ವರೂಪನು, ಕೇವಲಃ = ಜಡದಿಂದ ಅಮಿಶ್ರಿತನು. ಸತ್ವಾದಿಗುಣರಹಿತನು, ನಿರ್ಗುಣಃ = ಹೀಗೆ ನಿರ್ಗುಣಪರಮಾತ್ಮನ ಪ್ರತಿಪಾದನೆಯನ್ನು ಶ್ರುತಿಯಲ್ಲಿ ಮಾಡಿರುವುದರಿಂದ ಅವನು ಶಬ್ದಗಳಿಂದ ಅವಾಚ್ಯನಾಗಲಾರ.

### ಪದ ಅವಾಚ್ಯನಿಗೆ ಲಕ್ಷಣಾ ಕೂಡುವುದಿಲ್ಲ

**तत्वप्रकाशिका – श्रुतत्वेऽप्यशब्दः किं न स्यात् इत्यत आह – न हीति ।। अशब्दस्यापि ब्रह्मणो लक्षणया श्रुतत्वं किं न स्यादित्यत आह –**

**न चेति ।। अवाच्यस्य लक्ष्यत्वाप्रसिद्धेः । नाप्रसिद्धमवाच्यस्य ब्रह्मणो लक्ष्यत्वं कल्प्यमित्यर्थः ।**

**ननु गङ्गापदाऽवाच्यस्यापि तीरस्य लक्ष्यत्वं प्रसिद्धमिति वेदावाच्यस्यापि ब्रह्मणस्तल्लक्ष्यत्वं किं न स्यादित्यत आह – सर्वेति ।। भवेदेव तीरादेर्गङ्गादिपदावच्यस्यापि लक्ष्यत्वं, पदान्तरवाच्यत्वात् न तु ब्रह्मणः । तस्य सर्वशब्दावाच्यत्वात् । सर्वशब्दावाच्यस्यापि लक्षणायाः, 'विप्रतिपन्नं न लक्ष्यं केनापि पदेनावाच्यत्वाद् वैधर्म्येण तीरवत्' इत्युक्तिविरुद्धत्वादित्यर्थः । सर्वपदार्थानां लक्षणायोग्यत्वान्न सपक्षसत्वम् ।**

ಪೈಂಗಿಶ್ರುತಿಯಲ್ಲಿ ಪ್ರತಿಪಾದ್ಯನಾಗಿದ್ದರೂ ಏಕೆ ಅವಾಚ್ಯನಾಗಬಾರದು? ಎಂಬ ಪ್ರಶ್ನೆಗೆ 'ನಹಿ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಬ್ರಹ್ಮನು ಅವಾಚ್ಯನಾಗಿದ್ದರೂ ಲಕ್ಷಣಾವೃತ್ತಿಯಿಂದ ಶ್ರುತಿಪ್ರತಿಪಾದ್ಯನಾಗಬಹುದಲ್ಲವೇ? ಎಂಬ ಪ್ರಶ್ನೆಗೆ 'ನಚ' ಎಂಬುದರಿಂದ ಉತ್ತರಿಸುತ್ತಿದ್ದಾರೆ. ಅವಾಚ್ಯಪದಾರ್ಥಕ್ಕೆ 'ಲಕ್ಷ್ಯತ್ವವು ಎಲ್ಲಿಯೂ ಕಂಡಿಲ್ಲ; ಆದ್ದರಿಂದ ಅಪ್ರಸಿದ್ಧವಾದದ್ದನ್ನು ಅವಾಚ್ಯನಾದ ಬ್ರಹ್ಮನಲ್ಲಿ ಲಕ್ಷಣಾವೃತ್ತಿಯಿಂದ ಕಲ್ಪಿಸಬಾರದು' ಎಂದರ್ಥ.

ಗಂಗಾಪದದಿಂದ ಅವಾಚ್ಯವಾದ ತೀರಕ್ಕೆ ಗಂಗಾಪದದ ಲಕ್ಷ್ಯತ್ವವು ಪ್ರಸಿದ್ಧವಾಗಿದೆ. ಅದರಂತೆ ವೇದಅವಾಚ್ಯನಾದ ಬ್ರಹ್ಮನಿಗೂ ವೇದಗಳಿಂದಲೇ ಲಕ್ಷ್ಯತ್ವವನ್ನು ಏಕೆ ಹೇಳಬಾರದು? ಎಂಬ ಪ್ರಶ್ನೆಗೆ 'ಸರ್ವ' ಎಂಬುದರಿಂದ ಉತ್ತರಿಸಿದ್ದಾರೆ. ತೀರಾದಿಗಳು ಗಂಗಾಪದದಿಂದ ಅವಾಚ್ಯವಾಗಿದ್ದರೂ ಗಂಗಾಪದದಿಂದಲೇ ಲಕ್ಷ್ಯವಾಗುತ್ತದೆ. ಏಕೆಂದರೆ ತೀರವು ಗಂಗಾಪದದಿಂದ ಅವಾಚ್ಯವಾಗಿದ್ದರೂ ತೀರಪದದಿಂದ ವಾಚ್ಯವಾಗಿರುತ್ತದೆ. ಆದರೆ ಬ್ರಹ್ಮನಲ್ಲಿ ಹೀಗೆ ಹೇಳಲಾಗದು. ಅವನು ಸಕಲಶಬ್ದಗಳಿಂದಲೂ ಅವಾಚ್ಯನಾಗಿದ್ದಾನೆ. ಸಕಲಶಬ್ದಗಳಿಂದ ಅವಾಚ್ಯನಾಗಿದ್ದರೂ ಲಕ್ಷಣಾವನ್ನು ಮಾಡುತ್ತೇವೆಂದು ಹೇಳಬಾರದು. 'ವಿಪ್ರತಿಪನ್ನಂ ನ ಲಕ್ಷ್ಯಮ್ ಕೇನಾಪಿ ಪದೇನ ಅವಾಚ್ಯತ್ವಾತ್ ವೈಧರ್ಮ್ಯೇಣ ತೀರವತ್' (ಯಾವುದೇ ಪದದಿಂದ ವಾಚ್ಯವಾಗದ್ದು ಯಾವುದೇ ಪದದಿಂದಲೂ ವಾಚ್ಯವಾಗುವುದಿಲ್ಲ; ತೀರವೆಂಬ ವ್ಯತಿರೇಕ-

ದೃಷ್ಟಾಂತವಿರುವುದರಿಂದ) ಎಂಬ ಯುಕ್ತಿಗೆ ವಿರುದ್ಧವಾಗಿರುತ್ತದೆಂದರ್ಥ. ಸಕಲಪದಾರ್ಥವು ಲಕ್ಷಣಾ ಮಾಡಲು ಅಯೋಗ್ಯವಾದ್ದರಿಂದ ಅನುಮಾನಕ್ಕೆ ಸಪಕ್ಷವೇ ಇರುವುದಿಲ್ಲ.

### ವಾಚ್ಯವಾದದ್ದೇ ಲಕ್ಷ್ಯವಾಗುತ್ತದೆ

**तत्वप्रकाशिका – ननु वाच्यत्वं लक्षणायां कथमुपयोगि? येन तदभावेन लक्षणाऽयोगः । किं प्रयाजकान्तरमाशङ्कसे ? प्रयोजकत्वप्रकारमेव वा पृच्छसि?**

ಲಕ್ಷಣಾವೃತ್ತಿಯನ್ನು ಮಾಡಬೇಕಾದರೆ ವಾಚ್ಯತ್ವವಿರಬೇಕೆಂದು ಹೇಳಿದಿರಿ. ಇದು ಹೇಗೆ ಸರಿ? ಏಕೆಂದರೆ ವಾಚ್ಯತ್ವದ ಅಭಾವದಿಂದ ಲಕ್ಷಣಾವೃತ್ತಿಯ ಅಭಾವವನ್ನಾದರೂ ಹೇಗೆ ಸಾಧಿಸುತ್ತೀರಿ? ಎಂಬ ಪ್ರಶ್ನೆಗೆ ಹೀಗೆ ಉತ್ತರಿಸಬೇಕು. ಲಕ್ಷಣಾವೃತ್ತಿಯನ್ನು ಮಾಡಲು ವಾಚ್ಯತ್ವವನ್ನು ಬಿಟ್ಟು ಮತ್ತೊಂದು ಪ್ರಯೋಜಕವನ್ನು ನೀವು ಆಕ್ಷೇಪಿಸುತ್ತಿದ್ದೀರೋ? ಅಥವಾ ವಾಚ್ಯತ್ವವು ಯಾವ ಪ್ರಕಾರದಿಂದ ಲಕ್ಷಣಾವೃತ್ತಿಗೆ ಉಪಯೋಗವಾಗುತ್ತದೆಂದು ಪ್ರಕಾರದ ಬಗ್ಗೆ ಮಾತ್ರ ಪ್ರಶ್ನಿಸುತ್ತಿದ್ದೀರೋ?

### ಲಕ್ಷಣಾವೃತ್ತಿಗೆ ವಾಚ್ಯತ್ವ ಹೊರತಾದ ಪ್ರಯೋಜಕವಿಲ್ಲ

**तत्वप्रकाशिका – नाद्यः । केवलान्ययिनि केवलव्यतिरेकिणि चोपाधिशङ्कानुदयात् । केवलान्वयिनि साध्याभावाभावेन तदविनाभाव्य-भावत्वाभावात् । केवलव्यतिरेकिणि च सपक्षाभावेन व्याप्त्यनिश्चयात् ।**

ಮೊದಲನೆಯ ಪಕ್ಷವು ತಪ್ಪು. ಏಕೆಂದರೆ, ಕೇವಲಾನ್ವಯಿ ಮತ್ತು ಕೇವಲವ್ಯತಿರೇಕಿ ಅನುಮಾನಗಳಲ್ಲಿ ಉಪಾಧಿಯನ್ನು ಶಂಕಿಸುವುದೇ ತಪ್ಪು. ಕೇವಲಾನ್ವಯಿ ಅನುಮಾನದಲ್ಲಿ ಸಾಧ್ಯಾಭಾವವೇ ಇರುವುದಿಲ್ಲವಾದ್ದರಿಂದ ಉಪಾಧ್ಯಭಾವದಿಂದ ಸಾಧ್ಯಾಭಾವವನ್ನು ಸಾಧಿಸಲಾಗದು. ಕೇವಲ ವ್ಯತಿರೇಕಿ ಅನುಮಾನದಲ್ಲಿ ಸಪಕ್ಷವೇ ಇರುವುದಿಲ್ಲವಾದ್ದರಿಂದ ವ್ಯಾಪ್ತಿನಿಶ್ಚಯವಾಗುವುದಿಲ್ಲ.

ವಿವರಣೆ - ಅವಾಚ್ಯನಾದರೆ ವೇದದಲ್ಲಿರುವ ಶಬ್ದಗಳಿಗೆ ಲಕ್ಷಣಾವೃತ್ತಿಯನ್ನೂ ಕೂಡ ಮಾಡಲು ಬರುವುದಿಲ್ಲವೆಂದು ಭಾಷ್ಯದಲ್ಲಿ ಸಮರ್ಥಿಸಲಾಯಿತು. ಈ ಭಾಷ್ಯದ ಮಾತನ್ನು ಗಮನಿಸಿ ಅದ್ವೈತಿಗಳು ವಾಚ್ಯತ್ವವು ಲಕ್ಷಣಾ ಮಾಡಲು ಹೇಗೆ ಉಪಯೋಗವಾಗುತ್ತದೆಂದು ಪ್ರಶ್ನಿಸುತ್ತಾರೆ. ಅದ್ವೈತಿಗಳ ಈ ಪ್ರಶ್ನೆಯನ್ನೇ ವಿಕಲ್ಪ ಮಾಡುವ ಮೂಲಕ ಖಂಡನೆ ಮಾಡುತ್ತಿದ್ದಾರೆ. ಲಕ್ಷಣಾ ಮಾಡಲು ವಾಚ್ಯತ್ವವು ಪ್ರಯೋಜಕವಲ್ಲ ಬೇರೆಯೇ ಪ್ರಯೋಜಕವೆಂಬುದು ಅದ್ವೈತಿಗಳ ಅಭಿಪ್ರಾಯವೋ ? ಅಥವಾ ವಾಚ್ಯತ್ವವು ಯಾವ ಪ್ರಕಾರದಲ್ಲಿ ಲಕ್ಷಣಾವೃತ್ತಿಗೂ ಉಪಯೋಗವಾಗುತ್ತದೆ ? ಎಂಬುದಾಗಿ ಪ್ರಯೋಜಕದ ಬಗ್ಗೆ ಪ್ರಶ್ನೆಯು ಈ ವಿಕಲ್ಪಗಳಿಗೆ ಅದ್ವೈತಿಗಳು ಮೊಟ್ಟಮೊದಲು ಉತ್ತರವನ್ನು ನೀಡಬೇಕು.

''ಬ್ರಹ್ಮ ಶಬ್ದವಾಚ್ಯಂ ಭವತಿ, ಲಕ್ಷಣಾವೃತ್ತ್ಯಾ ಪ್ರತಿಪಾದ್ಯಮಾನತ್ವಾತ್'' ಎಂಬುದಾಗಿ ಕೇವಲಾನ್ವಯಿ ಹೇತುಕವಾದ ಅನುಮಾನವನ್ನು ಮಾಡಿದಾಗ, ಹೇತುವಾಚಕದ ಲಕ್ಷ್ಯತ್ವದಲ್ಲಿ ವಾಚ್ಯತ್ವವು ಪ್ರಯೋಜಕವಾಗುವುದಿಲ್ಲ. ಮತ್ತೊಂದು ಪ್ರಯೋಜಕವೆನ್ನಲು ಉಪಾಧಿಶಂಕೆಯನ್ನು ಮಾಡಲು ಸಾಧ್ಯವಾಗುವುದಿಲ್ಲ. ವಾಚ್ಯತ್ವವಿಲ್ಲದ ಕಡೆ ಬೇರೊಂದು ಪ್ರಯೋಜಕವಿರುವುದು ಯಾರಿಗೂ ಕಂಡಿಲ್ಲ. ಈ ಪ್ರಯೋಜಕವಿರುವುದರಿಂದ ವಾಚ್ಯತ್ವವಿದೆ ಎಂದು ಹೇಳಲು ಬರುವುದಾದರೆ, ವಾಚ್ಯತ್ವಕ್ಕಿಂತಲೂ ಬೇರೆಯಾದದ್ದನ್ನು ಪ್ರಯೋಜಕವೆಂದು ಹೇಳಬಹುದಿತ್ತು. ಆದರೆ ವಾಚ್ಯತ್ವವು ಎಲ್ಲೆಡೆಯೂ ಇರುವುದರಿಂದ, ಅದರ ಅಭಾವವನ್ನು ಎಲ್ಲಿಯೂ ಹೇಳಲು ಸಾಧ್ಯವಾಗುವುದಿಲ್ಲ. ಆದ್ದರಿಂದ ವಾಚ್ಯತ್ವವೇ ಪ್ರಯೋಜಕವಾಗಿದೆ ಹೊರತು, ಮತ್ತೊಂದನ್ನು ಪ್ರಯೋಜಕವೆಂದು ಹೇಳಲು ಸಾಧ್ಯವಿಲ್ಲ.

'ಬ್ರಹ್ಮ ಲಕ್ಷ್ಯಂ ನಭವತಿ ಶಬ್ದೈಃ ಅವಾಚ್ಯತ್ವಾತ್' ಎಂಬುದಾಗಿ ಕೇವಲವ್ಯತಿರೇಕಿ ಹೇತುಕವಾದ ಅನುಮಾನವನ್ನು ಪ್ರಯೋಗಿಸಿದರೆ ಈ ಅನುಮಾನದಲ್ಲಿ ಲಕ್ಷ್ಯತ್ವದ ಅಭಾವವು ನಿರ್ಧಾರವಾದ ಒಂದು ಸಪಕ್ಷವನ್ನೇ ತೋರಿಸಲು ಸಾಧ್ಯವಿಲ್ಲ. ಆದ್ದರಿಂದ ಲಕ್ಷ್ಯತ್ವದ ಅಭಾವ ಹಾಗೂ ವಾಚ್ಯಕತ್ವಕ್ಕಿಂತ ಬೇರೆಯಾದ ಉಪಾಧಿಗೆ ವ್ಯಾಪ್ತಿ ನಿಶ್ಚಯವಾಗಲು ಸಾಧ್ಯವಿಲ್ಲ. ಸಾಧ್ಯದ ಜೊತೆ ವ್ಯಾಪ್ತಿಯ ಸಂಬಂಧವಿಲ್ಲದಿದ್ದರೆ ಉಪಾಧಿಯೆಂದೆ ಕರೆಸಿಕೊಳ್ಳುವುದಿಲ್ಲ.

## ಅವಾಚ್ಯಪದಾರ್ಥದಲ್ಲಿ ಲಕ್ಷಣಾವೃತ್ತಿಯು ಸಾಧ್ಯವಿಲ್ಲ

**तत्वप्रकाशिका – द्वितीये व्याप्तिरेवेति ब्रूमः । किं निबन्धनाऽसावपि ? इति चेत्, द्रव्यत्वसंयोगित्वादौ[१] किं निबन्धना ? अवाच्यस्य लक्षणायां किं लक्ष्यम् ? इति प्रश्नस्य निरुत्तरत्वात् ।**

ಎರಡನೇ ಪಕ್ಷದಲ್ಲಿ 'ವ್ಯಾಪ್ತಿಯ ಮೂಲಕವಾಗಿಯೇ ಅವಾಚ್ಯತ್ವವು ಅಲಕ್ಷ್ಯತ್ವಕ್ಕೆ ಪ್ರಯೋಜಕವಾಗಿದೆ' ಎಂದು ಹೇಳುತ್ತೇವೆ. ಯಾವ ಕಾರಣದಿಂದ ಹೀಗೆ ಹೇಳುತ್ತೀರಿ? ಎಂದರೆ "ದ್ರವ್ಯತ್ವ ಮತ್ತು ಸಂಯೋಗ ಇವುಗಳ ವ್ಯಾಪ್ತಿಗೆ ಏನು ಕಾರಣವಿದೆ? ಎಂದು ನಾವೂ ಕೇಳುತ್ತೇವೆ" ಎಂದು. ಅವಾಚ್ಯವಾದ ಪದಾರ್ಥದಲ್ಲಿ ಲಕ್ಷಣಾವೃತ್ತಿಯನ್ನು ಮಾಡುವುದಾದರೆ ಅಲ್ಲಿ ಲಕ್ಷ್ಯವಾದದ್ದು ಯಾವುದು? ಎಂಬ ಪ್ರಶ್ನೆಗೆ ನಿಮ್ಮಿಂದ ಉತ್ತರಿಸಲಾಗದು.

ವಿವರಣೆ - ವಾಚ್ಯತ್ವವು ಲಕ್ಷಣಾವೃತ್ತಿಯನ್ನು ಕುರಿತು ಯಾವ ರೀತಿಯಲ್ಲಿ ಪ್ರಯೋಜಕವಾಗುತ್ತದೆ ಎಂಬ ಎರಡನೆಯ ಅಭಿಪ್ರಾಯವನ್ನು ಅದ್ವೈತಿಗಳು ತಾಳಿದರೆ ಹೀಗೆ ಉತ್ತರವನ್ನು ನೀಡುತ್ತೇವೆ - ಧೂಮವು ಅಗ್ನಿಗೆ ಪ್ರಯೋಜಕವಾಗಿದೆ ಎನ್ನಲು ಧೂಮ ಮತ್ತು ಅಗ್ನಿಗಳಿಗಿರುವ ವ್ಯಾಪ್ತಿಯು ಹೇಗೆ ನಿಯಾಮಕವೋ, ಅದರಂತೆ ವಾಚ್ಯತ್ವವೂ ಕೂಡ ಲಕ್ಷ್ಯತ್ವಕ್ಕೆ ಪ್ರಯೋಜಕವಾಗಿದೆ ಎನ್ನಲು ಅವುಗಳಿಗಿರುವ ವ್ಯಾಪ್ತಿಯೇ ನಿಯಾಮಕವಾಗಿದೆ. ಧೂಮ ಮತ್ತು ಅಗ್ನಿಗಳಿಗೆ ಕಾರ್ಯಕಾರಣಭಾವವು ಸರ್ವರಿಂದಲೂ ಸಮ್ಮತವಾಗಿದೆ. ಆದ್ದರಿಂದ ಅಲ್ಲಿ ವ್ಯಾಪ್ತಿಯನ್ನು ಹೇಳುವುದು ತಪ್ಪಲ್ಲ. ಆದರೆ ವಾಚ್ಯತ್ವ ಹಾಗೂ ಲಕ್ಷ್ಯತ್ವಗಳಿಗೆ ಕಾರ್ಯಕಾರಣಭಾವವೇ ಕಂಡಿರುವುದಿಲ್ಲ. ಹೀಗಿರುವಾಗ ಇಲ್ಲಿ ವ್ಯಾಪ್ತಿಯನ್ನು ಹೇಳುವುದು ಹೇಗೆ ಸಮಂಜಸವಾಗುತ್ತದೆ ?

ಹೀಗೆ ಪ್ರಶ್ನಿಸಬಾರದು. ಏಕೆಂದರೆ ದ್ರವ್ಯತ್ವ ಮತ್ತು ಸಂಯೋಗಿತ್ವಗಳಿಗೆ ವ್ಯಾಪ್ತಿಯು ಸರ್ವಸಮ್ಮತವಾಗಿದೆ. ಯಾವುದು ಸಂಯೋಗಿಯು ಅದು ದ್ರವ್ಯವಾಗಿದೆ ಎಂದು. ಆದರೆ ಇಲ್ಲಿ ದ್ರವ್ಯತ್ವ ಮತ್ತು ಸಂಯೋಗಿತ್ವಗಳಿಗೆ ಕಾರ್ಯಕಾರಣಭಾವವು ಸರ್ವಥಾ ಇರುವುದಿಲ್ಲ. ಆದರೂ ಕೂಡ ವ್ಯಾಪ್ತಿಯು ಸರ್ವಸಮ್ಮತವಾಗಿದೆ. ಈ ವ್ಯಾಪ್ತಿಗೆ ಏನು ನಿಯಾಮಕ ? ಎಂಬ ಪ್ರಶ್ನೆಗೆ ನಿಮ್ಮಿಂದ ಉತ್ತರಿಸಲಾಗದು. ಒಂದು ವೇಳೆ ದ್ರವ್ಯತ್ವ ಹಾಗೂ ಸಂಯೋಗಿತ್ವಗಳಿಗೆ ವ್ಯಾಪ್ತಿಯನ್ನು ಒಪ್ಪದೇ ಇದ್ದಲ್ಲಿ

(१) द्रव्यत्वसंयोगित्वादौ इत्यत्रादिपदेन रसत्वरूपत्वयोर्ग्रहणम् । -(**गुर्वर्थदीपिका**)

ಸಂಯೋಗಿತ್ವವು ದ್ರವ್ಯತ್ವವಿಶಿಷ್ಟವಾಗದೇ ಇರಬೇಕಾದೀತು ಎಂಬುದಾಗಿ ವಿಪಕ್ಷದಲ್ಲಿ ಬಾಧಕ ತರ್ಕವನ್ನು ಹೇಳುತ್ತೇವೆ. ಈ ಬಾಧಕ ತರ್ಕವೇ ವ್ಯಾಪ್ತಿ ವಿಷಯದಲ್ಲಿ ಆಧಾರವಾಗಿದೆ.

ಪ್ರಕೃತದಲ್ಲಿ ವಾಚ್ಯತ್ವ ಮತ್ತು ಲಕ್ಷ್ಯತ್ವಗಳಿಗೆ ವ್ಯಾಪ್ತಿಯನ್ನು ಒಪ್ಪದಿದ್ದರೆ ಅನವಸ್ಥಾದೋಷವು ಬರುತ್ತದೆ. ಹೀಗೆ ವಿಪಕ್ಷದಲ್ಲಿ ಬಾಧಕ ಇರುವುದರಿಂದ ವಾಚ್ಯತ್ವ ಮತ್ತು ಲಕ್ಷ್ಯತ್ವಗಳಿಗೆ ವ್ಯಾಪ್ತಿಯು ಇದೆಯೆಂದು ಒಪ್ಪಬೇಕು.

### ಲಕ್ಷ್ಯ-ಪ್ರತಿಪಾದಕ ಪದವು ವಾಚಕವೆಂದೇ ಹೇಳಬೇಕು

**तत्वप्रकाशिका – न च तदेव पदं वक्तुं युक्तम् । न हि गङ्गापदेन किं लक्ष्यमिति प्रश्नस्य गङ्गैवेत्युत्तरम् । अथ तत्र पदान्तरम् । तेनापि किं लक्ष्यम् इति प्रश्नस्योत्तराभावात् । अथ किञ्चित्पदमस्ति वाचकमिति चेत् । किं पदान्तरेणापराद्धम् । [1]लक्ष्यपरपदस्य स्वरूपमात्रपरस्य(परत्वेन) वाचकत्वं युक्तम् ।**

'ಆ ಪದಕ್ಕೆ ಅದೇ ಪದವೇ ಲಕ್ಷ್ಯ' ಎಂದು ಹೇಳುವುದು ತಪ್ಪು. ಏಕೆಂದರೆ ಗಂಗಾಪದದಿಂದ ಲಕ್ಷ್ಯವಾದದ್ದು ಯಾವುದು? ಎಂದು ಪ್ರಶ್ನಿಸಿದಾಗ ಗಂಗೆಯೆಂದು ಯಾರೂ ಉತ್ತರಿಸುವುದಿಲ್ಲ. ಆದುದರಿಂದ ಬೇರೆ ಪದವನ್ನೇ ಹೇಳಬೇಕು. ಪುನಃ ಆ ಪದಕ್ಕೆ ಲಕ್ಷ್ಯವಾದದ್ದು ಯಾವುದು? ಎಂದರೆ ನಿಮ್ಮಲ್ಲಿ ಉತ್ತರವಿಲ್ಲ. ಇನ್ನು ಯಾವುದೋ ಒಂದು ಪದವು ವಾಚಕವಾಗಿ ಅಲ್ಲಿದೆ ಎಂದು ಹೇಳಿದರೆ ಬೇರೆ ಪದಗಳಾದರೂ ಏನು ಅಪರಾಧ ಮಾಡಿವೆ? ಆದುದರಿಂದ ಲಕ್ಷ್ಯವನ್ನು ಪ್ರತಿಪಾದಿಸುವ ಪದಕ್ಕೆ ವಾಚಕತ್ವವನ್ನು ಹೇಳಲೇಬೇಕು.

ವಿವರಣೆ - ಅವಾಚ್ಯವಾದ ಪದಕ್ಕೆ ಲಕ್ಷಣಾ ಮಾಡುವುದಾದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಯಲ್ಲಿರುವ ಸತ್ಯಪದಕ್ಕೆ ಎಲ್ಲಿ ಲಕ್ಷಣಾ ಮಾಡುತ್ತೀರಿ ? ಎಂಬ ನಮ್ಮ ಪ್ರಶ್ನೆಗೆ ನಿಮ್ಮಿಂದ ಉತ್ತರಿಸಲಾಗದು. ಸತ್ಯಪದದಿಂದ ಸತ್ಯವೇ ಲಕ್ಷ್ಯವೆಂದು ಹೇಳಲಾಗದು. 'ಗಂಗಾಯಾಂ ಘೋಷಃ' ಎಂಬಲ್ಲಿ ಗಂಗಾಪದದಿಂದ ಲಕ್ಷ್ಯವಾದದ್ದು ಯಾವುದು ? ಎಂದು ಪ್ರಶ್ನಿಸಿದರೆ ಗಂಗೆಯೆಂದು ಯಾರೂ

(೧) ಲಕ್ಷ್ಯಪರಪದಸ್ಯೇತಿ - ಈ ಪ್ರತೀಕಕ್ಕೆ ನೀಡಿದ ಗುರ್ವರ್ಥದೀಪಿಕಾ ವ್ಯಾಖ್ಯಾನದ ವಿಮರ್ಶೆಯನ್ನು ನೋಡಬಹುದು.

ಉತ್ತರ ಕೊಡುವುದಿಲ್ಲ. ಒಂದುವೇಳೆ ಸತ್ಯ ಪದದಿಂದ ಯಾವುದು ಲಕ್ಷ್ಯ ಎಂಬ ಪ್ರಶ್ನೆಗೆ ಬೇರೆ ಪದದಿಂದ ಉತ್ತರಿಸುವುದಾದರೆ, ಆ ಪದಗಳಿಂದಲೂ ಕೂಡ ಲಕ್ಷ್ಯವಾದದ್ದು ಯಾವುದು ? ಎಂದು ಪ್ರಶ್ನಿಸುತ್ತೇವೆ. ಆ ಪ್ರಶ್ನೆಗೆ ನಿಮ್ಮಿಂದ ಉತ್ತರಿಸಲಾಗದು. ಒಂದುವೇಳೆ ಈ ಪ್ರಶ್ನೆಗೆ ಉತ್ತರವನ್ನು ನೀಡಲು ಯಾವುದಾದರೂ ಒಂದು ವಾಚಕಪದವನ್ನು ಒಪ್ಪಿಕೊಂಡರೆ ಒಂದು ಪದ ವಾಚಕವಾದ ಮೇಲೆ ಉಳಿದ ಪದಗಳು ಏಕೆ ವಾಚಕಗಳಾಗಲಾರವು ? ಹೀಗೆ ನಾವು ಮಾಡುವ ಎಲ್ಲಾ ಪ್ರಶ್ನೆ ಹಾಗೇ ಉಳಿಯುತ್ತವೆ ಹೊರತು, ನಿಮ್ಮಿಂದ ಉತ್ತರಿಸಲು ಸಾಧ್ಯವಿಲ್ಲ.

ಲಕ್ಷಣಾ ಮಾಡುವ ಪದಗಳಿಗೂ ಧರ್ಮಬೋಧಕತ್ವವು ಅನಿವಾರ್ಯ

**तत्वप्रकाशिका – पदान्तराणां गुणाभिधायिनां निर्गुणे वृत्तौ लक्षणैव शरणम् ? इति चेन्न । लक्षणपदानामपि लक्ष्यगतविशेषावलम्बेन वाचकत्वोपपत्तेः ।**

ಬೇರೆಲ್ಲ ಪದಗಳು ಗುಣವನ್ನು ಹೇಳುತ್ತಿವೆ. ಆ ಪದಗಳಿಗೆ ನಿರ್ಗುಣನಲ್ಲಿ ಲಕ್ಷಣಾವೃತ್ತಿಯನ್ನು ಮಾಡುವುದು ಅನಿವಾರ್ಯವಲ್ಲವೇ? ಎಂದು ಶಂಕಿಸಬಾರದು. ಲಕ್ಷಣಾ ಮಾಡುವ ಪದಗಳಿಗೂ ಲಕ್ಷ್ಯದಲ್ಲಿರುವ ವಿಶೇಷಧರ್ಮದ ಅವಲಂಬನೆಯೂ ಅನಿವಾರ್ಯವಾದ್ದರಿಂದ ವಾಚಕತ್ವವನ್ನು ಹೇಳಲೇಬೇಕು.

ವಿವರಣೆ - ಲಕ್ಷ್ಯವನ್ನು ತಿಳಿಸುವ ಪದವು ಕೇವಲ ಲಕ್ಷ್ಯದ ಸ್ವರೂಪವನ್ನು ತಿಳಿಸುತ್ತದೆ. ಆದ್ದರಿಂದ ವಾಚಕವಾಗಬಹುದು. ಗುಣವಾಚಕವಾದ ಲಕ್ಷಣಪದಗಳು ನಿರ್ಗುಣನಾದ ಬ್ರಹ್ಮನನ್ನು ತಿಳಿಸಬೇಕಾದರೆ ಲಕ್ಷಣಾ ಮಾಡುವುದು ಅನಿವಾರ್ಯವಲ್ಲವೇ? ಎಂದು ಪ್ರಶ್ನಿಸಬಾರದು. ಸತ್ಯ, ಜ್ಞಾನ ಮೊದಲಾದ ಪದಗಳು ಲಕ್ಷ್ಯಸ್ವರೂಪನಾದ ಬ್ರಹ್ಮನಲ್ಲಿ ಯಾವುದಾದರೂ ಒಂದು ಧರ್ಮಗಳನ್ನು ಹೇಳಲೇ ಬೇಕು. ಆವಾಗ ಆ ಶಬ್ದಗಳು ವಾಚಕವಾಗುತ್ತವೆ.

ಕೇವಲ ಸ್ವರೂಪಬೋಧಕವಾದರೆ ಪರ್ಯಾಯತ್ವ ದೋಷ

**तत्वप्रकाशिका – लक्षणपदानां स्वरूपमात्रपरतेति चेन्न । प्रयोजनबाहुल्याद पर्याययतेति चेन्न, वाच्यविशेषराहित्ये प्रयोजनशतेनाऽपि पर्यायताऽपरिहारात्।**

ಲಕ್ಷಣಾ ಮಾಡುವ ಪದಗಳಿಗೆ ಕೇವಲ ಸ್ವರೂಪಬೋಧಕತ್ವವನ್ನು ಒಪ್ಪಬಾರದು. ಹಾಗಾದಲ್ಲಿ ಪದಗಳೆಲ್ಲವೂ ಪರ್ಯಾಯಗಳಾಗಬೇಕೆಂಬ ದೋಷ ಬರುತ್ತದೆ. ಅನೇಕ ಪ್ರಯೋಜನವಿರುವುದರಿಂದ ಪರ್ಯಾಯಪದಗಳಾಗಲಾರವು ಎಂದು ಹೇಳಲಾಗದು. ವಾಚ್ಯವಾದ ಪದಾರ್ಥದಲ್ಲಿ ಯಾವುದೇ ಧರ್ಮಗಳು ಇಲ್ಲದಿದ್ದಾಗ ನೂರಾರು ಪ್ರಯೋಜಕಗಳಿದ್ದರೂ ಪರ್ಯಾಯತ್ವದೋಷವನ್ನು ಪರಿಹರಿಸಲು ಸಾಧ್ಯವಿಲ್ಲ.

ವಿವರಣೆ - ಪ್ರಮಾಣದಿಂದ ಬ್ರಹ್ಮನು ಅವಾಚ್ಯನಾಗಿದ್ದಾನೆಂದು ಸಿದ್ಧವಾಗಿದೆ. ಆದ್ದರಿಂದ 'ಸತ್ಯಂ ಜ್ಞಾನಮನಂತಮ್' ಎಂಬ ಶ್ರುತಿಯಲ್ಲಿರುವ ಪದಗಳು ಲಕ್ಷಣಾವೃತ್ತಿಯಿಂದಲೇ ಬ್ರಹ್ಮನನ್ನು ಪರಿಚಯಿಸಬೇಕಲ್ಲವೇ? ಹೀಗೆ ಶಂಕಿಸಬಾರದು. ಏಕೆಂದರೆ ಸತ್ಯ, ಜ್ಞಾನ, ಅನಂತ ಈ ಪದಗಳು ಲಕ್ಷಣಾವೃತ್ತಿಯಿಂದ ಬ್ರಹ್ಮಸ್ವರೂಪವನ್ನಷ್ಟೇ ಹೇಳುವುದಾದರೆ ಎಲ್ಲಾ ಪದಗಳು ಒಂದೇ ಅರ್ಥವನ್ನು ಹೇಳಿದ ಕಾರಣ, ಪರ್ಯಾಯಪದಗಳಾಗುತ್ತವೆ. 'ಸತ್ಯ' ಎಂಬ ಪದಕ್ಕೆ ಅಸತ್ಯ ಅಲ್ಲ ಎಂದರ್ಥ. ಜ್ಞಾನ ಪದಕ್ಕೆ ಅಜ್ಞಾನವಲ್ಲ ಎಂದರ್ಥ. ಅನಂತ ಪದಕ್ಕೆ ಸಾಂತವಲ್ಲ ಎಂದರ್ಥ. ಹೀಗೆ ಅಸತ್ಯತ್ವಾದಿಗಳ ವ್ಯಾವೃತ್ತಿ ಮೊದಲಾದ ಪ್ರಯೋಜನಗಳಿರುವುದರಿಂದ ಸ್ವರೂಪವನ್ನಷ್ಟೇ ಪ್ರತಿಪಾದನೆ ಮಾಡುವುದಾದರೂ ಪರ್ಯಾಯತ್ವ ದೋಷವು ಬರುವುದಿಲ್ಲವೆಂದು ಅದ್ವೈತಿಗಳಿಗೆ ಸಮರ್ಥಿಸಲಾಗದು. ಏಕೆಂದರೆ ಪ್ರತಿಪಾದ್ಯವಾದ ಪ್ರಮೇಯದಲ್ಲಿ ಯಾವುದೇ ವೈಶಿಷ್ಟ್ಯವಿಲ್ಲದಾಗ ಸಾವಿರಾರು ಪ್ರಯೋಜನಗಳಿದ್ದರೂ ಪರ್ಯಾಯತಾದೋಷವನ್ನು ಪರಿಹರಿಸಲು ಸಾಧ್ಯವಿಲ್ಲ.

### ಲಕ್ಷಣಾವೃತ್ತಿಗೆ ವಾಚ್ಯತ್ವವು ಅನಿವಾರ್ಯ

**तत्वप्रकाशिका – स्वरूपमात्रकथनस्य प्रश्नानानुगुण्याच्च । न हि स्वरूपमज्ञात्वा 'कश्चन्द्रः?' इति प्रश्नो युज्यते । अतो न लक्षणपदानामपि लक्षकत्वमित्यस्त्येव वाच्यत्वस्य लक्षणोपयोगः ।**

ಮತ್ತು ಕೇವಲ ಸ್ವರೂಪವನ್ನೇ ಅನೇಕ ಪದಗಳಿಂದ ಹೇಳುವುದರಲ್ಲಿ ಅರ್ಥವಿಲ್ಲ. ಮತ್ತು ಪ್ರಶ್ನೆಗೆ ಅನುಗುಣವೂ ಆಗಿರುವುದಿಲ್ಲ. ಏಕೆಂದರೆ ಚಂದ್ರನ ಸ್ವರೂಪವೇ ತಿಳಿಯದ ವ್ಯಕ್ತಿಯು 'ಯಾರು ಚಂದ್ರ?' ಎಂದು ಪ್ರಶ್ನಿಸಲಾರ. ಆದುದರಿಂದ ಲಕ್ಷಣಪದಗಳಿಗೂ ಲಕ್ಷಣಾವೃತ್ತಿಗೆ ವಿಷಯತ್ವವನ್ನು ಹೇಳಲು ಸಾಧ್ಯವಿಲ್ಲ. ಆದ್ದರಿಂದ ಲಕ್ಷಣಾವೃತ್ತಿಗೆ ವಾಚ್ಯತ್ವವು ಅನಿವಾರ್ಯವಾಗಿದೆ.

ವಿವರಣೆ - ಬ್ರಹ್ಮನು ಯಾವ ಸ್ವರೂಪದವನು ? ಎಂದು ಪ್ರಶ್ನಿಸಿದಾಗ ಕೇವಲ ಬ್ರಹ್ಮಸ್ವರೂಪದ ಬಗ್ಗೆ ಉತ್ತರಿಸುವುದರಿಂದ ಆಕಾಂಕ್ಷೆಯು ಶಾಂತವಾಗುವುದಿಲ್ಲ. ಮತ್ತು ಬ್ರಹ್ಮಸ್ವರೂಪವನ್ನು ತಿಳಿಯದೇ ಎಂತಹ ಲಕ್ಷಣವುಳ್ಳವನು ಬ್ರಹ್ಮನಾಗಿದ್ದಾನೆ ಎಂದು ಪ್ರಶ್ನಿಸಲು ಸಾಧ್ಯವಿಲ್ಲ. ಘಟದ ಸಾಮಾನ್ಯ ಜ್ಞಾನವಿಲ್ಲದಾಗ ಘಟದಲ್ಲಿ ಏನಿದೆ ? ಎಂಬ ಪ್ರಶ್ನೆಯು ಹೇಗೆ ಬರುವುದಿಲ್ಲವೋ, ಅದರಂತೆ.

ಆದ್ದರಿಂದ ಲಾಕ್ಷಣಿಕವಾದ ಪದಗಳೂ ಕೂಡ ವಾಚಕವಾಗಿರಲೇಬೇಕು. ಹೀಗೆ ಲಕ್ಷಣಾವೃತ್ತಿಯಿಂದ ಬ್ರಹ್ಮನು ಪ್ರತಿಪಾದ್ಯನೆಂದು ಅದ್ವೈತಿಗಳು ಸಮರ್ಥನೆ ಮಾಡಲು ಶಬ್ದವಾಚ್ಯತ್ವವನ್ನು ಮೊದಲು ಅವರು ಒಪ್ಪಿಕೊಳ್ಳಬೇಕೆಂದು ಸಿದ್ಧವಾಯಿತು.

ಬ್ರಹ್ಮನು ಸಮಸ್ತ ಜಗತ್‌ಕಾರಣನೆಂದು ಶ್ರುತಿಗಳಿಂದ ಸಿದ್ಧವಾಯಿತು

**तत्वप्रकाशिका – तस्मात् वाच्यत्वाद् ब्रह्मणोऽखिलजगत्कारणतया शास्त्रयोनिता युक्तेति लक्षणं नातिव्याप्तम् । ततश्च तद्युक्तब्रह्मणो विष्णुत्वाद्युक्तैव तज्जिज्ञासेति सिद्धम् ।।११।।**

ಈ ಎಲ್ಲ ಕಾರಣಗಳಿಂದ 'ಬ್ರಹ್ಮನು ವಾಚ್ಯನಾಗಿದ್ದಾನೆ. ಆದ್ದರಿಂದಲೇ ಸಮಸ್ತಜಗತ್ಕಾರಣ-ನಾಗಿದ್ದಾನೆಂದು ಶ್ರುತಿಗಳಿಂದ ಪ್ರತಿಪಾದ್ಯನಾಗಿದ್ದಾನೆ. ಆದ್ದರಿಂದಲೇ ಜಗತ್ಕಾರಣತ್ವವೆಂಬ ಬ್ರಹ್ಮನ ಲಕ್ಷಣಕ್ಕೆ ಅತಿವ್ಯಾಪ್ತಿದೋಷವು ಬರುವುದಿಲ್ಲ. ಆದ್ದರಿಂದಲೇ ಇಂತಹ ಜಗತ್ಕಾರಣತ್ವಲಕ್ಷಣದಿಂದ ಕೂಡಿದ ಬ್ರಹ್ಮನೇ ವಿಷ್ಣುವಾದ್ದರಿಂದ ಅವನ ಜಿಜ್ಞಾಸೆಯನ್ನು ಮಾಡಬೇಕೆಂಬುದು ಯುಕ್ತವೇ ಆಗಿದೆ''.

॥ ಇಲ್ಲಿಗೆ ಶ್ರೀಮಜ್ಜಯತೀರ್ಥಮುನಿಗಳಿಂದ ವಿರಚಿತವಾದ ತತ್ವಪ್ರಕಾಶಿಕಾಟೀಕೆಯ ಕನ್ನಡಾನುವಾದವು ಸಂಪೂರ್ಣವಾಯಿತು ॥

॥ ಪಾದಪೀಠವೆನಿಸಿದ ಪಂಚಾಧಿಕರಣಗಳು ಸಮಾಪ್ತವಾದವು ॥

## ಭಾವದೀಪ

### 'ಏಕೋ ದೇವಃ' ಶ್ರುತ್ಯರ್ಥ

**भावदीपः – ।। श्रुतत्वाच्च ।। श्रुतिमेवेति ।।** एवकारो नत्वर्थमित्याचष्टे। तेन 'एको देवः' इति श्रुतिरिति सूचितम् । इतिशब्दान्तभाष्यस्य सूत्रेणान्वयः । भाष्ये 'केवलो निर्गुणश्च' इत्येतावदेव वाच्ये 'एको देवः' इत्यादिविशेषोक्तिर्गुणपदेन सत्त्वादिरेव ग्राह्यो न धर्ममात्रं धर्मविधायक-पूर्ववाक्यविरोधादित्यभिप्रायेणेति मत्त्वा पदानां पौनरुक्त्यनिरासायार्थमाह – **एकः प्रधान इत्यादिना ।।** जडामिश्रः = **प्राकृतदेहहीनः ।** 'तत्र हेतुः निर्गुण इति' व्यक्तं कर्मनिर्णयटीकायाम् ।

'ಶ್ರುತಿಮೇವ' ಎಂಬ ಅಂಶದಲ್ಲಿ ಏವ ಎಂಬ ಶಬ್ದದಿಂದ ಶ್ರುತಿಯನ್ನೇ ಅಂದರೆ ಅರ್ಥವನ್ನಲ್ಲ ಎಂಬ ಅಂಶವನ್ನು ತಿಳಿಸಿದ್ದಾರೆ. ಇದರಿಂದಾಗಿ 'ಏಕೋ ದೇವಃ' ಇತ್ಯಾದಿ ಉದಾಹೃತಪ್ರಮಾಣವು ಶ್ರುತಿಯಾಗಿದೆ ಎಂದು ಸೂಚಿತವಾಗುತ್ತದೆ. ಭಾಷ್ಯದಲ್ಲಿ 'ಇತಿ'ಶಬ್ದದ ವರೆಗಿನ ಅಂಶವನ್ನು ಸೂತ್ರದೊಂದಿಗೆ ಅನ್ವಯ ಮಾಡಬೇಕು. ಭಾಷ್ಯದಲ್ಲಿ 'ಕೇವಲೋ ನಿರ್ಗುಣಶ್ಚ' ಎಂಬಷ್ಟೇ ಅಂಶವನ್ನು ಹೇಳಬೇಕಾಗಿದ್ದರೂ 'ಏಕೋ ದೇವಃ' ಇತ್ಯಾದಿ ಉಳಿದ ಎಲ್ಲಾ ಅಂಶಗಳನ್ನು ಹೇಳಿರುವುದರಿಂದ ಇಲ್ಲಿ ಗುಣಪದದಿಂದ ಸತ್ವಾದಿಗುಣಗಳನ್ನೇ ಸ್ವೀಕರಿಸಬೇಕು ಹೊರತು ಎಲ್ಲಾ ಧರ್ಮಗಳನ್ನಲ್ಲ ಎಂದು ತಿಳಿಯಬೇಕು. ಏಕೆಂದರೆ ಬ್ರಹ್ಮನಲ್ಲಿ ಧರ್ಮಗಳನ್ನು ವಿಧಿಸುವ ಹಿಂದಿನ ವಾಕ್ಯಗಳಿಂದ ವಿರೋಧ ಬರುತ್ತದೆ ಎಂಬ ಅಭಿಪ್ರಾಯವನ್ನು ಭಾಷ್ಯಕಾರರು ಇರಿಸಿಕೊಂಡಿದ್ದಾರೆ. ಇದನ್ನು ತಿಳಿದು ಪದಗಳಿಗೆ ಪುನರುಕ್ತಿ ಬರದಂತೆ "ಏಕಃ ಪ್ರಧಾನಃ" ಇತ್ಯಾದಿ ವಾಕ್ಯಗಳಿಂದ ಪದಗಳ ಅರ್ಥವನ್ನು ಬಿಡಿಸಿದ್ದಾರೆ. 'ಜಡಾಮಿಶ್ರಃ' ಎಂಬ ಪದಕ್ಕೆ 'ಪ್ರಾಕೃತದೇಹದಿಂದ ಹೀನನಾದವನು' ಎಂದರ್ಥ. ಇದಕ್ಕೆ (ಜಡಾಮಿಶ್ರಃ ಎಂಬ ಪದಕ್ಕೆ ಇದೇ ಅರ್ಥವಿಟ್ಟುಕೊಳ್ಳಬೇಕು ಎಂಬ ವಿಷಯದಲ್ಲಿ) ಹೇತುವಿನ ರೂಪದಲ್ಲಿ 'ನಿರ್ಗುಣಃ' ಎಂಬ ಪದವನ್ನು ಶ್ರುತಿಯಲ್ಲಿ ಹೇಳಿದ್ದಾರೆ ಎಂದು ಕರ್ಮನಿರ್ಣಯಟೀಕೆಯಲ್ಲಿ ವ್ಯಕ್ತವಾಗಿದೆ.

ಲಕ್ಷಣಾಬೀಜ

**भावदीपः** – भाष्ये 'श्रुतौ' इति, 'निर्गुणस्य' इति च पदद्वयं योज्यमिति मत्वाऽन्वयमाह – **इति श्रुताविति** ।। **श्रुतत्वाच्चेति** ।। 'न केवलमीक्षतेः श्रुत्युक्तत्वाच्च इत्युक्तहेतुद्वयेन' इत्यर्थः । अत्रापि 'तत् नाशब्दम्' इत्याद्यसूत्रादनुवर्त्यमित्युत्तरभाष्येण सूचनादाह – **नासावशब्द इत्यर्थ इति** ।।

भाष्ये 'लक्षणाऽयुक्तेः' इत्यत्र लक्षणाया अयुक्तेर्युक्तिविरुद्धत्वादित्यर्थ इत्याह – **लक्षणाया इति** ।। **केनापीति** ।। एतेन भाष्ये सर्वशब्दादवाच्यस्येति पूर्वभागो हेतुसमर्पक इति सूचितम् । **वैधर्म्येणेति** ।। 'यल्लक्ष्यं तत् केनापि पदेन वाच्यं यथा तीरादि' इत्यर्थः । **लक्षणेति** ।। 'लक्षणां प्रति योग्यत्वात्' इत्यर्थः ।

ಭಾಷ್ಯದಲ್ಲಿ 'ಶ್ರುತೌ' ಎಂಬುದಾಗಿ ಮತ್ತು 'ನಿರ್ಗುಣಸ್ಯ' ಎಂದು ಎರಡು ಪದಗಳನ್ನು ಸೇರಿಸಿಕೊಳ್ಳಬೇಕು ಎಂಬ ಅಭಿಪ್ರಾಯದಿಂದ ''ಇತಿ ಶ್ರುತೌ'' ಇತ್ಯಾದಿಯಾಗಿ ಅನ್ವಯವನ್ನು ಹೇಳಿದ್ದಾರೆ. ''ಶ್ರುತತ್ವಾಚ್ಚ'' ಎಂಬ ಪದಕ್ಕೆ 'ಜ್ಞಾನವಿಷಯನಾಗಿದ್ದಾನೆ ಎಂಬ ಕಾರಣದಿಂದ ಮಾತ್ರವಲ್ಲ ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ ಎಂಬ ಕಾರಣದಿಂದಲೂ. ಹೀಗೆ ಎರಡು ಕಾರಣಗಳಿಂದ' ಎಂಬುದಾಗಿ ಅರ್ಥ. ಈ ಸೂತ್ರದಲ್ಲೂ ಕೂಡ 'ತತ್ ನ ಅಶಬ್ದಮ್' ಎಂಬ ಪದಗಳನ್ನು ಹಿಂದಿನ ಸೂತ್ರದಿಂದ ಅನುವೃತ್ತಿ ಮಾಡಬೇಕು. ಈ ಅಂಶವು ಭಾಷ್ಯದಲ್ಲಿಯೇ ಮುಂದೆ ಸೂಚಿತವಾಗಿರುವುದರಿಂದ 'ನಾಸೌ ಅಶಬ್ದಃ ಇತ್ಯರ್ಥಃ' ಎಂಬುದಾಗಿ ವಿವರಣೆ ನೀಡಿದ್ದಾರೆ.

ಭಾಷ್ಯದಲ್ಲಿ 'ಲಕ್ಷಣಾಽಯುಕ್ತೇಃ' ಎಂಬುದಾಗಿ 'ಲಕ್ಷಣಾವು ಯುಕ್ತಿವಿರುದ್ಧವಾಗಿರುವುದರಿಂದ' ಎಂಬ ಅರ್ಥವನ್ನು ಹೇಳಬೇಕೆಂಬ ಅಭಿಪ್ರಾಯದಿಂದ ''ಲಕ್ಷಣಾಯಾಃ'' ಇತ್ಯಾದಿ ವಾಕ್ಯವನ್ನು ಹೇಳಿದ್ದಾರೆ. ''ಕೇನಾಪಿ'' ಎಂಬ ಅಂಶದಿಂದ 'ಭಾಷ್ಯದಲ್ಲಿರುವ 'ಸರ್ವಶಬ್ದಾವಾಚ್ಯಸ್ಯ' ಎಂಬ ಪೂರ್ವ ಅಂಶವು ಹೇತುವನ್ನು ವಿವರಿಸುತ್ತಿದೆ' ಎಂದು ಸೂಚಿತವಾಗುತ್ತದೆ. ''ವೈಧರ್ಮ್ಯೇಣ'' ಎಂಬ ಭಾಗಕ್ಕೆ 'ಯಾವುದು ಲಕ್ಷ್ಯವಾಗಿದೆಯೋ ಅದು ಯಾವುದಾದರೂ ಒಂದು ಪದದಿಂದ ವಾಚ್ಯವೇ ಆಗಿರುತ್ತದೆ;

ಇದಕ್ಕೆ ಕ್ಷೀರಾದಿಗಳು ದೃಷ್ಟಾಂತ' ಎಂಬುದಾಗಿ ಅರ್ಥ. ''ಲಕ್ಷಣಾಯೋಗ್ಯತ್ವಾತ್'' ಎಂಬ ಪದಕ್ಕೆ ಲಕ್ಷಣಾವನ್ನು ಕುರಿತು ಯೋಗ್ಯವಾಗಿರುವುದರಿಂದ ಎಂದು ಅರ್ಥ.

ಅಸಾಧಾರಣ ಅನೈಕಾಂತಿಕ ಇಲ್ಲ

**भावदीपः – न सपक्षसत्वमिति** ।। 'सति सपक्षे तत्रावर्तमानो हेतुरसाधारणः' इत्युक्तेरिह निश्चितसाध्यवतः सपक्षस्यैवाभावात् नासाधारण इति भावः । **केवलान्वयिनीति** ।। दृष्टान्तत्वेन वा ब्रह्म वाच्यं लक्ष्यत्वात् इत्यभिप्रेतकेवलान्वय्युपयोगतया वा तदुक्तिः । तद् व्यनक्ति – **केवलेति** ।। **तदविनाभावीति** ।। 'साध्याभावाविनाभूताभावप्रतियोगिन एव उपाधित्वात्' इति भावः । 'साध्याविनाभूताभावी स उपाधिर्यदत्ययः' इत्युक्तेः ।

''ನ ಸಪಕ್ಷಸತ್ವಮ್'' ಎಂಬ ಅಂಶದಿಂದ 'ಅನುಮಾನದಲ್ಲಿ ಸಪಕ್ಷವಿದ್ದು, ಅಲ್ಲಿ ಹೇತುವಿಲ್ಲದಿದ್ದರೆ ಅಂತಹ ಅನುಮಾನವು ಅಸಾಧಾರಣ ಎಂಬ ದೋಷವುಳ್ಳದ್ದು' ಎಂದು ಹೇಳಿರುವುದರಿಂದ ಇಲ್ಲಿ ಸಾಧ್ಯನಿಶ್ಚಯವುಳ್ಳ ಸಪಕ್ಷವೇ ಇಲ್ಲದಿರುವ ಪ್ರಯುಕ್ತ ಅಸಾಧಾರಣರೂಪವಾದ ದೋಷವಿಲ್ಲ – ಎಂಬ ಅಭಿಪ್ರಾಯವನ್ನು ತಿಳಿಸಿದ್ದಾರೆ. 'ಪ್ರಕೃತ ವಿಷಯದಲ್ಲಿ ದೃಷ್ಟಾಂತರೂಪವಾಗಿ ಅಥವಾ 'ಬ್ರಹ್ಮ ವಾಚ್ಯಂ ಲಕ್ಷ್ಯತ್ವಾತ್' ಎಂಬ ಕೇವಲಾನ್ವಯಿ ಅನುಮಾನವನ್ನು ಅಭಿಪ್ರಾಯದಲ್ಲಿ ಇಟ್ಟುಕೊಂಡು ಅದಕ್ಕೆ ಉಪಯೋಗವಾಗಲಿ ಎಂಬಂತೆ ಹೇಳಲಾಗಿದೆ. ಅದನ್ನು ''ಕೇವಲ'' ಇತ್ಯಾದಿ ವಾಕ್ಯದಿಂದ ವ್ಯಕ್ತಪಡಿಸುತ್ತಿದ್ದಾರೆ. ''ತದವಿನಾಭಾವಿ'' ಎಂಬ ಅಂಶದಿಂದ 'ಸಾಧ್ಯಾಭಾವವು ಎಲ್ಲೆಲ್ಲಾ ಇದೆಯೋ ಅಲ್ಲಿ ಎಲ್ಲಾ ಕಡೆ ಇರುವ ಅಭಾವಕ್ಕೆ ಯಾವುದು ಪ್ರತಿಯೋಗಿಯಾಗಿದೆಯೋ ಅದನ್ನೇ ಉಪಾಧಿ ಎಂದು ಸ್ವೀಕರಿಸಿರುವುದರಿಂದ' ಎಂದು ಅರ್ಥ. ಇದನ್ನು 'ಸಾಧ್ಯಾಭಾವಾವಿನಾಭಾವೀ ಸ ಉಪಾಧಿರ್ಯದತ್ಯಯಃ' ಎಂಬ ಉಕ್ತಿಯು ಸ್ಪಷ್ಟಪಡಿಸಿದೆ.

ವಿಪಕ್ಷ ಬಾಧಕತರ್ಕವಿರುವ ವ್ಯಾಪ್ತಿಯು ಅತ್ಯಂತ ಬಲಿಷ್ಠ

**भावदीपः – व्याप्तीति** ।। 'सव्यापकत्वानिश्चयात्' इत्यर्थः । **द्वितीय इति** ।। 'प्रयोजकत्वप्रकारप्रश्न' इत्यर्थः । कार्यकारणभावादेरेव धूमाग्न्यादाविव व्याप्तिनिबन्धनत्वं मत्वा पृच्छति – **किं निबन्धनेति** ।।

**तथात्वे द्रव्यत्वादौ तदभावात् सा न स्यादिति भावेनाह – द्रव्यत्वेति ।। संयोगितायाः द्रव्यत्वावच्छेद्यत्वहानिरेव विपक्षे बाधिका तयोर्व्याप्तिनिबन्धनं चेत् तर्हीहापि किं तत्? इत्यनवस्थितिरित्यनुभाष्योक्तानवस्था विपक्षे बाधिकेति तां व्यनक्ति – अवाच्यस्येति ।। वाच्यसम्बन्धितया ज्ञातस्यैव लक्ष्यत्वादौप-निषदस्य चाशब्देनाज्ञानात् किं लक्ष्यमिति प्रश्नो निरुत्तरः स्यादित्यर्थः ।**

''ವ್ಯಾಪ್ತ್ಯನಿಶ್ಚಯಾತ್'' ಎಂಬ ಪದಕ್ಕೆ 'ಸವ್ಯಾಪಕತ್ವವು ನಿಶ್ಚಯವಾಗಿಲ್ಲದಿರುವುದರಿಂದ' ಎಂಬುದಾಗಿ ಅರ್ಥ. 'ದ್ವಿತೀಯೇ' ಎಂಬ ಪದಕ್ಕೆ 'ಪ್ರಯೋಜಕತ್ವವನ್ನು ಪ್ರಶ್ನಿಸುವ ಎರಡನೆಯ ಪ್ರಕಾರದಲ್ಲಿ' ಎಂಬುದಾಗಿ ಅರ್ಥ. ''ಕಿಂ ನಿಬಂಧನಾ'' ಎಂಬ ಅಂಶವು 'ಧೂಮಾದಿಗಳಲ್ಲಿ ವ್ಯಾಪ್ತಿಯನ್ನು ತೋರಿಸಲು ಕಾರ್ಯಕಾರಣಭಾವರೂಪವಾದ ಸಂಬಂಧವಿರುವಂತೆ ಇಲ್ಲಿ ವ್ಯಾಪ್ತಿಯನ್ನು ತೋರಿಸಲು ಯಾವ ಸಂಬಂಧವಿದೆ?' ಎಂಬುದಾಗಿ ಪ್ರಶ್ನರೂಪವಾಗಿದೆ. ನಾವು ಲಕ್ಷಣಾದ ವಿಷಯದಲ್ಲಿ ವಾಚ್ಯತ್ವದ ವ್ಯಾಪ್ತಿ ಇರುವುದರಿಂದ ಪ್ರಯೋಜಕ ಎಂದು ಹೇಳಿದಾಗ ನೀವು ಈ ವ್ಯಾಪ್ತಿಗೆ ಮೂಲ ಯಾವುದು? ಎಂದು ಪ್ರಶ್ನಿಸುವಿರಾದರೆ 'ದ್ರವ್ಯತ್ವ, ಸಂಯೋಗಿತ್ವಾದಿಗಳನ್ನು ಕಾರ್ಯಕಾರಣಭಾವರೂಪವಾದ ಮೂಲವನ್ನು ತಿಳಿಸಲು ಸಾಧ್ಯವಿಲ್ಲದಿರುವುದರಿಂದ ಅಲ್ಲೂ ವ್ಯಾಪ್ತಿಯನ್ನು ಒಪ್ಪಿಕೊಳ್ಳದೇ ಇರಬೇಕಾದೀತು' ಎಂಬ ಅಭಿಪ್ರಾಯದಿಂದ ''ದ್ರವ್ಯತ್ವ'' ಇತ್ಯಾದಿ ವಾಕ್ಯ ಹೊರಟಿದೆ. 'ದ್ರವ್ಯತ್ವ ಸಂಯೋಗಿತ್ವಗಳಲ್ಲಿ ವ್ಯಾಪ್ತಿಯನ್ನು ಒಪ್ಪಿಕೊಳ್ಳದೇ ಹೋದರೆ ಸಂಯೋಗಿತ್ವಕ್ಕೆ ದ್ರವ್ಯತ್ವಾವಚ್ಛೇದ್ಯತ್ವವು ಹೊಂದದೇ ಹೋಗಬೇಕಾದೀತು' ಎಂಬ ಅನಿಷ್ಟಾಪತ್ತಿರೂಪವಾದ ಬಾಧಕವು ಇರುವುದರಿಂದ ಅವೆರಡರಲ್ಲಿ ವ್ಯಾಪ್ತಿಯನ್ನು ಒಪ್ಪಿಕೊಳ್ಳಲು ಇದೇ ಮೂಲವಾಗಿದೆ ಎಂದು ಹೇಳುವುದಾಗಿದ್ದರೆ ಪ್ರಕೃತದಲ್ಲೂ ಕೂಡ ಅಣುಭಾಷ್ಯದಲ್ಲಿ ಹೇಳಿದಂತೆ 'ಕಿಂ ತದಿತ್ಯನವಸ್ಥಿತಿಃ' ಎಂಬುದಾಗಿ ಅನವಸ್ಥಾರೂಪವಾದ ವಿಪಕ್ಷದಲ್ಲಿ ಬಾಧಕವಿರುವುದರಿಂದ ಇಲ್ಲಿ ವ್ಯಾಪ್ತಿಯನ್ನು ಒಪ್ಪಿಕೊಳ್ಳಲೇಬೇಕು ಎಂಬ ಅಂಶವನ್ನು ''ಅವಾಚ್ಯಸ್ಯ'' ಇತ್ಯಾದಿ ವಾಕ್ಯದಿಂದ ಸ್ಪಷ್ಟಪಡಿಸುತ್ತಿದ್ದಾರೆ. 'ಯಾವುದು ವಾಚ್ಯಸಂಬಂಧಿ ಎಂದು ತಿಳಿದಿದೆಯೋ ಅದೇ ಲಕ್ಷ್ಯವಾಗಿರುವುದರಿಂದ ಪ್ರಕೃತದಲ್ಲಿ ಉಪನಿಷತ್ತಿನಿಂದ ಗಮ್ಯನಾದ ಬ್ರಹ್ಮನು ಅಶಬ್ದನಾದುದರಿಂದ ಅವನ ಜ್ಞಾನ ಇಲ್ಲದಿರುವುದರಿಂದ ಇಲ್ಲಿ ಲಕ್ಷ್ಯ ಯಾವುದು? ಎಂಬ ಪ್ರಶ್ನೆಯು ಉತ್ತರವಿಲ್ಲದೇ ಉಳಿದು ಬಿಡುತ್ತದೆ' ಎಂಬುದಾಗಿ ಅಭಿಪ್ರಾಯವನ್ನು ಗ್ರಹಿಸಬೇಕು.

## ಲಕ್ಷಣಾ ಒಪ್ಪುವವರಿಗೆ ಅನವಸ್ಥಾ

**भावदीपः –** ननु कुतो निरुत्तरत्वं तज्ज्ञानार्थं यल्लाक्षणिकमित्युक्तं तदेव पदं वा पदान्तरं वोत्तरमुच्यत इत्यतो न द्वयमपीति क्रमेणोपपादयति – **न च तदेवेत्यादिना ।। उत्तरमिति ।।** 'तदर्थस्यैवाज्ञानात्' इति भावः । ननु सत्यज्ञानादिरूपलक्षणवाक्ये लक्ष्यार्पकं ब्रह्मपदं वाचकम् । सत्यादि पदानि लाक्षणिकानीति शङ्कते – **अथ किञ्चिदिति ।।** 'तथा च नानवस्था' इति भावः ।

ಇಲ್ಲಿ ನಿರುತ್ತರತ್ವವು ಹೇಗೆ? ಏಕೆಂದರೆ ಆ ವಸ್ತುವಿನ ಜ್ಞಾನಕ್ಕೋಸ್ಕರ ಯಾವುದು ಲಾಕ್ಷಣಿಕವೆಂದು ಹೇಳಿದೆಯೋ ಅದೇ ಪದವನ್ನಾಗಲೀ ಅಥವಾ ಬೇರೆ ಪದವನ್ನಾಗಲೀ ಉತ್ತರವಾಗಿ ಹೇಳಬಹುದಲ್ಲವೇ? ಎಂಬ ಶಂಕೆಗೆ ಈ ಎರಡೂ ಸಾಧ್ಯವಿಲ್ಲೆಂಬುದಾಗಿ "ನ ಚ ತದೇವ" ಇತ್ಯಾದಿ ವಾಕ್ಯದಿಂದ ಕ್ರಮವಾಗಿ ಸಮರ್ಥನೆ ಮಾಡುತ್ತಿದ್ದಾರೆ. "ಇತ್ಯುತ್ತರಮ್" ಎಂಬ ವಾಕ್ಯದಿಂದ 'ಗಂಗಾ ಪದದ ಅರ್ಥವೇ ತಿಳಿಯದಿರುವುದರಿಂದ ಗಂಗಾಪದದಿಂದ ಲಕ್ಷ್ಯ ಯಾವುದು? ಎಂಬ ಪ್ರಶ್ನೆಗೆ ಗಂಗಾಪದವನ್ನೇ ಉತ್ತರವಾಗಿ ಹೇಳಲು ಸಾಧ್ಯವಿಲ್ಲ' ಎಂಬ ಅಭಿಪ್ರಾಯವನ್ನು ಗ್ರಹಿಸಬೇಕು. ಸತ್ಯಜ್ಞಾನಾದಿರೂಪವಾದ ಲಕ್ಷಣವಾಕ್ಯದಲ್ಲಿ ಲಕ್ಷ್ಯವನ್ನು ತಿಳಿಸುವ ಬ್ರಹ್ಮಪದವು ವಾಚಕವೇ ಆಗಿದೆ; ಸತ್ಯಾದಿಪದಗಳು ಲಾಕ್ಷಣಿಕಪದಗಳು ಎಂಬ ಶಂಕೆಯನ್ನು "ಅಥ ಕಿಂಚಿತ್" ಇತ್ಯಾದಿ ವಾಕ್ಯದಿಂದ ಹೇಳುತ್ತಿದ್ದಾರೆ. 'ಹೀಗೆ ವಾಚಕವಾದ ಒಂದು ಪದ ಇರುವುದರಿಂದ ಅನವಸ್ಥಾರೂಪದೋಷಕ್ಕೆ ಆಸ್ಪದವಿಲ್ಲ' ಎಂಬುದಾಗಿ ಅಭಿಪ್ರಾಯ.

ಸತ್ಯಜ್ಞಾನಾದಿ ವಾಕ್ಯದಲ್ಲಿ ಬ್ರಹ್ಮಪದವನ್ನೇ ವಾಚಕ ಎಂದು ಹೇಳಿ, ಉಳಿದ ಪದಗಳು ಲಾಕ್ಷಣಿಕ ಪದಗಳು ಎನ್ನುವುದಾದರೆ ಸತ್ಯ, ಜ್ಞಾನ, ಅನಂತ, ಈ ಪದಗಳೂ ಕೂಡ ವಾಚಕವೇ ಆಗಲಿ ಎಂಬ ಶಂಕೆಗೆ ನಿಮ್ಮಲ್ಲಿ ಉತ್ತರ ಇಲ್ಲದಿರುವುದರಿಂದ ಸತ್ಯಪದವು ವಾಚಕ, ಬ್ರಹ್ಮಪದವು ಲಾಕ್ಷಣಿಕ ಎಂಬ ಅಭಿಪ್ರಾಯವನ್ನೂ ಹೇಳಬಹುದಾದ್ದರಿಂದ ಯಾವುದು ವಾಚಕ? ಯಾವುದು ಲಾಕ್ಷಣಿಕ? ಎಂಬ ವಿಷಯದಲ್ಲಿ ವ್ಯವಸ್ಥೆಯೇ ಇಲ್ಲದಿರುವುದರಿಂದ ಅನವಸ್ಥಾರೂಪದೋಷವು ಬರುತ್ತದೆ.

## ವಾಚಕತ್ವ ಪಕ್ಷದಲ್ಲಿ ಅನವಸ್ಥಾ ಇಲ್ಲ

**भावदीपः –** ननु वाचकपदस्यापि गृहीतशक्तिकस्यैव बोधकत्वाज्ज्ञात एवार्थे शक्तेर्ग्राह्यत्वेन किमस्य वाच्यमिति प्रश्नापर्यवसानेनानवस्था इति

चेन्न । अभिमान्यधिकरणे 'शास्त्रोक्तवस्तुनश्चैव व्युत्पत्तिः शास्त्रलिङ्गतः' इत्यनुव्याख्यानसुधयोरुक्तदिशा यौगिकानां पदानां वाक्यतुल्यतया पृथक्सङ्गतिग्रहानपेक्षणात् । एवं च प्रागभिप्रेतकेवलान्वयिन्यनवस्थारूप-तर्कपराहतिरपरास्तेति बोध्यम् । लक्ष्यस्वरूपमात्रपरस्यापि प्रवृत्तिहेतु-विशेषाभावेन न तस्यापि वाचकत्वम् । तथाप्यभ्युपेत्य लक्षणपदानां तत्साधयति – **लक्षणेति** ।।

ಇಲ್ಲಿ ಹೀಗೊಂದು ಪ್ರಶ್ನೆ ಬರಬಹುದು. ವಾಚಕವಾದ ಪದಕ್ಕೂ ಕೂಡ ಶಕ್ತಿಗ್ರಹಣ ಆದ ನಂತರವೇ ಬೋಧಕತ್ವವು ಇರುವುದರಿಂದ, ಆ ಶಕ್ತಿಯಾದರೂ ಜ್ಞಾತವಾದ ಅರ್ಥದಲ್ಲೇ ಗ್ರಾಹ್ಯವಾದುದರಿಂದ 'ಈ ಪದದಿಂದ ವಾಚ್ಯವಾದುದು ಯಾವುದು?' ಎಂಬ ಪ್ರಶ್ನೆಯು ಉಳಿದೇ ಬಿಡುತ್ತದೆ. ಆದುದರಿಂದ ಅನವಸ್ಥಾ ಇದ್ದೇ ಇದೆಯಲ್ಲವೇ? ಎಂದು. ಇದಕ್ಕೆ ಉತ್ತರವಾಗಿ ಅಭಿಮಾನ್ಯಧಿಕರಣದಲ್ಲಿ 'ಶಾಸ್ತ್ರೋಕ್ತವಸ್ತುನಶ್ಚೈವ ವ್ಯುತ್ಪತ್ತಿಃ ಶಾಸ್ತ್ರಲಿಂಗತಃ'' ಎಂಬ ಅನುವ್ಯಾಖ್ಯಾನ ಮತ್ತು ಸುಧಾದಲ್ಲಿ ಹೇಳಿರುವಂತೆ ಯೌಗಿಕವಾದ ಪದಗಳಿಗೆ ವಾಕ್ಯಸಾದೃಶ್ಯವನ್ನು ಒಪ್ಪಿಕೊಂಡಿರುವುದರಿಂದ ಪ್ರತ್ಯೇಕವಾಗಿ ಸಂಗತಿಗ್ರಹಣವು ಅಗತ್ಯವಿಲ್ಲ. ಹಾಗಾಗಿ ಹಿಂದೆ ಆಲೋಚಿಸಿದ 'ಬ್ರಹ್ಮ ವಾಚ್ಯಂ ಲಕ್ಷ್ಯತ್ವಾತ್' ಎಂಬ ಕೇವಲಾನ್ವಯಿ ಅನುಮಾನದಲ್ಲಿ ಅನವಸ್ಥಾರೂಪವಾದ ತರ್ಕದಿಂದ ಬಾಧಕವನ್ನು ನಿವಾರಣೆ ಮಾಡಿದಂತಾಗುತ್ತದೆ. ವಾಸ್ತವಿಕವಾಗಿ ಯಾವುದಾದರೂ ಒಂದು ಪದವು ಲಕ್ಷ್ಯಸ್ವರೂಪಮಾತ್ರವನ್ನು ತಿಳಿಸಿಕೊಡುತ್ತಿದ್ದರೆ ಪ್ರವೃತ್ತಿಗೆ ಕಾರಣವಾದ ವಿಶೇಷವನ್ನು ತಿಳಿಸಿಕೊಡದೇ ಇದ್ದರೆ ಅದಕ್ಕೂ ವಾಚಕತ್ವವು ಇಲ್ಲವೇ ಇಲ್ಲ. ಹಾಗಿದ್ದರೂ ಅದನ್ನು ಒಪ್ಪಿಕೊಂಡು ಲಕ್ಷಣಪದಗಳಿಗೆ ''ಲಕ್ಷಣಾ'' ಇತ್ಯಾದಿ ವಾಕ್ಯಗಳಿಂದ ವಾಚಕತ್ವವನ್ನು ಸಾಧಿಸುತ್ತಿದ್ದಾರೆ.

ದೋಷಗಳಿಂದ ಸಿಕ್ಕಿಹಾಕಿಕೊಂಡ ಅದ್ವೈತಿಗಳು

**भावदीपः** – ननु –

लक्ष्यार्थभेदाभावेऽपि व्यवच्छेद्यविभेदतः ।
विज्ञानानन्दपदयोः पर्यायव्यर्थते कुतः ।।

इत्युक्तेः 'सत्यादिपदानामनृतादिव्यावृत्तिबोधः प्रयोजनमस्ति' इति शङ्कते – **प्रयोजनेति** ।। तदुक्तमनुव्याख्याने –

सत्यज्ञानादिकेप्येवं न व्यावृत्त्या प्रयोजनम् ।
व्यावृत्तस्याविशेषत्वे तदखण्डं च खण्डितम् ।।' इति ।

**प्रश्नेति** ।। 'ब्रह्मविदाप्नोति परम्' इत्युक्तौ 'किं ब्रह्म?' इति लक्षणप्रश्ने 'सत्यं ज्ञानमनन्तं ब्रह्म' इति लक्षणवाक्यस्य प्रवृत्तेरिति भावः । 'स्वरूपमात्र एव प्रश्नोऽस्तु' इत्यत आह – **न हीति** ।।

ಇಲ್ಲಿ

''ಲಕ್ಷ್ಯಾರ್ಥಭೇದಾಭಾವೇಽಪಿ ವ್ಯವಚ್ಛೇದ್ಯವಿಭೇದತಃ।
ವಿಜ್ಞಾನಾನಂದಪದಯೋಃ ಪರ್ಯಾಯವ್ಯರ್ಥತೇ ಕುತಃ॥

ಎಂಬಲ್ಲಿ ಹೇಳಿರುವಂತೆ ಸತ್ಯಾದಿಪದಗಳಿಗೆ ಅಸತ್ಯಾದಿಗಳನ್ನು ವ್ಯಾವೃತ್ತಿ ಮಾಡುವಲ್ಲಿ ಪ್ರಯೋಜನ ಎಂಬುದಾಗಿ ''ಪ್ರಯೋಜನ'' ಇತ್ಯಾದಿ ವಾಕ್ಯದಿಂದ ಶಂಕೆ ಮಾಡುತ್ತಿದ್ದಾರೆ.

''ವಾಚ್ಯವಿಶೇಷ'' ಇತ್ಯಾದಿ ವಾಕ್ಯದಿಂದ 'ವಾಚ್ಯವಾದ ವಸ್ತುವಿನಲ್ಲಿ ವಿಶೇಷವನ್ನು ತಿಳಿಸಿಕೊಡದೇ ಇದ್ದರೆ ಬೇರೆ ಯಾವ ಪ್ರಯೋಜನವಿದ್ದರೂ ಪರ್ಯಾಯತ್ವವು ಇದ್ದೇ ಇದೆ' ಎಂಬರ್ಥವನ್ನು ಸ್ವೀಕರಿಸಬೇಕು. ಇದನ್ನು

'ಸತ್ಯಜ್ಞಾನಾದಿಕೇಪ್ಯೇವಂ ನ ವ್ಯಾವೃತ್ತ್ಯಾ ಪ್ರಯೋಜನಮ್ ।
ವ್ಯಾವೃತ್ತಸ್ಯಾವಿಶೇಷತ್ವೇ ತದಖಂಡಂ ಚ ಖಂಡಿತಮ್ ॥'

ಎಂಬ ಅನುವ್ಯಾಖ್ಯಾನವಾಕ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

''ಪ್ರಶ್ನ'' ಇತ್ಯಂಶದಿಂದ 'ಬ್ರಹ್ಮವಿದಾಪ್ನೋತಿ ಪರಮ್' ಎಂಬುದಾಗಿ ಹೇಳಿದಾಗ 'ಈ ಬ್ರಹ್ಮ ಯಾರು?' ಎಂಬ ಲಕ್ಷಣಪ್ರಶ್ನೆಯಲ್ಲಿ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬುದಾಗಿ ಲಕ್ಷಣವಾಕ್ಯವು ಅಲ್ಲಿ ಹೊರಟಿರುವುದರಿಂದ ಅದಕ್ಕೆ ಅನುಗುಣವಾಗಿಯೇ ಅರ್ಥವನ್ನು ಹೇಳಬೇಕು - ಎಂದು ಅಭಿಪ್ರಾಯ.

ಕೇವಲ ಸ್ವರೂಪವನ್ನು ತಿಳಿಯುವ ಉದ್ದೇಶದಿಂದ ಮಾತ್ರ ಅಲ್ಲಿ ಪ್ರಶ್ನೆಯೆಂದು ಏಕೆ ಹೇಳಬಾರದು? ಎಂಬುದಕ್ಕೆ ಉತ್ತರವಾಗಿ "ನ ಹಿ" ಇತ್ಯಾದಿ ವಾಕ್ಯ ಹೊರಟಿದೆ.

ಅಧಿಕರಣದ ಫಲ

**भावदीपः** – अधिकरणार्थं फलोक्त्या उपसंहरति – **तस्मादिति** ।। ईक्षणीयत्वयुक्त्यनुगृहीतवाच्यत्वबोधकश्रुतिस्मृतिरूपश्रुत्युक्तत्वरूपश्रुतत्व रूपसाधकसद्भावादिति ईक्षतेरित्याद्युक्तहेत्वर्थानुवादः(१) । तत्सिद्धं नाशब्दं हि तदिति साध्यांशार्थं हेतूकृत्य फलमाह – **वाच्यत्वादित्यादिना**।। अत्र सूत्राणां पौर्वापर्यबीजं टीकायां प्रतिसूत्रमवतारिकादिभिरेवोपल(भ्य)क्ष्यते। स्पष्टीकृतं च चन्द्रिकायाम् ।

"ತಸ್ಮಾದ್" ಇತ್ಯಾದಿ ವಾಕ್ಯದಿಂದ ಈ ಅಧಿಕರಣದ ಅರ್ಥವನ್ನು ಈ ಸೂತ್ರಗಳಿಂದ ಫಲಿತವಾದ ಅರ್ಥವನ್ನು ತಿಳಿಸುವ ಮೂಲಕ ಉಪಸಂಹಾರ ಮಾಡುತ್ತಿದ್ದಾರೆ. ಈಕ್ಷಣೀಯತ್ವಯುಕ್ತಿಯಿಂದ ಅನುಗೃಹೀತವಾದ ವಾಚ್ಯತ್ವವನ್ನು ಬೋಧಿಸುವ ಶ್ರುತಿಸ್ಮೃತಿರೂಪವಾದ ಶ್ರುತ್ಯುಕ್ತತ್ವ ಎಂಬ ಶ್ರುತತ್ವರೂಪ ಹೇತು ಇರುವುದರಿಂದ ಎಂಬುದಾಗಿ 'ಈಕ್ಷತೇಃ' ಇತ್ಯಾದಿಯಾಗಿ ಈ ಹಿಂದೆ ಹೇಳಿದ ಸೂತ್ರಗತ ಹೇತುಗಳ ಅರ್ಥವನ್ನು ('ತಸ್ಮಾತ್' ಎಂಬುದಾಗಿ) ಇಲ್ಲಿ ಅನುವಾದ ಮಾಡಿದ್ದಾರೆ. ಈ ಹೇತುವಿನಿಂದ ಸಿದ್ಧವಾದ 'ನ ಅಶಬ್ದಂ ಹಿ ತತ್' ಎಂಬ ಸಾಧ್ಯದ ಅರ್ಥವನ್ನು ಇಲ್ಲಿ ಹೇತುವಾಗಿಸಿಕೊಂಡು ಇದರಿಂದ ಬಂದ ಫಲಿತಾಂಶವನ್ನು 'ವಾಚ್ಯತ್ವಾತ್' ಇತ್ಯಾದಿ ವಾಕ್ಯದಿಂದ ಸಮರ್ಥಿಸುತ್ತಿದ್ದಾರೆ.

---

(१) अधिकरणार्थमुपसंहरति – **तस्मादिति** ।। तत्राद्यसूत्रे साक्षाद् वाच्यत्वसाधकेक्षणीयत्वोक्तिः । द्वितीये तस्यासिद्धिशङ्कानिरासाय आत्मशब्दरूपहेतूक्तिः । तृतीये आत्मशब्दस्य गौणपरत्वनिरासाय आत्मनिष्ठस्य मोक्षोपदेशोक्तिः । चतुर्थे तत्रैव आत्मशब्दवाच्यस्य अहेयत्ववचनं हेयत्वावचनोक्तिः । पञ्चमे ब्रह्मणो वाच्यत्वसाधकश्रुत्युक्तत्वस्यासिद्धिपरिहाराय स्वाप्ययवचनोक्तिः । षष्ठसमन्वयसूत्रगतसंशब्दार्थसमर्थनम् । सप्तमे वाच्यत्वसाधकश्रुतत्वरूपहेतूक्तिः । तस्यां इत्यन्यानुगतिसामान्यस्य श्रुतत्वात् इत्यर्थस्यापि विवक्षितत्वात् इति द्रष्टव्यम् । -(तत्त्वसुबोधिनी)

ಈ ಅಧಿಕರಣದಲ್ಲಿ ಸೂತ್ರಗಳನ್ನು ಹೇಳಿದ ಕ್ರಮಕ್ಕೆ ಕಾರಣವನ್ನು ಟೀಕೆಯಲ್ಲಿ ಪ್ರತಿಯೊಂದು ಸೂತ್ರದಲ್ಲಿ ಹೇಳಿದ ಅವತರಣಿಕೆಯಿಂದಲೇ ನಾವು ತಿಳಿದುಕೊಳ್ಳಬಹುದು. ಈ ವಿಷಯವನ್ನು ಚಂದ್ರಿಕೆಯಲ್ಲೂ ಸ್ಪಷ್ಟಪಡಿಸಿದ್ದಾರೆ.

### ರಾಮಾನುಜಮತ ನಿರಾಸ

**भावदीपः** – यदत्र केनचिद् रामानुजीयेन पाराशर्यविजये सूत्राक्षराणां स्वमते स्वारस्यमस्मन्मतार्थे चास्वारस्यमुत्प्रेक्षितम् । तदसमञ्जसम् ।

'प्रतिसूत्रं प्रकाश्येते घटनाघटने मया ।
स्वीयान्यपक्षयोः सम्यग् विदां कुर्वन्तु सूरयः ।।'

इति प्रतिज्ञाय तथैव प्रतिसूत्रं चन्द्रिकायां प्रतिपादितत्वात् ।

ಈ ಸಂದರ್ಭದಲ್ಲಿ ರಾಮಾನುಜೀಯ ಮತದ ಯಾರೋ ಒಬ್ಬರು 'ಪಾರಾಶರ್ಯವಿಜಯ' ಎಂಬ ಗ್ರಂಥದಲ್ಲಿ ತಮ್ಮ ಮತದಂತೆ ಸೂತ್ರಾಕ್ಷರಗಳಿಗೆ ಸ್ವಾರಸ್ಯವನ್ನು ನಮ್ಮ ಮತದಂತೆ ಅಸ್ವಾರಸ್ಯವನ್ನು ಉತ್ಪ್ರೇಕ್ಷೆ ಮಾಡಿದ್ದಾರೆ. ಇದು ಸರಿಯಲ್ಲ. ಚಂದ್ರಿಕೆಯಲ್ಲಿ

ಪ್ರತಿಸೂತ್ರಂ ಪ್ರಕಾಶ್ಯೇತೇ ಘಟನಾಘಟನೇ ಮಯಾ ।
ಸ್ವೀಯಾನ್ಯಪಕ್ಷಯೋಃ ಸಮ್ಯಗ್ ವಿದಾಂ ಕುರ್ವಂತು ಸೂರಯಃ ।।

ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿರುವ ಪ್ರತಿಯೊಂದು ಸೂತ್ರಗಳ ವ್ಯಾಖ್ಯಾನವು ನಮ್ಮ ಪಕ್ಷದಲ್ಲಿ ಯುಕ್ತವೆಂದು ಪರಕೀಯಪಕ್ಷದಲ್ಲಿ ಅಯುಕ್ತವೆಂದು ತೋರಿಸುತ್ತಿದ್ದೇವೆ. ಜ್ಞಾನಿಗಳನ್ನು ಇದನ್ನು ವಿವೇಕದಿಂದ ಗಮನಿಸಬೇಕು ಎಂಬುದಾಗಿ ಪ್ರತಿಜ್ಞೆ ಮಾಡಿ ಅದೇ ರೀತಿಯಾಗಿ ಪ್ರತಿಯೊಂದು ಸೂತ್ರದಲ್ಲೂ ಈ ಅಂಶಗಳನ್ನು ವಿಮರ್ಶೆ ಮಾಡಿದ್ದಾರೆ.

### 'ಈಕ್ಷತೇರ್ನಾಶಬ್ದಮ್' ಎಂಬ ಸೂತ್ರಕ್ಕೆ ಕೆಲವರ ಅಭಿಪ್ರಾಯ ನಿರಾಕರಣೆ

**भावदीपः** – किञ्च । यदुक्तमाद्यसूत्रे ज्ञानादित्येव वाच्यम् । नन्वीक्षतेरिति । ज्ञानकर्मत्वस्य हेतुत्वेनेक्षणपर्यन्तत्वस्य व्यर्थत्वादिति । तन्न । तस्यैव तदर्थत्वात् । 'पुरुषमीक्षते' इति श्रुत्यनुसारार्थत्वात् ।

श्रुतावीक्षत इत्येतदौपदेशिकज्ञानपरमिति सूचनार्थत्वाच्च ।

यद्यप्यशब्दम् इति पदं शब्दगुणकं नेत्यर्थस्यैवोपस्थापकं न तु वाच्यं नेत्यर्थस्य 'अशब्दमस्पर्शम्' इति श्रुतौ स्पर्शादिगुणराहित्यप्रायपाठादिति। तदपि न । अशब्दमित्यादेरवाच्यार्थतायाः द्व्यर्थतायाः टीकायामेवोक्तत्वात्। परैस्तथा व्याख्यानाच्च ।

ಅಲ್ಲದೆ, ಇಲ್ಲಿ ಯಾರೋ ಒಬ್ಬರು -- ಮೊದಲನೆಯ ಸೂತ್ರದಲ್ಲಿ 'ಈಕ್ಷತೇಃ' ಎಂದು ಹೇಳುವುದರ ಬದಲು 'ಜ್ಞಾನಾತ್' ಎಂಬುದಾಗಿಯೇ ಹೇಳಬಹುದಿತ್ತು. ಜ್ಞಾನಕರ್ಮತ್ವವೇ ಅಲ್ಲಿ ಹೇತುವಾಗಿರುವುದರಿಂದ ಈಕ್ಷಣಾತ್ ಎಂಬಲ್ಲಿಯವರೆಗೆ ಹೇತುವನ್ನು ಎಳೆದಿದ್ದು ವ್ಯರ್ಥವಾಗಿದೆ' - ಎಂದು ಹೇಳುತ್ತಾರೆ. ಅದು ಸರಿಯಲ್ಲ. 'ಈಕ್ಷತೇಃ' ಎಂಬ ಹೇತುವಿಗೆ ಜ್ಞಾನಕರ್ಮತ್ವ ಎಂಬುದಾಗಿ ಅರ್ಥ. ಅಲ್ಲದೇ ಶ್ರುತಿಯಲ್ಲಿ 'ಪುರುಷಮೀಕ್ಷತೇ' ಎಂದು ಹೇಳಿರುವುದರಿಂದ ಇದಕ್ಕೆ ಅನುಸಾರಿಯಾಗಿ 'ಈಕ್ಷತೇಃ' ಎಂಬ ಹೇತುವನ್ನು ಹೇಳಿದ್ದು ಸರಿ. ಅಷ್ಟೇ ಅಲ್ಲದೆ '' ಶ್ರುತಿಯಲ್ಲಿ 'ಈಕ್ಷತೇ' ಎಂಬುದರಿಂದ ಉಪದೇಶದಿಂದ ತಿಳಿದ ಜ್ಞಾನವನ್ನು ಗ್ರಹಿಸಬೇಕು'' ಎಂಬುದಾಗಿ ಸೂಚನೆಯನ್ನು ನೀಡುವುದೂ ಕೂಡ ಈ ರೀತಿ ಹೇಳುವುದರ ಪ್ರಯೋಜನವಾಗಿದೆ.

ಮತ್ತೆ ಕೆಲವರು -- 'ಅಶಬ್ದಂ' ಎಂಬ ಪದವು 'ಶಬ್ದವೆಂಬ ಗುಣ ಬ್ರಹ್ಮನಲ್ಲಿ ಇಲ್ಲ' ಎಂಬುದಾಗಿ ಆ ಶಬ್ದದ ಅರ್ಥವನ್ನಷ್ಟೇ ತಿಳಿಸುತ್ತದೆ; ಹೊರತು ನೀವು ಹೇಳುವಂತೆ ವಾಚ್ಯವಲ್ಲ ಎಂಬರ್ಥವನ್ನು ತಿಳಿಸುವುದಿಲ್ಲ. ಏಕೆಂದರೆ 'ಅಶಬ್ದಮಸ್ಪರ್ಶಮ್' ಎಂಬ ಶ್ರುತಿಯಲ್ಲಿ ಸ್ಪರ್ಶವೇ ಮೊದಲಾದ ಗುಣಗಳಿಲ್ಲ ಎಂಬುದಾಗಿ ಅನೇಕ ಗುಣಗಳನ್ನೇ ನಿಷೇಧ ಮಾಡಿರುವುದರಿಂದ ಈ ಪ್ರಾಯಪಾಠಕ್ಕೆ ಅನುಸಾರವಾಗಿ 'ಅಶಬ್ದಂ' ಎಂಬುದಕ್ಕೂ ಹೀಗೆಯೇ ಅರ್ಥ ಹೇಳಬೇಕು - ಎನ್ನುತ್ತಾರೆ. ಅದೂ ಸರಿಯಲ್ಲ. 'ಅಶಬ್ದಂ' ಇತ್ಯಾದಿ ಪದಗಳಿಗೆ 'ಅವಾಚ್ಯಮ್' ಇತ್ಯಾದಿ ಅರ್ಥಗಳನ್ನು ಟೀಕೆಯಲ್ಲಿಯೇ ಸ್ಪಷ್ಟಪಡಿಸಿದ್ದಾರೆ. ಪರರೂ ಕೂಡ ಇದೇ ರೀತಿಯಾಗಿ ವ್ಯಾಖ್ಯಾನ ಮಾಡಿದ್ದಾರೆ.

ಬ್ರಹ್ಮಸೂತ್ರಭಾಷ್ಯವು ದೇವತೆಗಳಿಂದಲೂ ಮಾನ್ಯ

**भावदीपः** – यदपि 'गौणश्चेत्' इति सूत्रे जीव एव दृश्यो न ब्रह्मेति शङ्का ब्रह्मणो दृश्यत्वादृश्यत्वाभ्यां व्याहत्या नोदेतुमर्हतीति तदपि परेण स्वतःसिद्धब्रह्मणः स्वव्यतिरिक्तसंवित्कर्मत्वानङ्गीकारेण तदीयशङ्काया एव

सूत्रेऽनुवादादित्याद्यूह्यम् । अधिकं चन्द्रिकाप्रकाशेऽस्माभिः कृतं ध्येयम् । यदपि केनचित् शैवेन पञ्चाधिकरणीप्रमेयदूषणमुत्प्रेक्षितं तदपि गुरुपादकृतकण्टकोद्धारे निपुणतरं निरस्तम् । तस्मात् –

देवोत्तमैर्लालनीयो भाष्यकारनिरूपितः ।
सूत्रार्थोनेकमानेतः सर्वैर्ग्राह्यो बुभूषुभिः ॥

'ಗೌಣಶ್ಚೇತ್'' ಎಂಬ ಸೂತ್ರದಲ್ಲಿ - 'ಜೀವನೇ ದೃಶ್ಯನಾಗಿದ್ದಾನೆ; ಬ್ರಹ್ಮನಲ್ಲ' ಎಂಬ ಶಂಕೆಯು ಸರಿಯಲ್ಲ. ಬ್ರಹ್ಮನು ದೃಶ್ಯನು, ಅದೃಶ್ಯನು ಎನ್ನುವ ಉಕ್ತಿಗಳಿರುವುದರಿಂದ ಬರುವುದಕ್ಕೆ ಸಾಧ್ಯವಿಲ್ಲ. ಅದೂ ಕೂಡ ಪರರಿಂದ ಸ್ವತಃ ಸಿದ್ಧನಾದ ಬ್ರಹ್ಮನಿಗೆ ತನಗಿಂತ ಅತಿರಿಕ್ತವಾದ ಜ್ಞಾನಕ್ಕೆ ಕರ್ಮತ್ವವನ್ನು ಒಪ್ಪಕೊಳ್ಳದೇ ಇರುವುದರಿಂದ ಅವನ ಶಂಕೆಯನ್ನೇ ಸೂತ್ರದಲ್ಲಿ ಅನುವಾದ ಮಾಡಿದ್ದಾರೆ ಎಂಬೀ ರೀತಿಯಾಗಿ ಊಹಿಸಿಕೊಳ್ಳಬೇಕು. ಇದರ ವಿಸ್ತಾರವನ್ನು ಚಂದ್ರಿಕಾಪ್ರಕಾಶದಲ್ಲಿ ನಾವೇ ಮಾಡಿದ್ದೇವೆ. ಯಾರೋ ಒಬ್ಬ ಶೈವನು ಪಂಚಾಧಿಕರಣದ ಪ್ರಮೇಯವನ್ನು ದೂಷಣಮಾಡಲೆಂದು ಉತ್ಪ್ರೇಕ್ಷೆ ಮಾಡಿದ್ದಾನೋ ಅದೂ ಕೂಡ ಗುರುಗಳು ರಚಿಸಿದ 'ಕಂಟಕೋದ್ಧಾರ'ಗ್ರಂಥದಲ್ಲಿ ಬಹಳ ಚೆನ್ನಾಗಿ ನಿರಾಕೃತವಾಗಿದೆ. ಆದ್ದರಿಂದ –

ದೇವೋತ್ತಮೈರ್ಲಾಲನೀಯೋ ಭಾಷ್ಯಕಾರನಿರೂಪಿತಃ ।
ಸೂತ್ರಾರ್ಥೋನೇಕಮಾನೇತಃ ಸರ್ವೈರ್ಗ್ರಾಹ್ಯೋ ಬುಭೂಷುಭಿಃ ॥

ಎಲ್ಲಾ ಸಂಶಯಗಳಿಗು ಉತ್ತರ ನೀಡುವ ಸೂತ್ರಾರ್ಥವೆಂದರೆ ಶ್ರೀಮದಾಚಾರ್ಯರ ಬ್ರಹ್ಮಸೂತ್ರಭಾಷ್ಯ. ಇದು ಸರ್ವಪ್ರಮಾಣದಿಂದ ಸಿದ್ಧವಾಗಿದೆ. ಎಲ್ಲಾ ಮುಮುಕ್ಷುಗಳಿಂದಲೂ ಸ್ವೀಕರಿಸಲು ಅತ್ಯಂತ ಯೋಗ್ಯವಾಗಿದೆ. ದೇವತೆಗಳಲ್ಲಿ ಉತ್ತಮರಾದವರಿಗೂ ಕೂಡ ಇದು ಅತ್ಯಂತ ಪ್ರಿಯವಾಗಿದೆ. ಇಂಥ ಶ್ರೀಮದಾಚಾರ್ಯರ ಭಾಷ್ಯವನ್ನು ಎಲ್ಲರೂ ಓದಿ ಧನ್ಯರಾಗಬೇಕು.

॥ ಇಲ್ಲಿ ಶ್ರೀಮದ್‌ರಾಘವೇಂದ್ರತೀರ್ಥರಿಂದ ವಿರಚಿತವಾದ ಭಾವದೀಪದ ಈಕ್ಷತ್ಯಧಿಕರಣದಲ್ಲಿ ಕನ್ನಡ ಅನುವಾದವು ಮುಗಿಯಿತು ॥

* * * * *

॥ ಶ್ರೀ ಮಧ್ವೇಶಾರ್ಪಣಮಸ್ತು ॥

ತಂತ್ರದೀಪಿಕೆಯಲ್ಲಿ ಈಕ್ಷತ್ಯಧಿಕರಣದ ಸೂತ್ರಗಳು

।। श्रीः ।।

श्रीराघवेन्द्रतीर्थविरचिता

# तन्त्रदीपिका

ईक्षत्यधिकरणम् - ५

।। ईक्षतेर्नाशब्दम् ।। १-१-५

अत्र नये संशब्दोक्तवाच्यत्वं सर्वशास्त्रयोनित्वं च समर्थ्यते । तदिति वर्तते । न विद्यते शब्दः वाचकः यस्य तदशब्दं अवाच्यम् । ईक्षतेरिति धातुनिर्देशेन तदर्थः ईक्षणं लक्ष्यते । तस्य च असम्बद्धस्य अहेतुत्वात् सम्बन्धस्य च कर्तृत्वादिरूपस्य श्रुत्यननुगमेन विपक्षे बाधकाभावप्रसङ्गेन च अयोगात् क्रियाकर्मभावस्यैव सिद्धिः । ईक्षतेः ईक्षणीयत्वात् तद्ब्रह्म अशब्दं न किंतु वाच्यमेव इत्यर्थः । न च असिद्धो हेतुः । ''पुरिशयं पुरुषं ईक्षते'' इति श्रुतेः । न चाप्रयोजकत्वम् । अक्षानुमानावेद्यस्य शब्दात् ईक्षणं वचनवृत्तिमन्तरा न युक्तमिति तात्पर्यात्। न अशब्दं ईक्षतेरिति वाच्ये ईक्षतेरित्याद्युक्तिरनियमसूचानार्था । आमनन्ति कस्मात् उच्येत ब्रह्मेति वाच्यत्वश्रुत्यादिसत्त्वेपि तस्य अवाच्यत्वश्रुत्यादिना प्रतिरुद्धत्वेन अनिर्णायकत्वाच्छब्दात् नाशब्दं इत्यनुक्त्वा तदनुग्राहकन्याय एव ईक्षणीयत्वमुक्तम् । तेन श्रुतिप्राप्तं युक्तिमात्रात् कथं निरस्यमिति प्रत्युक्तम् । अवाच्यमिति वाच्ये अशब्दमित्युक्तिः अशब्दमस्पर्शमिति

**श्रुत्यनुगमाय । ईक्षतेर्वाच्यमिति वाच्ये अशब्दं नेत्युक्तिः वाच्यत्वविधिः अवाच्यत्वनिरासश्च श्रुत्यर्थाभ्यां कृतो यथा स्यादिति ।**

ಈ ಅಧಿಕರಣದಲ್ಲಿ ಹಿಂದಿನ ಸೂತ್ರದ 'ಸಮ್' ಶಬ್ದದಿಂದ ಹೇಳಿದ ವಾಚ್ಯತ್ವ ಮತ್ತು ಸಕಲಶಾಸ್ತ್ರಪ್ರತಿಪಾದ್ಯತ್ವವನ್ನು ಸಮರ್ಥಿಸುತ್ತಾರೆ. ಹಿಂದಿನ ಸೂತ್ರದಿಂದ 'ತತ್' ಎಂಬ ಪದವನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಅಶಬ್ದ ಎಂದರೆ ವಾಚಕವಾಗಿ ಯಾವುದಕ್ಕೆ ಶಬ್ದ ಇಲ್ಲವೋ ಅದು ಅಶಬ್ದ ಅಂದರೆ ಅವಾಚ್ಯ ಎಂದರ್ಥ. 'ಈಕ್ಷತೇಃ' ಎಂದು ಧಾತುವನ್ನು ಹೇಳಿದ್ದರಿಂದ ಅದರ ಅರ್ಥವಾದ ಈಕ್ಷಣ(ಜ್ಞಾನ)ವನ್ನು ಲಕ್ಷಣಾವೃತ್ತಿಯಿಂದ ಸ್ವೀಕರಿಸಬೇಕು. ಅದು ಕೂಡ (ಬ್ರಹ್ಮನಿಗೆ) ಸಂಬಂಧಪಡದಿದ್ದಲ್ಲಿ ಹೇತುವಾಗುವುದಿಲ್ಲವಾದ್ದರಿಂದ, ಅದಕ್ಕೂ ಬ್ರಹ್ಮನಿಗೂ ಸಂಬಂಧವನ್ನು ಹೇಳಬೇಕು. ಆ ಸಂಬಂಧವನ್ನು ಕರ್ತೃತ್ವಾದಿರೂಪವಾದ ಸಂಬಂಧ ಎಂದಿಟ್ಟುಕೊಂಡರೆ ಈ ಅಧಿಕರಣಕ್ಕೆ ಸಂಬಂಧಪಟ್ಟ ಶ್ರುತಿಗಳೊಂದಿಗೆ ಏಕಾರ್ಥ್ಯ ಬರುವುದಿಲ್ಲ (ಅನನುಗಮವಾಗುತ್ತಿದೆ) ಹಾಗಾದಾಗ ಈಕ್ಷಣಕರ್ತೃತ್ವ ಇದ್ದರೂ ಅಶಬ್ದ ಏಕಾಗಬಾರದು? ಎಂದು ಅಪ್ರಯೋಜಕಶಂಕೆ ಮಾಡಿದರೆ ಅನುಕೂಲತರ್ಕ ಹೇಳಲು ಬರುವುದಿಲ್ಲವಾದ್ದರಿಂದ 'ಕ್ರಿಯಾ ಕರ್ಮಭಾವ'ರೂಪವಾದ ಸಂಬಂಧವನ್ನೇ ಹೇಳಬೇಕು. ಆಗ ಈಕ್ಷತೇಃ = ಈಕ್ಷಣೀಯನಾದ್ದರಿಂದ. ತತ್ = ಬ್ರಹ್ಮ, ಅಶಬ್ದಂ ನ = ಶಬ್ದ ಅವಾಚ್ಯನು ಅಲ್ಲ; ಕಿಂತು ಶಬ್ದದಿಂದ ವಾಚ್ಯನೇ ಎಂದು ಅರ್ಥವಾಗುತ್ತದೆ.

ಈಕ್ಷಣೀಯತ್ವಹೇತುವೇ ಅಪ್ರಸಿದ್ಧ ಎಂದು ಹೇಳಬಾರದು. ''ಪುರಿಶಯಂ ಪುರುಷಮೀಕ್ಷತೇ'' ಎಂದು ಶ್ರುತಿ ಇರುವುದರಿಂದ. ಹೇತ್ವಪ್ರಸಿದ್ಧಿಯನ್ನು ನಿವಾರಿಸಿಕೊಂಡರೂ, ಹೇತುವು ಅಪ್ರಯೋಜಕ ಎಂದು ಹೇಳುತ್ತೇವೆ. (ಈಕ್ಷಣೀಯತ್ವವಿದ್ದರೂ ಶಬ್ದ ಅವಾಚ್ಯನೇ ಆಗಿರಲಿ ಎಂದು). ಇದು ಸರಿಯಲ್ಲ. ಪ್ರತ್ಯಕ್ಷ, ಅನುಮಾನಗಳಿಂದ ಅವೇದ್ಯನಾದವನಿಗೆ ಶಬ್ದದಿಂದ ಈಕ್ಷಣವನ್ನು ಹೇಳಿದರೆ ಅದು ಶಬ್ದವಾಚ್ಯತ್ವವಿಲ್ಲದೆ ಸಾಧ್ಯವಿಲ್ಲ ಎಂದು ತಾತ್ಪರ್ಯ.

ಸೂತ್ರದಲ್ಲಿ ''ಅಶಬ್ದಮ್ ಈಕ್ಷತೇಃ'' ಎಂದು ಹೇಳಬೇಕಿತ್ತು. (ಮೊದಲು ಪ್ರತಿಜ್ಞೆಯನ್ನು ಹೇಳಿ ಅನಂತರ ಹೇತುವನ್ನು ಹೇಳಬೇಕು ಎಂದು ತಾರ್ಕಿಕರ ನಿಯಮ) ಆದರೂ ''ಈಕ್ಷತೇರ್ನಾಶಬ್ದಂ'' ಎಂದು ಹೇಳಿದ್ದು ಆ ರೀತಿಯೇ ಹೇಳಬೇಕೆಂದು ನಿಯಮವಿಲ್ಲ ಎಂದು ಸೂಚನೆ ಮಾಡಲು.

'ಆಮನಂತಿ', 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ' ಇತ್ಯಾದಿಯಾಗಿ ವಾಚ್ಯತ್ವವನ್ನು ಹೇಳುವ ಶ್ರುತಿಸ್ಮೃತಿ ಮೊದಲಾದವುಗಳು ಇದ್ದರೂ ಅವುಗಳಿಗೆ ಅವಾಚ್ಯತ್ವವನ್ನು ಹೇಳುವ ಶ್ರುತಿಗಳಿಂದ ಪ್ರತಿರೋಧವಿರು-

ವುದರಿಂದ ನಿರ್ಣಯ ಮಾಡಲು ಸಾಧ್ಯವಿಲ್ಲವಾದ್ದರಿಂದ 'ಶಬ್ದಾತ್ ನ ಅಶಬ್ದಮ್' ಎಂದು ಹೇಳಿದೆ. ವಾಚ್ಯತ್ವಕ್ಕೆ ಸಾಧಕವಾದ ಈಕ್ಷಣೀಯತ್ವಹೇತುವನ್ನು ಹೇಳಿದ್ದಾರೆ.

ಈ ರೀತಿ ವಿವಕ್ಷೆ ಇರುವುದರಿಂದ, ಶ್ರುತಿಸಿದ್ಧವಾದ ಅವಾಚ್ಯತ್ವವನ್ನು ಕೇವಲ ಯುಕ್ತಿಯಿಂದ ಹೇಗೆ ನಿರಾಕರಿಸುತ್ತೀರಿ? ಎಂಬ ಆಕ್ಷೇಪಕ್ಕೆ ಉತ್ತರ ಕೊಟ್ಟಂತಾಗುತ್ತದೆ.

ಈ ಸೂತ್ರದಲ್ಲಿ 'ಅವಾಚ್ಯಂ' ಎಂದು ಹೇಳಬೇಕಾಗಿತ್ತು. ಆದರೂ 'ಅಶಬ್ದಮ್' ಎಂದು ಹೇಳಿದ್ದು ಏಕೆ ಎಂದರೆ 'ಅಶಬ್ದಮಸ್ಪರ್ಶಂ' ಎಂಬ ಶ್ರುತಿಯ ಅನುಗಮಕ್ಕಾಗಿ ಹಾಗೆ ಹೇಳಿದ್ದು.

'ಈಕ್ಷತೇರ್ವಾಚ್ಯಂ' ಎಂದು ಹೇಳಬಹುದಿತ್ತು. ಆದರೂ 'ಅಶಬ್ದಂ ನ' ಎಂದು ಹೇಳಿದ್ದು ವಾಚ್ಯತ್ವವನ್ನು ವಿಧಾನಮಾಡುವುದು ಮತ್ತು ಅವಾಚ್ಯತ್ವವನ್ನು ನಿರಾಸಮಾಡುವುದು ಇವೆರಡನ್ನೂ ಶ್ರುತಿ (ಶಬ್ದ), ಅರ್ಥ (ತಾತ್ಪರ್ಯ) ಇವೆರಡರಿಂದ ಮಾಡಿದಂತಾಗುತ್ತದೆ ಎಂಬ ಅಭಿಪ್ರಾಯದಿಂದ.

### ।। गौणश्चेन्नात्मशब्दात् ।। १-१-६

उक्तमाक्षिप्य समाधत्ते – गौणश्चेन्नात्मशब्दात् ।। पुरुषमीक्षत इत्यादावीक्षणीयः त्रिगुणबद्धो जीवः, न विष्णुरत ईक्षणीयत्वं तत्रासिद्धिरिति चेन्न । 'आत्मानं पश्येत्' इत्यादौ ईक्षणीये आत्मपदश्रवणात् । उपलक्षणमेतत् । पुरुषब्रह्मादिशब्दादित्यर्थः । प्राक् तदित्यन्वयाय अशब्दम् इत्युक्तावपि इह आत्मपदान्वयाय गौण इति पुनर्निर्देशः ।।

ಹಿಂದಿನ ಸೂತ್ರದಲ್ಲಿ ಹೇಳಿದ ವಿಷಯವನ್ನು ಆಕ್ಷೇಪ ಮಾಡಿ ಸಮಾಧಾನವನ್ನು ಕೊಡುತ್ತಾರೆ. 'ಗೌಣಶ್ಚೇತ್ ನಾತ್ಮಶಬ್ದಾತ್' ಎಂಬ ಸೂತ್ರದಿಂದ.

'ಪುರುಷಮೀಕ್ಷತೇ' ಇತ್ಯಾದಿ ಶ್ರುತಿಯಲ್ಲಿ ಈಕ್ಷಣೀಯತ್ವೇನ ಹೇಳಲ್ಪಟ್ಟವನು (ಸತ್ವಾದಿ) ತ್ರಿಗುಣಬದ್ಧನಾದ ಜೀವನೇ ಹೊರತು ವಿಷ್ಣುವಲ್ಲ; ಆದ್ದರಿಂದ ವಿಷ್ಣುವಿನಲ್ಲಿ ಅಸಿದ್ಧ ಎಂದರೆ, 'ಆತ್ಮಾನಂ ಪಶ್ಯೇತ್' ಮುಂತಾದ ಕಡೆಗಳಲ್ಲಿ ಈಕ್ಷಣೀಯನಾದ ವ್ಯಕ್ತಿಯಲ್ಲಿ ಆತ್ಮಶಬ್ದವನ್ನು ಹೇಳಿದ್ದರಿಂದ. ಅಸಿದ್ಧಿ ಇಲ್ಲ. 'ಆತ್ಮಶಬ್ದ' ಎಂಬುದು ಉಪಲಕ್ಷಣ; 'ಪುರುಷ' ಬ್ರಹ್ಮ ಮೊದಲಾದ ಶಬ್ದವಿರುವುದರಿಂದ ಎಂದೂ ಇಟ್ಟುಕೊಳ್ಳಬೇಕು. ಹಿಂದಿನ ಸೂತ್ರದಲ್ಲಿ 'ತತ್' ಎಂಬ ಪದದೊಂದಿಗೆ ಅನ್ವಯ ಮಾಡಲು 'ಅಶಬ್ದಮ್' ಎಂದು ನಪುಂಸಕಲಿಂಗದಿಂದ ನಿರ್ದೇಶ ಮಾಡಿದ್ದರೂ ಈ

ಸೂತ್ರದಲ್ಲಿ ಆತ್ಮಪದದೊಂದಿಗೆ ಅನ್ವಯಮಾಡುವುದಕ್ಕೋಸ್ಕರ 'ಗೌಣಃ' ಎಂದು ಪುಲ್ಲಿಂಗದಿಂದ ನಿರ್ದೇಶ ಮಾಡಿದ್ದಾರೆ.

।। तन्निष्ठस्य मोक्षोपदेशात् ।। १-१-७

ननु तथापि जीवः किं न इत्यतः आह – तन्निष्ठस्य मोक्षोपदेशात् ।। तन्निष्ठस्य = आत्मनिष्ठस्य । 'यस्यानुवित्तः प्रतिबुद्ध आत्मा, तस्य लोकः स उ लोक एव' इति मोक्षोपदेशात् न गौणः आत्मशब्देनोक्त इत्यर्थः । गौणज्ञानात् गुणनिवृत्तिरूपमुक्त्ययोगादिति भावः । अत एव प्राग् जीव इति वाच्ये गौण इत्युक्तिः ।।

ಆತ್ಮಶಬ್ದಪ್ರಯೋಗವಿದ್ದರೂ ಶ್ರುತಿಯಿಂದ ವಾಚ್ಯನಾದವನು ಜೀವ ಎಂದು ಏಕೆ ಹೇಳಬಾರದು? ಎಂದರೆ 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' ಎನ್ನುವುದರಿಂದ ಉತ್ತರಿಸುತ್ತಾರೆ.

ತನ್ನಿಷ್ಠಸ್ಯ = ಆತ್ಮನಿಷ್ಠನಾದವನಿಗೆ, 'ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾ ತಸ್ಯ ಲೋಕಃ ಸ ಉ ಲೋಕ ಏವ' ಎಂದು ಮೋಕ್ಷವನ್ನು ಹೇಳಿದ್ದರಿಂದ ಆತ್ಮಶಬ್ದದಿಂದ ಜೀವನನ್ನು ತೆಗೆದುಕೊಳ್ಳಬಾರದು. ಗೌಣನಾದ ಜೀವನ ಜ್ಞಾನದಿಂದ ಗುಣನಿವೃತ್ತಿರೂಪವಾದ ಮುಕ್ತಿಯು ಕೂಡುವುದಿಲ್ಲ ಎಂದು ಅಭಿಪ್ರಾಯ. ಆದ್ದರಿಂದ ಹಿಂದಿನ ಸೂತ್ರದಲ್ಲಿ 'ಜೀವ' ಎಂದು ಹೇಳಬೇಕಿದ್ದರೂ ಜೀವನನ್ನು 'ಗೌಣ' ಎಂಬ ಪದದಿಂದ ಹೇಳಿದ್ದಾರೆ.

।। हेयत्वावचनाच्च ।। १-१-७

इतश्च न गौणस्तथेत्याह – हेयत्वावचनाच्च ।। 'तमेवैकं जानथ आत्मानम् अन्या वाचो विमुञ्चथ' इति आत्मशब्दार्थस्य हेयत्वावचनात् प्रत्युताहेयत्ववचनात् अन्यस्य हेयत्ववचनाच्चेत्यर्थः । सुधायां तु गौणशब्दस्य मायाशबलब्रह्मपरत्वमुपेत्य सूत्रत्रयं व्याख्यातम् । तत्वप्रदीप सन्न्यायरत्नावल्योस्तु न केवलमात्मशब्दादिबलादीक्षणीयो न गौणः । किन्तु 'तन्निष्ठस्य' इत्यादिसूत्रद्वयोक्तहेतुभ्यामपीति 'तन्निष्ठस्य' इत्यादिसूत्रद्वयमन्यथा व्याख्यातम् ।।

ಈ ಕಾರಣದಿಂದಲೂ ಆತ್ಮ ಪದದಿಂದ ಗೌಣನು (ಜೀವನು) ವಾಚ್ಯನಲ್ಲ ಎಂದು ಹೇಳುತ್ತಾರೆ. ''ಹೇಯತ್ವಾವಚನಾಚ್ಚ'' ಎಂಬ ಸೂತ್ರದಿಂದ ಹೇಳುತ್ತಾರೆ. 'ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥ' ಎಂದು ಆತ್ಮಶಬ್ದದ ಅರ್ಥಕ್ಕೆ ಹೇಯತ್ವವನ್ನು (ಬಿಡುವಿಕೆ) ಹೇಳದೆ ಇರುವುದರಿಂದ ಮತ್ತು ಅದಕ್ಕೆ ವಿರುದ್ಧವಾಗಿ ಅಹೇಯತ್ವವನ್ನು (ಸ್ವೀಕರಿಸುವಿಕೆ) ಹೇಳಿದ್ದರಿಂದ. ಅಷ್ಟೇ ಅಲ್ಲದೆ ಆತ್ಮ ಶಬ್ದಾರ್ಥಭಿನ್ನವಾದುದಕ್ಕೆ ಹೇಯತ್ವವನ್ನು ಹೇಳಿದ್ದರಿಂದಲೂ ಕೂಡ ಜೀವನು ಆತ್ಮಪದವಾಚ್ಯನಲ್ಲ ಎಂದು ಅರ್ಥ.

ಸುಧಾಗ್ರಂಥದಲ್ಲಿಯಾದರೂ ಗೌಣಶಬ್ದಕ್ಕೆ ಮಾಯಾಶಬಲಬ್ರಹ್ಮ ಎಂದು ಅರ್ಥವನ್ನಿಟ್ಟುಕೊಂಡು ಹಿಂದಿನ ಮೂರು ಸೂತ್ರಗಳನ್ನು ವ್ಯಾಖ್ಯಾನಿಸಿದ್ದಾರೆ. ತತ್ವಪ್ರದೀಪ, ಸನ್ನ್ಯಾಯರತ್ನಾವಳಿ ಗ್ರಂಥಗಳಲ್ಲಿ-ಯಾದರೂ ಆತ್ಮಶಬ್ದದ ಬಲದಿಂದ ಈಕ್ಷಣೀಯನಾದವನು ಗೌಣನು ಅಲ್ಲ ಎಂದಷ್ಟೇ ಅಲ್ಲ; 'ತನ್ನಿಷ್ಠಸ್ಯ ಮೋಕ್ಷೋಪದೇಶಾತ್' ಇತ್ಯಾದಿ ಎರಡು ಸೂತ್ರಗಳಲ್ಲಿ ಹೇಳಿದ ಹೇತುಗಳಿಂದಲೂ ಎಂದು 'ತನ್ನಿಷ್ಠಸ್ಯ' ಇತ್ಯಾದಿ ಎರಡು ಸೂತ್ರಗಳನ್ನು ಬೇರೆ ರೀತಿ ವ್ಯಾಖ್ಯಾನ ಮಾಡಿದ್ದಾರೆ.

इतश्च निर्गुणो वाच्य इत्याह –

।। स्वाप्ययात् ।।

'नाशब्दम्' इति वर्तते । निर्गुणमिति च प्रकृतम् । 'आत्मन्येवात्मानं विलापयति' इति श्रुत्युक्तत्वाच्च निर्गुणं ब्रह्म नाशब्दं किन्तु वाच्यमेवेति बहिरेव योज्यम् । कुतोऽयं श्रुत्युक्तो निर्गुण इति चेत् स्वाप्ययात् । स्वेति तन्त्रम् । स्वस्य स्वस्मिन् अप्ययवचनादिति योज्यम् । एवं च स्वाप्ययाच्चेति स्यादिति नाशङ्क्यम् ।

ಇನ್ನೊಂದು ಕಾರಣದಿಂದಲೂ ಆತ್ಮಶಬ್ದದಿಂದ ನಿರ್ಗುಣನು ವಾಚ್ಯ ಎಂದು ಹೇಳುತ್ತಾರೆ. 'ಸ್ವಾಪ್ಯಯಾತ್' ಎಂದು.

'ನ ಅಶಬ್ದಮ್' ಎಂದು ಅನುವೃತ್ತಿ ಮಾಡಿಕೊಳ್ಳಬೇಕು. 'ನಿರ್ಗುಣಂ' ಎಂದು ಪ್ರಸಂಗವಶಾತ್ ಇಟ್ಟುಕೊಳ್ಳಬೇಕು. ಆತ್ಮನ್ಯೇವಾತ್ಮಾನಂ ವಿಲಾಪಯತಿ' ಎಂದು ಶ್ರುತಿಯಲ್ಲಿ ಹೇಳಿದ್ದರಿಂದ ನಿರ್ಗುಣಬ್ರಹ್ಮನು ಅಶಬ್ದನಲ್ಲ ಕಿಂತು ವಾಚ್ಯನೇ ಆಗಿದ್ದಾನೆ ಎಂದು ಸೂತ್ರದಿಂದ ಹೊರಗೆ

ಯೋಜಿಸಿಕೊಳ್ಳಬೇಕು. ಈ ಶ್ರುತಿಯಲ್ಲಿ ಹೇಳಲ್ಪಟ್ಟಿರುವವನು ನಿರ್ಗುಣನೇ ಏಕೆ ಎಂದರೆ ಸ್ವಾಪ್ಯಯಾತ್ ಎಂದು ಉತ್ತರ. 'ಸ್ವ' ಎಂಬುದನ್ನು ತಂತ್ರದಿಂದ ಆವೃತ್ತಿ ಮಾಡಿಕೊಳ್ಳಬೇಕು. ಹಾಗಾಗಿ ತಸ್ಮಿನ್ = ತನಗೆ, ಸ್ವಸ್ಯ = ತನ್ನಲ್ಲಿ, ಅಪ್ಯಯವಚನಾತ್ = ಲಯವನ್ನು ಹೇಳಿದ್ದರಿಂದ ಎಂದು ಹೇಳಿದಂತಾಗುತ್ತದೆ. ಹೀಗೆ ಹೇಳಿದರೆ ಸೂತ್ರವು 'ಸ್ವಾಪ್ಯಯಾಚ್ಚ' ಎಂದಿರಬೇಕಾಗಿತ್ತು ಎಂದು ಶಂಕಿಸಬಾರದು. ಏಕೆಂದರೆ ಇಲ್ಲಿ ವಾಚ್ಯತ್ವ ಸಾಧನೆ ಮಾಡಲು ಮತ್ತೊಂದು ಹೇತು ಹೇಳಿದ್ದರೆ ಹಾಗಾಗುತ್ತಿತ್ತು. 'ಆತ್ಮಾನಂ ವಿಲಾಪಯತಿ' ಎಂಬ ಶ್ರುತಿಯಿಂದ ವಾಚ್ಯನಾದವನು ನಿರ್ಗುಣ ಏಕೆ ಎಂದು ಉತ್ತರ ಕೊಡುತ್ತಿದ್ದಾರೆ. ಆದ್ದರಿಂದ ನೀವು ಹೇಳಿದಂತೆ ಸೂತ್ರವಿನ್ಯಾಸವಾಗುವುದಿಲ್ಲ.

### ।। गतिसामान्यात् ।।

शाखान्तरेषु 'रुद्रादि जगद्धेतुत्वेन उच्यताम्' इत्यतः सर्वशास्त्रयोनित्वं विष्णोरेवेत्याह – ।। ॐ गतिसामान्यात् ॐ।। 'तत्तु शास्त्रयोनि' इति वर्तते । गतेः सर्वशाखोत्पाद्यज्ञानस्य सामान्यात् समानत्वात् एकरूपत्वश्रवणात् 'सर्वे वेदा युक्तयः' इत्यादौ तदेव विष्णवाख्यं ब्रह्मैव जगत्कारणत्वेन सर्वशास्त्रयोनित्वन्यत्र अन्यथा उच्यत इत्यर्थः । वृत्त्यन्तरं तु गतिसामान्यात् गतिसामान्यानुमानात् इति । सूत्रकृन्निर्णीतशाखादृष्टान्तेन शाखात्वेन हेतुना शाखान्तरेप्येतदनुमानादित्यर्थः । चन्द्रिकायां तु आत्मशब्दोपदेशहेयत्वानुक्तिस्वाप्ययाः शाखान्तरे गौणात्मन्यपि स्युरित्यवतार्य गतेः सर्वत्रैकरूप्यमेवेत्यप्यर्थ उक्तः ।

ವೇದಗಳ ಬೇರೆ ಶಾಖೆಗಳಲ್ಲಿ ರುದ್ರ ಮೊದಲಾದ ದೇವತೆಗಳಿಗೆ ಜಗತ್ಕಾರಣತ್ವ ಹೇಳಿರಬಹುದಲ್ಲವೇ? ಎಂದು ಸಂದೇಹ ಬಂದರೆ ಸಕಲಶಾಸ್ತ್ರಪ್ರತಿಪಾದ್ಯತ್ವವು ವಿಷ್ಣುವಿಗೇ ಎಂದು ಹೇಳುತ್ತಾರೆ 'ಗತಿಸಾಮಾನ್ಯಾತ್' ಎಂಬ ಸೂತ್ರದಿಂದ.

ತತ್, ತು, ಶಾಸ್ತ್ರಯೋನಿ ಎಂಬ ಪದಗಳನ್ನು ಅನುವೃತ್ತಿ ಮಾಡಿಕೊಳ್ಳಬೇಕು. ಗತೇಃ = ಸಕಲ ಶಾಸ್ತ್ರಗಳಿಂದ ಹುಟ್ಟುವ ಜ್ಞಾನವು, ಸಾಮಾನ್ಯಾತ್ = ಸಮಾನವಾಗಿರುವುದರಿಂದ, ಒಂದೇ ರೀತಿಯಾಗಿ (ಏಕರೂಪದಿಂದ) "ಸರ್ವೇ ವೇದಾ ಯುಕ್ತಯಃ" ಎಂಬ ಪ್ರಮಾಣದಿಂದ ಹೇಳಲ್ಪಟ್ಟಿರುವುದರಿಂದ ತದೇವ = ವಿಷ್ಣುವೆಂಬ ಹೆಸರಿನ ಬ್ರಹ್ಮನೇ ಕಾರಣತ್ವೇನ (ಜಗತ್ಕಾರಣನಾಗಿ) ಸಕಲಶಾಸ್ತ್ರಪ್ರತಿಪಾದ್ಯ, ಹೊರತು ಬೇರೆ ಶಾಖೆಗಳಲ್ಲಿ ಬೇರೆ ರೀತಿಯಾಗಿ ಹೇಳಿಲ್ಲ ಎಂದು ಅರ್ಥ.

ಈ ಸೂತ್ರಕ್ಕೆ ಇನ್ನೊಂದು ರೀತಿಯ ವ್ಯಾಖ್ಯಾನ ಹೀಗಿದೆ - ಗತಿಸಾಮಾನ್ಯಾತ್ = ಗತಿಸಾಮಾನ್ಯದ (ಜ್ಞಾನದ ಏಕರೂಪತೆಯ) ಅನುಮಾನದಿಂದ ಎಂದು. ಸೂತ್ರಕಾರರು ನಿರ್ಣಯಿಸಿದ ಶಾಖೆಯ ದೃಷ್ಟಾಂತದಿಂದ ಶಾಖಾತ್ವಹೇತುವಿನಿಂದ ಬೇರೆ ಶಾಖೆಯಲ್ಲಿಯೂ ಇದನ್ನು (ವಿಷ್ಣುವೇ ಜಗತ್ಕಾರಣತ್ವೇನ ಶಾಸ್ತ್ರಪ್ರತಿಪಾದ್ಯ) ಅನುಮಾನ ಮಾಡುವುದರಿಂದ ಎಂದು ಅರ್ಥ. ಚಂದ್ರಿಕಾದಲ್ಲಿಯಾದರೂ ''ಆತ್ಮ ಶಬ್ದ, ಮೋಕ್ಷೋಪದೇಶಹೇಯತ್ವಾನುಕ್ತಿ ಸ್ವಾಪ್ಯಯ, ಇವುಗಳು ಬೇರೆ ಶಾಖೆಯಲ್ಲಿ ಗೌಣಾತ್ಮನಲ್ಲಿ ಹೇಳಿ ಇರಬಹುದು ಎಂದು ಸೂತ್ರಕ್ಕೆ ಅವತರಣಿಕೆ ಕೊಟ್ಟು ಜ್ಞಾನವು ಎಲ್ಲಾ ಶಾಖೆಗಳಲ್ಲಿ ಏಕರೂಪವಾಗಿಯೇ ಇದೆ ಎಂದೂ ಅರ್ಥವನ್ನು ಹೇಳಿದ್ದಾರೆ.

### ।। श्रुतत्वाच्च ।।(१-१-११)

इतश्च निर्गुणं ब्रह्म वाच्यमित्याह – ।। श्रुतत्वाच्च ।। 'तत् नाशब्दम्' इति वर्तते । 'निर्गुणस्य' इति प्रकृतम् । 'केवलो निर्गुणश्च' इति सत्वादिगुणहीनस्य श्रुतत्वाच्च तत् नाशब्दमित्यर्थः । लक्षणया श्रुतत्वस्य अनवस्थादुःस्थत्वादिति भावः ।।५।।

ಈ ಕಾರಣದಿಂದಲೂ ನಿರ್ಗುಣಬ್ರಹ್ಮನೇ ವಾಚ್ಯ ಎಂದು ಹೇಳುತ್ತಾರೆ. 'ಶ್ರುತತ್ವಾಚ್ಚ' ಎಂದು ಹೇಳುತ್ತಾರೆ.

ತತ್ ನಾಶಬ್ದಮ್ ಎಂದು ಅನುವೃತ್ತಿ ಮಾಡಿಕೊಳ್ಳಬೇಕು. ನಿರ್ಗುಣಬ್ರಹ್ಮ ಎಂದು ಪ್ರಸಂಗವಶಾತ್ ಇಟ್ಟುಕೊಳ್ಳಬೇಕು. ಕೇವಲಃ, ನಿರ್ಗುಣಃ ಎಂದು ಸತ್ವಾದಿಗುಣಹೀನನು ಶ್ರುತನಾಗಿರುವುದರಿಂದ ತತ್ = ಆ ಆತ್ಮಶಬ್ದೋಕ್ತವಾದ ವಸ್ತುವು ಅಶಬ್ದವಲ್ಲ ಎಂದು ಅರ್ಥ. ಲಕ್ಷಣಯಾ ಶ್ರುತತ್ವವನ್ನು ಹೇಳುತ್ತೇವೆ ಎನ್ನುವುದು ಸರಿಯಲ್ಲ. ಹಾಗೆ ಹೇಳಿದರೆ ಅನವಸ್ಥಾದೋಷವು ಬರುತ್ತದೆ ಎಂದು ಅಭಿಪ್ರಾಯ.

(ಅನವಸ್ಥಾದೋಷವು ತತ್ವಮಂಜರಿಯಲ್ಲಿ ನಿರೂಪಿತವಾಗಿದೆ)

ಶ್ರೀರಾಘವೇಂದ್ರತೀರ್ಥಶ್ರೀಪಾದಂಗಳವರಿಂದ ರಚಿತವಾದ
ತಂತ್ರದೀಪಿಕೆಯ ಕನ್ನಡಾನುವಾದದಲ್ಲಿ ಈಕ್ಷತ್ಯಧಿಕರಣವು ಸಮಾಪ್ತವಾಯಿತು.

# ಅದ್ವೈತಮತದಲ್ಲಿ ಈಕ್ಷತ್ಯಧಿಕರಣ
## ಮತ್ತು
## ವಿಮರ್ಶೆ

ಸಾಂಖ್ಯರು ಪ್ರಧಾನವನ್ನೇ ಜಗತ್ಕಾರಣವೆನ್ನುತ್ತಾರೆ. ಇದಕ್ಕಾಗಿ 'ಸದೇವ ಸೌಮ್ಯ' ಎಂಬ ಶ್ರುತಿಯನ್ನು ಪ್ರಮಾಣವನ್ನಾಗಿ ಉಲ್ಲೇಖಿಸುತ್ತಾರೆ. ಆದರೆ ಶ್ರುತಿಯಲ್ಲಿರುವ 'ಸತ್' ಶಬ್ದಕ್ಕೆ ಪ್ರಧಾನವೆಂದು ಅರ್ಥೈಸಲಾಗದು. ಬ್ರಹ್ಮನೆಂದೇ ಹೇಳಬೇಕೆಂದು ಅದ್ವೈತಿಗಳ ವಾದ. ಸಾಂಖ್ಯಮತ ನಿರಾಕರಣೆಗಾಗಿಯೇ ಈಕ್ಷತ್ಯಧಿಕರಣ ಹೊರಟಿದೆ ಎನ್ನುತ್ತಾರೆ ಅದ್ವೈತಿಗಳು.

ಅದ್ವೈತಿಗಳ ಅಧಿಕರಣಶರೀರದಲ್ಲಿ ಸ್ಪಷ್ಟತೆಯೇ ಇಲ್ಲ.

ಅದ್ವೈತಿಗಳಿಗೆ ಅನೇಕ ದೋಷಗಳು -

೧) ಅದ್ವೈತಿಗಳ ಅಧಿಕರಣಶರೀರದಲ್ಲಿ ಸ್ಪಷ್ಟತೆಯೇ ಇಲ್ಲ. ಸಮನ್ವಯಸೂತ್ರದಲ್ಲಿ ಅಖಂಡಬ್ರಹ್ಮನಲ್ಲಿ ಸಮನ್ವಯದ ಪ್ರತಿಜ್ಞೆ ಮಾಡಿ ಈಕ್ಷತಿಸೂತ್ರದಲ್ಲಿ ವಿಶಿಷ್ಟಬ್ರಹ್ಮನಲ್ಲಿ ಸಮನ್ವಯ ಮಾಡುವುದು ಅನುಚಿತವಲ್ಲವೇ?

೨) ಪ್ರಧಾನವು ಪರಿಣಾಮಿಯಾದರೂ ಬ್ರಹ್ಮನು ಜಗತ್ಕರ್ತಾ ಆಗಬಹುದು. ಹೀಗಿರುವಾಗ ಪ್ರಧಾನವು ಪರಿಣಾಮಿಯೆಂಬ ಪೂರ್ವಪಕ್ಷ ಬ್ರಹ್ಮನು ಜಗತ್ಕರ್ತಾ ಎಂಬ ಸಿದ್ಧಾಂತಗಳು ಹೇಗೆ ಕೂಡುತ್ತವೆ?

೩) 'ಸದೇವ ಸೌಮ್ಯ' ಎಂಬ ವಾಕ್ಯವು ಅಖಂಡಚಿನ್ಮಾತ್ರಪರವೆನ್ನುತ್ತೀರಿ. ಆದರೆ ಈಕ್ಷಣವೆಂಬ ಹೇತುವಿನಿಂದ ಪ್ರಧಾನವನ್ನು ನಿರಾಸ ಮಾಡುತ್ತೀರಿ ಇದು ಹೇಗೆ?

೪) 'ಸದೇವ ಸೌಮ್ಯ' ಎಂಬ ಶ್ರುತಿಸಮನ್ವಯವೇ ಸೂತ್ರದ ಉದ್ದೇಶವಾಗಿದ್ದರೆ 'ಸದೀಕ್ಷತೇಃ' ಎಂದು ಸೂತ್ರವಿರಬೇಕಿತ್ತಲ್ಲವೇ?

೫) ನಿಮ್ಮ ಮತದಲ್ಲಿ ಸಾಂಖ್ಯಮತ ನಿರಾಕರಣೆಗಾಗಿ ಚತುರ್ಥಪಾದ ಸೀಮಿತವಾಗಿರುವಾಗ ಈ ಅಧಿ ಕರಣವನ್ನೂ ಅಲ್ಲೇ ಹೇಳಬೇಕಿತ್ತಲ್ಲವೇ?

## ಸೂತ್ರದಲ್ಲಿರುವ 'ಅಶಬ್ದಮ್' ಎಂಬ ಶಬ್ದಕ್ಕೆ ಅದ್ವೈತಿಗಳ ವ್ಯಾಖ್ಯಾನ ಮತ್ತು ನಿರಾಕರಣೆ

ಅದ್ವೈತಿಗಳು ಹೇಳುವ ಸೂತ್ರಾರ್ಥದಲ್ಲಿ ಅನೇಕ ದೋಷಗಳಿವೆ.

* ಪ್ರಧಾನವು ಜಗತ್ಕಾರಣವಲ್ಲವೆನ್ನಲು ಅಶಬ್ದತ್ವವನ್ನು ಹೇತುವನ್ನಾಗಿ ಹೇಳುತ್ತಾರೆ. ಅಶಬ್ದತ್ವವನ್ನು ಅಸಿದ್ಧವೆಂದು ಆಕ್ಷೇಪಿಸಿದರೆ ಅದನ್ನು ಸಮರ್ಥಿಸಲು ಈಕ್ಷಿತೃತ್ವವೆಂಬ ಹೇತುವನ್ನು ಹೇಳುತ್ತಾರೆ. ಹೀಗೆ ಹೇಳಿದಾಗ ಈಕ್ಷಿತೃತ್ವಹೇತುವು ನಾರಾಯಣನಲ್ಲಿದ್ದರೆ ಕಾರಣತ್ವಾಭಾವವೆಂಬ ಸಾಧ್ಯವೂ ನಾರಾಯಣನಲ್ಲೇ ಇರಬೇಕು. ಆದರೆ ಪ್ರಧಾನದಲ್ಲಿದೆಯೆಂದು ವೈಯ್ಯಧಿಕರಣ್ಯ ಬರುತ್ತದೆ. ಇನ್ನು ಅಶಬ್ದತ್ವ ಹೇತು ಜಗತ್ಕಾರಣವೆಂಬ ಪಕ್ಷದಲ್ಲೇ ಬರುವುದಿಲ್ಲವಾದ್ದರಿಂದ ಹೇತ್ವಸಿದ್ಧಿ ಬರುತ್ತದೆ.

* ಪ್ರಧಾನವು ಅಶಬ್ದವೆಂದರೆ ಶಬ್ದಪ್ರತಿಪಾದ್ಯವಲ್ಲ ಎಂದರ್ಥ. ಆದರೆ ನಿಮ್ಮ ಮತದ ಪ್ರಕಾರ ಪ್ರಧಾನವು ಶಬ್ದಪ್ರತಿಪಾದ್ಯವಾಗುತ್ತದೆ. ಶುದ್ಧಬ್ರಹ್ಮನು ಶಬ್ದದಿಂದ ಅಪ್ರತಿಪಾದ್ಯನಾಗುತ್ತಾನೆ. ಏಕೆಂದರೆ ಶುದ್ಧಬ್ರಹ್ಮನು ಸಕಲಶಬ್ದಗಳಿಂದ ಅವಾಚ್ಯನಾಗುತ್ತಾನೆಂದು ಹೇಳುತ್ತೀರಿ. ಮತ್ತು 'ಮಾಯಾಂತು ಪ್ರಕೃತಿಂ ವಿದ್ಯಾತ್' ಇತ್ಯಾದಿ ಶ್ರುತಿಗಳಿಂದ ಪ್ರಧಾನವನ್ನು ಪ್ರತಿಪಾದ್ಯವೆನ್ನುತ್ತೀರಿ.

* ಪ್ರಧಾನವು ಅಶಬ್ದವೆಂದರೆ ಶಬ್ದಕ್ಕಿಂತ ಬೇರೆಯಾದ ಅನುಮಾನದಿಂದ ಗಮ್ಯವೆಂಬರ್ಥವನ್ನೂ ನಿಮಗೆ ಹೇಳಲಾಗದು. ಮತ್ತು ಇದು 'ಸದೇವ ಸೌಮ್ಯ' ಎಂಬ ಶ್ರುತಿಯಿಂದ ಪ್ರಧಾನವು ಪ್ರತಿಪಾದ್ಯವಲ್ಲವೆನ್ನಲು ಕಾರಣವಾಗುವುದಿಲ್ಲ.

* ಪ್ರಧಾನವು ಅಶಬ್ದವೆಂದರೆ - ಸ್ವಪ್ರಧಾನವಾಗಿ ವೇದಪ್ರತಿಪಾದ್ಯವಲ್ಲ ಎಂಬರ್ಥವನ್ನೂ ಹೇಳಲಾಗದು. ಪ್ರಧಾನವು ವೇದಪ್ರತಿಪಾದ್ಯವೆಂದು ನೀವು ಒಪ್ಪಿಕೊಂಡಿದ್ದೀರಿ.

'ಈಕ್ಷತೇಃ' ಎಂಬ ಪದಕ್ಕೆ ಮತ್ತು ಉಳಿದ ಸೂತ್ರಗಳಿಗೆ ಅದ್ವೈತಿಗಳ ವ್ಯಾಖ್ಯಾನ ತಪ್ಪು.

* 'ಈಕ್ಷತೇಃ' ಎಂಬ ಪದಕ್ಕೂ ಅದ್ವೈತಿಗಳ ವ್ಯಾಖ್ಯಾನ ಸರಿಯಿಲ್ಲ. ಈಕ್ಷಿತೃತ್ವವಿರುವುದರಿಂದ ಎಂದು ಇದರರ್ಥ. ಆದರೆ ಈಕ್ಷಿತೃತ್ವವನ್ನು ಶುದ್ಧಾತ್ಮನಲ್ಲಿ ಅಂಗೀಕರಿಸುವುದಿಲ್ಲ. ವಿಶಿಷ್ಟನಲ್ಲಿ ಅಂಗೀಕರಿಸುತ್ತಾರೆ. ಹಾಗಾದರೆ ಪ್ರಧಾನದಲ್ಲೂ ಈಕ್ಷಿತೃತ್ವ ಬರುತ್ತದೆ.

* ಈಕ್ಷತಿಯನ್ನು ವಿಶಿಷ್ಟನಲ್ಲಿ ಹೇಳಿದರೆ 'ತನ್ನಿಷ್ಠಸ್ಯ' ಎಂಬ ಮುಂದಿನ ಸೂತ್ರದಲ್ಲಿ ತತ್‌ಪದದಿಂದ ವಿಶಿಷ್ಟನನ್ನೇ ತೆಗೆದುಕೊಳ್ಳಬೇಕಾಗುತ್ತದೆ.

* 'ಗೌಣಶ್ಚೇತ್' ಎಂಬ ಸೂತ್ರದಲ್ಲಿರುವ ಆತ್ಮಶಬ್ದವೆಂಬ ಹೇತುವು ಈಕ್ಷಿತೃತ್ವವನ್ನು ಪ್ರಧಾನದಲ್ಲಿ ಸಮರ್ಥಿಸುತ್ತದೆ, ಹೊರತು ವಿಶಿಷ್ಟಬ್ರಹ್ಮನಲ್ಲಿ ಸಮರ್ಥಿಸುವುದಿಲ್ಲ.

* ಆತ್ಮಶಬ್ದದಿಂದ ವಿಶಿಷ್ಟಶುದ್ಧರಿಗೆ ಐಕ್ಯವನ್ನು ಸಾಧಿಸಿದರೆ, ಆದೇ ಆತ್ಮಶಬ್ದದ ಬಲದಿಂದ ಪ್ರಕೃತಿ ಜೀವರಿಗೂ ಐಕ್ಯವನ್ನು ಸಾಧಿಸಬಹುದು.

* ಹೀಗೆ ಅದ್ವೈತಿಗಳ ಉಳಿದೆಲ್ಲ ಸೂತ್ರಗಳ ವ್ಯಾಖ್ಯಾನವು ಅಸಾಧುವಾಗಿದೆ.

## ರಾಮಾನುಜಮತದಲ್ಲಿ ಈಕ್ಷತ್ಯಧಿಕರಣ
## ಮತ್ತು
## ವಿಮರ್ಶೆ

### ರಾಮಾನುಜರ ಅಧಿಕರಣರಚನೆ ಮತ್ತು ನಿರಾಕರಣೆ

ರಾಮಾನುಜರು ಈಕ್ಷತ್ಯಧಿಕರಣರಚನೆಯ ಬಗ್ಗೆ ಅದ್ವೈತ ಮತದ ನಿಲುವನ್ನೇ ತಾಳಿದ್ದಾರೆ.

ಪ್ರಧಾನವೇ ಜಗತ್ಕಾರಣವೆಂದು ಸಾಂಖ್ಯರು ಹೇಳುತ್ತಾರೆ. ಅದನ್ನು ನಿರಾಕರಿಸಲು ಈಕ್ಷತ್ಯಧಿಕರಣ ಹೊರಟಿದೆಯೆಂದು ಹೇಳುವ ರಾಮಾನುಜರು ಅದ್ವೈತಿಗಳಂತೆ ನಮ್ಮ ಅನೇಕ ಸವಾಲುಗಳಿಂದ ಸೋಲಬೇಕಾಗುತ್ತದೆ.

* ಸಾಂಖ್ಯಮತ ನಿರಾಕರಣೆ ಈ ಅಧ್ಯಾಯದಲ್ಲಿ ಅಸಂಗತ

* ಪ್ರಧಾನದಲ್ಲಿ ಜಗತ್‌ಕಾರಣತ್ವ ಮತ್ತು ಉಪಾದಾನತ್ವವನ್ನು ನೀವೇ ಅಂಗೀಕರಿಸಿರುವಾಗ ಅದನ್ನೇಕೆ ನಿರಾಕರಿಸುತ್ತೀರಿ?

* ಜಗತ್‌ಕಾರಣತ್ವ ಉಪಾದಾನತ್ವಗಳನ್ನು ಪ್ರಧಾನದಲ್ಲಿ ನಿರಾಕರಿಸುವುದರಿಂದ ನಿಮಗೆ ಏನೂ ಲಾಭವಿಲ್ಲ. ಇವೆರಡನ್ನು ಬ್ರಹ್ಮನಲ್ಲಿಯೂ ನೀವು ಒಪ್ಪಿಲ್ಲ.

* 'ಸದೇವ ಸೌಮ್ಯ' ಇತ್ಯಾದಿ ಶ್ರುತಿಯಿಂದಷ್ಟೇ ಪ್ರಧಾನವು ಪ್ರತಿಪಾದ್ಯವಲ್ಲವೆಂದೂ ಹೇಳಲಾಗದು. ಸಕಲ ಕಾರಣವಾಕ್ಯಗಳೂ ಬ್ರಹ್ಮಪರವಾಗಿವೆಯೆಂದು ನೀವೇ ಒಪ್ಪಿದ್ದೀರಿ.

* ಜಗತ್ಕಾರಣತ್ವವು ಶಾಸ್ತ್ರೈಕಸಮಧಿಗಮ್ಯವಾದ್ದರಿಂದ ಪ್ರಧಾನಕ್ಕೆ ಪ್ರತ್ಯಕ್ಷಾದಿಗಳಿಂದ ಜಗತ್ಕಾರಣತ್ವವನ್ನು ಸಮರ್ಥಿಸಲಾಗದು. ತತ್ಪ್ರಯುಕ್ತವಾದ ಸಾರ್ಥಕ್ಯವೂ ಈ ಅಧಿಕರಣಕ್ಕೆ ಬರುವುದಿಲ್ಲ.

* ಪ್ರಧಾನವು ಈಶ್ವರನಿಂದ ನಿಯಮ್ಯವಾಗಿದೆಯೆಂದು ಅಂತರ್ಯಾಮ್ಯಧಿಕರಣದಲ್ಲಿ ಹೇಳುವುದರಿಂದ ಈ ಅಧಿಕರಣ ವ್ಯರ್ಥ.

* ಸಾಂಖ್ಯನು ಕರ್ತೃತ್ವವನ್ನಾಗಲೀ ಕರ್ತೃತ್ವವಿಶಿಷ್ಟವಾದಉಪದಾನತ್ವವನ್ನಾಗಲೀ ಅಂಗೀಕರಿಸದಿದ್ದಾಗ ಅದನ್ನೇಕೆ ಇಲ್ಲಿ ನಿರಾಕರಿಸುತ್ತಿದ್ದೀರಿ?

* ಸಾಂಖ್ಯಸ್ಮೃತಿಯಿಂದ ಪ್ರಾಪ್ತವಾದ ಜಗತ್ಕಾರಣತ್ವವನ್ನು ಶ್ರುತಿಗಳು ಅನುವಾದ ಮಾಡುತ್ತಿರುವುದರಿಂದ ವೇದಾಂತವಿಚಾರವು ಅನಾರಂಭಣೀಯವೆಂದೇ ನೀವು ಪೂರ್ವಪಕ್ಷ ಮಾಡಿದಂತಾಗುತ್ತದೆ. ಹೀಗಿರುವಾಗ ನಾಲ್ಕು ಅಧಿಕರಣಗಳಂತೆ ಇದನ್ನು ಶಾಸ್ತ್ರಾರಂಭಸಾಧಕವೆಂದು ಏಕೆ ಹೇಳುವುದಿಲ್ಲ.

ಈ ಹತ್ತಾರು ಪ್ರಶ್ನೆಗಳಿಗೆ ಸಮಂಜಸವಾದ ಉತ್ತರಗಳು ರಾಮಾನುಜರಲ್ಲಿ ಇಲ್ಲ.

ಇಲ್ಲಿಗೆ ಈಕ್ಷತ್ಯಧಿಕರಣದಲ್ಲಿ ಬ್ರಹ್ಮಸೂತ್ರಭಾಷ್ಯ, ಸತ್ತರ್ಕದೀಪಾವಳಿ, ತತ್ತ್ವಪ್ರದೀಪ, ತತ್ತ್ವಪ್ರಕಾಶಿಕಾ, ಭಾವದೀಪ ಇವುಗಳ ಅನುವಾದವು ಹಾಗೂ ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆಯು ಸಮಾಪ್ತವಾಯಿತು

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಲಕ್ಷ್ಮೀಹಯಗ್ರೀವೋ ವಿಜಯತೇತಮಾಮ್ ॥

# ಆನಂದಮಯಾಧಿಕರಣ

ಬ್ರಹ್ಮಸೂತ್ರಭಾಷ್ಯ

ಸತ್ತರ್ಕದೀಪಾವಳಿ

ತತ್ವಪ್ರದೀಪ

ತತ್ವಪ್ರಕಾಶಿಕಾ

ಭಾವದೀಪ

ವಿಶೇಷ ವಿಚಾರದೊಂದಿಗೆ ಕನ್ನಡಭಾಷೆಯಲ್ಲಿ ಅನುವಾದ

ಮತ್ತು

ತಂತ್ರದೀಪಿಕೆಯ ಜೊತೆ ಮತತ್ರಯ ವಿಮರ್ಶೆ

॥ ಹರಿಃ ಓಂ ॥
॥ ಶ್ರೀವೇದವ್ಯಾಸಾಯ ನಮಃ ॥
॥ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ ॥
॥ ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ ॥
॥ ಶ್ರೀಗುರುಭ್ಯೋ ನಮಃ ॥

# ಆನಂದಮಯಾಧಿಕರಣ

## ಬ್ರಹ್ಮಸೂತ್ರ

**ब्रह्मसूत्रम् – ।। आनन्दमयोऽभ्यासात् ।। १२ ।।**

ಅನುವಾದ - ಅನೇಕ ಬಾರಿ ಬ್ರಹ್ಮಶಬ್ದವು ಕೇಳಿಸುತ್ತಿರುವುದರಿಂದ ಆನಂದಮಯನು ಬ್ರಹ್ಮನೇ ಹೊರತು ಜೀವಾತ್ಮನಲ್ಲ.

''ಆನಂದಮಯಃ'' ಆನಂದಮಯಾದಿಶಬ್ದಗಳಿಂದ ವಾಚ್ಯನಾದವನು ವಿಷ್ಣುವೇ ಹೊರತು ಪ್ರಕೃತ್ಯಾದಿಗಳಲ್ಲ. ಏಕೆಂದರೆ ಅಭ್ಯಾಸಾತ್ = ಪ್ರತಿಯೊಂದು ಪ್ರಕರಣದಲ್ಲಿಯೂ ಆನಂದಮಯಾದಿಗಳಲ್ಲಿ ಬ್ರಹ್ಮಶಬ್ದವು ಮತ್ತೆ ಮತ್ತೆ ಕೇಳಿಸುತ್ತಿರುವುದರಿಂದ ಎಂದು ಸೂತ್ರಾರ್ಥ.

* * * *

ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

## ಬ್ರಹ್ಮಸೂತ್ರಭಾಷ್ಯ

'ಆನಂದಮಯೋಽಭ್ಯಾಸಾತ್' ಸೂತ್ರವ್ಯಾಖ್ಯಾನ

**भाष्यम् – तमेव समन्वयं प्रकटयति – 'आनन्दमयोऽभ्यासात्' इत्यादिना समस्तेनाध्यायेन प्रायेण ।**

'ತತ್ತು ಸಮನ್ವಯಾತ್' ಎಂಬ ಸೂತ್ರದಲ್ಲಿ ಹೇಳಿದ ಶಬ್ದಸಮನ್ವಯವನ್ನೇ 'ಆನಂದಮಯೋಽಭ್ಯಾಸಾತ್' ಎಂಬ ಸೂತ್ರದಿಂದ ಪ್ರಾರಂಭಿಸಿ, ಪೂರ್ಣವಾದ ಪ್ರಥಮಾಧ್ಯಾಯದಿಂದ ಬಹುತೇಕವಾಗಿ ಸೂತ್ರಕಾರರು ವಿಶದಪಡಿಸುತ್ತಾರೆ.

ಪ್ರತಿಪದಾರ್ಥ -- ಅಧ್ಯಾಯ ಹಾಗೂ ಪಾದಗಳಿಗೆ ಪೀಠವಾಗಿರುವ ಐದು ಅಧಿಕರಣಗಳಿಂದ ಬ್ರಹ್ಮಸ್ವರೂಪವನ್ನು ನಿರೂಪಿಸಿದ್ದಾಯಿತು. ಬ್ರಹ್ಮನ ಬಗ್ಗೆ ಹೇಳಬೇಕಾದ್ದು ಏನೂ ಉಳಿದಿಲ್ಲ. ಹೀಗಿರುವಾಗ ಉಳಿದ ಅಧ್ಯಾಯ ಹಾಗೂ ಪಾದಗಳು ವ್ಯರ್ಥವಲ್ಲವೇ? ಎಂಬ ಪ್ರಶ್ನೆಗೆ ಉತ್ತರಿಸುತ್ತಿದ್ದಾರೆ.

ತಮೇವ ಸಮನ್ವಯಂ - ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ಸಮಸ್ತಶ್ರುತಿಗಳಿಂದ ಪರಮಾತ್ಮನೇ ಪ್ರತಿಪಾದ್ಯನು ಎಂದು ಸಮನ್ವಯಾಧಿಕರಣದಲ್ಲಿ ಮಾಡಿದ ಸಮನ್ವಯದ ಪ್ರತಿಜ್ಞೆಯನ್ನೇ, 'ಆನಂದಮಯೋಽಭ್ಯಾಸಾತ್' ಇತ್ಯಾದಿನಾ = ಆನಂದಮಯೋಭ್ಯಾಸಾತ್ ಎಂಬ ಸೂತ್ರದಿಂದ ಪ್ರಾರಂಭಿಸಿ, ಸಮಸ್ತೇನ = ಸಂಪೂರ್ಣವಾದ, ಅಧ್ಯಾಯೇನ = ಪ್ರಥಮಾಧ್ಯಾಯದಿಂದ, ಪ್ರಾಯೇಣ = ಬಹುತೇಕವಾಗಿ (ದೇವತಾಧಿಕರಣ ಮತ್ತು ಅಪಶೂದ್ರಾಧಿಕರಣಗಳನ್ನು ಬಿಟ್ಟು), ಪ್ರಕಟಯತಿ = ಸ್ಪಷ್ಟಪಡಿಸುತ್ತಾರೆ.

ಪಾದಭೇದವ್ಯವಸ್ಥೆ

**भाष्यम् – अन्यत्रप्रसिद्धानां शब्दानां परमात्मनि समन्वयः प्रदर्श्यतेऽस्मिन् पादे । नान्यथा, तददृष्टेः ।**

(ದೇಹಲೀದೀಪನ್ಯಾಯದಿಂದ 'ಪ್ರಾಯೇಣ' ಎಂಬ ಪದವು ಅನುವೃತ್ತವಾಗುತ್ತದೆ.) ಪ್ರಥಮಪಾದದಲ್ಲಿ ಪ್ರಾಯಶಃ ಅನ್ಯತ್ರಪ್ರಸಿದ್ಧವಾದ ಶಬ್ದಗಳನ್ನು ಪರಮಾತ್ಮನಲ್ಲಿ ಸಮನ್ವಯ ಮಾಡಲಾಗಿದೆ. ಹೊರತು ಬೇರೆ ಭಾಷ್ಯಕಾರರು ಹೇಳುವಂತೆ ಪಾದಗಳ ವ್ಯವಸ್ಥೆಯನ್ನು ಮಾಡಬಾರದು. ಏಕೆಂದರೆ ಅವರು ಹೇಳಿದ ಕ್ರಮವು ಪಾದಗಳಲ್ಲಿ ತೋರುತ್ತಿಲ್ಲ.

ಪ್ರತಿಪದಾರ್ಥ - - ಹಾಗಾದಲ್ಲಿ ಸಂಪೂರ್ಣ ಪ್ರಥಮಾಧ್ಯಾಯವು ಒಂದೇ ವಿಷಯವನ್ನು ಪ್ರತಿಪಾದಿಸುತ್ತದೆ ಎಂದಂತಾಯಿತು. ಹೀಗಿರುವಾಗ ಪಾದಭೇದವನ್ನು ವಿವಕ್ಷಿಸಲು ಏನು ಕಾರಣ? ಎಂಬ ಪ್ರಶ್ನೆಗೆ ಸಮನ್ವಯದಲ್ಲಿಯೂ ಅವಾಂತರಭೇದವು ಇರುತ್ತದೆ. ಆದ್ದರಿಂದ ಪಾದಭೇದವ್ಯವಸ್ಥೆಯು ಅನಿವಾರ್ಯವಾಗಿದೆ ಎಂದು ತಿಳಿಸಲು ಪ್ರಥಮಪಾದಪ್ರತಿಪಾದ್ಯವಾದ ಪ್ರಮೇಯವನ್ನು ತೋರಿಸುತ್ತಿದ್ದಾರೆ. ಅನ್ಯತ್ರ = ಭಗವಂತನನ್ನು ಬಿಟ್ಟು, ಬೇರೆ ಕಡೆ, ಪ್ರಸಿದ್ಧಾನಾಂ = ಶ್ರುತಿ ಹಾಗೂ ಲೋಕಗಳಲ್ಲಿ ಪ್ರಸಿದ್ಧವಾದ, ಶಬ್ದಾನಾಂ = ಆನಂದ, ಆಕಾಶ ಮೊದಲಾದ ನಾಮಾತ್ಮಕಶಬ್ದಗಳ, ಸಮನ್ವಯಃ = ಉಪಕ್ರಮಾದಿ ತಾತ್ಪರ್ಯಲಿಂಗಗಳಿಂದ ವಾಚ್ಯತ್ವವು, ಅಸ್ಮಿನ್ = ಈ, ಪಾದೇ = ಪ್ರಥಮಪಾದದಲ್ಲಿ, ಪ್ರದರ್ಶ್ಯತೇ = ನಿರೂಪಿಸಲ್ಪಟ್ಟಿದೆ. ಅನ್ಯಥಾ = ಇದಕ್ಕೆ ವಿರುದ್ಧವಾದ ಹೇಳಿಕೆಯು, ನ = ಯುಕ್ತವಲ್ಲ. ತತ್ = ಇತರರು ಹೇಳಿದ ಪಾದಾರ್ಥದ ಕ್ರಮವು, ಅದೃಷ್ಟೇಃ = ಈ ಅಧ್ಯಾಯದ ಪಾದಗಳಲ್ಲಿ ಕಾಣಿಸದೇ ಇರುವುದರಿಂದ.

ಆನಂದಮಯಾಧಿಕರಣದ ಗುರಿ ಏನು ?

**भाष्यम् – ब्रह्मजिज्ञासा कर्तव्येत्युक्तम् । तच्च ब्रह्म 'ब्रह्म पुच्छं प्रतिष्ठा' (तै.२-५-२) इत्यानन्दमयावयवरूपं प्रतीयते । न ह्यवयविनं विना**

**अवयवमात्रस्य ज्ञेयतेत्यत आह –**

**सूत्रम् – ।। आनन्दमयोऽभ्यासात् ।।**

ಜಿಜ್ಞಾಸಾಸೂತ್ರದಲ್ಲಿ ಬ್ರಹ್ಮಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದರು. ಆದರೆ ಅಂತಹ ಬ್ರಹ್ಮನು ತೈತ್ತಿರೀಯೋಪನಿಷತ್ತಿನಲ್ಲಿ 'ಬ್ರಹ್ಮ ಪುಚ್ಛಂ ಪ್ರತಿಷ್ಠಾ' ಎಂಬಲ್ಲಿ ಆನಂದಮಯನ ಅವಯವ ಎಂದು ವರ್ಣಿಸಲಾಗಿದೆ. ಅವಯವಿಯೆನಿಸಿದ ಆನಂದಮಯನನ್ನು ಬಿಟ್ಟು ಅವಯವ ಎನಿಸಿದ ಬ್ರಹ್ಮನನ್ನು ಮಾತ್ರ ತಿಳಿಯುವುದು ಸಾಧ್ಯವಿಲ್ಲ. ಈ ಶಂಕೆಯನ್ನು ಪರಿಹಾರ ಮಾಡಲು ಸೂತ್ರಕಾರರು ಹೇಳುತ್ತಿದ್ದಾರೆ - ''ಆನಂದಮಯೋಽಭ್ಯಾಸಾತ್'' = ಆನಂದಮಯಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆ. ಏಕೆಂದರೆ ತೈತ್ತಿರೀಯ ಉಪನಿಷತ್ತಿನಲ್ಲಿ ಅನೇಕಬಾರಿ ಬ್ರಹ್ಮಶಬ್ದವು ಕೇಳಿಸುತ್ತಿರುವುದರಿಂದ.

ಪ್ರತಿಪದಾರ್ಥ -- ಈ ಅಧಿಕರಣದಲ್ಲಿ ಆನಂದಮಯನು ವಿಷ್ಣುವೇ ಆಗಿದ್ದಾನೆಂದು ಸಮರ್ಥಿಸಲಾಗಿದೆ. ಈ ಸಮರ್ಥನೆಗೆ ಹಿಂದಿನ ಅಧಿಕರಣದಿಂದ ಏನು ಸಂಗತಿಯೆಂದು ತಿಳಿಯುವುದಿಲ್ಲ. ಆದ್ದರಿಂದ ಅವ್ಯವಹಿತವಾದ ಪೂರ್ವಾಧಿಕರಣದಿಂದಲೇ ಸಂಗತಿಯನ್ನು ಹೇಳಬೇಕೆಂಬ ನಿಯಮವಿಲ್ಲದ ಕಾರಣ ವ್ಯವಹಿತವಾದ ಜಿಜ್ಞಾಸಾಧಿಕರಣದಿಂದ ಮತ್ತು ಅದರ ವಿಷಯದಿಂದ ಆನಂತರ್ಯಸಂಗತಿಯೆನಿಸಿದ ಆಕ್ಷೇಪಿಕೀಸಂಗತಿಯನ್ನು ತೋರಿಸುತ್ತಿದ್ದಾರೆ.

ಬ್ರಹ್ಮಜಿಜ್ಞಾಸಾ - ಬ್ರಹ್ಮವಿಷಯಕವಾದ ಜಿಜ್ಞಾಸೆಯು, ಕರ್ತವ್ಯಾ = ಮಾಡಲ್ಪಡಬೇಕು. ಇತಿ = ಹೀಗೆ, ಉಕ್ತಮ್ = ಜಿಜ್ಞಾಸಾಧಿಕರಣದಲ್ಲಿ ಹೇಳಲಾಗಿತ್ತು. ತಚ್ಚ ಬ್ರಹ್ಮ = ಆ ಜಿಜ್ಞಾಸ್ಯನಾದ ಬ್ರಹ್ಮನಾದರೋ 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಇತಿ = ಬ್ರಹ್ಮಪುಚ್ಛಂ ಪ್ರತಿಷ್ಠಾ ಎಂಬ ತೈತ್ತಿರೀಯೋಪನಿಷತ್ತಿನ ವಾಕ್ಯದಲ್ಲಿ, ಆನಂದಮಯಅವಯವರೂಪಂ - ಆನಂದಮಯನ ಅವಯವವೆಂದು, ಪ್ರತೀಯತೇ = ಕಾಣಿಸುತ್ತದೆ.

ಅವಯವಿನಂ ವಿನಾ = ಪೂರ್ಣದೇಹವನ್ನು ಬಿಟ್ಟು, ಅವಯವಮಾತ್ರಸ್ಯ= ದೇಹದ ಒಂದು ಏಕದೇಶವನ್ನು ಮಾತ್ರ, ಜ್ಞೇಯತಾ =ತಿಳಿಯುವುದು, ನಹಿ = ಸಾಧ್ಯವಿಲ್ಲವಷ್ಟೇ. ಇತ್ಯತಃ = ಈ ಶಂಕೆಯು ಬರುತ್ತಿರಲು,

ಸೂತ್ರಕಾರರು ಹೇಳುತ್ತಿದ್ದಾರೆ. 'ಆನಂದಮಯೋಽಭ್ಯಾಸಾತ್ ಆನಂದಮಯಃ = ಆನಂದಮಯಶಬ್ದದಿಂದ ವಾಚ್ಯನಾದವನು ವಿಷ್ಣುವೇ ಆಗಿದ್ದಾನೆ, ಅಭ್ಯಾಸಾತ್ = ತೈತ್ತಿರೀಯೋಪನಿಷತ್ತಿನಲ್ಲಿ ಅನೇಕಬಾರಿ ಬ್ರಹ್ಮಶಬ್ದವು ಕೇಳಿಸುತ್ತಿರುವುದರಿಂದ.

## ವಿಷಯ ಹಾಗೂ ಪೂರ್ವಪಕ್ಷ

**ಭಾಷ್ಯಮ್ – आनन्दमयो ब्रह्मादिः प्रकृतिर्विष्णुर्वा । ब्रह्मशब्दाद् हिरण्यगर्भस्य प्राप्तिः । शतानन्दनाम्ना च ।**

ಆನಂದಮಯಶಬ್ದದಿಂದ ವಾಚ್ಯನಾದವನು ಬ್ರಹ್ಮಾದಿಗಳೋ, ಜಡಪ್ರಕೃತಿಯೋ, ಲಕ್ಷ್ಮೀದೇವಿಯೋ, ಅಥವಾ ವಿಷ್ಣುವೋ? ಎಂದು ಸಂಶಯ. ಬ್ರಹ್ಮಶಬ್ದದ ಬಲದಿಂದ ಚತುರ್ಮುಖಬ್ರಹ್ಮನೇ ಆನಂದಮಯನಾಗುತ್ತಾನೆ. ಮತ್ತು ಆನಂದಮಯಶಬ್ದದ ಅರ್ಥವನ್ನೇ ಹೇಳುವ 'ಶತಾನಂದ' ಎಂಬ ಹೆಸರು ಚತುರ್ಮುಖನಿಗಿದೆ.

ಪ್ರತಿಪದಾರ್ಥ – ಇಲ್ಲಿಯ ತನಕ ಸಂಗತಿ ಹಾಗೂ ಅಧಿಕರಣದ ಫಲವನ್ನು ಹೇಳಿದ್ದಾಯಿತು. ಈಗ ವಿಷಯ ಹಾಗೂ ಸಂಶಯಗಳನ್ನು ಹೇಳುತ್ತಿದ್ದಾರೆ.

ಆನಂದಮಯಃ = ಆನಂದಮಯಶಬ್ದವಾಚ್ಯನಾದವನು, ಬ್ರಹ್ಮಾದಿಃ = ಚತುರ್ಮುಖಬ್ರಹ್ಮನೇ ಮೊದಲಾದ ಜೀವರಾಶಿಯೋ, ವಾ = ಅಥವಾ, ಪ್ರಕೃತಿಃ = ಜಡಪ್ರಕೃತಿ ಅಥವಾ ಚೇತನಪ್ರಕೃತಿಯೋ (ಲಕ್ಷ್ಮೀದೇವಿಯೋ), ವಾ = ಅಥವಾ, ವಿಷ್ಣುಃ = ವಿಷ್ಣುವೋ?

ಯುಕ್ತಿಬದ್ಧವಾದ ಪೂರ್ವಪಕ್ಷವನ್ನು ಹೇಳುತ್ತಿದ್ದಾರೆ.

ಬ್ರಹ್ಮಶಬ್ದಾತ್ = ಬ್ರಹ್ಮಶಬ್ದವಿರುವುದರಿಂದ, ಹಿರಣ್ಯಗರ್ಭಸ್ಯ = ಚತುರ್ಮುಖಬ್ರಹ್ಮನ, ಪ್ರಾಪ್ತಿಃ = ಪ್ರಾಪ್ತಿಯಾಗುತ್ತದೆ. ಚ = ಮತ್ತು, ಶತಾನಂದನಾಮ್ನಾ = ಶತಾನಂದನೆಂಬ ಹೆಸರಿರುವುದು ಮತ್ತೊಂದು ಕಾರಣ.

ರುದ್ರಾದಿಗಳು ಆನಂದಮಯರೆಂದು ಪೂರ್ವಪಕ್ಷ

भाष्यम् – अष्टमूर्तित्वात् सूर्ये प्रोक्तत्वाच्च रुद्रस्य । एवमन्येषामपि ।

ಅಥವಾ ರುದ್ರನೂ ಆನಂದಮಯನಾಗಬಹುದು. ಏಕೆಂದರೆ, ಆನಂದಮಯಪ್ರಕರಣದಲ್ಲಿ 'ಯಶ್ಚಾಸಾವಾದಿತ್ಯೇ' ಎಂಬುದಾಗಿ ಸೂರ್ಯಮಂಡಲದಲ್ಲಿ ಆನಂದಮಯನ ಇರುವಿಕೆಯನ್ನು ಹೇಳಲಾಗಿದೆ. ಸೂರ್ಯಮಂಡಲವು ರುದ್ರನ ಅಷ್ಟಮೂರ್ತಿಗಳಲ್ಲಿ ಒಂದಾಗಿದೆ. ಆದ್ದರಿಂದ ರುದ್ರನೇ ಆನಂದಮಯನು.

ಅಥವಾ ಇಂದ್ರ, ಬೃಹಸ್ಪತ್ಯಾದಿಗಳೂ ಸಹ ಆನಂದಮಯರಾಗಬಹುದು. ಏಕೆಂದರೆ, ಅವರು ಸೂರ್ಯನಿಯಾಮಕರಾಗಿ ಸೂರ್ಯನಲ್ಲಿರುತ್ತಾರೆ.

ಪ್ರತಿಪದಾರ್ಥ – ಇಲ್ಲಿಯವರೆಗೂ ಒಂದು ಬಗೆಯ ಪೂರ್ವಪಕ್ಷವನ್ನು ತೋರಿಸಿ, ಮತ್ತೊಂದು ಬಗೆಯ ಪೂರ್ವಪಕ್ಷವನ್ನು ತೋರಿಸುತ್ತಿದ್ದಾರೆ-

'ಯಶ್ಚಾಸಾವಾದಿತ್ಯೇ' ಎಂಬ ಶ್ರುತಿಯಲ್ಲಿ, ಸೂರ್ಯೇ = ಸೂರ್ಯಮಂಡಲದಲ್ಲಿ, ಪ್ರೋಕ್ತತ್ವಾತ್ = ಆನಂದಮಯನ ಇರುವಿಕೆಯನ್ನು ಹೇಳಿರುವುದರಿಂದ, ಅಷ್ಟಮೂರ್ತಿತ್ವಾಚ್ಚ = ರುದ್ರದೇವರಿಗೆ ಸೂರ್ಯ ಮೊದಲಾದ ಎಂಟು ಸ್ಥಾನಗಳನ್ನು ಹೇಳಿರುವುದರಿಂದಲೂ, ರುದ್ರಸ್ಯ = ರುದ್ರನಿಗೆ, ಪ್ರಾಪ್ತಿಃ = ಆನಂದಮಯಶಬ್ದದ ಪ್ರತಿಪಾದ್ಯತ್ವವು ಹೊಂದುತ್ತದೆ.

ಮತ್ತೊಂದು ಬಗೆಯ ಪೂರ್ವಪಕ್ಷ - ಏವಮ್ = ಇದೇ ರೀತಿಯಾಗಿ ಸೂರ್ಯಮಂಡಲಸ್ಥಿತತ್ವ ಎಂಬ ಕಾರಣದಿಂದಲೇ, ಅನ್ಯೇಷಾಮಪಿ = ಇಂದ್ರ ; ಬೃಹಸ್ಪತಿ ಮೊದಲಾದವರಿಗೂ, ಪ್ರಾಪ್ತಿಃ = ಆನಂದಮಯಶಬ್ದದ ಪ್ರತಿಪಾದ್ಯತ್ವವು ಕೂಡುತ್ತದೆ.

ನಾಕನೆಯ ಪೂರ್ವಪಕ್ಷ

भाष्यम् – 'मम योनिर्महद् ब्रह्म' (भ. गी. १४-३.) इति ब्रह्मशब्दात्, बहुभावाच्च प्रकृतेः ।

ಸಾಕನೆಯ ಪೂರ್ವಪಕ್ಷ - ಶ್ರೀಕೃಷ್ಣನು ಭಗವದ್ಗೀತೆಯಲ್ಲಿ 'ಮಮ ಯೋನಿರ್ಮಹದ್‌ಬ್ರಹ್ಮ' ನನ್ನ ಪತ್ನಿಯಾದ ಲಕ್ಷ್ಮಿಯು ಬ್ರಹ್ಮಶಬ್ದವಾಚ್ಯಳು ಎಂದು ಹೇಳಿದ್ದಾನೆ. ಹೀಗೆ ಬ್ರಹ್ಮಶಬ್ದವು ಲಕ್ಷ್ಮೀದೇವಿಯಲ್ಲಿಯೂ ಪ್ರಸಿದ್ಧವಾದ್ದರಿಂದ ಆನಂದಮಯಳು ಲಕ್ಷ್ಮೀದೇವಿಯೇ ಆಗಬೇಕು. ಮತ್ತು 'ಬಹು ಸ್ಯಾಮ್ ಪ್ರಜಾಯೇಯ' ಇತ್ಯಾದಿಯಾಗಿ ಜಗತ್ತಿನ ಅನೇಕಪದಾರ್ಥರೂಪದಲ್ಲಿ ಆನಂದಮಯವು ರೂಪಗೊಂಡಿತು ಎಂದು ಹೇಳಿದ್ದರಿಂದ ಜಡಪ್ರಕೃತಿಯೇ ಅಂತಹ ಸ್ಥೂಲರೂಪವನ್ನು ಪಡೆಯಲು ಸಾಧ್ಯ. ಆ ಜಡಪ್ರಕೃತಿಗೆ ನಿಯಾಮಕಳಾದ್ದರಿಂದ ಲಕ್ಷ್ಮೀದೇವಿಯೂ ಕೂಡ ಬಹುರೂಪವನ್ನು ಹೊಂದುತ್ತಾಳೆ. ಆದ್ದರಿಂದ ಆನಂದಮಯಶಬ್ದಪ್ರತಿಪಾದ್ಯಳು ಲಕ್ಷ್ಮೀದೇವಿಯೇ ಆಗುತ್ತಾಳೆ.

ಪ್ರತಿಪದಾರ್ಥ – ಯುಕ್ತಿಬದ್ಧವಾದ ಮತ್ತೊಂದು ಬಗೆಯ ಪೂರ್ವಪಕ್ಷ ಹೀಗಿದೆ –

'ಮಮ ಯೋನಿರ್ಮಹದ್ ಬ್ರಹ್ಮ' ಇತಿ = 'ಮಮ ಯೋನಿರ್ಮಹದ್ ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್' ಎಂದು ಶ್ರೀಕೃಷ್ಣನು ಗೀತೆಯಲ್ಲಿ ತಿಳಿಸಿದಂತೆ, 'ಬ್ರಹ್ಮಶಬ್ದಾತ್' = ಬ್ರಹ್ಮಶಬ್ದವನ್ನು ಲಕ್ಷ್ಮೀದೇವಿಯಲ್ಲಿ ಹೇಳಿರುವುದರಿಂದ, ಚ = ಮತ್ತು, ಪ್ರಕೃತೇಃ = ಚಿತ್‌ಪ್ರಕೃತಿಯಾದ ಲಕ್ಷ್ಮಿಗೂ, ಬಹುಭಾವಾತ್ = ಆನಂದಮಯನಲ್ಲಿ ಹೇಳಿರುವ ಬಹುರೂಪತೆಯು ಇರುವುದರಿಂದ.

ಲಕ್ಷ್ಮೀದೇವಿಯು ಆನಂದಮಯ ಎನಿಸಬಹುದು. ಅಥವಾ ಪ್ರಕೃತೇಃ = ಜಡಪ್ರಕೃತಿಯಲ್ಲಿ ಬಹುಭಾವಾತ್ = ಬಹುಭವನವಿರುವುದರಿಂದ, ಜಡಪ್ರಕೃತಿಯು ಆನಂದಮಯ ಎನಿಸಬಹುದು.

### ಐದನೆಯ ಪೂರ್ವಪಕ್ಷ

**ಭಾಷ್ಯಮ್ – 'ಬೃಹ ಜಾತಿಜೀವಕಮಲಾಸನಶಬ್ದರಾಶಿಷು' ಇತಿ ಬ್ರಹ್ಮಶಬ್ದಾದೇವ ಸರ್ವಜೀವಾನಾಮ್ ಅನ್ನಮಯತ್ವಾದೇಶ್ಚ ।**

ಅಥವಾ ಬ್ರಹ್ಮಶಬ್ದವು ಬೃಹಧಾತುವಿನಿಂದ ನಿಷ್ಪನ್ನವಾಗಿದೆ. ಬೃಹಧಾತುವಿಗೆ ಜಾತಿ, ಜೀವ, ಚತುರ್ಮುಖಬ್ರಹ್ಮ, ಶಬ್ದರಾಶಿ(ವೇದ) ಇಷ್ಟು ಅರ್ಥಗಳಿವೆ. ಆದ್ದರಿಂದ ಪ್ರಕೃತ

ಬ್ರಹ್ಮಶಬ್ದದಿಂದ ಸಕಲಜೀವರನ್ನು ವಿವಕ್ಷಿಸಬಹುದು. ಅನ್ನವಿಕಾರವಾದ ದೇಹವನ್ನು ಹೊಂದಿದ ಜೀವನಿಗೆ ಈ ಅರ್ಥವು ಸರಿಹೊಂದುತ್ತದೆ. ಆದ್ದರಿಂದಲೂ ಆನಂದಮಯನು ಜೀವನೇ ಆಗುತ್ತಾನೆ.

ಪ್ರತಿಪದಾರ್ಥ – ಯುಕ್ತಿಬದ್ಧವಾದ ಮತ್ತೊಂದು ಬಗೆಯ ಪೂರ್ವಪಕ್ಷ ಹೀಗಿದೆ —

'ಬೃಹ ಜಾತಿಜೀವಕಮಲಾಸನಶಬ್ದರಾಶಿಷು' ಇತಿ = ಬೃಹಧಾತುವಿಗೆ ಜಾತಿ ಜೀವ, ಕಮಲಾಸನ, ಶಬ್ದರಾಶಿ ಇಷ್ಟು ಅರ್ಥಗಳಿರುವುದರಿಂದ, ಬ್ರಹ್ಮಶಬ್ದಾದೇವ = ಬ್ರಹ್ಮಶಬ್ದದ ಬಲದಿಂದಲೇ, ಸರ್ವಜೀವಾನಾಮ್ = ಸಕಲಜೀವರುಗಳು (ಪ್ರಾಪ್ತಿಃ = ಪ್ರಸಕ್ತರಾಗುತ್ತಾರೆ.) ಚ = ಮತ್ತು, ಅನ್ನಮಯತ್ವಾದೇಃ = ಅನ್ನವಿಕಾರವಾದ ದೇಹವನ್ನು ಪಡೆದಿದ್ದರಿಂದಲೂ, ಆನಂದಮಯರು ಜೀವರೇ ಆಗುತ್ತಾರೆ.

### ಸಿದ್ಧಾಂತ

**ಭಾಷ್ಯಮ್ - तथाऽपि न त आनन्दमयशब्देनोच्यन्ते । किन्तु, विष्णुरेव ।**

ಇತರರು ಆನಂದಮಯಶಬ್ದಪ್ರತಿಪಾದ್ಯರೆನ್ನಲು ಅನೇಕ ಕಾರಣಗಳಿದ್ದರೂ, ಆನಂದಮಯಶಬ್ದದಿಂದ ಅವರು ವಾಚ್ಯರಾಗುವುದಿಲ್ಲ. ಹೊರತಾಗಿ ವಿಷ್ಣುವೇ ಆನಂದಮಯಶಬ್ದದಿಂದ ವಾಚ್ಯನಾಗುತ್ತಾನೆ.

ಪ್ರತಿಪದಾರ್ಥ - ಈ ಎಲ್ಲ ಪೂರ್ವಪಕ್ಷಗಳಿಗೆ ಸಿದ್ಧಾಂತವನ್ನು ಮಾಡುತ್ತಿದ್ದಾರೆ.

ತಥಾऽಪಿ = ಹೀಗೆ ಅನೇಕರಲ್ಲಿ ಆನಂದಮಯಪದಪ್ರತಿಪಾದ್ಯತ್ವವು ಬರಲು ಕಾರಣವಿದ್ದರೂ, ತೇ = ಅವರು, ಆನಂದಮಯಶಬ್ದೇನ = ಆನಂದಮಯಶಬ್ದದಿಂದ, ನ ಉಚ್ಯಂತೇ = ಪ್ರತಿಪಾದ್ಯರಲ್ಲ. ಕಿಂತು = ಹೊರತಾಗಿ, ವಿಷ್ಣುರೇವ = ವಿಷ್ಣುವೇ ಆನಂದಮಯಪದ ವಾಚ್ಯನಾಗುತ್ತಾನೆ.

भाष्यम् – 'तदेव ब्रह्म परमं कवीनाम्' (महाना. १-६.)
'एतमेव ब्रह्मेत्याचक्षते' (ऐ.आ. ३-२-३-१२.)

'ब्रह्मशब्दः परे विष्णौ नान्यत्र क्वचिदिष्यते ।
असम्पूर्णाः परे यस्मादुपचारेण वा भवेत् ।।',
'ब्रह्मेति परमात्मेति भगवानिति शब्द्यते ।', (भागवते १-२-११)
'वासुदेवात्मकं ब्रह्म मूलमन्त्रेण वा यतिः ।' (व्यासस्मृति)

इत्यादिषु तस्मिन्नेव प्रसिद्धब्रह्मशब्दाभ्यासात् ।

'ಓಂದೆ ಹೇಳಿದ ವಿಷ್ಣುವೇ ಜ್ಞಾನಿಗಳಿಗೆ ಪರಬ್ರಹ್ಮನು' ಎಂದು 'ತದೇವ ಬ್ರಹ್ಮ' ಎಂಬ ಮಹಾನಾರಾಯಣೋಪನಿಷತ್ತಿನಲ್ಲಿ ಹೇಳಲಾಗಿದೆ.

ಮತ್ತು 'ಏತಮೇವ' ಎಂದು ಐತರೇಯ ಆರಣ್ಯಕದಲ್ಲಿ 'ಈ ವಿಷ್ಣುವನ್ನೇ ಬ್ರಹ್ಮನೆಂದು ಕರೆಯುತ್ತಾರೆ' ಎಂದು ಕೇಳಿಸುತ್ತಿದೆ.

'ಬ್ರಹ್ಮಶಬ್ದವು ಸರ್ವೋತ್ತಮನಾದ ವಿಷ್ಣುವಿನಲ್ಲಿಯೇ ಇರುತ್ತದೆ ಹೊರತು ಇತರರ ವಿಷಯದಲ್ಲಿ ಎಂದಿಗೂ ಇರುವುದಿಲ್ಲ. ಏಕೆಂದರೆ ಯಾವ ಕಾರಣದಿಂದ ವಿಷ್ಣುವಿಗಿಂತ ಅತಿರಿಕ್ತವಾದ ಪದಾರ್ಥವು ಗುಣಪೂರ್ಣವಲ್ಲವೋ ಆ ಕಾರಣದಿಂದ ಬ್ರಹ್ಮಶಬ್ದವಾಚ್ಯರು ಇತರರು ಆಗುವುದಿಲ್ಲ. ಆದರೂ ಸಹ ಔಪಚಾರಿಕವಾಗಿ ಕೆಲವೊಮ್ಮೆ ಬ್ರಹ್ಮಶಬ್ದ-ಪ್ರತಿಪಾದ್ಯರಾಗಬಹುದು' ಮತ್ತು 'ಬ್ರಹ್ಮನೆಂದೂ ಪರಮಾತ್ಮನೆಂದೂ ಭಗವಂತನೆಂದೂ ವಿಷ್ಣುವು ಪ್ರತಿಪಾದ್ಯನಾಗುತ್ತಾನೆ' ಇತ್ಯಾದಿಯಾಗಿ ಭಾಗವತದಲ್ಲಿ ಹೇಳಲ್ಪಟ್ಟಿದೆ.

ಸನ್ಯಾಸಿಗಳು 'ಓಂ ಓಂ ನಮೋ ನಾರಾಯಣಾಯ ಓಂ' ಎಂಬ ನಾರಾಯಣಾಷ್ಟಾಕ್ಷರ ಮಂತ್ರದಿಂದ ಅಥವಾ ಪ್ರಣವದಿಂದ ಮೋಕ್ಷದಾತೃವಾದ ವಾಸುದೇವರೂಪಿಯಾದ ಪರಮಾತ್ಮನನ್ನು ಬ್ರಹ್ಮನೆಂದು ಆರಾಧಿಸಬೇಕು' ಎಂದು ವ್ಯಾಸಸ್ಮೃತಿಯು ಹೇಳಿದೆ.

ಹೀಗೆ ಅನೇಕ ಪ್ರಮಾಣಗಳ ಬಲದಿಂದ ವಿಷ್ಣುವಿನಲ್ಲಿಯೇ ಬ್ರಹ್ಮಶಬ್ದದ ಆವರ್ತನೆಯು ಕೇಳಬರುತ್ತಿದೆ. ಆದ್ದರಿಂದ ವಿಷ್ಣುವೇ ಬ್ರಹ್ಮಶಬ್ದವಾಚ್ಯನಾಗುತ್ತಾನೆ ಹೊರತು ಇತರರಲ್ಲ.

ಪ್ರತಿಪದಾರ್ಥ - ವಿಷ್ಣುವೇ ಬ್ರಹ್ಮಶಬ್ದವಾಚ್ಯನೆನ್ನಲು ಅನೇಕಪ್ರಮಾಣ-ಗಳನ್ನು ಉಲ್ಲೇಖಿಸುತ್ತಿದ್ದಾರೆ. ಕವೀನಾಂ = ಜ್ಞಾನಿಗಳಿಗೆ, ತದೇವ =

ಹಿಂದೆ ವರ್ಣಿಸಲ್ಪಟ್ಟ ವಿಷ್ಣುವೇ, ಬ್ರಹ್ಮ ಪರಮಮ್ = ಪರಬ್ರಹ್ಮನು ಎಂದು ಶ್ರುತಿಯು ಹೇಳಿದೆ.

'ಏತಮೇವ = ಈ ವಿಷ್ಣುವನ್ನೇ, ಬ್ರಹ್ಮ ಇತ್ಯಾಚಕ್ಷತೇ = ಬ್ರಹ್ಮನೆಂದು ಕರೆಯುತ್ತಾರೆ'.

ಬ್ರಹ್ಮಶಬ್ದಃ = ಬ್ರಹ್ಮಶಬ್ದವು, ಪರೇ = ಸರ್ವೋತ್ತಮನಾದ, ವಿಷ್ಣೌ = ವಿಷ್ಣುವಿನಲ್ಲಿ (ಪ್ರಸಿದ್ಧವಾಗಿದೆ), ಅನ್ಯತ್ರ - ಇತರರ ವಿಷಯದಲ್ಲಿ, ಕ್ವಚಿತ್ - ಎಂದೂ ಸಹ, ನ ಇಷ್ಯತೇ = ಅಂಗೀಕರಿಸಲ್ಪಟ್ಟಿಲ್ಲ. ಏಕೆಂದರೆ, ಯಸ್ಮಾತ್ = ಯಾವ ಕಾರಣದಿಂದ, ಪರೇ - ಇತರರು, ಅಸಂಪೂರ್ಣಾಃ = ಪರಿಪೂರ್ಣರಲ್ಲವೋ, (ತಸ್ಮಾತ್ = ಆ ಕಾರಣದಿಂದ, ಬ್ರಹ್ಮಶಬ್ದ-ವಾಚ್ಯರಾಗುವುದಿಲ್ಲ), ಆದರೆ = ಉಪಚಾರೇಣ ವಾ = ಔಪಚಾರಿಕವಾಗಿ, ಭವೇತ್ = ಬ್ರಹ್ಮಶಬ್ದವಾಚ್ಯರಾಗಬಹುದು.'

'ಬ್ರಹ್ಮೇತಿ = ಬ್ರಹ್ಮನೆಂದು, ಪರಮಾತ್ಮೇತಿ = ಪರಮಾತ್ಮನೆಂದು, ಭಗವಾನ್ ಇತಿ = ಭಗವಂತನೆಂದು' ಶಬ್ದ್ಯತೇ - ಕರೆಸಿಕೊಳ್ಳುತ್ತಾನೆ'.

'ಯತಿಃ - ಸನ್ಯಾಸಿಯು, (ಪ್ರಣವೇನ - ಓಂಕಾರದಿಂದ), ವಾ - ಅಥವಾ, ಮೂಲಮಂತ್ರೇಣ = ನಾರಾಯಣಾಷ್ಟಾಕ್ಷರಮಂತ್ರದಿಂದ, ವಾಸುದೇವಾತ್ಮಕಂ - ಮೋಕ್ಷದಾತೃವಾದ ವಾಸುದೇವರೂಪವನ್ನು, ಬ್ರಹ್ಮ - ಗುಣಪೂರ್ಣನಾದ ಬ್ರಹ್ಮನೆಂದು, (ಆರಾಧಿಸಬೇಕು).

ಇತ್ಯಾದಿಷು = ಇವೇ ಮೊದಲಾದ ಪ್ರಮಾಣಗಳ ಆಧಾರದಿಂದ, ತಸ್ಮಿನ್ನೇವ = ಆ ವಿಷ್ಣುವಿನಲ್ಲಿಯೇ, ಪ್ರಸಿದ್ಧಬ್ರಹ್ಮಶಬ್ದಾಭ್ಯಾಸಾತ್ = ಬ್ರಹ್ಮಶಬ್ದದ ಅಭ್ಯಾಸವು (ಆವರ್ತನೆಯು) ಪ್ರಸಿದ್ಧವಾಗಿದೆ.

## ಶ್ರೀಪದ್ಮನಾಭತೀರ್ಥರಿಂದ ವಿರಚಿತವಾದ

# ಸತ್ತರ್ಕದೀಪಾವಳಿ

ಕೆಲವು ಸೂತ್ರಗಳಲ್ಲಿ ಸಮನ್ವಯ ಇಲ್ಲ

**सत्तर्कदीपावळिः –**

**आनन्दमयोऽभ्यासात् ।। १२ ।।**

**वृत्तवर्तिष्यमाणग्रन्थसङ्गतिमाह – तमेवेत्यादिना । सर्ववेदसमन्वयप्रतिपादके प्रथमाध्याये तदुपर्यपि वादरायण इत्यादिषु केषुचित्सूत्रेषु तत्प्रतिपादनाभावात् । ब्रह्मण्यर्थान्तरनिरूढशब्दसमन्वय-प्रतिपादके प्रथमपादे आनन्दमयादिशब्दानां केषाञ्चिदर्थान्तरानिरूढानां समन्वयप्रतिपादनात् प्रायेणेत्युक्तम् ।**

ಇಲ್ಲಿಯವರೆಗೂ ಇರುವ ಮತ್ತು ಮುಂದೆ ಇರುವ ಗ್ರಂಥದ ಸಂಗತಿಯನ್ನು 'ತಮೇವ' ಎನ್ನುವುದರಿಂದ ಹೇಳುತ್ತಾರೆ. ಸಕಲವೇದಗಳ ಸಮನ್ವಯವನ್ನು ಹೇಳುವ ಪ್ರಥಮಾಧ್ಯಾಯದಲ್ಲಿ 'ತದುಪರ್ಯಪಿ ಬಾದರಾಯಣಃ' ಇದೇ ಮೊದಲಾದ ಕೆಲವು ಸೂತ್ರಗಳಲ್ಲಿ ಸಮನ್ವಯವನ್ನು ಹೇಳಿಲ್ಲ. ಮತ್ತು ಬೇರೆ ವಸ್ತುವಿನಲ್ಲಿ ಪ್ರಸಿದ್ಧಿಯಿರುವ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯವನ್ನು ಹೇಳುವ ಪ್ರಥಮಪಾದದಲ್ಲಿ ಬೇರೆ ಪದಾರ್ಥದಲ್ಲಿ ಪ್ರಸಿದ್ಧಿಯಿಲ್ಲದ 'ಆನಂದಮಯ' ಮೊದಲಾದ ಶಬ್ದಗಳ ಸಮನ್ವಯವನ್ನು ಹೇಳುತ್ತಾರೆ. ಆದ್ದರಿಂದ 'ಪ್ರಾಯೇಣ' ಎಂದು ಹೇಳಿದ್ದು ಸಾರ್ಥಕ.

ಮಾಯಾವಾದಿಗಳ ವಿಭಾಗ ಅಸಾಧು

**सत्तर्कदीपावळिः – न च स्पष्टब्रह्मलिङ्गानामस्मिन् पादे उपरि चास्पष्टब्रह्मलिङ्गानां समन्वयोऽभिधीयत इति कथनीयम् । एतत्कथनस्या-प्रामाणिकत्वात् । 'एतदमृतमभयमेतद्ब्रह्म' इत्यादीनाम् उपरितनपादाधि-करणोदाहृतवाक्यानामपि स्पष्टब्रह्मलिङ्गानामेवोपलम्भाच्चेत्याह – नान्यथेति ।**

ಸ್ಪಷ್ಟಬ್ರಹ್ಮಲಿಂಗವುಳ್ಳ ಶಬ್ದಗಳನ್ನು ಈ ಪಾದದಲ್ಲಿ ಮತ್ತು ಅಸ್ಪಷ್ಟಬ್ರಹ್ಮಲಿಂಗವುಳ್ಳ ಶಬ್ದಗಳನ್ನು ಮುಂದಿನ ಪಾದದಲ್ಲಿ ಸಮನ್ವಯ ಮಾಡುತ್ತಾರೆ ಎಂದು (ಮಾಯಾವಾದಿಗಳು) ಹೇಳುತ್ತಾರೆ. ಈ ರೀತಿ ಹೇಳುವುದಕ್ಕೆ ಏನೂ ಪ್ರಮಾಣವಿಲ್ಲ. ಮತ್ತು 'ಏತದಮೃತಮಭಯಮೇತದ್ ಬ್ರಹ್ಮ' ಇತ್ಯಾದಿಯಾಗಿ ಮುಂದಿನ ಪಾದಗಳ ಅಧಿಕರಣಗಳಲ್ಲಿ ಉದಾಹರಿಸಿದ ವಾಕ್ಯಗಳೂ ಕೂಡ ಸ್ಪಷ್ಟ ಬ್ರಹ್ಮಲಿಂಗವುಳ್ಳಂಥವುಗಳೇ ಆಗಿವೆ ಎಂದು 'ನಾನ್ಯಥಾ' ಎಂದು ಹೇಳುತ್ತಾರೆ.

'ಆನಂದಮಯೋऽಭ್ಯಾಸಾತ್' ಎಂಬ ಸೂತ್ರಕ್ಕೆ ಅವತಾರಿಕೆ

**सत्तर्कदीपावळिः – नन्वयं निर्दिष्टश्रुतिसमन्वयो जिज्ञास्यतया प्रतिज्ञाय आनन्दमय एव तस्मिन् अभिधातव्यः न तु ब्रह्मणि तस्य 'ब्रह्मपुच्छं प्रतिष्ठा' इति आनन्दमयावयवत्वश्रवणात् कृत्स्नानन्दमयावयविनं विहाय न हि तत्पुच्छरूपं ब्रह्म जिज्ञासितुं शक्यते । आनन्दमयस्य तु कृत्स्नस्य जिज्ञासया तु पुच्छरूपं ब्रह्म जिज्ञासितं भवत्येवेत्याशङ्कायां सूत्रमवतार्य व्याचष्टे – आनन्दमयोभ्यासादित्यादिना ।।**

ನೀವು ಹೇಳಿದ ಶ್ರುತಿಯ ಸಮನ್ವಯವನ್ನು. ಜಿಜ್ಞಾಸ್ಯತಯಾ ಪ್ರತಿಜ್ಞೆ ಮಾಡಿದ ಆನಂದ-ಮಯನಲ್ಲೇ ಹೇಳಬೇಕು ಹೊರತು ಬ್ರಹ್ಮನಲ್ಲಿ ಅಲ್ಲ . ಏಕೆಂದರೆ ''ಬ್ರಹ್ಮಪುಚ್ಛಂ ಪ್ರತಿಷ್ಠಾ'' ಎಂಬ ಶ್ರುತಿಯು ಬ್ರಹ್ಮನು ಆನಂದಮಯನ ಅವಯವ ಎಂದು ಹೇಳಿದೆ. ಅವಯವಿಯಾದ ಆನಂದಮಯನನ್ನು ಬಿಟ್ಟು ಅವನ ಅವಯವರೂಪನಾದ ಬ್ರಹ್ಮನನ್ನು ಜಿಜ್ಞಾಸೆ ಮಾಡುವುದು ತಪ್ಪಲ್ಲವೆ? ಈ ಪ್ರಶ್ನೆಗೆ ಉತ್ತರಿಸಲು ಅವತರಣಿಕೆಯನ್ನು ಕೊಟ್ಟು ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ 'ಆನಂದಮಯೋऽಭ್ಯಾಸಾತ್' ಇತ್ಯಾದಿಯಾಗಿ.

ಆನಂದಮಯನು ಯಾರು ?

**सत्तर्कदीपावळिः – अस्मिन्नधिकरणे विष्णवाख्यं ब्रह्मैवानन्दमय इति प्रतिपाद्यते । एकस्यैव अवयवावयविभावाभिप्रायेण आनन्दमयपुच्छत्वश्रवणं न विरुद्धमिति वक्ष्यति । अतो विष्णवाख्ये ब्रह्मणि निखिलश्रुतिसमन्वयप्रतिज्ञा**

**नानुपपन्ना तैत्तिरीयके 'विज्ञानमय अन्योन्तरात्माऽनन्दमयो ब्रह्म भवितुमर्हति आनन्दमयमधिकृत्य 'अस्ति ब्रह्मेति चेद्वेद' इति श्रवणाद् ब्रह्मशब्दस्य हिरण्यगर्भे प्रसिद्धत्वात् मानुषाधिपादिषु शतोत्तरादिषु अन्त्यत्वेन हिरण्यगर्भस्य 'ते ये शतं प्रजापतेरानन्दाः स एको ब्रह्मण आनन्दः' इति श्रवणात्वात्तस्यानन्दमयत्वं सिध्यति; 'पद्मभूश्च शतानन्दः' इत्यभिधानात् ।**

ರಃ ಅಧಿಕರಣದಲ್ಲಿ ವಿಷ್ಣುವೆಂಬ ಹೆಸರುಳ್ಳ ಬ್ರಹ್ಮನೇ ಆನಂದಮಯ ಎಂದು ಪ್ರತಿಪಾದನೆ ಮಾಡುತ್ತಾರೆ. ತಾನೇ ಅವಯವಿಯಾಗಿದ್ದಾನೆ ಮತ್ತು ತಾನೇ ಅವಯವವಾಗಿದ್ದಾನೆ. ಆದ್ದರಿಂದ ಬ್ರಹ್ಮನು ಆನಂದಮಯನ ಅವಯವ ಎಂದು ಶ್ರುತಿ ಹೇಳಿದ್ದಕ್ಕೆ ವಿರೋಧವಿಲ್ಲವೆಂದು ಮುಂದೆ ಸಮರ್ಥಿಸುತ್ತಾರೆ. ಆದ್ದರಿಂದ ವಿಷ್ಣುವೆಂಬ ಬ್ರಹ್ಮನಲ್ಲಿ ಸಕಲಶ್ರುತಿಗಳ ಸಮನ್ವಯ ಮಾಡುತ್ತೇವೆ ಎಂದು ಪ್ರತಿಜ್ಞೆ ಮಾಡಿದ್ದು ಅನುಚಿತವಾಗುವುದಿಲ್ಲ.

ಇಲ್ಲಿ ಹೇಳಿರುವ ಆನಂದಮಯನು ಚತುರ್ಮುಖ ಬ್ರಹ್ಮನೇ. ಏಕೆಂದರೆ ಆನಂದಮಯನನ್ನು ಕುರಿತು 'ಬ್ರಹ್ಮ ಚೇದ್ವೇದ' ಎಂದು ಹೇಳಿದ್ದಾರೆ. ಆ ಬ್ರಹ್ಮಶಬ್ದವು ಚತುರ್ಮುಖಬ್ರಹ್ಮನಲ್ಲಿ ಪ್ರಸಿದ್ಧವಾಗಿದೆ ಮತ್ತು ಮನುಷ್ಯೋತ್ತಮರಿಂದ ಆರಂಭಿಸಿ ನೂರು ಪಟ್ಟು ಹೆಚ್ಚು ಹೆಚ್ಚು ಆನಂದತಾರತಮ್ಯವನ್ನು ಹೇಳುವ ಸಂದರ್ಭದಲ್ಲಿ ಚತುರ್ಮುಖಬ್ರಹ್ಮನಿಗೆ 'ತೇ ಯೆ ಶತಂ ಪ್ರಜಾಪತೇರಾನಂದಾಃ ಸ ಏಕೋ ಬ್ರಹ್ಮಣ ಆನಂದಃ' ಎಂದು ಕೊನೆಯಲ್ಲಿ ಹೇಳಿದ್ದಾರೆ. ಇಲ್ಲಿ ಶತಾನಂದ ಎಂದರೆ 'ಪದ್ಮಭೂಶ್ಚ ಶತಾನಂದಃ' ಎಂದು ಕೋಶವಿರುವುದರಿಂದ ಚತುರ್ಮುಖಬ್ರಹ್ಮನೇ. ಆನಂದಮಯ ಎಂದು ಸಿದ್ಧವಾಗುತ್ತದೆ.

ರುದ್ರನು ಆನಂದಮಯ..?

**सत्तर्कदीपावळिः – प्रकृतस्यानन्दमयस्य 'य ...सावादित्ये' इत्यादित्यगत्वेन** श्रवणात् स रुद्र एव स्यात् । आदित्यस्य **रुद्रमूर्त्यष्टकप्रविष्टत्वात् । 'रुद्रसर्गं प्रवक्ष्यामि'** इत्यारभ्य -

**'सूर्यो जलं मही वह्निर्वायुराकाशमेव च ।**
**दीक्षितो ब्राह्मण सोम इत्येतास्तनवः क्रमात्' इत्युक्तं विष्णुपुराणे ।**

ಅಥವಾ ಪ್ರಕೃತನಾದ ಆನಂದಮಯನು 'ಯಶ್ಚಾಸಾವಾದಿತ್ಯೇ' ಎಂದು ಸೂರ್ಯನಲ್ಲಿ ಎಂದು ಹೇಳಿದ್ದರಿಂದ ಅವನು ರುದ್ರನೇ ಎಂದಾಗುತ್ತಾನೆ. ಏಕೆಂದರೆ ರುದ್ರನ ಎಂಟು ಮೂರ್ತಿ (ಪ್ರತಿಮಾಸ್ಥಾನ)ಗಳಲ್ಲಿ ಸೂರ್ಯನು ಒಬ್ಬನು. ವಿಷ್ಣುಪುರಾಣದಲ್ಲಿ 'ರುದ್ರನ ಸೃಷ್ಟಿಯನ್ನು ಹೇಳುತ್ತೇನೆ' ಎಂದು ಪ್ರಾರಂಭ ಮಾಡಿ 'ಸೂರ್ಯಂ ಜಲೋ ಮಹೀ ವಹ್ನಿರ್ವಾಯು- ರಾಕಾಶಮೇವ ಚ । ದೀಕ್ಷಿತೋ ಬ್ರಾಹ್ಮಣಃ ಸೋಮ ಇತ್ಯೇತಾಸ್ತನವಃ ಕ್ರಮಾತ್ ॥ (ಸೂರ್ಯ, ನೀರು, ಭೂಮಿ, ಅಗ್ನಿ, ವಾಯು, ಆಕಾಶ, ದೀಕ್ಷೆ ಸ್ವೀಕರಿಸಿದ ಬ್ರಾಹ್ಮಣ ಮತ್ತು ಚಂದ್ರ ಇವು ಕ್ರಮವಾಗಿ ಪ್ರತಿಮೆಗಳು) ಎಂದು ಹೇಳಿದ್ದಾರೆ.

### ಬೃಹಸ್ಪತಿ ಅಥವಾ ಪ್ರಕೃತಿ ಆನಂದಮಯರೆ ?

**सत्तर्कदीपावळिः – एवमेव बृहस्पतिरन्यो वाऽनन्दमयः स्यात् शतोत्तरानन्दमयत्वेन श्रूयमाणत्वात् । 'मम योनिर्महद्ब्रह्म तस्मिन् गर्भं दधाम्यहम्' इति भगवता ब्रह्म शब्दस्यानन्दमयविषयत्वेन श्रुतस्यैव प्रकृतौ प्रयुक्तत्वात् सैवानन्दमयः स्यात् । 'सोऽकामयत बहु स्याम्' इत्यानन्दमयस्य बहुभावश्रवणाच्च प्रकृतिरेवासौ तस्या एव महदादिरूपेण बहुभावः श्रुतिप्रमाणसिद्धः ।**

ಹೀಗೆ ಬೃಹಸ್ಪತಿ ಅಥವಾ ಮತ್ತೊಬ್ಬನು ಆನಂದಮಯನಾಗಬಹುದು. ಏಕೆಂದರೆ ಅವರು ನೂರಕ್ಕಿಂತ ಹೆಚ್ಚು ಆನಂದವುಳ್ಳವರು ಎಂದು ಶ್ರುತಿ ಹೇಳಿದೆ. ಅಥವಾ ''ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್'' ಎಂದು ಭಗವಂತನು (ಕೃಷ್ಣನು) ಆನಂದಮಯನಲ್ಲಿ ಶ್ರುತವಾದ ಬ್ರಹ್ಮಶಬ್ದವನ್ನು ಪ್ರಕೃತಿಯಲ್ಲಿ ಪ್ರಯೋಗಿಸಿದ್ದಾನೆ. ಆದ್ದರಿಂದ ಪ್ರಕೃತಿಯು ಆನಂದಮಯ ಶಬ್ದವಾಚ್ಯವಾಗಬಹುದು.

''ಸೋಽಕಾಮಯತ ಬಹು ಸ್ಯಾಂ'' ಎಂದು ಆನಂದಮಯನಿಗೆ ಬಹುಭಾವ(ಬಹಳರೂಪ ತಾಳುವಿಕೆ)ವನ್ನು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದಲೂ ಪ್ರಕೃತಿಯೇ ಎಂದು ನಿಶ್ಚಯಿಸಬಹುದು. ಶ್ರುತಿ, ಮೊದಲಾದ ಪ್ರಮಾಣಗಳಲ್ಲಿ ಪ್ರಕೃತಿಯು ಮಹತತ್ವ ಮೊದಲಾದ ರೂಪದಿಂದ ಬಹುಭಾವವನ್ನು ಹೊಂದಿದೆ ಎಂದು ಹೇಳಿದೆ.

ಜೀವ ಆನಂದಮಯನು ಆಗಬಹುದೆ ?

**सत्तर्कदीपावळिः – आनन्दमयविषयत्वेन श्रुतस्य ब्रह्मशब्दस्य जीवेष्वपि विद्यमानत्वात् तेषां वाऽऽनन्दमयत्वम् । 'जातिजीवकमलासनशब्दराशिषु ब्रह्मशब्दः' इत्यभिधानात् । 'एष पुरुषोऽन्नरसमयः प्राणमयो मनोमयः' इत्यादयो हि प्राणादिसम्बन्धित्वाज्जीव एव । अतस्तत्प्रायपठितानन्दमयोऽपि प्रियमोदादिसम्बन्धिजीवः स्यात् । इदमेव 'आनन्दमयो ब्रह्मादिः' इत्यादिनोक्त्वा तथापीत्यनेन प्रतिषेधति ।**

ಅಥವಾ ಆನಂದಮಯನಲ್ಲಿ ಪ್ರಯೋಗಿಸಿರುವ ಬ್ರಹ್ಮಶಬ್ದಕ್ಕೆ ಜೀವನೆಂದು ಅರ್ಥವಿದೆ. ''ಜಾತಿಜೀವಕಮಲಾಸನಶಬ್ದರಾಶಿಷು ಬ್ರಹ್ಮಶಬ್ದಃ'' ಎಂದು ಕೋಶವಿರುವುದರಿಂದ ಜೀವರೂ ಆನಂದಮಯರಾಗಬಹುದು. ಅಲ್ಲದೆ 'ಏಷ ಪುರುಷೋऽನ್ನರಸಮಯಃ ಪ್ರಾಣಮಯ ಮನೋಮಯಃ'' ಎಂದು ಶ್ರುತಿಯಲ್ಲಿ ಹೇಳಿದ ಪ್ರಾಣ, ಮನಸ್ಸು ಇವೇ ಮೊದಲಾದವುಗಳ ಸಂಬಂಧವಿರುವುದರಿಂದ ಜೀವನೇ ಬ್ರಹ್ಮಶಬ್ದವಾಚ್ಯನಾಗಬಹುದು. ಆದ್ದರಿಂದ ಅದೇ ಸರಣಿಯಲ್ಲಿ ಪ್ರಯೋಗಿಸಿದ ಆನಂದಮಯನೂ ಪ್ರಿಯ, ಮೋದ ಮೊದಲಾದವುಗಳಿಂದ ಕೂಡಿದ ಜೀವನೇ ಆಗುತ್ತಾನೆ.

ಇದನ್ನೇ ಭಾಷ್ಯದಲ್ಲಿ ''ಆನಂದಮಯಃ ಬ್ರಹ್ಮಾದಿ'' ಇತ್ಯಾದಿಯಾಗಿ ಹೇಳಿ, 'ತಥಾಪಿ' ಎನ್ನುವುದರಿಂದ ನಿಷೇಧ ಮಾಡುತ್ತಾರೆ.

ಯಾರೂ ಅಲ್ಲ ಮಹಾವಿಷ್ಣು ಮಾತ್ರ ಆನಂದಮಯ

**सत्तर्कदीपावळिः – विष्णुरेवायमानन्दमयः । विष्णुवाचिनो ब्रह्म शब्दस्य आनन्दमयेऽभ्यासात् । 'असन्नेव स भवति । असद्ब्रह्मेति वेद चेत् । अस्ति ब्रह्मेति चेद्वेद । सन्तमेनं ततो विदुः' इत्यानन्दमयं प्रक्रम्य श्रूयते । न चात्र**

ब्रह्मशब्दादेव हिरण्यगर्भादीनामानन्दमयत्वप्राप्तिरिति वाच्यम् । मुख्ये सम्भवत्यमुख्यकल्पनायोगात् विष्णावेव ब्रह्मशब्दो मुख्यो नान्यत्र मुख्य इति श्रुतिपुराणवाक्यैर्दर्शयति – तदेवेत्यादिना ।

'बुद्ध्याऽविहिंसन् पुष्पैः प्रणवेन समर्चयेत् ।
वासुदेवात्मकं ब्रह्म .........'
इति एतद्वचनम् ।

ವಿಷ್ಣುವನ್ನು ಹೇಳುವ ಬ್ರಹ್ಮಶಬ್ದದ 'ಅಭ್ಯಾಸ'ವಿರುವುದರಿಂದ ವಿಷ್ಣುವೇ ಆನಂದಮಯ. 'ಅಸನ್ನೇವ ಸ ಭವತಿ । ಅಸದ್ ಬ್ರಹ್ಮೇತಿ ವೇದ ಚೇತ್ । ಅಸ್ತಿ ಬ್ರಹ್ಮೇತಿ ವೇದ ಚೇತ್ । ಸಂತಮೇನಂ ತತೋ ವಿದುಃ' ಎಂದು ಆನಂದಮಯನ ವಿಷಯ ಪ್ರಾರಂಭವಾದ ಮೇಲೆ ಶ್ರುತಿಯಲ್ಲಿ ಅನೇಕ ಬಾರಿ ಬ್ರಹ್ಮಶಬ್ದ ಇರುವುದರಿಂದಲೇ ಚತುರ್ಮುಖಾದಿಗಳೂ ಆನಂದಮಯ ಶಬ್ದವಾಚ್ಯರಾಗುತ್ತಾರೆ ಎನ್ನಬಾರದು. ಬ್ರಹ್ಮಶಬ್ದಕ್ಕೆ ಮುಖ್ಯಾರ್ಥ ಸ್ವೀಕರಿಸಲು ಬರುವಾಗ ಅಮುಖ್ಯಾರ್ಥವನ್ನು ಸ್ವೀಕರಿಸಬಾರದು. ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಮುಖ್ಯ; ಹೊರತು ಬೇರೆಕಡೆಯಲ್ಲ ಎಂದು ಶ್ರುತಿಪುರಾಣವಾಕ್ಯಗಳಿಂದ ತೋರಿಸುತ್ತಾರೆ 'ತದೇವ' ಎನ್ನುವುದರಿಂದ.

''ಬುದ್ಧ್ಯಾಽವಿಹಿಂಸನ್ ಪುಷ್ಪೈಃ ಪ್ರಣವೇನ ಸಮರ್ಚಯೇತ್ ।
ವಾಸುದೇವಾತ್ಮಕಂ ಬ್ರಹ್ಮ .............. .......... ''

ಯತಿ ಆದವನು ಬುದ್ಧಿಪೂರ್ವಕವಾಗಿ ಯಾರನ್ನು ಹಿಂಸಿಸದೆ ಪುಷ್ಪಗಳಿಂದ ಅಥವಾ ಪ್ರಣವ ಮಂತ್ರದಿಂದ ವಾಸುದೇವರೂಪಿಯಾದ ಬ್ರಹ್ಮನನ್ನು ಅರ್ಚನೆ ಮಾಡಬೇಕು. ಇದು ವ್ಯಾಸಸ್ಮೃತಿಯ ವಾಕ್ಯ. ಇದರಿಂದ 'ತದೇವ' ಎಂಬ ವಾಕ್ಯವು ಉಪಲಕ್ಷಿತವಾಗಿದೆ.

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

ಮುಂದಿನ ಅಧಿಕರಣಗಳೇಕೆ ?

**तत्वप्रदीपः – तमेवेत्यादिनोत्तराधिकरणजातस्य सङ्गतिं दर्शयति । समन्वयसूत्रेण यस्सामान्योक्तः समन्वयः तमेव विशेषतः पृथक् पृथक्कथयतीति।**

'ತಮೇವ ಸಮನ್ವಯಂ' ಇತ್ಯಾದಿ ಭಾಷ್ಯದಿಂದ ಮುಂದಿನ ಸಮಗ್ರ ಅಧಿಕರಣಗಳಿಗೆ ಸಂಗತಿಯನ್ನು ತೋರಿಸುತ್ತಿದ್ದಾರೆ. 'ತತ್ತು ಸಮನ್ವಯಾತ್' ಎಂಬ ಹಿಂದಿನ ಸೂತ್ರದಲ್ಲಿ ವೈದಿಕವಾದ ಸಕಲಶಬ್ದಗಳನ್ನು ಸಾಮಾನ್ಯವಾಗಿ ಸಮನ್ವಯ ಮಾಡಿದ್ದಾಯಿತು. ಪ್ರಕೃತ ಮುಂದಿನ ಅಧಿಕರಣಗಳಲ್ಲಿ ಸಮನ್ವಯಸೂತ್ರದಲ್ಲಿ ಹೇಳಿದ್ದನ್ನೇ ಪ್ರತ್ಯೇಕ ಪ್ರತ್ಯೇಕವಾಗಿ ಶಬ್ದಗಳನ್ನು ಸಮನ್ವಯ ಮಾಡಲು ಹೊರಟಿದ್ದಾರೆ.

ಮುಂದಿನ ಪ್ರತಿಯೊಂದು ಅಧಿಕರಣಗಳಿಗೆ ಜಿಜ್ಞಾಸಾಧಿಕರಣದಿಂದ ಸಂಗತಿ

**तत्वप्रदीपः – ब्रह्मविचारे च प्रथमप्रतिज्ञाते प्रत्यधिकरणं सङ्गतिः समस्ति ।**

ಮುಂದಿನ ಪ್ರತಿಯೊಂದು ಅಧಿಕರಣಗಳಿಗೆ ಪಂಚಾಧಿಕರಣಗಳಿಂದಲೂ ಪ್ರತ್ಯೇಕವಾಗಿ ಸಂಗತಿಯನ್ನು ಅವಶ್ಯವಾಗಿ ತಿಳಿಯತಕ್ಕದ್ದು. ಮೊದಲನೆಯದ್ದು 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಜಿಜ್ಞಾಸಾಧಿಕರಣ. ಬ್ರಹ್ಮನ ಜಿಜ್ಞಾಸೆಯನ್ನು ಮಾಡಬೇಕೆಂದು ಇದರಲ್ಲಿ ಪ್ರತಿಜ್ಞೆ ಮಾಡಲಾಗಿದೆ. ಮುಂದಿನ ಪ್ರತಿಯೊಂದು ಅಧಿಕರಣಗಳೂ ಕೂಡ ಶಬ್ದಸಮನ್ವಯದ ಮೂಲಕ ಬ್ರಹ್ಮನ ಜಿಜ್ಞಾಸೆಗಾಗಿಯೇ ಹೊರಟಿರುವ ಕಾರಣ ಪ್ರಥಮಸೂತ್ರದಿಂದ ಸಂಗತವಾಗುತ್ತವೆ.

ಜನ್ಮಾಧಿಕರಣದಿಂದ ಸಂಗತಿ

**तत्वप्रदीपः – जन्मादिसूत्रेण च तत्र ब्रह्मणोऽनन्तगुणत्वप्रदर्शनात्तेषां च गुणानामुत्तरसूत्रैरनुवर्ण्यमानत्वात् ।**

'ಜನ್ಮಾದ್ಯಸ್ಯ ಯತಃ' ಎಂಬುದು ಎರಡನೆಯ ಜನ್ಮಾಧಿಕರಣ. ಇದರಲ್ಲಿ 'ಜಗತ್‌ಕರ್ತೃತ್ವ' ಎಂಬ ಲಕ್ಷಣವನ್ನು ಹೇಳುವ ಮೂಲಕ ಬ್ರಹ್ಮನಲ್ಲಿ ಅನಂತಗುಣಪರಿಪೂರ್ಣತ್ವ ಎಂಬ ಗುಣವನ್ನು ಸಮನ್ವಯ ಮಾಡಲಾಗಿದೆ. ಮುಂದಿನ ಪ್ರತಿಯೊಂದು ಅಧಿಕರಣಗಳೂ ಕೂಡ ಶಬ್ದಸಮನ್ವಯವನ್ನು ಮಾಡುವ ಮೂಲಕ ಅನಂತಗುಣಪರಿಪೂರ್ಣತ್ವದ ಪ್ರತಿಪಾದನೆಯಲ್ಲಿಯೇ ಸಂಗತವಾಗುವುದರಿಂದ ಜನ್ಮಾಧಿಕರಣದಿಂದಲೂ ಎಲ್ಲಾ ಅಧಿಕರಣಗಳಿಗೆ ಸಂಗತಿಯು ಇರುತ್ತದೆ.

### ಶಾಸ್ತ್ರಯೋನಿತ್ವಾಧಿಕರಣದಿಂದ ಸಂಗತಿ

**ತत्वप्रदीपः – शास्त्रयोनिसूत्रेणापि तत्र तत्र शास्त्रयोनित्व-प्रसाधकानामधिकरणानामस्त्येव सङ्गतिः ।**

'ಶಾಸ್ತ್ರಯೋನಿತ್ವಾತ್' ಎಂಬುದು ಶಾಸ್ತ್ರಯೋನಿತ್ವಾಧಿಕರಣ. ಈ ಸೂತ್ರದಲ್ಲಿ ಗುಣಪರಿಪೂರ್ಣತ್ವದ ವಿಷಯದಲ್ಲಿ ಸಚ್ಛಾಸ್ತ್ರಗಳು ಪ್ರಮಾಣವಾಗಿವೆ ಎಂದು ಸಮರ್ಥಿಸಲಾಗಿದೆ. ಮುಂದಿನ ಅಧಿಕರಣಗಳಲ್ಲಿ ಶಾಸ್ತ್ರದ ಮೂಲಕವೇ ಸಮನ್ವಯವನ್ನು ಮಾಡುತ್ತಿರುವುದರಿಂದ ಶಾಸ್ತ್ರಯೋನಿತ್ವಕ್ಕೆ ಎಲ್ಲಾ ಅಧಿಕರಣಗಳು ಸಾಧಕವಾಗಿವೆ. ಆದ್ದರಿಂದ ಶಾಸ್ತ್ರಯೋನಿತ್ವ ಸೂತ್ರದಿಂದಲೂ ಕೂಡ ಪ್ರತಿಯೊಂದು ಅಧಿಕರಣಗಳಿಗೆ ಸಂಗತಿಯು ಇರುತ್ತದೆ.

ಸಮನ್ವಯಸೂತ್ರದಲ್ಲಿ ಹೇಳಿದ್ದನ್ನೇ ಪ್ರತಿಯೊಂದು ಅಧಿಕರಣಗಳು ವಿವರಣೆ ಮಾಡಿದ್ದರಿಂದ ಸಮನ್ವಯಸೂತ್ರದಿಂದ ಸಂಗತಿಗಳು ಇರುತ್ತವೆ. ಹೀಗೆ ಐದು ಅಧಿಕರಣಗಳಿಗೆ ಮುಂದಿನ ಎಲ್ಲಾ ಅಧಿಕರಣಗಳಿಂದ ಸಂಗತಿಯನ್ನು ತಿಳಿಯಬೇಕು.

### ಸಮನ್ವಯಾಧಿಕರಣದಿಂದ ಸಂಗತಿ

**तत्वप्रदीपः – समस्तेनाध्यायेन समन्वयं वक्ति । प्रायेणेति देवताधिकरणादौ प्रासङ्गिकाधिकारादिविचारात्तत्र गत्यन्तराभावात् ।**

ಸಮಗ್ರವಾದ ಪ್ರಥಮಾಧ್ಯಾಯವು ಸಮನ್ವಯಕ್ಕಾಗಿ ಹೊರಟಿವೆ ಎಂಬುದನ್ನು 'ಪ್ರಾಯೇಣ' ಎಂಬ ಪದಪ್ರಯೋಗದ ಮೂಲಕ ಭಾಷ್ಯಕಾರರು ತಿಳಿಸಿದ್ದಾರೆ. ಈ ಅಧ್ಯಾಯದಲ್ಲಿ ಹೆಚ್ಚಿನ

ಶ್ರೀತ್ರಿವಿಕ್ರಮಪಂಡಿತಾಚಾರ್ಯರಿಂದ ವಿರಚಿತವಾದ

# ತತ್ವಪ್ರದೀಪ

ಮುಂದಿನ ಅಧಿಕರಣಗಳೇಕೆ ?

**तत्वप्रदीपः – तमेवेत्यादिनोत्तराधिकरणजातस्य सङ्गतिं दर्शयति । समन्वयसूत्रेण यस्सामान्योक्तः समन्वयः तमेव विशेषतः पृथक् पृथक्कथयतीति।**

'ತಮೇವ ಸಮನ್ವಯಂ' ಇತ್ಯಾದಿ ಭಾಷ್ಯದಿಂದ ಮುಂದಿನ ಸಮಗ್ರ ಅಧಿಕರಣಗಳಿಗೆ ಸಂಗತಿಯನ್ನು ತೋರಿಸುತ್ತಿದ್ದಾರೆ. 'ತತ್ತು ಸಮನ್ವಯಾತ್' ಎಂಬ ಹಿಂದಿನ ಸೂತ್ರದಲ್ಲಿ ವೈದಿಕವಾದ ಸಕಲಶಬ್ದಗಳನ್ನು ಸಾಮಾನ್ಯವಾಗಿ ಸಮನ್ವಯ ಮಾಡಿದ್ದಾಯಿತು. ಪ್ರಕೃತ ಮುಂದಿನ ಅಧಿಕರಣಗಳಲ್ಲಿ ಸಮನ್ವಯಸೂತ್ರದಲ್ಲಿ ಹೇಳಿದ್ದನ್ನೇ ಪ್ರತ್ಯೇಕ ಪ್ರತ್ಯೇಕವಾಗಿ ಶಬ್ದಗಳನ್ನು ಸಮನ್ವಯ ಮಾಡಲು ಹೊರಟದ್ದಾರೆ.

ಮುಂದಿನ ಪ್ರತಿಯೊಂದು ಅಧಿಕರಣಗಳಿಗೆ ಜಿಜ್ಞಾಸಾಧಿಕರಣದಿಂದ ಸಂಗತಿ

**तत्वप्रदीपः – ब्रह्मविचारे च प्रथमप्रतिज्ञाते प्रत्यधिकरणं सङ्गतिः समस्ति ।**

ಮುಂದಿನ ಪ್ರತಿಯೊಂದು ಅಧಿಕರಣಗಳಿಗೆ ಪಂಚಾಧಿಕರಣಗಳಿಂದಲೂ ಪ್ರತ್ಯೇಕವಾಗಿ ಸಂಗತಿಯನ್ನು ಅವಶ್ಯವಾಗಿ ತಿಳಿಯತಕ್ಕದ್ದು. ಮೊದಲನೆಯದ್ದು 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಜಿಜ್ಞಾಸಾಧಿಕರಣ. ಬ್ರಹ್ಮನ ಜಿಜ್ಞಾಸೆಯನ್ನು ಮಾಡಬೇಕೆಂದು ಇದರಲ್ಲಿ ಪ್ರತಿಜ್ಞೆ ಮಾಡಲಾಗಿದೆ. ಮುಂದಿನ ಪ್ರತಿಯೊಂದು ಅಧಿಕರಣಗಳೂ ಕೂಡ ಶಬ್ದಸಮನ್ವಯದ ಮೂಲಕ ಬ್ರಹ್ಮನ ಜಿಜ್ಞಾಸೆಗಾಗಿಯೇ ಹೊರಟಿರುವ ಕಾರಣ ಪ್ರಥಮಸೂತ್ರದಿಂದ ಸಂಗತವಾಗುತ್ತವೆ.

ಜನ್ಮಾಧಿಕರಣದಿಂದ ಸಂಗತಿ

**तत्वप्रदीपः – जन्मादिसूत्रेण च तत्र ब्रह्मणोऽनन्तगुणत्वप्रदर्शनात्तेषां च गुणानामुत्तरसूत्रैरनुवर्ण्यमानत्वात् ।**

'ಜನ್ಮಾದ್ಯಸ್ಯ ಯತಃ' ಎಂಬುದು ಎರಡನೆಯ ಜನ್ಮಾಧಿಕರಣ. ಇದರಲ್ಲಿ 'ಜಗತ್‌ಕರ್ತೃತ್ವ' ಎಂಬ ಲಕ್ಷಣವನ್ನು ಹೇಳುವ ಮೂಲಕ ಬ್ರಹ್ಮನಲ್ಲಿ ಅನಂತಗುಣಪರಿಪೂರ್ಣತ್ವ ಎಂಬ ಗುಣವನ್ನು ಸಮನ್ವಯ ಮಾಡಲಾಗಿದೆ. ಮುಂದಿನ ಪ್ರತಿಯೊಂದು ಅಧಿಕರಣಗಳೂ ಕೂಡ ಶಬ್ದಸಮನ್ವಯವನ್ನು ಮಾಡುವ ಮೂಲಕ ಅನಂತಗುಣಪರಿಪೂರ್ಣತ್ವದ ಪ್ರತಿಪಾದನೆಯಲ್ಲಿಯೇ ಸಂಗತವಾಗುವುದರಿಂದ ಜನ್ಮಾಧಿಕರಣದಿಂದಲೂ ಎಲ್ಲಾ ಅಧಿಕರಣಗಳಿಗೆ ಸಂಗತಿಯು ಇರುತ್ತದೆ.

### ಶಾಸ್ತ್ರಯೋನಿತ್ವಾಧಿಕರಣದಿಂದ ಸಂಗತಿ

**तत्वप्रदीपः – शास्त्रयोनिसूत्रेणापि तत्र तत्र शास्त्रयोनित्व-प्रसाधकानामधिकरणानामस्त्येव सङ्गतिः ।**

'ಶಾಸ್ತ್ರಯೋನಿತ್ವಾತ್' ಎಂಬುದು ಶಾಸ್ತ್ರಯೋನಿತ್ವಾಧಿಕರಣ. ಈ ಸೂತ್ರದಲ್ಲಿ ಗುಣಪರಿಪೂರ್ಣತ್ವದ ವಿಷಯದಲ್ಲಿ ಸಚ್ಛಾಸ್ತ್ರಗಳು ಪ್ರಮಾಣವಾಗಿವೆ ಎಂದು ಸಮರ್ಥಿಸಲಾಗಿದೆ. ಮುಂದಿನ ಅಧಿಕರಣಗಳಲ್ಲಿ ಶಾಸ್ತ್ರದ ಮೂಲಕವೇ ಸಮನ್ವಯವನ್ನು ಮಾಡುತ್ತಿರುವುದರಿಂದ ಶಾಸ್ತ್ರಯೋನಿತ್ವಕ್ಕೆ ಎಲ್ಲಾ ಅಧಿಕರಣಗಳು ಸಾಧಕವಾಗಿವೆ. ಆದ್ದರಿಂದ ಶಾಸ್ತ್ರಯೋನಿತ್ವ ಸೂತ್ರದಿಂದಲೂ ಕೂಡ ಪ್ರತಿಯೊಂದು ಅಧಿಕರಣಗಳಿಗೆ ಸಂಗತಿಯು ಇರುತ್ತದೆ.

ಸಮನ್ವಯಸೂತ್ರದಲ್ಲಿ ಹೇಳಿದ್ದನ್ನೇ ಪ್ರತಿಯೊಂದು ಅಧಿಕರಣಗಳು ವಿವರಣೆ ಮಾಡಿದ್ದರಿಂದ ಸಮನ್ವಯಸೂತ್ರದಿಂದ ಸಂಗತಿಗಳು ಇರುತ್ತವೆ. ಹೀಗೆ ಐದು ಅಧಿಕರಣಗಳಿಗೆ ಮುಂದಿನ ಎಲ್ಲಾ ಅಧಿಕರಣಗಳಿಂದ ಸಂಗತಿಯನ್ನು ತಿಳಿಯಬೇಕು.

### ಸಮನ್ವಯಾಧಿಕರಣದಿಂದ ಸಂಗತಿ

**तत्वप्रदीपः – समस्तेनाध्यायेन समन्वयं वक्ति । प्रायेणेति देवताधिकरणादौ प्रासङ्गिकाधिकारादिविचारात्तत्र गत्यन्तराभावात् ।**

ಸಮಗ್ರವಾದ ಪ್ರಥಮಾಧ್ಯಾಯವು ಸಮನ್ವಯಕ್ಕಾಗಿ ಹೊರಟಿವೆ ಎಂಬುದನ್ನು 'ಪ್ರಾಯೇಣ' ಎಂಬ ಪದಪ್ರಯೋಗದ ಮೂಲಕ ಭಾಷ್ಯಕಾರರು ತಿಳಿಸಿದ್ದಾರೆ. ಈ ಅಧ್ಯಾಯದಲ್ಲಿ ಹೆಚ್ಚಿನ

ಅಧಿಕರಣಗಳು ಸಮನ್ವಯಕ್ಕೋಸ್ಕರ ಹೊರಟಿವೆ ಎಂಬುದು 'ಪ್ರಾಯೇಣ' ಎಂಬ ಪದದ ಅಭಿಪ್ರಾಯ. ಏಕೆಂದರೆ ದೇವತಾಧಿಕರಣದಲ್ಲಿ ಹಾಗೂ ಅಪಶೂದ್ರಾಧಿಕರಣದಲ್ಲಿ ಯಾವುದೇ ಶಬ್ದಗಳ ಸಮನ್ವಯವನ್ನು ಮಾಡಿರುವುದಿಲ್ಲ. ಪ್ರಾಸಂಗಿಕವಾಗಿ ಅಧಿಕಾರದ ಬಗ್ಗೆ ಮಾತ್ರ ವಿಚಾರ ಮಾಡಿದ್ದಾರೆ. ಅಧಿಕಾರದ ಬಗ್ಗೆ ವಿಚಾರ ಮಾಡದೇ ಬೇರೆ ಮಾರ್ಗವಿರಲಿಲ್ಲ. ಆದ್ದರಿಂದ ಆ ಎರಡು ಅಧಿಕರಣಗಳನ್ನು ಬಿಟ್ಟು, ಉಳಿದ ಅಧಿಕರಣಗಳು ಸಮನ್ವಯಕ್ಕೋಸ್ಕರ ಹೊರಟಿವೆ ಎಂದು ತಿಳಿಯಬೇಕು.

'ಪ್ರಾಯೇಣ' ಎಂಬುದಕ್ಕೆ ಮುಂದೆಯೂ ಅನ್ವಯ

**तत्वप्रदीपः – प्रायेणान्यत्र प्रसिद्धानां शब्दानामिति च सम्बन्धः ।**

'ಪ್ರಾಯೇಣ' ಎಂಬ ಪದವನ್ನು 'ಅನ್ಯತ್ರಪ್ರಸಿದ್ಧಾನಾಂ ಶಬ್ದಾನಾಮ್' ಎಂಬಲ್ಲಿಯೂ ದೆಹಲಿದೀಪನ್ಯಾಯದಿಂದ ಅನ್ವಯವನ್ನು ಮಾಡಿಕೊಳ್ಳಬೇಕು. ಪ್ರಥಮಪಾದವು ಅನ್ಯತ್ರಪ್ರಸಿದ್ಧವಾದ ನಾಮಾತ್ಮಕ ಶಬ್ದಗಳ ಸಮನ್ವಯಕ್ಕೋಸ್ಕರ ಹೊರಟಿದೆ. ಇಲ್ಲಿಯೂ 'ಪ್ರಾಯೇಣ' ಎಂಬ ಪದವನ್ನು ಅನುಸಂಧಾನ ಮಾಡಿಕೊಂಡಾಗ ಹೆಚ್ಚಿನ ಅಧಿಕರಣಗಳಲ್ಲಿ ಎಂಬರ್ಥವು ದೊರೆಯುತ್ತದೆ. ಅದು ಹೀಗೆ -

ಲಿಂಗ ಸಮನ್ವಯಕ್ಕಾಗಿ ಆನಂದಮಯಾಧಿಕರಣ

**तत्वप्रदीपः – आनन्दादिगुणवाचिनामानन्दमयादिगुणिवाचिनां च शब्दानां समन्वयसिद्ध्यर्थमानन्दमयाधिकरणे लिङ्गविचारादिन्द्राग्न्यादिबहुनाम्नां समन्वयसौलभ्यायोत्तरेऽन्तस्थत्वलिङ्गविचारात् । तस्मात् प्रायेणान्यत्र प्रसिद्धानां नामशब्दानां ब्रह्मणि समन्वयं वक्त्यस्मिन् पादे ।**

ಮೊದಲನೆಯ ಆನಂದಮಯಾಧಿಕರಣದಲ್ಲಿ ಅನ್ಯತ್ರಪ್ರಸಿದ್ಧವಾದ ನಾಮಾತ್ಮಕಶಬ್ದವನ್ನು ಸಮನ್ವಯ ಮಾಡುತ್ತಲೇ ಇಲ್ಲ. ಲಿಂಗಾತ್ಮಕವಾದ ಶಬ್ದಸಮನ್ವಯವನ್ನು ಮಾಡುತ್ತಿದ್ದಾರೆ. 'ಆನಂದ' ಮೊದಲಾದ ಗುಣವಾಚಕವಾದ ಶಬ್ದಗಳನ್ನು ಹಾಗೂ 'ಆನಂದಮಯ' ಮೊದಲಾದ ಗುಣವಾಚಕವಾದ ಶಬ್ದಗಳನ್ನು ಸಮನ್ವಯ ಮಾಡುವುದಕ್ಕಾಗಿ ಈ ಅಧಕರಣ ಹೊರಟಿದೆ.

